# ಲಂಬಾಣಿಗರ ಸಮಾಜೋ-ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಮಾಜಶಾಸ್ತ್ರ ವಿಷಯದಲ್ಲಿ
ಪಿಎಚ್ ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಗಿರೀಶ ಖೀರು
ಸಹಾಯಕ ಪ್ರಾಧ್ಯಾಪಕರು
ಸಮಾಜಶಾಸ್ತ್ರ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಜೇವರಗಿ ತಾ. ಗುಲಬರ್ಗಾ ಜಿಲ್ಲೆ

ಮಾರ್ಗದರ್ಶಕರು
ಡಾ ಕೆ ಎಂ ಮೇತ್ರಿ
ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

೨೦೧೪

# ಲಂಬಾಣಿಗರ ಸಮಾಜೋ-ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಮಾಜಶಾಸ್ತ್ರ ವಿಷಯದಲ್ಲಿ ಪಿ ಎಚ್ ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ಗಿರೀಶ ಖೀರು**

ಸಹಾಯಕ ಪ್ರಾಧ್ಯಾಪಕರು
ಸಮಾಜಶಾಸ್ತ್ರ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಜೇವರಗಿ ತಾ. ಗುಲಬರ್ಗಾ ಜಿಲ್ಲೆ

ಮಾರ್ಗದರ್ಶಕರು

**ಡಾ ಕೆ ಎಂ ಮೇತ್ರಿ**

ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
೨೦೧೪

## ಕೃತಜ್ಞತೆಗಳು

**"ಲಂಬಾಣಿಗರ ಸಮಾಜೋ-ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ"** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್ ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲು ನನಗೆ ತುಂಬಾ ಹರ್ಷವೆನಿಸುತ್ತಿದೆ. ನಾನು ಕಟ್ಟಿಕೊಂಡಿದ್ದ ಸಂಶೋಧನೆಯ ಕನಸು ನನಸಾದದ್ದು ಪ್ರಸ್ತುತ ಮಹಾಪ್ರಬಂಧದ ಮೂಲಕ. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ನೆರವಾದವರಿಗೆ ಸ್ಮರಿಸುವುದು ನನ್ನ ಆದ್ಯ ಕರ್ತವ್ಯ ಹಾಗೂ ಸಂತೋಷದ ಸಂಗತಿ.

ಪ್ರಾರಂಭದಲ್ಲಿ ಪಿಎಚ್ ಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಂತಹ ಹಿಂದಿನ ಕುಲಪತಿಗಳಾದ ಪ್ರೊ ಎ ಮುರಿಗೆಪ್ಪ ಅವರಿಗೆ, ಈಗಿನ ಕುಲಪತಿಗಳಾದಂತಹ ಪ್ರೊ ಹಿ ಚಿ ಬೋರಲಿಂಗಯ್ಯ ಅವರಿಗೆ ಹಾಗೂ ಕುಲಸಚಿವರಾದ ಡಾ ಟಿ ಪಿ ವಿಜಯ್ ಅವರಿಗೂ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ಅಶೋಕ ಕುಮಾರ ರಂಜೇರೆ ಅವರಿಗೆ ಮೊದಲಿಗೆ ಕೃತಜ್ಞತೆಗಳನ್ನು ಹೇಳುತ್ತೇನೆ.

ನನ್ನ ಸಂಶೋಧನೆಗೆ ಸೂಕ್ತ ವಿಷಯವನ್ನು ನೀಡಿ ಅದಕ್ಕೆ ಪೂರಕವಾಗುವಂತೆ ಚರ್ಚಿಸುತ್ತಾ ಅಕ್ಷರ ಅಕ್ಷರವನ್ನೂ ಬಿಡದೆ ಪರಿಶೀಲಿಸಿ ಬರವಣಿಗೆಯ ಓರೆ ಕೋರೆಗಳನ್ನು ತಾಳ್ಮೆಯಿಂದ ತಿದ್ದಿ ತೀಡಿ ಆತ್ಮೀಯತೆಯಿಂದ ಸಹಕರಿಸಿದ ಮಾರ್ಗದರ್ಶಕರೂ ಆದ ಡಾ ಕೆ ಎಂ ಮೇತ್ರಿ ಅವರಿಗೂ ಕೃತಜ್ಞತೆಗಳನ್ನು ಹೇಳುತ್ತೇನೆ.

ಶಿಸ್ತು ಹಾಗೂ ಶ್ರಮ ಸಂಸ್ಕೃತಿಯ ಪ್ರತೀಕವಾಗಿರುವ ಹಾಗೂ ಅದನ್ನು ವಿದ್ಯಾರ್ಥಿಗಳಿಗೂ ಕಲಿಸುವ ವಿಭಾಗದ ಪ್ರಾಧ್ಯಾಪಕರುಗಳಾದ ಡಾ ಕೇಶವನ್ ಪ್ರಸಾದ್, ಡಾ ಚಲುವರಾಜು, ಡಾ ಗಂಗಾಧರ ದೈವಜ್ಞ, ಡಾ ಎ ಎಸ್ ಪ್ರಭಾಕರ ಹಾಗೂ ಅಭಿವೃದ್ಧಿ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ ಹೆಚ್ ಡಿ ಪ್ರಶಾಂತ್, ಡಾ ಜನಾರ್ಧನ ಹಾಗೂ ಸಂದರ್ಶಕ ಪ್ರಾಧ್ಯಾಪಕರಾಗಿರುವ ಪ್ರೊ ಜಕ್ಕಾ ಪಾರ್ಥಸಾರಥಿ ಅವರಿಗೂ ಕೃತಜ್ಞತೆಗಳು.

ವಿಷಯ ತಜ್ಞರಾದ ಶಂಕರ ಲಮಾಣಿ, ಡಾ ಹರಿಲಾಲ ಪವಾರ ಮತ್ತು ಡಾ. ನೀಶಾ ಪವಾರ, ಡಾ ಪಿ ಕೆ ಖಂಡೋಬಾ, ಡಾ ಡಿ ಬಿ ನಾಯಕ, ಬಿಕ್ಷುಪತಿ ನಾಯಕ, ದಶರಥ ನಾಯಕ, ವಾಸು ಪವಾರ, ಪ್ರೊ ವೀರಣ್ಣ ನಾಯ್ಕ, ಡಾ ಎ ಎಸ್ ಪವಾರ, ಅಲ್ಕಾ ರಾಠೋಡ, ಮಧುಕರ ಪವಾರ, ಮೋತಿರಾಮ ರಾಠೋಡ, ಆರ್ ಡಿ ಚವ್ಹಾಣ, ಉಮಾಕಾಂತ ರಾಠೋಡ, ರಾಮಾ ನಾಯಕ, ಲಕ್ಷ್ಮಣ ರಾಠೋಡ, ವಿಲ್ಸನ್ ನಾಯ್ಕ, ಡಾ ಜಗನಾಥ ಸಿಂಧೆ, ಡಾ ಎಸ್ ಎಲ್ ಹಿರೇಮಠ, ಡಾ ಸುರೇಖಾ ಕ್ಷೀರಸಾಗರ, ಡಾ ಬಾಬಣ್ಣ ಹೂವಿನ ಭಾವಿ ಅವರಿಗೂ ಕೃತಜ್ಞತೆಗಳು.

ನನ್ನ ಓದಿನ ಹೆಗ್ಗಳಿಕೆಯನ್ನು ಸಾರುತ್ತ ಅನೇಕ ಕನಸುಗಳನ್ನು ಕಟ್ಟಿಕೊಂಡಿರುವ ಪೂಜ್ಯನೀಯ ತಂದೆ ಖೀರು ರಾಠೋಡ ತಾಯಿ ಭದ್ರಾಬಾಯಿ ಅವರಿಗೂ ಶೈಕ್ಷಣಿಕ ಅಭಿವೃದ್ಧಿಗೆ ಬೆಂಬಲಿಗರಾಗಿರುವ ಅಣ್ಣ ಲಕ್ಷ್ಮಣ ರಾಠೋಡ ಮತ್ತು ಶ್ರೀಮತಿ ಸುರೇಖಾ, ಜಯಲಕ್ಷ್ಮಿ, ನನ್ನ ಅಧ್ಯಯನದ ಎಲ್ಲ ಸಾಧ್ಯತೆಗಳನ್ನು ಪ್ರೋತ್ಸಾಹಿಸುತ್ತಾ ನನ್ನ ಏಳ್ಗೆಯನ್ನು ಸಂತೋಷಿಸುವ ಮಡದಿ ಶ್ರೀಮತಿ ಗೀತಾಬಾಯಿ, ಮುದ್ದು ಮಕ್ಕಳಾದ ಅಕ್ಷಯ, ಅಜೇಯ, ಆರ್ಯನ್, ಆಯುಷ್ ಅವರಿಗೂ ನಾನು ಚಿರಋಣಿಯಾಗಿರುವೆ. ಶಂಕರಬಾಯಿ, ಜಯಕುಮಾರ, ಜೈರಾಮ ರಾಠೋಡ, ಶಶಿಕಲಾ, ದಿನೇಶ, ಗೌಡಪ್ಪ, ಭೋಜು, ರವಿನಾಥ, ಮೈನಾಬಾಯಿ, ಶಿವಕುಮಾರ, ಕಸ್ತೂರಿಬಾಯಿ, ಲಲಿತಾಬಾಯಿ ಅವರಿಗೂ ಹಾಗೂ

ಪ್ರಾಂಶುಪಾಲರಾದ ಕೆ ಬಿ ದೇಸಾಯಿ ಹಾಗೂ ಸಹೋದ್ಯೋಗಿ ಸ್ನೇಹಿತರಾದ ಡಾ ವಿಷ್ಣುವರ್ಧನ, ಗುರುಪ್ರಕಾಶ ಹೂಗಾರ, ಶಶಿಧರ ಯಡ್ರಾಮಿ, ವಿನೋದಕುಮಾರ, ವಿನಾಯಕ, ಡಾ ಅನುಸೂಯ ಪಾಟೀಲ, ಡಾ ಬಡಿಗೇರ, ಡಾ ಕರಿಗೂಳೇಶ್ವರ, ನಾಗರೆಡ್ಡಿ, ವಿನಾಯಕ, ಡಾ ರಾಮಲಿಂಗ ಭೊಸ್ಲೆ, ಬಸವರಾಜ ಕೊಂಬಿನ, ನಾಗಣ್ಣಗೌಡ ಪಾಟೀಲ, ಡಾ. ಶರಣಮ್ಮ, ಗಣಪತರಾವ್ ಕುಲಕರ್ಣಿ, ಡಾ ಪ್ರಭುಶೆಟ್ಟಿ, ರಾಜಶೇಖರ ಬೆನಕನಹಳ್ಳಿ, ಬಿ ಎನ್ ಶಾಡದಳ್ಳಿ, ಎ ಟಿ ಶ್ರೀನಿವಾಸ, ದೀಪಾ ಮಾಳಗೆ, ಬೀಡಗೊಂಡ, ಖೋದ್ನಾಪುರ ಹಾಗೂ ಬೋಧಕೇತರ ಸಿಬ್ಬಂದಿ ವರ್ಗಕ್ಕೂ ಕೃತಜ್ಞತೆಗಳು.

ನನ್ನ ಬದುಕಿಗೆ ಸ್ಫೂರ್ತಿಯ ಸೆಲೆಯಾಗಿ ನನ್ನ ಶ್ರೇಯೋಭಿಲಾಷಿಗಳಾಗಿ ತಮ್ಮದೆಂದೆ ಬಗೆಯುವ ಸ್ನೇಹಿತರಾದ ಡಾ ಎಂ ಬಿ ಕಟ್ಟಿ, ಮಹಾದೇವ, ಗಿರೀಶ್ ಪಾಟೀಲ, ಸುರೇಶ, ಲಿಂಗರಾಜ, ಡಾ ವಿಜಯಲಕ್ಷ್ಮಿ, ಉಮೇಶ ಎಂ ಓ, ಮಹೇಂದ್ರಕುಮಾರ, ಹಣಮೇಶ, ಕುಮಾರ ನಾಯ್ಕ, ಡಾ ಮಲ್ಲಿಕಾರ್ಜುನ ಬಿ ಮಾನ್ಪಡೆ, ಮಿಠು ನಾಯಕ, ನಾಗೇಂದ್ರಪ್ಪ, ಬಸವರಾಜು, ನಾರಾಯಣ ನಾಯ್ಕ, ಭೀಮರಾವ, ಎಸ್ ಎಲ್ ನಾಯಕ, ಪ್ರೇಮ ರಾಠೋಡ, ಜೀವಾ ಜಿ ರಾಠೋಡ, ಪ್ರಸನ್ನ ಹಾಗೂ ವಿದ್ಯಾರ್ಥಿ ಮಿತ್ರರಾದ ಅಶೋಕ, ಮಹಾಂತೇಶ, ರಮೇಶ, ವಿಶ್ವನಾಥ, ಮರಲಿಂಗ, ಶಂಕರಲಿಂಗ, ಮಲ್ಲಿಕಾರ್ಜುನ, ಜಗದೀಶ್, ರೇವಣ್ಣಸಿದ್ದಪ್ಪ, ರತ್ನಾಕರ ಅವರಿಗೂ ಅಭಾರಿಯಾಗಿರುವೆ.

ಕನ್ನಡ ವಿಶ್ವವಿದ್ಯಾಲಯದ ಗ್ರಂಥಪಾಲಕರಿಗೂ ಮತ್ತು ಬುಡಕಟ್ಟು ಅಧ್ಯಯನ ವಿಭಾಗದ ಸಿಬ್ಬಂದಿ ವರ್ಗದವರೆಲ್ಲರಿಗೂ, ಮತ್ತೊಮ್ಮೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅಧ್ಯಯನಕ್ಕೆ ನೆರವಾದ ವಿದ್ವಾಂಸರಿಗೂ ಮತ್ತು ನನ್ನ ಮಿತ್ರರಿಗೂ ಸದಾ ಅಭಿಮಾನದಿಂದ ಕಾಣುವ ನನ್ನೂರಿನ ಸಮಸ್ತ ಬಾಂಧವರಿಗೂ ಹಾಗೂ ಆತ್ಮಿಯತೆಯಿಂದ ಡಿಟಿಪಿ ಕೆಲಸಗಳಲ್ಲಿ ಸಹಕರಿಸಿದ ಹೆಚ್ ಪಿ ಬಸವರಾಜ ಮತ್ತು ಛಾಯಾಚಿತ್ರಗಳನ್ನು ಜೋಡಿಸಿಕೊಟ್ಟ ಶ್ರೀ ಸಿದ್ದು ಹಾಗೂ ಮಹಾಪ್ರಬಂಧವನ್ನು ಅಂದವಾಗಿ ಪುಟವಿನ್ಯಾಸ ಮಾಡಿದ ಶ್ರೀನಿವಾಸ ಕೆ. ಕಲಾಲ್. ಭಾವನಾ ಗ್ರಾಫಿಕ್ಸ್, ಕಮಲಾಪುರ ಇವರಿಗೂ ನಾನು ಅಭಾರಿಯಾಗಿರುವೆ.

ಗಿರೀಶ ಖೀರು

## ಸಂಶೋಧಕರ ಘೋಷಣಾ ಪತ್ರ

**ಲಂಬಾಣಿಗರ ಸಮಾಜೋ–ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ** ಎಂಬ ಸಮಾಜಶಾಸ್ತ್ರ ವಿಷಯದ ಮಹಾಪ್ರಬಂಧವನ್ನು ಪಿಎಚ್ ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ ಕೆ ಎಂ ಮೇತ್ರಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 22-08-2014
ಸ್ಥಳ : ವಿದ್ಯಾರಣ್ಯ

(ಗಿರೀಶ ಬೀರು)
ಸಹಾಯಕ ಪ್ರಾಧ್ಯಾಪಕರು
ಸಮಾಜಶಾಸ್ತ್ರ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಜೇವರಗಿ ತಾ. ಗುಲಬರ್ಗಾ ಜಿಲ್ಲೆ

## ಮಾರ್ಗದರ್ಶಕರ ದೃಢೀಕರಣ ಪತ್ರ

**ಶ್ರೀ ಗಿರೀಶ ಖೀರು** ಅವರು ಪಿಎಚ್ ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಲಂಬಾಣಿಗರ ಸಮಾಜೋ–ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ** ಎಂಬ ಸಮಾಜಶಾಸ್ತ್ರ ವಿಷಯದ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 25.8.2014
ಸ್ಥಳ : ವಿದ್ಯಾರಣ್ಯ

**(ಡಾ ಕೆ ಎಂ ಮೇತ್ರಿ)**
ಮಾರ್ಗದರ್ಶಕರು
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

## ಪರಿಶಿಷ್ಟಗಳು

**ಕೋಷ್ಟಕಗಳು**


೨.೧. ಕರ್ನಾಟಕ ರಾಜ್ಯದ ಲಂಬಾಣಿಗರ ಜಿಲ್ಲಾವಾರು ೨೦೦೧ರ ಜನಸಂಖ್ಯಾ ವಿವರ / ೩೮

೨.೨. ಮಹಾರಾಷ್ಟ್ರ ರಾಜ್ಯದ ಜಿಲ್ಲಾವಾರು ೨೦೧೧ರ ಜನಸಂಖ್ಯಾ ವಿವರ / ೫೫

೪.೪.೧. ಗುಲಬರ್ಗಾ ಜಿಲ್ಲೆಯ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ / ೧೫೭

೪.೪.೨. ಸೋಲಾಪುರ ಜಿಲ್ಲೆಯ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ / ೧೫೮

೪.೪.೩. ರಂಗಾರೆಡ್ಡಿ ಜಿಲ್ಲೆಯ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ / ೧೫೮

೪.೪.೪. ಮೂರು ಜಿಲ್ಲೆಗಳಲ್ಲಿ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ / ೧೫೯

೪.೭.೧. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಗೋರಬೋಲಿ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಗಳ ಪ್ರಭಾವ / ೧೭೫

೪.೮.೧. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲಾ ಪಂಚಾಯತಿಗಳ ಸದಸ್ಯರ ವಿವರ / ೧೮೮

೪.೮.೨. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲಾ ಪಂಚಾಯತಿಗಳ ಸದಸ್ಯರ ವಿವರ / ೧೯೦

೪.೮.೩. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳ ವಿಧಾನಸಭಾ ಸದಸ್ಯರ ವಿವರ / ೧೯೨

೪.೮.೪. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳ ವಿಧಾನಸಭಾ ಸದಸ್ಯರ ವಿವರ / ೧೯೩

೫.೧.೧ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಜನಸಂಖ್ಯೆಯ ವಿವರ / ೨೦೩

೫.೧.೨ ಸೋಲಾಪುರ ಜಿಲ್ಲೆಯ ಲಂಬಾಣಿಗರ ಜನಸಂಖ್ಯೆಯ ವಿವರ / ೨೦೫

೫.೧.೩ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಜನಸಂಖ್ಯೆಯ ವಿವರ / ೨೦೭

೫.೧.೪ ಮೂರು ಜಿಲ್ಲೆಗಳ ಲಂಬಾಣಿಗರ ಜನಸಂಖ್ಯೆಯ ವಿವರ / ೨೦೯

೫.೨.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ಜನಸಂಖ್ಯಾ ವಿವರ / ೨೧೦

೫.೨.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ಜನಸಂಖ್ಯಾ ವಿವರ / ೨೧೨

೫.೨.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ಜನಸಂಖ್ಯೆ / ೨೧೩

೫.೨.೪. ಮೂರು ಜಿಲ್ಲೆಗಳ ಸಮೀಕ್ಷೆಗೊಳಪಟ್ಟ ಲಂಬಾಣಿಗರ ವಯೋಗುಂಪುವಾರು ಜನಸಂಖ್ಯಾ ವಿವರ / ೨೧೫

೫.೩.೧ ಸಮೀಕ್ಷೆಗೊಳಪಟ್ಟ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತದ ವಿವರ / ೨೧೮

೫.೩.೨. ಸಮೀಕ್ಷೆಗೊಳಪಟ್ಟ ಸೋಲಾಪುರ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತ ವಿವರ / ೨೧೯

೫.೩.೩. ಸಮೀಕ್ಷೆಗೊಳಪಟ್ಟ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತದ ವಿವರ / ೨೨೦

೫.೩.೪. ಮೂರು ಜಿಲ್ಲೆಗಳ ಲಂಬಾಣಿಗರ ಲಿಂಗಾನುಪಾತದ ವಿವರ / ೨೨೦

೫.೪.೧. ಗುಲಬರ್ಗಾ ಜಿಲ್ಲೆಯ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ವಿವರ / ೨೨೩

೫.೪.೨. ಸೋಲಾಪುರ ಜಿಲ್ಲೆಯ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ವಿವರ / ೨೨೪

೫.೪.೩. ರಂಗಾರೆಡ್ಡಿ ಜಿಲ್ಲೆಯ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ವಿವರ / ೨೨೫

೫.೪.೪. ಮೂರು ಜಿಲ್ಲೆಗಳ ತಾಂಡಾಗಳು ಹೊಂದಿರುವ ಮನೆಗಳ ಮಾದರಿಗಳ ವಿವರ / ೨೨೬

೫.೫.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ / ೨೨೯

೫.೫.೨. ಸೋಲಾಪುರ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ / ೨೩೧

೫.೫.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ / ೨೩೩

೫.೫.೪. ಮೂರು ಜಿಲ್ಲೆಗಳ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ / ೨೩೫

೫.೬.೧ ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ / ೨೪೧

೫.೬.೨. ಸೋಲಾಪುರ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ / ೨೪೨

೫.೬.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ / ೨೪೩

೫.೬.೪. ಮೂರು ಜಿಲ್ಲೆಗಳ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ / ೨೪೪

೫.೭.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೪೭

೫.೭.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೦

೫.೭.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೧

೫.೭.೪. ಮೂರು ಜಿಲ್ಲೆಗಳ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೩

೫.೮.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ / ೨೫೬

೫.೮.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ / ೨೫೯

೫.೮.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ / ೨೬೧

೫.೮.೪. ಸಮೀಕ್ಷೆಗೊಳಪಟ್ಟ ಮೂರು ಜಿಲ್ಲೆಗಳ ಲಂಬಾಣಿಗರ ಶೈಕ್ಷಣಿಕ ವಿವರ / ೨೬೩

೫.೮.೫. ಸಮೀಕ್ಷೆಗೊಳಪಟ್ಟ ಗುಲಬರ್ಗಾ ಲಂಬಾಣಿಗರ ಸಾಕ್ಷರತೆಯ ವಿವರ / ೨೬೭

೫.೮.೬ ಸಮೀಕ್ಷೆಗೊಳಪಟ್ಟ ಸೋಲಾಪುರ ಲಂಬಾಣಿಗರ ಸಾಕ್ಷರತೆಯ ವಿವರ / ೨೬೮

೫.೮.೭ ಸಮೀಕ್ಷೆಗೊಳಪಟ್ಟ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಸಾಕ್ಷರತೆಯ ವಿವರ / ೨೬೯

೫.೮.೮. ಸಮೀಕ್ಷೆಗೊಳಪಟ್ಟ ಮೂರು ಜಿಲ್ಲೆಗಳ ಲಂಬಾಣಿಗರ ಸಾಕ್ಷರತೆಯ ವಿವರ / ೨೭೧

**ಸ್ತಂಭ ಚಿತ್ರಗಳು**

೫.೧.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ನೆಲೆಗಳವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ / ೨೦೪

೫.೧.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ನೆಲೆಗಳವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ / ೨೦೫

೫.೧.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ನೆಲೆಗಳವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ / ೨೦೭

೫.೧.೪. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಕುಟುಂಬವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ / ೨೦೯

೫.೨.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ವಿವರ / ೨೧೫

೫.೩.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಲಿಂಗಾನುಪಾತ ವಿವರ / ೨೨೧

೫.೪.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಮನೆಗಳ ಮಾದರಿಗಳ ವಿವರ / ೨೨೬

೫.೫.೧. ಸಮೀಕ್ಷೆಗೊಳಪಟ್ಟ ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ / ೨೩೬
೫.೫.೨. ಸಮೀಕ್ಷೆಗೊಳಪಟ್ಟ ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ / ೨೩೭
೫.೫.೩. ಸಮೀಕ್ಷೆಗೊಳಪಟ್ಟ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ / ೨೩೮
೫.೬.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಹೊಂದಿರುವ ಪಶುಸಂಪತ್ತಿನ ವಿವರ / ೨೪೪
೫.೭.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೪೭
೫.೭.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೦
೫.೭.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೧
೫.೭.೪. ಮೂರು ಜಿಲ್ಲೆಗಳ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೪
೫.೮.೧. ಸಮೀಕ್ಷೆಗೊಳಪಟ್ಟ ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ / ೨೬೩
೫.೮.೨. ಸಮೀಕ್ಷೆಗೊಳಪಟ್ಟ ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ / ೨೬೪
೫.೮.೩. ಸಮೀಕ್ಷೆಗೊಳಪಟ್ಟ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ / ೨೬೫
೫.೮.೪. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಸಾಕ್ಷರತೆಯ ವಿವರ / ೨೭೧

**ವೃತ್ತ ಚಿತ್ರಗಳು**

೫.೭.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೪೭
೫.೭.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೦
೫.೭.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೧
೫.೭.೪. ಸಮೀಕ್ಷೆಗೊಳಪಟ್ಟ ಮೂರು ಜಿಲ್ಲೆಗಳ ಲಂಬಾಣಿಗರ ಭೂ ಹಿಡುವಳಿಗಳ ವಿವರ / ೨೫೩

**ನಕಾಶೆಗಳು**

೧. ಕರ್ನಾಟಕ: ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ ಜಿಲ್ಲೆ / ೩೩
೨. ಮಹಾರಾಷ್ಟ್ರ: ಅಧ್ಯಯನಕ್ಕೆ ಆಯ್ಕೆ ಮಾಡಲಾದ ಸೋಲಾಪುರ ಜಿಲ್ಲೆ / ೫೧
೩. ಆಂಧ್ರ ಪ್ರದೇಶ: ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ ಜಿಲ್ಲೆ / ೬೬

**ಅಂಕಿಅಂಶಗಳ ಪಟ್ಟಿ**


೧. ಸಮೀಕ್ಷೆಗೊಳಪಟ್ಟ ಲಂಬಾಣಿಗರ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಜಿಲ್ಲಾವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ಜನಸಂಖ್ಯೆ ಮತ್ತು ವಯೋಗುಂಪು / ೩೨೨-೩೨೩

೨. ಸಮೀಕ್ಷೆಗೊಳಪಟ್ಟ ಲಂಬಾಣಿಗರ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಜಿಲ್ಲಾವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ವೈವಾಹಿಕ ಸ್ಥಾನಮಾನಗಳು / ೩೨೪-೩೨೫

೩. ಸಮೀಕ್ಷೆಗೊಳಪಟ್ಟ ಲಂಬಾಣಿಗರ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಜಿಲ್ಲಾವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ಶೈಕ್ಷಣಿಕ ಮಟ್ಟ/ ೩೨೬-೩೨೭

೪. ಸಮೀಕ್ಷೆಗೊಳಪಟ್ಟ ಲಂಬಾಣಿಗರ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಜಿಲ್ಲಾವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ಕಸುಬುಗಳು / ೩೨೮-೩೨೯

೫. ಸಮೀಕ್ಷೆಗೊಳಪಟ್ಟ ಲಂಬಾಣಿಗರ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಜಿಲ್ಲಾವಾರು, ನೆಲೆಗಳವಾರು, ಕುಟುಂಬವಾರು, ಲಿಂಗವಾರು ಸರ್ಕಾರಿ ಸೌಲಭ್ಯಗಳು / ೩೩೦-೩೩೧

೬. ಸಮೀಕ್ಷೆಗೊಳಪಟ್ಟ ಲಂಬಾಣಿಗರ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಜಿಲ್ಲಾವಾರು, ನೆಲೆಗಳವಾರು, ಕುಟುಂಬವಾರು, ಭೂಹಿಡುವಳಿಗಳು, ಭೂ ಹಿಡುವಳಿಗಳ ಶ್ರೇಣಿ ಮತ್ತು ಪಶುಸಂಪತ್ತು / ೩೩೨-೩೩೩

೭. ಸಮೀಕ್ಷೆಗೊಳಪಟ್ಟ ಲಂಬಾಣಿಗರ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಜಿಲ್ಲಾವಾರು, ನೆಲೆಗಳವಾರು, ಕುಟುಂಬವಾರು, ಮನೆ ಮಾದರಿ ಮತ್ತು ಇತರೆ ಸೌಲಭ್ಯಗಳು / ೩೩೪-೩೩೫

# ಪರಿವಿಡಿ

**ಅಧ್ಯಾಯ ಒಂದು**

**ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ** ೦೧

೧.೧ ಪ್ರಸ್ತಾವನೆ

೧.೨ ಇದುವರೆಗಿನ ಅಧ್ಯಯನಗಳು

೧.೩ ಅಧ್ಯಯನದ ಉದ್ದೇಶಗಳು

೧.೪ ಅಧ್ಯಯನದ ವ್ಯಾಪ್ತಿ

೧.೫ ಅಧ್ಯಯನದ ಮಹತ್ವ

೧.೬ ಅಧ್ಯಯನದ ವಿಧಾನ

೧.೭ ಅಧ್ಯಯನದ ಸ್ವರೂಪ

**ಅಧ್ಯಾಯ ಎರಡು**

**ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದ ಲಂಬಾಣಿಗರ ಚಿತ್ರಣ** ೧೮

೨.೧ ಗುಲಬರ್ಗಾ ಜಿಲ್ಲೆಯ ಲಂಬಾಣಿ ಸಮುದಾಯ

೨.೨ ಸೋಲಾಪುರ ಜಿಲ್ಲೆಯ ಲಂಬಾಣಿ ಸಮುದಾಯ

೨.೩ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿ ಸಮುದಾಯ

**ಅಧ್ಯಾಯ ಮೂರು**

**ಲಂಬಾಣಿಗರ ಮೂಲ ಮತ್ತು ಚಾರಿತ್ರಿಕ ಹಿನ್ನೆಲೆ** ೮೩

೩.೧ ಲಂಬಾಣಿಗರ ಮೂಲ

೩.೨ ಲಂಬಾಣಿಗರ ಚಾರಿತ್ರಿಕ ಹಿನ್ನೆಲೆ

**ಅಧ್ಯಾಯ ನಾಲ್ಕು**

**ಲಂಬಾಣಿಗರ ಸಾಮಾಜಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು** ೧೦೨

೪.೧. ಲಂಬಾಣಿಗರ ಪಾಡಾಗಳು

೪.೨. ಲಂಬಾಣಿಗರು ಆಚರಿಸುವ ಸಂಸ್ಕಾರಗಳು

೪.೩. ಲಂಬಾಣಿಗರ ಆಹಾರ ಪದ್ಧತಿಗಳು

೪.೪. ಲಂಬಾಣಿಗರ ಉಡುಗೆ-ತೊಡುಗೆಗಳು

೪.೫. ಹಬ್ಬಗಳು

೪.೬. ಹಚ್ಚೆ ಕಲೆ

೪.೭. ಗೋರಬೋಲಿ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಗಳ ಪ್ರಭಾವ

೪.೮. ಲಂಬಾಣಿಗರ ರಾಜಕೀಯ ಸ್ಥಿತಿಗತಿ

ಅಧ್ಯಾಯ ಐದು

ಲಂಬಾಣಿಗರ ಆರ್ಥಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು ೧೯೮

೫.೧. ಲಂಬಾಣಿಗರ ಜನಸಂಖ್ಯೆ

೫.೨. ವಯೋಗುಂಪುವಾರು ಜನಸಂಖ್ಯಾ ವಿವರ

೫.೩. ಲಿಂಗಾನುಪಾತದ ವಿವರ

೫.೪. ಮನೆಗಳ ಮಾದರಿಗಳ ವಿವರ

೫.೫. ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳು

೫.೬. ಲಂಬಾಣಿಗರು ಹೊಂದಿರುವ ಪಶುಸಂಪತ್ತು

೫.೭. ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳು

೫.೮. ಲಂಬಾಣಿಗರ ಶೈಕ್ಷಣಿಕ ಸ್ಥಿತಿಗತಿ

ಅಧ್ಯಾಯ ಆರು

ಸಮಾರೋಪ ೨೭೪

೬.೧ ಅಧ್ಯಯನದ ಫಲಿತಗಳು

೬.೨ ಸಮಸ್ಯೆಗಳು

೬.೩ ಪರಿಹಾರೋಪಾಯಗಳು

೬.೪ ಅಧ್ಯಯನದ ಮುಂದಿನ ಸಾಧ್ಯತೆಗಳು

ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು ೨೮೨

೨. ಪ್ರಮುಖ ಮಾಹಿತಿದಾರರು ೨೯೪

೩. ಕರ್ನಾಟಕ ಪರಿಶಿಷ್ಟ ಜಾತಿ ಕಲ್ಯಾಣ ಕಾರ್ಯಕ್ರಮಗಳು ೨೯೮

೪. ಆಂಧ್ರ ಪ್ರದೇಶ ಪರಿಶಿಷ್ಟ ಪಂಗಡದ ಕಲ್ಯಾಣ ಕಾರ್ಯಕ್ರಮಗಳು ೩೦೬

೫. ಮಹಾರಾಷ್ಟ್ರದ ವಿಮುಕ್ತ ಬುಡಕಟ್ಟು ಪಟ್ಟಿಯ ಕಲ್ಯಾಣ ಕಾರ್ಯಕ್ರಮಗಳು ೩೧೨

೬. ಅಧ್ಯಯನಕ್ಕೆ ಆಯ್ಕೆ ಮಾಡಲಾದ ಸೋಲಾಪುರ, ಗುಲಬರ್ಗಾ ಹಾಗೂ ರಂಗಾರೆಡ್ಡಿ ಜಿಲ್ಲೆಗಳ ನಕಾಶೆ ೩೨೦

೭. ಪ್ರಶ್ನಾವಳಿ ಮಾದರಿ ೩೨೧

೮. ಕ್ಷೇತ್ರಕಾರ್ಯ ಕೈಗೊಂಡ ಅಂಕಿ-ಅಂಶಗಳ ಪಟ್ಟಿ ೩೨೨

೯. ಛಾಯಾಚಿತ್ರಗಳು ೩೩೬

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

೧.೧. ಪ್ರಸ್ತಾವನೆ

೧.೨. ಇದುವರೆಗಿನ ಅಧ್ಯಯನಗಳು

೧.೩. ಅಧ್ಯಯನದ ಉದ್ದೇಶಗಳು

೧.೪. ಅಧ್ಯಯನದ ವ್ಯಾಪ್ತಿ

೧.೫. ಅಧ್ಯಯನದ ಮಹತ್ವ

೧.೬. ಅಧ್ಯಾಯನದ ವಿಧಾನ

೧.೭. ಅಧ್ಯಾಯಗಳ ಸ್ವರೂಪ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

### ಪ್ರಸ್ತಾವನೆ

ಭಾರತ ಸಂಪದ್ಭರಿತ ಪರಂಪರೆಯನ್ನು ಹೊಂದಿದ್ದು, ಅದರ ಪ್ರಾಕೃತಿಕ ಸಂಪತ್ತು, ಸಾಂಸ್ಕೃತಿಕ ಶ್ರೀಮಂತಿಕೆ ದೇಶದ ಜನತೆಗೆ ಉಜ್ವಲ ಭವಿಷ್ಯವನ್ನು ರೂಪಿಸಿಕೊಳ್ಳಲು ಸ್ಫೂರ್ತಿದಾಯಕವಾಗಿದೆ. ವಿಶೇಷ ಭೌಗೋಳಿಕ ಸನ್ನಿವೇಶಗಳಾದ ನೈಸರ್ಗಿಕ ಸಂಪತ್ತು, ನದಿಗಳು, ಬೆಟ್ಟಗಳು, ಕಣಿವೆಗಳು, ಮೈದಾನಗಳು, ಅರಣ್ಯಗಳು ಮತ್ತು ಇತರ ಸಂಪನ್ಮೂಲಗಳು ವೈವಿಧ್ಯತೆಯಿಂದ ಕೂಡಿದ್ದು ಹೇರಳವಾಗಿವೆ.

ಭಾರತ ಐತಿಹಾಸಿಕವಾಗಿ ಪ್ರಾಚೀನತೆಯನ್ನು ಹೊಂದಿದ್ದು, ಪ್ರಾಚೀನ ಮತ್ತು ಮಧ್ಯಯುಗ ಗಳೆರಡರಲ್ಲೂ ಪ್ರಬಲ ಸಾಮ್ರಾಜ್ಯಗಳ ತವರೂರಾಗಿತ್ತು. ಈ ಸಾಮ್ರಾಜ್ಯಗಳು ಪೋಷಿಸಿದ ತತ್ವಜ್ಞಾನಿಗಳು ಮತ್ತು ಸಂತರುಗಳು ಹಲವಾರು ಸಾಮಾಜಿಕ, ಧಾರ್ಮಿಕ ಚಳುವಳಿಗಳನ್ನು ಹುಟ್ಟು ಹಾಕಿದ್ದಾರೆ. ಇವು ಇಂದಿಗೂ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿವೆ. ಈ ದೇಶದ ಶ್ರೀಮಂತ ಸಾಂಸ್ಕೃತಿಕ ಪರಂಪರೆಯಲ್ಲಿ ಸಾಹಿತ್ಯ, ಲಲಿತಕಲೆ, ಧರ್ಮ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿಯ ಸಾಧನೆಗಳು ಗಣ್ಯವಾಗಿವೆ. ಹೀಗೆ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ, ವೈವಿಧ್ಯತೆಗಳ ನಡುವೆಯೂ ಭಾರತ ಐಕ್ಯತೆಯ ಮೂಲ ಬುನಾದಿಯನ್ನು ಹೊಂದಿದೆ

ಹಿಮಾಲಯದಿಂದ ಕನ್ಯಾಕುಮಾರಿಯವರೆಗಿನ ವಿಸ್ತೃತ ಭಾರತದಲ್ಲಿ ಹಲವಾರು ಸಮುದಾಯಗಳು, ಪಂಗಡಗಳು, ಜಾತಿಗಳು, ಬುಡಕಟ್ಟುಗಳು ಸಮಾವೇಶಗೊಂಡಿರುವುದನ್ನು ಕಾಣುತ್ತೇವೆ. ಹೀಗೆ ಭಾರತ ಏಕದಲ್ಲಿ ಅನೇಕವಾಗಿರುವಂತೆ, ಅನೇಕದಲ್ಲಿ ಏಕವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ವಿಪುಲವಾದ ಜನಸಂಪತ್ತಿನಿಂದ ಕೂಡಿರುವ ಭಾರತದಲ್ಲಿ ಮೂಲನಿವಾಸಿಗಳೆಂದು ಪರಿಗಣಿತವಾಗಿರುವ ಆದಿವಾಸಿಗಳು ಎಲ್ಲೆಡೆ ಗೋಚರಿಸುತ್ತಾರೆ. ೨೦೧೧ರ ಜನಗಣತಿಯಂತೆ ದೇಶದ ಜನಸಂಖ್ಯೆಯ ಶೇ. ೮.೬ರಷ್ಟಿರುವ ಈ ಜನರುಗಳು ಮಿಕ್ಕುಳಿದ ಇತರೆ ನಾಗರಿಕ ಜನರಂತೆ ಭಾರತದ ಪ್ರಜೆಗಳೇ ಆಗಿದ್ದು, ಎಲ್ಲಾ ಬಗೆಯ ಸಂವಿಧಾನಿಕ ಹಕ್ಕುಗಳಿಗೆ ಭಾಜನರಾಗಿದ್ದಾರೆ.

ಪ್ರಪಂಚದ ಬಹುತೇಕ ರಾಷ್ಟ್ರಗಳಲ್ಲಿ ಮೂಲ ನಿವಾಸಿಗಳೆಂದು ಕರೆಯಲ್ಪಡುವ ಬುಡಕಟ್ಟುಗಳು ಗುಡ್ಡಗಾಡುಗಳಲ್ಲಿ, ಕಾಡುಮೇಡುಗಳಲ್ಲಿ, ಗ್ರಾಮ–ನಗರಗಳಿಂದ ದೂರದ ಬಯಲು ಪ್ರದೇಶಗಳಲ್ಲಿ ವಾಸಮಾಡುವವರಾಗಿರುತ್ತಾರೆ. ಭಾರತದಲ್ಲಿಯೂ ಇವರ ಸಂಖ್ಯೆ ಗಣನೀಯವಾಗಿದೆ. ಬುಡಕಟ್ಟುಗಳು ಮತ್ತು ಬುಡಕಟ್ಟು ಸಮುದಾಯ ಎಂದರೇನು? ಎಂಬುದಕ್ಕೆ ನಿಖರವಾದ ವ್ಯಾಖ್ಯಾನಗಳಿಲ್ಲವಾದರೂ ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಭಾರತೀಯ ಬುಡಕಟ್ಟುಗಳ ಕೆಲವು ವಿಶಿಷ್ಟ ಲಕ್ಷಣಗಳನ್ನು ಗುರುತಿಸಿದ್ದಾರೆ.

ಭಾರತದ ಬುಡಕಟ್ಟು ಸಮುದಾಯಗಳಿಗೆ ಸಂಬಂಧಿಸಿದಂತೆ ಭಾರತೀಯ ಸಮಾಜಶಾಸ್ತ್ರಜ್ಞ ಎಸ್ ಸಿ ದುಬೆ ಅವರು 'ಭಾರತದಲ್ಲಿನ ಸಾಮಾಜಿಕ ಕಾರ್ಯದ ವಿಶ್ವಕೋಶ'ದಲ್ಲಿ ಉಲ್ಲೇಖಿಸಿರುವ ಕೆಲವು ಲಕ್ಷಣಗಳು ಈ ರೀತಿಯಾಗಿರುತ್ತವೆ.

೧. ಬುಡಕಟ್ಟು ಸಮುದಾಯಗಳು ದೇಶದ ಮೂಲೆ–ಮೂಲೆಗಳಲ್ಲಿ ಹಾಗೂ ಪರ್ವತ ಪ್ರದೇಶಗಳಲ್ಲಿ, ಕಾಡುಗಳಲ್ಲಿ ಇತರರಿಂದ ಭೌಗೋಳಿಕವಾಗಿ ಪ್ರತ್ಯೇಕಿತವಾದ ಜೀವನ ನಡೆಸುತ್ತಿದ್ದಾರೆ.

೨. ಬುಡಕಟ್ಟು ಸಮುದಾಯಗಳ ಐತಿಹಾಸಿಕ ಪ್ರಜ್ಞೆ ಬಹು ನಿರಾಳವಾದುದಾಗಿದೆ. ಅವರುಗಳಿಗೆ ನೆನಪಿರಬಹುದಾದ ೫–೬ ಪೀಳಿಗೆಗಳ ಇತಿಹಾಸವೂ ಕೂಡ ಪುರಾಣ ಹಾಗೂ ದಂತಕಥೆ ಗಳೊಂದಿಗೆ ಸಮ್ಮಿಶ್ರಿತವಾಗಿದೆ.

೩. ಅವರುಗಳ ಆರ್ಥಿಕ ಹಾಗೂ ತಾಂತ್ರಿಕ ಪರಿಜ್ಞಾನ ಹಾಗೂ ಈ ದಿಕ್ಕಿನಲ್ಲಿ ಅವರ ಬೆಳವಣಿಗೆ ಅತ್ಯಂತ ಕೆಳಮಟ್ಟದ್ದಾಗಿದೆ.

೪. ಭಾರತದ ಆದಿವಾಸಿಗಳ ಜಾಡನ್ನು ಅನ್ವೇಷಿಸುವುದಾದರೆ ನಾವು ಇತಿಹಾಸದಲ್ಲಿ ಬಹು ಹಿಂದಕ್ಕೆ ಸಾಗಬೇಕಾಗುವುದು. ಒಂದು ವೇಳೆ ಅವರುಗಳು ಭಾರತದ ಮೂಲ ನಿವಾಸಿಗಳು ಅಲ್ಲವಾದರೂ, ಅವರು ಭಾರತದ ಅತ್ಯಂತ ಪುರಾತನ ನಿವಾಸಿಗಳಾಗಿದ್ದಾರೆ ಎನ್ನಲಡ್ಡಿಯಿಲ್ಲ.

೫. ಆದಿವಾಸಿಗಳು ಸಾಂಸ್ಕೃತಿಕ ಸ್ವರೂಪತೆ, ಭಾಷೆ, ಸಂಸ್ಥೆಗಳು, ನಂಬುಗೆಗಳು, ಪದ್ಧತಿಗಳು, ದೃಷ್ಟಿಕೋನ, ಮೌಲ್ಯಗಳು ಮುಂತಾದವುಗಳ ದೃಷ್ಟಿಯಿಂದ ಭಾರತೀಯ ಸಮಾಜದ ಉಳಿದ ವರ್ಗಗಳಿಂದ ಬಹಳಷ್ಟು ಭಿನ್ನವಾಗಿದ್ದಾರೆ.

೬. ಬೇರೆ ಬೇರೆ ಬುಡಕಟ್ಟುದವರಲ್ಲಿ ಸಮಾನತೆಯಿಲ್ಲದೇ ಇರಬಹುದಾಗಿದ್ದರೂ, ಅವರ ಸಮೂಹ ಗಳಂತೂ ಏಣಿ–ಶ್ರೇಣಿಗಳನ್ನು ಹೊಂದಿರದ ಮತ್ತು ವೈವಿಧ್ಯತೆ ಅಥವಾ ವೈಲಕ್ಷಣಗಳನ್ನೊಳ ಗೊಂಡಿರದ ಸಮೂಹಗಳಾಗಿವೆ.

ಭಾರತದಲ್ಲಿರುವ ಹಲವಾರು ಬುಡಕಟ್ಟು ಸಮೂಹಗಳಲ್ಲಿ ಲಂಬಾಣಿ ಬುಡಕಟ್ಟು ಸಹ ವೈಶಿಷ್ಟ್ಯಪೂರ್ಣ ಹಿನ್ನೆಲೆ ಹಾಗೂ ಸಂಪ್ರದಾಯಗಳಿಂದಾಗಿ ಎದ್ದು ಕಾಣುವ ವಿಶೇಷತೆ ಹೊಂದಿದೆ. ಭೌಗೋಳಿಕವಾಗಿ ಕೆಲವು ಬುಡಕಟ್ಟುಗಳು ಕೆಲವು ಪ್ರದೇಶಗಳಿಗೆ ಸೀಮಿತವಾಗಿದ್ದರೆ, ಲಂಬಾಣಿ ಬುಡಕಟ್ಟು ದೇಶದಾದ್ಯಂತ ಹರಡಿಕೊಂಡಿರುವುದು ಮಹತ್ತರವಾದ ವಿಶೇಷ ಅಂಶವಾಗಿದೆ. "ಬಂಜಾರಾ, ಬಣಜಾರಾ, ಬ್ರಂಜಾರಿ, ಬಂಜಾರೆ, ಬ್ರಜವಾಸಿ, ಲಮಾಣಿ, ಲಂಬಾಣಿ, ಲಮಾನ, ಲಂಬಾಡಾ ,ಲಂಬಾಡಿ, ಲಬಾನ, ಲಬಾನಾ, ಲಭಾನ, ಲಭಾನಿ ಲಾಭಾನಾ, ಲೋಭಾನಾ, ಬಳದಿಯಾ, ಲಾದೇನಿಯಾ, ಸುಗಾಲಿ, ಗವಾರ, ಗೌರಿಯಾ, ಗವಾರಿಯಾ, ಗಂವಾರಿಯಾ, ಗಮಳಿಯಾ, ಗಾವಲಾ, ಕಂಗಿ, ಕಂಗಷಿಯಾ, ಫಾಣದ್, ಶಿರಕಿಬಂದ, ಶಿಂಗಾಡೆ, ಬಂಜಾರಿ, ಶಿರಕಿವಾಲಾ ಇತ್ಯಾದಿ" (ರಾಠೋಡ ಸುಭಾಷ ವಿ:೨೦೧೧:೭). ಹೀಗೆ ಲಂಬಾಣಿ ಸಮುದಾಯವು ರಾಷ್ಟ್ರದಾದ್ಯಂತ ಹಲವಾರು ನಾಮಧ್ಯೇಯಗಳಿಂದ ಕರೆಯಲ್ಪಡುತ್ತದೆ.

"ಭಾರತದ ಇತಿಹಾಸವನ್ನು ಸಿಂಹಾವಲೋಕನ ಮಾಡಲಾಗಿ ಪೂರ್ವದಲ್ಲಿ ಈ ಸಮುದಾಯಕ್ಕೆ ಮಹತ್ವಪೂರ್ಣವಾದ ಸ್ಥಾನವಿರುವುದು ಕಂಡುಬರುತ್ತದೆ. ಇವರ ಮೂಲದ ಬಗೆಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಆದರೂ ಅವರ ಮೂಲವನ್ನು ಕಂಡುಹಿಡಿಯುವಲ್ಲಿ ಅವರ ವಂಶ, ಕುಲ, ಪರಂಪರೆಗಳನ್ನು ಗಮನಿಸಿದಾಗ ಲಂಬಾಣಿಗರು ಗುರ್ಜರು, ಮಾರವಾಡಿಗಳು, ಮತ್ತು ರಜಪೂತರೊಂದಿಗೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಬಂಧಗಳು ಹೊಂದಿರುವುದು ಕಂಡು ಬರುತ್ತದೆ. ರಜಪೂತರಲ್ಲಿ ಕಂಡುಬರುವ ರಾಠೋಡ, ಚವ್ಹಾಣ, ಪರಮಾರ, ಯಾದವ(ಜಾಧವ), ಮುಂತಾದ ಉಪಜಾತಿಗಳು ಮಾರವಾಡಿ, ಗುರ್ಜರ ಹಾಗೂ ಲಂಬಾಣಿಗರಲ್ಲಿ ಸ್ಪಷ್ಟವಾಗಿ ಗೋಚರಿಸು ವುದರಿಂದ ರಜಪೂತರ ಒಂದು ಶಾಖೆಯೇ ಈ ಲಂಬಾಣಿಗರು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ" (ಖಂಡೋಬಾ ಪಿ ಕೆ:೧೯೯೧:೨೪). ಲಂಬಾಣಿಗರು ಮೂಲತಃ ರಾಜಸ್ಥಾನದವರಾಗಿದ್ದು, ಕಾರಣಾಂತರಗಳಿಂದ ಸಂಚಾರಿಗಳಾಗಿ ದಕ್ಷಿಣಕ್ಕೆ ಬಂದು ಅಲ್ಲಲ್ಲಿ ತಂಡೋಪತಂಡಗಳಾಗಿ ನೆಲೆಸಿದರೆಂದು ತೋರುತ್ತದೆ. ಭಾರತದಲ್ಲಿ ಮೊಗಲರ ಆಳ್ವಿಕೆ ಪ್ರಾರಂಭಗೊಳ್ಳುವುದಕ್ಕಿಂತ ಪೂರ್ವದಲ್ಲಿ ಸಣ್ಣಪುಟ್ಟ ಸಂಸ್ಥಾನಿಕ ರಾಜರುಗಳು ತಮಗೆ ಸಂಬಂಧಿಸಿದ ಪ್ರದೇಶವನ್ನಾಳುತ್ತಿದ್ದರು. ಇವರಲ್ಲಿ ರಜಪೂತ ವಂಶದ ಮೂಲಪುರುಷ ರಾಣಾಪ್ರತಾಪನೂ ಒಬ್ಬನಾಗಿ ರಾಜಸ್ಥಾನ ಮತ್ತು ದೆಹಲಿಯ ಕೆಲವು ಪ್ರದೇಶಗಳನ್ನು ಆಳುತ್ತಿದ್ದನು. ರಾಣಾಪ್ರತಾಪನ ಮರಣಾನಂತರ ನಿರಾಶ್ರಿತರಾದ ಈ ಜನರು ಬದುಕುವುದಕ್ಕೂ ಕಷ್ಟವಾಗಿ ಕಾಲಾಂತರದಲ್ಲಿ ಜೀವನೋಪಾಯಕ್ಕಾಗಿ ಅಲ್ಲಿಂದ ಹೊರಬೀಳಬೇಕಾಗಿ ಬಂದಿತು. ಬಹುಕಾಲ ಅಡವಿಯಲ್ಲಿ ವಾಸಿಸಿದ ಈ ಜನರು ಪಶುಪಾಲನೆ ಮಾಡಲಾರಂಭಿಸಿದರು. ಇವರು ತಮ್ಮ ಜಾನುವಾರುಗಳ ಸಮೇತವಾಗಿ ಮಾತೃಭೂಮಿ ರಾಜಸ್ಥಾನ ಹಾಗೂ 'ಪಹಾಡ' ಪ್ರದೇಶಗಳನ್ನು ತೊರೆದು 'ಮಾಳವಾ' ಮುಖಾಂತರವಾಗಿ ಹೊರಬಿದ್ದರು. ಈ ಸಮಯದಲ್ಲಿ ಲಂಬಾಣಿಗರು ಅನಿವಾರ್ಯವಾಗಿ ಮೊಗಲರ ಸೇವೆಗಾಗಿ ನಿಲ್ಲಬೇಕಾಯಿತು. ಇವರು ಮೊಗಲರ

ಸೈನ್ಯಕ್ಕೆ ಆಹಾರ ಧಾನ್ಯ ಹಾಗೂ ಯುದ್ಧ ಸಾಮಗ್ರಿಗಳನ್ನು ತಲುಪಿಸುವ ಹೊಣೆ ಹೊತ್ತರು. ಕ್ರಿ.ಶ. ೧೬೩೦ರ ಸುಮಾರಿನಲ್ಲಿ ಲಂಬಾಣಿ ಜನರು ಮೊಗಲರ ಸೈನ್ಯದೊಂದಿಗೆ ದಕ್ಷಿಣಕ್ಕೆ ಬಂದು, ಕಾಲಾಂತರದಲ್ಲಿ ದಕ್ಷಿಣದಲ್ಲಿಯೇ ನೆಲೆಯಾದರು.

ಮೊಗಲರ ಆಳ್ವಿಕೆ ಕೊನೆಗೊಂಡ ಮೇಲೆ ಭಾರತದಲ್ಲಿ ಅನೇಕ ಪರಿವರ್ತನೆಗಳಾದವು. ರೈಲು ಮೊದಲಾದ ವಾಹನ ಸೌಕರ್ಯಗಳು ಬಳಕೆಗೆ ಬಂದು ಲಂಬಾಣಿಗರ ಆವರೆಗಿನ ರಫ್ತುಕಾರ್ಯ ಸಂಪೂರ್ಣವಾಗಿ ನಿಂತುಹೋಯಿತು. ಇದರಿಂದ ಇವರ ಬದುಕು ದುರ್ಬರವಾಯಿತು. ರಫ್ತುಕಾರ್ಯ ನಿಂತ ಕಾರಣ ಇವರ ಸಂಚರಿಸುವಿಕೆ ಕೂಡ ನಿಂತುಹೋಗಿ ಈ ಜನರು ತಂಡೋಪತಂಡಗಳಾಗಿ ಭಾರತದ ತುಂಬೆಲ್ಲಾ ಅಲ್ಲಲ್ಲಿ ತಾಂಡಾಗಳನ್ನು ರಚಿಸಿಕೊಂಡು ಶಾಶ್ವತವಾಗಿ ನೆಲೆ ನಿಲ್ಲಲು ಆರಂಭಿಸಿದರು. ತಮ್ಮ ಮೂಲ ಉದ್ಯೋಗಗಳಿಂದ ವಂಚಿತರಾದ ಇವರು ಆರ್ಥಿಕ ಮುಗ್ಗಟ್ಟು, ಕಡುಬಡತನದಿಂದ ಕಷ್ಟಕರ ಜೀವನ ಎದುರಿಸಬೇಕಾಯಿತು. ವ್ಯಾಪಾರಕ್ಕೆಂದು ಬಂದ ಬ್ರಿಟಿಷರು ಇಡೀ ಭಾರತವನ್ನು ಆಕ್ರಮಿಸಿ ಭಾರತದ ವ್ಯಾಪಾರವಹಿವಾಟನ್ನು ತಮ್ಮ ಕಪಿಮುಷ್ಟಿಯಲ್ಲಿರಿಸಿಕೊಂಡದ್ದಷ್ಟೇ ಅಲ್ಲದೇ ನಿರಂಕುಶ ರಾಜಪ್ರಭುತ್ವದಿಂದ ಕೆಲವೇ ಕೆಲವರು ಮಾಡಿದ ಅಪರಾಧಗಳ ಪರಿಣಾಮವಾಗಿ ಇಡೀ ಸಮುದಾಯವನ್ನು ೧೮೭೧ರಲ್ಲಿ 'ಅಪರಾಧಿ ಪಂಗಡ' ಸೂಚಿಯ ಅಡಿಯಲ್ಲಿ ತಂದರು. ಬ್ರಿಟಿಷ ಸರ್ಕಾರದಿಂದ ಅನ್ಯಾಯಕ್ಕೆ ಒಳಗಾದ ಇವರು ನಾಡಿನ ಬದುಕಿನಿಂದ ದೂರವಾಗಿ ಕಾಡು ಮೇಡುಗಳಲ್ಲಿ, ಗುಡ್ಡಗಾಡುಗಳಲ್ಲಿ ತಾಂಡಾಗಳನ್ನು ನಿರ್ಮಿಸಿಕೊಂಡು ಕಷ್ಟಮಯವಾದ ಬದುಕನ್ನು ಸಾಗಿಸಲಾರಂಭಿಸಿದರು. ಶ್ರಮಜೀವಿಗಳಾದ ಇವರು ನಿಸರ್ಗದೊಡನೆ ಸೆಣಸುತ್ತ ಬದುಕಿರುವ ಸಾಹಸಿಗರು. "ಲಂಬಾಣಿಗರು ತಮ್ಮ ಸಂಸ್ಕೃತಿ, ಇತಿಹಾಸ, ಜೀವನ ಶೈಲಿಗಳನ್ನು ಕುರಿತು ಗಾಢವಾದ ಸಮುದಾಯದ ಅಭಿಮಾನ ತಾಳಿಬಾಳಿದವರು. ಇತರ ಸಂಸ್ಕೃತಿಯಿಂದ ಒಮ್ಮೆಲೇ ಪ್ರಭಾವಕ್ಕೊಳಗಾಗದೇ, ತಮ್ಮ ಸಂಸ್ಕೃತಿಯ ವೈಶಿಷ್ಟ್ಯತೆಯನ್ನು ಕಾಪಾಡಿಕೊಂಡು ಬರುವಲ್ಲಿ ಈ ಸಮುದಾಯ ಸದಾ ಜಾಗರೂಕವಾಗಿ ಕಾರ್ಯ ಮಾಡುತ್ತಾ ಬಂದಿದೆ. ಇದಕ್ಕೆ ಸೂಕ್ತ ನಿದರ್ಶನವೆಂದರೆ ಇಂದಿಗೂ ತಾಂಡಾಗಳಲ್ಲಿ ಕಂಡುಬರುವ ಸಾಂಪ್ರದಾಯಿಕ ಉಡುಪು ತೊಟ್ಟ ಮಹಿಳೆಯರು" (ಶ್ರೀನಿವಾಸ ಎಲ್:೨೦೧೦:೮೯). ಗ್ರಾಮ ಮತ್ತು ನಗರ ಸಮಾಜಗಳಿಂದ ದೂರದಲ್ಲಿದ್ದರೂ ಇವರಿಗೆ ಅವರದೇ ಆದ ಪ್ರತ್ಯೇಕ ಸಾಮಾಜಿಕ ಜೀವನ ಹಾಗೂ ಸ್ಥಾನಮಾನಗಳಿವೆ. ಇವರು ತಮ್ಮ ಸಂಸ್ಕೃತಿಯ ಪೋಷಣೆಯ ಬಗೆಗೆ ಹೊಂದಿರುವ ಕಾಳಜಿ ಅಭಿಮಾನಗಳು ವಿಶಿಷ್ಟವಾಗಿವೆ.

ಭಾರತದಾದ್ಯಂತ ನೆಲೆಸಿರುವ ಲಂಬಾಣಿಗರು ಒಂದೇ ಭಾಷೆಯನ್ನಾಡುತ್ತಿದ್ದು, ಇವರಾಡುವ ಭಾಷೆಗೆ 'ಗೋರಬೋಲಿ' ಎಂದು ಕರೆಯಲಾಗುತ್ತಿದೆ. ಈ ಭಾಷೆಯ ಮೇಲೆ ಆಯಾ ಪ್ರಾದೇಶಿಕ ಭಾಷೆಗಳ ಪ್ರಭಾವವಾಗಿರುವುದು ಸತ್ಯವಾದರೂ, ರಾಜ್ಯ ರಾಜ್ಯಗಳ ಗೋರಬೋಲಿ ಭಾಷೆಯಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸವಿದ್ದು, ಭಾಷೆಯ ಮೂಲಸ್ವರೂಪ ಒಂದೇ ಆಗಿದೆ. ಕರ್ನಾಟಕದ ಲಂಬಾಣಿಗರ ಮೇಲೆ ಕನ್ನಡ ಭಾಷೆಯ ಪ್ರಭಾವ, ಮಹಾರಾಷ್ಟ್ರದ ಲಂಬಾಣಿಗರ ಮೇಲೆ ಮರಾಠಿ ಭಾಷೆಯ ಪ್ರಭಾವವಾಗಿರುವಂತೆ ಆಂಧ್ರದ ಲಂಬಾಣಿಗರ ಮೇಲೆ ತೆಲುಗು ಭಾಷೆಯ ಪ್ರಭಾವವಾಗಿದೆ.

ಸ್ವಾತಂತ್ರ್ಯ ನಂತರದ ಭಾರತದಲ್ಲಿ ಲಂಬಾಣಿಗರನ್ನು ಬೇರೆ ಬೇರೆ ರಾಜ್ಯಗಳಲ್ಲಿ ಸಂವಿಧಾನಾತ್ಮಕವಾಗಿ ಬೇರೆ ಬೇರೆ ಪಟ್ಟಿಗಳಲ್ಲಿ ವರ್ಗೀಕರಿಸಿರುವುದರಿಂದ ಇವರು ಪಡೆಯುವ ಮೀಸಲಾತಿ ಪ್ರಮಾಣದಲ್ಲಿಯ ವ್ಯತ್ಯಾಸ ಮತ್ತು ಭಿನ್ನ ಭಿನ್ನ ಸರ್ಕಾರಿ ಸೌಲಭ್ಯಗಳ ಪರಿಣಾಮವಾಗಿ ಬೇರೆ ಬೇರೆ ರಾಜ್ಯಗಳಲ್ಲಿ ವಾಸಿಸುತ್ತಿರುವ ಇವರ ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳು ವ್ಯತ್ಯಾಸದಿಂದ ಕೂಡಿವೆ. ಲಂಬಾಣಿಗರು ಸಂವಿಧಾನಾತ್ಮಕವಾಗಿ ಕರ್ನಾಟಕ ರಾಜ್ಯದಲ್ಲಿ ಪರಿಶಿಷ್ಟ ಜಾತಿ, ಮಹಾರಾಷ್ಟ್ರ ರಾಜ್ಯದಲ್ಲಿ ವಿಮುಕ್ತ ಜಾತಿ, ಆಂಧ್ರ ಪ್ರದೇಶ ರಾಜ್ಯದಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರುವುದು ಕಂಡುಬರುತ್ತದೆ. ಈ ಬುಡಕಟ್ಟು ಸಮುದಾಯವು ಏಕರೀತಿಯ ಸಾಂಸ್ಕೃತಿಕ ರೀತಿ-ನೀತಿಗಳನ್ನು, ಭಾಷೆ, ಪರಂಪರಾಗತ ಆಚರಣೆಗಳನ್ನು ಹೊಂದಿದ್ದಾರೆ. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ವಾಸವಾಗಿರುವ ಲಂಬಾಣಿಗರ ಸಾಂಸ್ಕೃತಿಕ ಗಡಿ ಒಂದೇಯಾಗಿದ್ದರೂ, ಭೌಗೋಳಿಕ ಗಡಿಗಳು ಮಾತ್ರ ಬೇರೆ ಬೇರೆಯಾಗಿವೆ.

ಒಂದು ಸಮುದಾಯವು ಸಾಮಾಜಿಕ ಸಂಪನ್ನತೆ, ಆರ್ಥಿಕ ಸದೃಢತೆ, ರಾಜಕೀಯ ಪಾರಮ್ಯತೆ, ಶೈಕ್ಷಣಿಕ ಏಳಿಗೆಯನ್ನು ಸಾಧಿಸಬೇಕಾದರೆ ಆ ಸಮುದಾಯಕ್ಕೆ ಸರ್ಕಾರಿ ಸೌಲಭ್ಯಗಳು ಅವಶ್ಯವೆನಿಸುತ್ತವೆ. ಯಾವುದೇ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಪರಸ್ಪರಾವಲಂಬಿತವಾಗಿರುತ್ತವೆ. ಪ್ರತಿಯೊಂದು ಸಮಾಜದಲ್ಲಿ ವ್ಯಕ್ತಿಯು ಹೊಂದಿದ ಆರ್ಥಿಕ ಸಬಲತೆ ಆತನ ಉತ್ತಮ ಸಾಮಾಜಿಕ ಸ್ಥಾನ-ಮಾನಗಳಿಗೆ, ಪ್ರತಿಷ್ಠೆ ಗೌರವಗಳಿಗೆ ಕಾರಣವಾಗುತ್ತವೆಂಬುದರಲ್ಲಿ ಸಂಶಯವಿಲ್ಲ. ಪರರ ದಾಸ್ಯದಲ್ಲಿ ಬದುಕಲಿಚ್ಛಿಸದೆ, ಸ್ವಾಭಿಮಾನದಿಂದ ಪ್ರತ್ಯೇಕವಾಗಿ ಬದುಕನ್ನು ಕಟ್ಟಿಕೊಂಡ ಲಂಬಾಣಿಗರ ಮೇಲೆ ಆಧುನಿಕತೆಯ ಪ್ರಭಾವಗಳುಂಟಾಗಿ ಅವರ ಜೀವನ ಕ್ರಮದಲ್ಲಿ ಬದಲಾವಣೆಗಳುಂಟಾಗಿವೆಯೇ ಎಂಬ ಪ್ರಶ್ನೆ ಯಾರನ್ನು ಕಾಡದಿರದು.

ಲಂಬಾಣಿ ಸಮುದಾಯವು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಸಂವಿಧಾನಾತ್ಮಕವಾಗಿ ಬೇರೆ-ಬೇರೆ ಪಟ್ಟಿಯಲ್ಲಿರುವುದರಿಂದಲೇ ಇವರು ಹೊಂದಿರುವ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳು ಭಿನ್ನವಾಗಿವೆಯೇ? ಇವರ ವಿಶಿಷ್ಟವಾದ 'ಗೋರಬೋಲಿ' ಭಾಷೆಯ ಮೇಲೆ ಸ್ಥಳೀಯ ಭಾಷೆಗಳ ಪ್ರಭಾವ ಯಾವ ರೀತಿ ಗೋಚರಿಸಬಹುದು ಎಂಬುದನ್ನು ತಿಳಿಯಲು ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ, ಹಾಗೂ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳಲ್ಲಿರುವ ತಾಂಡಾಗಳಲ್ಲಿ ಎರಡು ರಿಮೋಟ್, ಎರಡು ರಸ್ತೆ ಹತ್ತಿರ ಹಾಗೂ ಎರಡು ಗ್ರಾಮ ಹತ್ತಿರದ ತಾಂಡಾಗಳಂತೆ ಪ್ರತಿ ಜಿಲ್ಲೆಯಲ್ಲಿ ಆರು ತಾಂಡಾಗಳಂತೆ ಒಟ್ಟು ಹದಿನೆಂಟು ತಾಂಡಾಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡು ಅವರುಗಳು ಹೊಂದಿರುವ ಸಮಾಜೋ-ಆರ್ಥಿಕ ಸ್ಥಿತಿಗತಿಗಳನ್ನು ತೌಲನಿಕವಾಗಿ ತಿಳಿಯಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

### ೧.೨. ಇದುವರೆಗಿನ ಅಧ್ಯಯನಗಳು

ಲಂಬಾಣಿಗರನ್ನು ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನಗಳನ್ನು ಅವಲೋಕಿಸಿದರೆ ಹೆಚ್ಚಿನವು ಲಂಬಾಣಿಗರ ಭಾಷೆ, ಸಂಸ್ಕೃತಿ, ಸಾಹಿತ್ಯ, ಕಲೆ, ಕಸುಬು, ಪಂಚಾಯತ ವ್ಯವಸ್ಥೆ

ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ವಿವರಣೆಯನ್ನು ನೀಡುತ್ತವೆ. ಆದರೆ ಭಾರತದಾದ್ಯಂತ ಬೇರೆ ಬೇರೆ ರಾಜ್ಯಗಳಲ್ಲಿ ನೆಲೆಸಿರುವ ಈ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಅಂಶಗಳ ಕುರಿತಾದ ತೌಲನಿಕ ಅಧ್ಯಯನಗಳು ನಡೆದಿರುವುದು ಕಂಡುಬಂದಿರುವುದಿಲ್ಲ. ಒಟ್ಟಾರೆಯಾಗಿ ಲಂಬಾಣಿಗರ ಕುರಿತು ನಡೆದಿರುವ ಅಧ್ಯಯನಗಳನ್ನು ಕೆಳಗಿನಂತೆ ಸಂಕ್ಷಿಪ್ತವಾಗಿ ಪರಿಶೀಲಿಸಲಾಗಿದೆ.

ಖಂಡೋಬಾ ಪಿ ಕೆ ಅವರ 'ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ' (೧೯೯೧) ಎಂಬ ಕೃತಿಯಲ್ಲಿ ಲಂಬಾಣಿಗರು ಮೂಲತಃ ರಾಜಸ್ಥಾನದ ರಜಪೂತ ವಂಶದವರು. ಇವರು ಮೊಗಲ ಸೈನಿಕರಿಗೆ ಆಹಾರ ಪೂರೈಸುತ್ತಿದ್ದರು ಎಂಬ ಮಾಹಿತಿಯೊಂದಿಗೆ ಲಂಬಾಣಿಗರ ಜೀವನ ವಿಧಾನಕ್ಕೆ ಸಂಬಂಧಿಸಿದಂತೆ ಆಂತರಿಕ ಸಮಾಜ ರಚನೆ, ವೇಷಭೂಷಣ, ನ್ಯಾಯ ಪಂಚಾಯತ ವ್ಯವಸ್ಥೆ, ಸಂಸ್ಕಾರಗಳು, ಆಚಾರ ವಿಚಾರ, ಜನಪದ ಕಲೆಗಳು, ಜಾನಪದ ಸಾಹಿತ್ಯ ಹೀಗೆ ಮುಂತಾದ ಅಂಶಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಗಿದೆ.

ಪವಾರ ರುಕ್ಮಿಣಿರವರ 'ಬಂಜಾರಾ ಲೋಕ ಜೀವನ ಪದ್ಧತಿ'(೨೦೦೬) ಎಂಬ ಮರಾಠಿ ಭಾಷಾ ಕೃತಿಯು ಮಹಾರಾಷ್ಟ್ರದಲ್ಲಿ ವಾಸಿಸುತ್ತಿರುವ ಲಂಬಾಣಿಗರ ಜೀವನ ಶೈಲಿ, ಕೌಟುಂಬಿಕ ವ್ಯವಸ್ಥೆ, ನ್ಯಾಯ ಪಂಚಾಯತ, ಆಹಾರ ಪದ್ದತಿ, ಹಬ್ಬ ಹರಿದಿನ ಹಾಗೂ ಧಾರ್ಮಿಕ ವಿಧಿವಿಧಾನಗಳ ಕುರಿತಾದ ವಿವರವಾದ ಮಾಹಿತಿಯನ್ನು ನೀಡುತ್ತದೆ.

ನಾಯಕ ಚೀನಿಯಾ ಬಿ ಅವರು ತಮ್ಮ 'ಬಂಜಾರ ಚರಿತ್ರ'(೧೯೯೮) ಎಂಬ ತೆಲಗು ಕೃತಿಯಲ್ಲಿ ಬಂಜಾರಿಗರ ಪೂರ್ವ ವೃತ್ತಾಂತ, ತಾಂಡಾ ಸಂಸ್ಕೃತಿ, ಬಂಜಾರಿಗಳ ಅಭಿವೃದ್ಧಿ, ಬಂಜಾರಿಗಳ ಕ್ಷತ್ರಿಯ ವರ್ಣನೆ, ವಂಶಾವಳಿ ಚರಿತ್ರೆ, ಬಂಜಾರಿಗಳ ಉಪನಾಮಗಳು, ಬಂಜಾರಾ ಸಂಸ್ಕೃತಿ, ಬಂಜಾರರು ಆಚರಿಸುವ ಹಬ್ಬಗಳು ಹೀಗೆ ಮುಂತಾದ ಅಂಶಗಳ ಕುರಿತು ವಿವರಿಸಿದ್ದಾರೆ.

ನಾಯಕ ಡಿ ಬಿ ಅವರು ಕೈಗೊಂಡ 'ಲಂಬಾಣಿ ಜನಪದ ಸಾಹಿತ್ಯ'(೨೦೦೦) ಸಂಶೋಧನಾ ಕೃತಿಯಲ್ಲಿ ಲಂಬಾಣಿಗರ ಜನಪದ ಗೀತೆಗಳು, ಕಥನ ಗೀತೆಗಳು, ಲಂಬಾಣಿ ಗಾದೆಗಳು, ಪ್ರದರ್ಶನ ಕಲೆಗಳು, ಬಯಲಾಟಗಳು ಕುರಿತು ವಿವರಿಸಿದ್ದಾರೆ. ಇವರ ಮತ್ತೊಂದು ಕೃತಿ 'ಲಂಬಾಣಿ ಸಂಸ್ಕೃತಿ'ಯಲ್ಲಿ (೧೯೯೪) ಲಂಬಾಣಿಗರ ಸಾಹಿತ್ಯ ಮತ್ತು ಸಂಸ್ಕೃತಿಯ ಕುರಿತಾದ ಮಾಹಿತಿ ಲಭ್ಯವಾಗುತ್ತದೆ.

ತಿಡಕೆ ಎ ಎಸ್ ಮತ್ತು ಪವಾರ ಎ ಎಸ್ ಅವರ 'population estimation of Banjara and vanjari' ಎಂಬ ಸಂಶೋಧನಾ ಲೇಖನವು ಡಿಸೆಂಬರ್ ೦೧/೨೦೧೧ರ 'Southern Economist' ಎಂಬ ಜರ್ನಲ್‌ನಲ್ಲಿ ಪ್ರಕಟವಾಗಿದ್ದು, ಮಹಾರಾಷ್ಟ್ರ ರಾಜ್ಯದ ಔರಂಗಾಬಾದ ಜಿಲ್ಲೆಯಲ್ಲಿ ವಾಸವಾಗಿರುವ ಲಂಬಾಣಿಗರು ಹಾಗೂ ವಂಜಾರಿ ಸಮುದಾಯಗಳ ವಲಸೆ, ಬಡತನ, ಸಾಕ್ಷರತೆ, ಕುಟುಂಬದ ಮಾಸಿಕ ಖರ್ಚು ಮುಂತಾದ ಅಂಶಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿದ್ದು, ವಂಜಾರಿ

ಸಮುದಾಯವು ಬಂಜಾರಾ ಸಮುದಾಯಕ್ಕಿಂತ ಉನ್ನತವಾದ ಸ್ಥಾನಮಾನ ಮತ್ತು ಅಂತಸ್ತನ್ನು ಹೊಂದಿದೆ ಎಂಬ ಮಾಹಿತಿಯನ್ನು ತಿಳಿಸುತ್ತದೆ.

ನಂಜುಂಡಸ್ವಾಮಿ ಹೆಚ್ ವಿ ಮತ್ತು ಅನಂತಕೃಷ್ಣ ಅಯ್ಯರ್ ಅವರ 'ಮೈಸೂರ ಟ್ರೈಬ್ಸ ಆ್ಯಂಡ್ ಕ್ಯಾಸ್ಟಸ್'(೧೯೨೮) ಎಂಬ ಕೃತಿಯಲ್ಲಿ ಲಂಬಾಣಿಗರ ಮೂಲ, ಸಂಸ್ಕೃತಿ ಮುಂತಾದ ಅಂಶಗಳ ಬಗ್ಗೆ ವಿವರವಾದ ಮಾಹಿತಿಯು ಲಭ್ಯವಿದೆ.

ಸಣ್ಣರಾಮ ಅವರ 'ಲಂಬಾಣಿ ಸಂಸ್ಕೃತಿ'(೧೯೯೯) ಎಂಬ ಸಂಶೋಧನಾ ಕೃತಿಯಲ್ಲಿ ಲಂಬಾಣಿಗರ ಗೋತ್ರ, ರಚನೆ, ಮಹಿಳೆಯರ ಸ್ಥಾನಮಾನ, ಲಂಬಾಣಿಗರ ಸಾಮಾಜಿಕ ರಚನೆಯಲ್ಲಿ ನಾಯಕ, ಕಾರಭಾರಿ, ಡಾವ,(ಹಿರಿಯರು) ಪೂಜಾರಿಯ ಕಾರ್ಯಗಳು, ಸಂಪ್ರದಾಯ, ಹಬ್ಬಗಳು, ನಂಬಿಕೆ, ಮಾಟ, ಹಚ್ಚೆ, ರಂಗೋಲಿ, ಕಸೂತಿ, ಒಗಟು, ನುಡಿಗಟ್ಟು, ನ್ಯಾಯ ಪಂಚಾಯತಿ ಹೀಗೆ ಮುಂತಾದ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ.

ನಾಯಕ ಬಾಲಾ ಕೆ ಅವರು ಬರೆದ 'ಬಂಜಾರಾ ಧರ್ಮದ ಸಾಮಾನ್ಯ ಜ್ಞಾನ'(೧೯೯೬) ಕೃತಿಯಲ್ಲಿ ಲಂಬಾಣಿಗರು ಧರಿಸುತ್ತಿರುವ ಆಭರಣಗಳು ಹರಪ್ಪ ಮತ್ತು ಮೊಹಂಜದಾರೋ ನಾಗರಿಕತೆಯ ಕಾಲದಲ್ಲಿಯ ಜನರು ಧರಿಸುತ್ತಿದ್ದರು. ಯುರೋಪ್ ಮತ್ತು ಏಷ್ಯಾ ಖಂಡಗಳ ಮಧ್ಯ ಇರುವ ಅಂಚಿನಲ್ಲಿ ಖಜಾಜಿಸ್ ಸ್ಥಾನ ಎಂಬ ಸಣ್ಣ ಬಂಜಾರಾ ರಾಜ್ಯವಿದೆ ಎಂಬ ಮಾಹಿತಿಯನ್ನು ನೀಡಿದ್ದಾರೆ. ಅಲ್ಲದೇ ಲಂಬಾಣಿಗರ ಗೋತ್ರ, ಪಂಚಾಯತಿ, ಸಂಸ್ಕಾರಗಳು ಹಾಗೂ ಹಬ್ಬಗಳ ಕುರಿತು ಹಲವಾರು ಅಂಶಗಳನ್ನು ವಿವರಿಸಿದ್ದಾರೆ.

ಸಿಂಗ್ ಕೆ ಎಸ್ ಅವರ ಸಂಪಾದಕತ್ವದ 'pople of India: Andhra Pradesh' (2003) ಎಂಬ ಲೇಖನದಲ್ಲಿ ಲಂಬಾಣಿಗರು ಭಾರತದ ವಿವಿಧ ಭಾಗಗಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಇವರಾಡುವ ಲಂಬಾಡಿ ಭಾಷೆಯು ಇಂಡೋ ಆರ್ಯನ ಗುಂಪಿಗೆ ಸೇರುತ್ತದೆ. ಮೂಲತಃ ವ್ಯಾಪಾರಿಗಳಾದ ಇವರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದಾರೆ ಎಂಬ ವಿವರಣೆಯನ್ನು ನೀಡುತ್ತಾರೆ.

ಪ್ರತಾಪ ಡಿ ಆರ್ ಅವರ 'The festivals of Bajaras of Andhra Pradesh' (1970) ಎಂಬ ಕೃತಿಯಲ್ಲಿ ಆಂಧ್ರ ಪ್ರದೇಶ ರಾಜ್ಯದ ಲಂಬಾಣಿಗರು ಆಚರಿಸುವ ಹಬ್ಬಗಳ ಕುರಿತಾದ ವಿವರ ದೊರೆಯುತ್ತದೆ. 'The Banjara of Bapunagar' (A settlement in the Urban environs of Hyderabad) (1968) ಎಂಬ ಇವರ ಇನ್ನೊಂದು ಕೃತಿಯಲ್ಲಿ ಹೈದ್ರಾಬಾದ ನಗರದ ಪೂರ್ವ ಭಾಗದಲ್ಲಿರುವ ಬಾಪುನಗರ ತಾಂಡಾದ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತಿಗತಿಗಳಲ್ಲಿ ಉಂಟಾಗುತ್ತಿರುವ ಬದಲಾವಣೆಯನ್ನು ಕುರಿತು ತಿಳಿಸಿದ್ದಾರೆ.

ಮಹಾದೇವಿಬಾಯಿ ಅವರ 'ಚಾಮರಾಜನಗರ ಸುತ್ತಿನ ಲಂಬಾಣಿ ಸಂಸ್ಕೃತಿ'(೨೦೦೭) ಕೃತಿ ಚಾಮರಾಜನಗರ ಸುತ್ತಿನ ಲಂಬಾಣಿಗರ ಜೀವನ ವಿಧಾನ, ಸಂಸ್ಕೃತಿ, ಸಂಪ್ರದಾಯ, ಹಬ್ಬ ಹಾಗೂ ಜಾತ್ರೆಗಳ ಮಾಹಿತಿ ನೀಡುತ್ತದೆ.

ಹಳಬರ ಬಿ ಜಿ ಅವರ 'ಉತ್ತರ ಕರ್ನಾಟಕದ ಲಂಬಾಣಿಗಳಲ್ಲಿ ಆರ್ಥಿಕ ಬದಲಾವಣೆಯ ಸಾಮಾಜಿಕ ಪರಿಣಾಮ'(೧೯೭೫) ಎಂಬ ಸಂಶೋಧನಾ ಮಹಾಪ್ರಬಂಧದಲ್ಲಿ ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಎರಡು ತಾಂಡಾಗಳನ್ನು ಪ್ರಮುಖ ಕೇಂದ್ರಗಳನ್ನಾಗಿ ಮಾಡಿಕೊಂಡು ಲಂಬಾಣಿಗರ ಆರ್ಥಿಕ ಜೀವನದ ಕುರಿತಾಗಿ ಆರ್ಥಿಕ ಸಾಧನಗಳು, ಕೃಷಿ ಮುಂತಾದ ಅಂಶಗಳ ಬಗ್ಗೆ ಮಾಹಿತಿಯನ್ನು ಒದಗಿಸಿದ್ದಾರೆ.

ನಾಯ್ಕ ರಾಜು ಎಸ್ ಅವರ 'ಲಂಬಾಣಿಗರಲ್ಲಿ ರಾಜಕೀಯ ಅರಿವು'(೨೦೦೬) ಎಂಬ ಸಂಶೋಧನಾ ಗ್ರಂಥವು ಲಂಬಾಣಿಗರ ಪಂಚಾಯತ ವ್ಯವಸ್ಥೆ, ಆಧುನಿಕ ಜಾತಿ ಸಂಘಟನೆ, ರಾಜಕೀಯದಲ್ಲಿ ಭಾಗವಹಿಸುವಿಕೆ, ಜಿಲ್ಲಾ ಪಂಚಾಯತ ಮತ್ತು ರಾಜ್ಯದ ವಿಧಾನ ಸಭೆಯಲ್ಲಿ ಈ ಸಮುದಾಯದವರ ಸಹಭಾಗಿತ್ವ, ಮತ ಚಲಾವಣೆಯ ಅರಿವು ಹೀಗೆ ಲಂಬಾಣಿಗರ ರಾಜಕೀಯ ಪ್ರವೇಶದ ಕುರಿತಾಗಿ ವಿವರವಾದ ಮಾಹಿತಿಯನ್ನು ಒಳಗೊಂಡಿದೆ.

ಲಮಾಣಿ ಗಣಪತಿ ಕೆ ಅವರ 'ಲಂಬಾಣಿಗರ ಗೋವಾ ವಲಸೆ: ಒಂದು ಸಮಾಜಶಾಸ್ತ್ರೀಯ ಅಧ್ಯಯನ'(೨೦೦೭) ಎಂಬ ಸಂಶೋಧನಾ ಮಹಾ ಪ್ರಬಂಧವು ಲಂಬಾಣಿ ಸಮುದಾಯದ ಬದುಕಿನ ಮೇಲೆ ಬೆಳಕು ಚೆಲ್ಲಿದ್ದು, ಈ ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನದ ದರ್ಶನವನ್ನು ಮಾಡಿಸುತ್ತದೆ. ಕಡಿಮೆ ಭೂಮಿ, ಬಡತನ, ನಿರುದ್ಯೋಗ, ಬರಗಾಲ, ಕಡಿಮೆ ಕೂಲಿದರ, ಋಣಭಾರ ಮುಂತಾದ ಅಂಶಗಳು ಈ ಸಮುದಾಯವನ್ನು ಬೆನ್ನು ಬಿಡದೇ ಕಾಡುತ್ತಿದ್ದು, ಜೀವನೋಪಾಯಕ್ಕಾಗಿ ವಲಸೆಗೆ ಪ್ರೇರೆಪಿಸುತ್ತವೆ. ಗೋವಾದಲ್ಲಿಯ ಹೆಚ್ಚು ಕೂಲಿ, ಆಕರ್ಷಕ ಜೀವನ, ನಿರಂತರ ಉದ್ಯೋಗ ಮುಂತಾದ ಅಂಶಗಳು ವಲಸೆಯ ಆಕರ್ಷಕ ಅಂಶಗಳಾಗಿವೆ ಎಂಬ ವಿವರಣೆ ನೀಡಿದ್ದಾರೆ.

ಪ್ರಶಾಂತ ಹೆಚ್ ಡಿ ಅವರು ಬರೆದ 'ಲಂಬಾಣಿಗಳಲ್ಲಿ ಸಾಮಾಜಿಕ ಬದಲಾವಣೆ: ಒಂದು ಸಮಾಜಶಾಸ್ತ್ರೀಯ ಅಧ್ಯಯನ' (೨೦೦೨) ಎಂಬ ಸಂಶೋಧನಾ ಮಹಾಪ್ರಂಬಧದಲ್ಲಿ ಲಂಬಾಣಿಗರ ಸಾಮಾಜಿಕ ಆಚರಣೆಗಳಾದ ವಿವಾಹ, ಕುಟುಂಬ, ಸಾಂಪ್ರದಾಯಿಕ ಹಬ್ಬಗಳು, ಶವಸಂಸ್ಕಾರ ಮುಂತಾದವುಗಳಿಗೆ ವ್ಯಯಿಸುವ ಖರ್ಚು, ಕೃಷಿಕರ ಭೂ ಹಿಡುವಳಿ, ಭೂರಹಿತತೆ, ಗೇಣಿ ಆಧಾರಿತ ಸಾಗುವಳಿದಾರರು, ಭೂರಹಿತ ಕೃಷಿ ಕಾರ್ಮಿಕರು, ಕೂಲಿಯ ಪ್ರಕಾರಗಳು ಹೀಗೆ ಮುಂತಾದ ಆರ್ಥಿಕ ಅಂಶಗಳ ಮೇಲೆ ಬೆಳಕು ಚೆಲ್ಲಿದ್ದಾರೆ.

ಲಮಾಣಿ ಹೆಚ್ ಡಿ ಅವರು 'ಕರ್ನಾಟಕ ಲಂಬಾಣಿ ಜನಪದ ಗೀತೆಗಳ ಸಾಹಿತ್ಯದ ಅಧ್ಯಯನ' (೧೯೭೬) ಕೈಗೊಂಡಿದ್ದು, ಲಂಬಾಣಿಗರಲ್ಲಿ ಪ್ರಚಲಿತವಿರುವ ಜಾನಪದ ಗೀತೆಗಳನ್ನು, ಅವರ ಸಾಹಿತ್ಯವನ್ನು ಕುರಿತು ವಿವರಿಸಿದ್ದಾರೆ.

ವೀರಣ್ಣ ಜಿ ಅವರ 'Tribal political leadership: A study of Lambada tribes in warangal District in Andhra pradesh (1992) ಎಂಬ ಎಮ್ ಫಿಲ್ ಸಂಶೋಧನಾ ಪ್ರಬಂಧವು ಲಂಬಾಣಿಗರ ನ್ಯಾಯ ಪಂಚಾಯತ ವ್ಯವಸ್ಥೆ, ಆಧುನಿಕ ಜಾತಿ ಸಂಘಟನೆ, ರಾಜಕೀಯ ಅರಿವು ಹಾಗೂ ಸಹಭಾಗಿತ್ವ ಕುರಿತು ವಿವರವಾದ ಮಾಹಿತಿಯನ್ನು ಒದಗಿಸುತ್ತದೆ.

ಗಂಗಾನಾಯಕ ಕೆ ಎನ್ ಅವರ 'ಲಂಬಾಣಿ ಇತಿಹಾಸ ಮತ್ತು ಸಂಸ್ಕೃತಿ'(೨೦೦೭) ಎಂಬ ಕೃತಿಯಲ್ಲಿ ಮೂಲತಃ ವ್ಯಾಪಾರಿಗಳಾಗಿದ್ದು, ರಾಜಸ್ಥಾನದಿಂದ ವಲಸೆ ಬಂದು ಭಾರತದ ವಿವಿಧ ರಾಜ್ಯಗಳಲ್ಲಿ ನೆಲೆಸಿರುವ ಲಂಬಾಣಿಗರನ್ನು ಒಂದೊಂದು ರಾಜ್ಯದಲ್ಲಿ ಒಂದೊಂದು ಹೆಸರಿನಲ್ಲಿ ಕರೆಯುತ್ತಾರೆಂಬ ಮಾಹಿತಿ ನೀಡುತ್ತಾ, ಲಂಬಾಣಿಗರ ಗೋತ್ರಗಳು, ವಸತಿ ವ್ಯವಸ್ಥೆ, ಸಂಪ್ರದಾಯ, ಆಚರಣೆ, ಮದುವೆ, ಕ್ರಮ, ಹಬ್ಬ ಹೀಗೆ ಮುಂತಾದ ಅಂಶಗಳ ಮೇಲೆ ಬೆಳಕು ಚೆಲ್ಲಿದ್ದಾರೆ.

ರಾಮಕೋಟಿ ವಿ ಅವರ 'ಬಂಜಾರಾ ಸಮಾಜ: ಐತಿಹಾಸಿಕ ಪರಿಪ್ರೇಕ್ಷ'(೨೦೧೨) ಎಂಬ ಹಿಂದಿ ಕೃತಿಯಲ್ಲಿ ಬಂಜಾರಾ ಶಬ್ದವು ಬನ (ಅರಣ್ಯ) ವಾಣಿಜ್ಯಕಾರ, ನಿರಂಜಾರ (ಅಕ್ಕಿಯ ವ್ಯಾಪಾರಿ) ಶಬ್ದಗಳಿಂದ ಹಾಗೂ ಲಮಾಣಿ ಶಬ್ದವು 'ಲವಣ' ಎಂಬ ಪದದಿಂದ ಉತ್ಪತ್ತಿಗೊಂಡಿದೆ ಎನ್ನುವ ಮಾಹಿತಿಯನ್ನು ನೀಡುತ್ತಾ, ಲಂಬಾಣಿಗರ ಗೋತ್ರ, ತಾಂಡಾದ ರಚನೆ, ವಿದೇಶಗಳಲ್ಲಿ ವಾಸವಾಗಿರುವ ಜಿಪ್ಸಿ ಬಂಜಾರಾ, ಮಯೂರ ಬಂಜಾರಾ ಹೀಗೆ ಲಂಬಾಣಿಗರ ಕುರಿತಾದ ಹಲವಾರು ಮಾಹಿತಿಯನ್ನು ನೀಡಿದ್ದಾರೆ. ಇವರ ಇನ್ನೊಂದು ಕೃತಿ 'ಬಂಜಾರಾ ಲೋಕಗೀತ' (೨೦೦೨) ದಲ್ಲಿ ಲಂಬಾಣಿಗರು ವಿವಿಧ ಸಂದರ್ಭಗಳಲ್ಲಿ ಹಾಡುವ ಜನಪದ ಹಾಡುಗಳನ್ನು ಪಟ್ಟಿ ಮಾಡಿದ್ದಾರೆ.

ನಾಯ್ಕ ಮಲ್ಲಿಕಾರ್ಜುನ ಬಿ ಹೆಚ್ ಅವರ 'ಶ್ರೀ ಸೇವಾಲಾಲ ಚರಿತ್ರೆ'(೨೦೦೨) ಕೃತಿಯಲ್ಲಿ ಲಂಬಾಣಿಗರ ಕುಲಗುರು ಶ್ರೀ ಸೇವಾಲಾಲರ ಜನನ, ಬಾಲ್ಯ, ತಪಸ್ಸು, ಪವಾಡ ಮುಂತಾದ ಘಟನಾವಳಿಗಳ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಿದ್ದಾರೆ.

ರಾಠೋಡ ಮೋತಿರಾಜ ಅವರ 'ಗೋರಮಾಟಿ'(೧೯೯೮) ಎಂಬ ಮರಾಠಿ ಕೃತಿಯಲ್ಲಿ ಲಂಬಾಣಿಗರ ಮೂಲದ ಐತಿಹ್ಯಗಳು, ತಾಂಡಾದ ರಚನೆ, ಆಚರಿಸುವ ಹಬ್ಬಗಳು, ಸಂಸ್ಕೃತಿ, ಸಂಸ್ಕಾರ, ರೀತಿ–ನೀತಿಗಳು, ವೇಷಭೂಷಣಗಳು, ಭಾಷೆ ಮುಂತಾದ ಅಂಶಗಳ ಕುರಿತು ಸ್ಥೂಲ ಪರಿಚಯವನ್ನು ನೀಡಲಾಗಿದೆ.

ನುಣಾವಥ ರಾಮಬಾಬು ಅವರು 'ಲಂಬಾಡಿ ತೆಲಗು ಜಾತೀಯಾಲ ತುಲನಾತ್ಮಕ ಪರಿಶೀಲನ' (೨೦೦೮) ಎಂಬ ತಮ್ಮ ಎಂ ಫಿಲ್ ಸಂಶೋಧನಾ ಪ್ರಬಂಧದಲ್ಲಿ ಲಂಬಾಡಿಗರ ಜೀವನ ಶೈಲಿಯ ಪರಿಚಯ, ಲಂಬಾಡಿ ಪದದ ಉತ್ಪತ್ತಿ, ಸುಗಾಲಿ ಪದದ ಉತ್ಪತ್ತಿ, ಬಂಜಾರಾ ಪದದ ಉತ್ಪತ್ತಿ, ಭಾರತ ದೇಶದಲ್ಲಿ ಲಂಬಾಡಿಗರ ಪರ್ಯಾಯ ನಾಮಗಳು, ಲಂಬಾಡಿಗರ ಚರಿತ್ರೆ, ಇವರ ಮೂಲ

ಪುರುಷ, ಗೋತ್ರಗಳು, ವೃತ್ತಿ, ತಾಂಡಾ ಸಂಸ್ಕೃತಿ, ಲಂಬಾಡಿಗರ ಸ್ಥಿತಿಗತಿಗಳು ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಜಾಧವ ಭಾಯಿ ಪ್ರೇಮಸಿಂಹ ಅವರ 'ಬಂಜಾರಾ ಜಾಗೃತಿ ಕಿ ರೇಖಾಯೇ'(೧೯೯೦) ಎಂಬ ಹಿಂದಿ ಕೃತಿಯಲ್ಲಿ ಲಂಬಾಣಿಗರ ಗೋತ್ರ, ಮೊಗಲರ ಕಾಲದಲ್ಲಿ ಲಂಬಾಣಿಗರ ಸ್ಥಿತಿ, ಸ್ವಾತಂತ್ರ್ಯ ಪೂರ್ವದಲ್ಲಿಯ ದಯನೀಯ ಘಟನಾವಳಿಗಳು ಹಾಗೂ ಲಂಬಾಣಿಗರ ಜಾಗೃತಿಯಲ್ಲಿ ಶಿಕ್ಷಣದ ಪಾತ್ರದ ಕುರಿತು ವಿವರಣೆಯನ್ನು ನೀಡಿದ್ದಾರೆ.

ಪವಾರ ಹರಿಲಾಲ ಅವರ 'ಬದುಕೊಂದು ಚಿತ್ತಾರ ಲಂಬಾಣಿ ಬುಡಕಟ್ಟು' (೨೦೦೭) ಎಂಬ ಕೃತಿಯಲ್ಲಿ ಭಾರತದಲ್ಲಿ ಒಂದು ಕಾಲಕ್ಕೆ ವ್ಯಾಪಾರ ವ್ಯವಸ್ಥೆಯು ಲಂಬಾಣಿಗರ ಹಿಡಿತದಲ್ಲಿತ್ತು ಎಂದು ಹೇಳುವ ಮೂಲಕ ಈ ಜನರ ವ್ಯಾಪಾರ ವೃತ್ತಿ, ಉಡುಗೆ ತೊಡುಗೆಗಳು, ಸಾಂಸ್ಕೃತಿಕ ನಾಯಕ ಸೇವಾಲಾಲರ ಜೀವನ ಚರಿತ್ರೆ, ಪವಾಡಗಳು, ಜನಪದ ವೃತ್ತಿ ಗಾಯಕರಾದ ಢಾಡಿಗಳು ಹಾಗೂ ಸಮುದಾಯದ ಕುರಿತ ಹಲವಾರು ಸಾಂಸ್ಕೃತಿಕ ವಿವರಗಳಿವೆ. 'ಲಂಬಾಣಿಗರಲ್ಲಿ ಮದುವೆ ಸಂಪ್ರದಾಯಗಳು' (೧೯೯೬) ಎನ್ನುವ ಇವರ ಇನ್ನೊಂದು ಕೃತಿಯಲ್ಲಿ ವಿವಾಹದ ಕುರಿತಾದ ವಿವರವಾದ ಮಾಹಿತಿ ಲಭ್ಯವಿದೆ.

ನಾಯಕ ರೂಪ್ಲಾ ವೈ ಅವರ 'ರಂಗು ರಂಗಿನ ಬಂಜಾರ(ಲಂಬಾಣಿ) ಜನಾಂಗ' (೧೯೯೮) ಕೃತಿಯು ಲಂಬಾಣಿಗರ ಮೂಲ, ಅವರ ಸಮಾನಾರ್ಥಕ ಹೆಸರುಗಳು, ವೇಷ ಭೂಷಣ, ವಿವಾಹ ಶಾಸ್ತ್ರ, ಭಾಷೆ, ಹಬ್ಬಗಳು, ಗೋರ ಪಂಚಾಯತ ಮುಂತಾದ ಅಂಶಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ.

ಲಾರೆನ್ಸ್ ಡಿಸೋಜಾ ಎಸ್ ಜೆ ಅವರ 'ಲಂಬಾಣೀಸ್'(೧೯೯೭) ಎಂಬ ಕೃತಿಯಲ್ಲಿ ಲಂಬಾಣಿಗರ ಮೂಲ, ಜೀವನ ವಿಧಾನ, ಏಕತೆಯಿಂದ ಸಾಮುದಾಯಿಕವಾಗಿ ಜೀವಿಸುವ ಸ್ವಯಂ ಪರಿಪೂರ್ಣತೆಯ ಬಗೆಗೆ ವಿವರವಾದ ಮಾಹಿತಿ ನೀಡಿದ್ದಾರೆ.

ರಾಠೋಡ ರಮೇಶ ಅವರ 'ಬಂಜಾರಾ ಲೋಕಗೀತ್'(೨೦೦೨) ಎಂಬ ಕೃತಿಯಲ್ಲಿ ಲಂಬಾಣಿಗರು ಪೂಜೆಯ ವೇಳೆ ದೇವರಿಗೆ ಅರ್ಪಿಸುವ ಪ್ರಾರ್ಥನೆಯ ವಿನಂತಿಗಳು, ಹೋಳಿ ಹಬ್ಬದಲ್ಲಿ ಹಾಡುವ ಲೇಂಗಿಯ ಗೀತೆಗಳು, ಹೀಗೆ ವಿವಿಧ ಕಾರ್ಯಕ್ರಮಗಳ, ಹಬ್ಬಗಳಲ್ಲಿ ಹಾಡುವ ಗೀತೆಗಳ ವಿವರಗಳಿವೆ.

ರವಿ ವಿ ಅವರು ತಮ್ಮ 'ಗಿರಿಜನುಲ ಜೀವಿತ ರೇಖಾ ಚಿತ್ರಾಲು-ಅನುಭವಗಾಥಲು' (೨೦೦೨) ಎಂಬ ತೆಲಗು ಭಾಷೆಯ ಎಮ್ ಫಿಲ್ ಸಂಶೋಧನಾ ಗ್ರಂಥದಲ್ಲಿ ಗಿರಿಜನರ ಸಂಕ್ಷಿಪ್ತ ಪರಿಚಯ, ಭಾರತದಲ್ಲಿ ಗಿರಿಜನರು, ಮೈದಾನ ಪ್ರಾಂತಗಳಲ್ಲಿ ಗಿರಿಜನರು, ಆಂಧ್ರ ಪ್ರದೇಶದ ಗಿರಿಜನರ ಚಾರಿತ್ರಿಕ ಮಹತ್ವ, ಗಿರಿಜನ ಪ್ರಾಂತಗಳಲ್ಲಿಯ ವ್ಯವಸಾಯ, ಅಡವಿ ಉತ್ಪನ್ನಗಳು, ಗಿರಿಜನರ ಆರ್ಥಿಕ ವ್ಯವಸ್ಥೆ, ವಿದ್ಯಾಭ್ಯಾಸ, ಉದ್ಯೋಗ, ಅವರ ಸಾಂಘಿಕ ಜೀವನ, ವಸ್ತ್ರಾಭರಣ

ಮತ್ತು ಅಲಂಕಾರ, ಹಬ್ಬಗಳು, ವಿವಾಹ ವ್ಯವಸ್ಥೆ, ಗೃಹನಿರ್ಮಾಣ, ರಾಜಕೀಯ ವ್ಯವಸ್ಥೆ ಮುಂತಾದ ವಿಷಯಗಳನ್ನು ಕುರಿತು ವಿವರಿಸಿದ್ದಾರೆ.

ಭೂಕ್ಯಾ ತಿರುಪತಿ ಅವರು 'ಲಂಬಾಡಿ ಭಾಷಾ ಸಾಹಿತ್ಯಾಲಪೈ ತೆಲಗು ಭಾಷಾ ಪ್ರಭಾವಂ' (೨೦೦೫) ಎಂಬ ತಮ್ಮ ಎಂ ಫಿಲ್ ಸಂಶೋಧನಾ ಪ್ರಬಂಧದಲ್ಲಿ ಲಂಬಾಡಿಗರ ಪರಿಚಯ ಮತ್ತು ಆಚಾರಗಳು, ಗೋತ್ರಗಳು, ಲಂಬಾಡಿ ಹೆಸರಿನ ಪರ್ಯಾಯ ನಾಮಗಳು, ಲಂಬಾಣಿಗರ ಪ್ರಮುಖ ಹಬ್ಬಗಳಾದ ಸಿತ್ಲಾ, ತೀಜ್, ಭವಾನಿ ಬಕ್ರಾ ಮಾರೇರ, ಭೋಗ ಮುಂತಾದವುಗಳ ವಿವರ, ವಿವಾಹ ಸಂಬಂಧಗಳು, ಲಂಬಾಡಿ ಭಾಷೆಯ ಮೇಲೆ ತೆಲಗು ಭಾಷೆಯ ಪ್ರಭಾವ ಹೀಗೆ ಮುಂತಾದ ಅಂಶಗಳನ್ನು ಕುರಿತು ವಿವರಿಸಿದ್ದಾರೆ.

ಈವರೆಗೆ ಪ್ರಕಟವಾಗಿರುವ ಕೃತಿಗಳು, ಲೇಖನಗಳು ಲಂಬಾಣಿಗರ ಕುರಿತಾಗಿ ವಿಪುಲವಾದ ಜ್ಞಾನವನ್ನು ನೀಡಿವೆ. ಹಾಗೇಯೇ ಈ ಸಂಶೋಧನೆಗೆ ದಾರಿ ದೀಪಗಳಾಗಿವೆ. ಆದರೆ ಈ ಎಲ್ಲಾ ಸಂಶೋಧನಾ ಕೃತಿಗಳು ಹಾಗೂ ಲೇಖನಗಳು ಲಂಬಾಣಿಗರ ಸಂಸ್ಕೃತಿ, ಧರ್ಮ, ಐತಿಹಾಸಿಕ ಹಿನ್ನಲೆ, ಜಾನಪದ ಗೀತೆಗಳು, ವೇಷ ಭೂಷಣಗಳು, ಆಚಾರ ವಿಚಾರಗಳು, ಪಂಚಾಯತ ವ್ಯವಸ್ಥೆ ಹೀಗೆ ಒಂದೊಂದು ಅಂಶಗಳನ್ನು ಕುರಿತು ಅಧ್ಯಯನಗಳು ನಡೆದಿವೆ. ಭಾರತದ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ಲಂಬಾಣಿಗರ ಸಾಮಾಜಿಕ ಮತ್ತು ಆರ್ಥಿಕ ಅಂಶಗಳನ್ನು ತುಲನಾತ್ಮಕವಾಗಿ ಅಧ್ಯಯನ ನಡೆದಿರುವ ಒಂದೇ ಒಂದು ಸಂಶೋಧನಾ ಕೃತಿ ಪ್ರಕಟವಾಗದಿರುವದು 'ಲಂಬಾಣಿಗರ ಸಮಾಜೋ–ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ' ಎಂಬ ವಿಷಯದ ಆಯ್ಕೆ ಪ್ರಸ್ತುತ ಸಂಶೋಧನಾ ಅಧ್ಯಯನದ ಅಗತ್ಯತೆಯನ್ನು ಎತ್ತಿ ತೋರಿಸುತ್ತದೆ.

ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಹಾಗೂ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳಲ್ಲಿ ವಾಸವಾಗಿರುವ ಲಂಬಾಣಿಗರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಜೀವನದ ಸ್ಥಿತಿಗತಿಗಳನ್ನು ಅವಲೋಕಿಸಿ ತುಲನಾತ್ಮಕವಾಗಿ ಅಧ್ಯಯನಿಸಲಾಗಿದೆ.

## ೧.೩. ಅಧ್ಯಯನದ ಉದ್ದೇಶಗಳು

೧. ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಮತ್ತು ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರ ಆರ್ಥಿಕ ಸ್ಥಿತಿಗತಿಗಳನ್ನು ತುಲನಾತ್ಮಕವಾಗಿ ಅರಿಯಲು ಯತ್ನಿಸುವುದು.

೨. ಈ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳನ್ನು ತೌಲನಿಕವಾಗಿ ಅಧ್ಯಯನಿಸುವುದು.

೩. ಈ ಸಮುದಾಯದ ರಾಜಕೀಯ ಮತ್ತು ಶೈಕ್ಷಣಿಕ ಅಂಶಗಳನ್ನು ತುಲನಾತ್ಮಕವಾಗಿ ತಿಳಿದು ಕೊಳ್ಳುವುದು.

೪. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಈ ಸಮುದಾಯಕ್ಕೆ ನೀಡಿರುವ ಮೀಸಲಾತಿಯನ್ನು ತುಲನಾತ್ಮಕವಾಗಿ ಹಾಗೂ ಉಪಯೋಗಗಳ ಬಗ್ಗೆ ಮಾಹಿತಿ ಸಂಗ್ರಹಿಸುವುದು.

೫. ಈ ಸಮುದಾಯದ ಭಾಷೆಯ ಮೇಲೆ ಸ್ಥಳೀಯ ಭಾಷೆ ಬೀರಿದ ಪ್ರಭಾವವನ್ನು ಸ್ಪಷ್ಟಪಡಿಸುವುದು ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ಪ್ರಮೇಯಗಳು

೧. ಲಂಬಾಣಿ ಸಮುದಾಯವು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಸಂವಿಧಾನಾತ್ಮಕವಾಗಿ ಬೇರೆ ಬೇರೆ ಪಟ್ಟಿಯಲ್ಲಿರುವುದರಿಂದ ಅವರ ಶೈಕ್ಷಣಿಕ, ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳು ವಿಭಿನ್ನವಾಗಿರಬಹುದು.

೨. ಲಂಬಾಣಿಗರ ಮಾತೃಭಾಷೆಯ ಮೇಲೆ ಸ್ಥಳೀಯ ಭಾಷೆಯ ಪ್ರಭಾವವಾಗಿರಬಹುದು.

## ೧.೪. ಅಧ್ಯಯನದ ವ್ಯಾಪ್ತಿ

ಲಂಬಾಣಿಗರು ಭಾರತದಾದ್ಯಂತ ಹರಡಿಕೊಂಡಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಮತ್ತು ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳ ತಾಂಡಾಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರು ಸಂಶೋಧನಾ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಅಧ್ಯಯನದ ಕ್ಷೇತ್ರಕಾರ್ಯದ ಅವಧಿಯಲ್ಲಿ ಆಂಧ್ರ ಪ್ರದೇಶ ರಾಜ್ಯವು ಅವಿಭಜಿತ ರಾಜ್ಯವಾಗಿತ್ತು. ಕ್ಷೇತ್ರಕಾರ್ಯದ ತರುವಾಯ ಆಂಧ್ರ ಪ್ರದೇಶ ರಾಜ್ಯವು ಸೀಮಾಂಧ್ರ ಮತ್ತು ತೆಲಂಗಾಣ ರಾಜ್ಯಗಳಾಗಿ ವಿಭಜನೆಗೊಂಡಿದ್ದು, ನನ್ನ ಅಧ್ಯಯನದ ವ್ಯಾಪ್ತಿಗೊಳಪಟ್ಟ ರಂಗಾರೆಡ್ಡಿ ಜಿಲ್ಲೆಯು ತೆಲಂಗಾಣ ರಾಜ್ಯಕ್ಕೆ ಸೇರ್ಪಡೆಗೊಂಡಿದೆ. ಅಧ್ಯಯನದಾದ್ಯಂತ ಆಂಧ್ರ ಪ್ರದೇಶ ರಾಜ್ಯವೆಂದು ಬಳಸಿಕೊಂಡಿರುತ್ತೇನೆ.

## ೧.೫. ಅಧ್ಯಯನದ ಮಹತ್ವ

ಲಂಬಾಣಿ ಸಮುದಾಯದ ಬಗ್ಗೆ ಹಲವಾರು ಅಧ್ಯಯನಗಳು ಮೂಡಿ ಬಂದಿವೆಯಾದರೂ ಇಲ್ಲಿಯವರೆಗೆ ಮೂರು ರಾಜ್ಯಗಳ ಮೂರು ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರ ಕುರಿತಾದ ಯಾವುದೇ ತೌಲನಿಕ ಅಧ್ಯಯನಗಳು ನಡೆದಿರುವುದಿಲ್ಲ. ಹೀಗಾಗಿ ಲಂಬಾಣಿ ಸಮುದಾಯದ ಸಮಾಜೋ-ಆರ್ಥಿಕ ಸ್ಥಿತಿಗತಿಗಳನ್ನು ಕುರಿತು ತೌಲನಿಕವಾಗಿ ಮಾಡಿರುವ ಮೊದಲ ಅಧ್ಯಯನ ಇದಾಗಿದೆ.

ಲಂಬಾಣಿ ಸಮುದಾಯವು ಆಧುನಿಕತೆ ಮತ್ತು ಸ್ಥಳೀಯ ಸಮುದಾಯದ ಪ್ರಭಾವದ ಹಿನ್ನೆಲೆಯಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹೇಗೆ ಬದಲಾವಣೆಗಳಿಗೊಳಗಾಗುತ್ತಿದೆ ಎಂಬ ಅಂಶವನ್ನು ತುಲನಾತ್ಮಕವಾಗಿ ಈ ಅಧ್ಯಯನದಲ್ಲಿ ನೋಡಲಾಗಿದೆ.

ಮುಖ್ಯವಾಗಿ ಲಂಬಾಣಿ ಸಮುದಾಯವು ಒಂದೇ ಮೂಲವನ್ನು ಹೊಂದಿದ್ದರೂ ಕರ್ನಾಟಕ ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ವಿಭಿನ್ನ ಹೆಸರುಗಳಿಂದ ಗುರುತಿಸಲ್ಪಡುತ್ತಿದೆ ಹಾಗೂ ವಿಭಿನ್ನ ಸಂವಿಧಾನಾತ್ಮಕ ಪಟ್ಟಿಯಲ್ಲಿದೆ.

ಈ ಸಂಶೋಧನೆಯಿಂದ ಮೂಡಿಬಂದಿರುವ ಫಲಿತಗಳು ಮುಂದೊಂದು ದಿನ ಲಂಬಾಣಿ ಸಮುದಾಯದವರ ಅಭಿವೃದ್ಧಿಗಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೂಪಿಸುವ ಕಾರ್ಯಯೋಜನೆಗಳಿಗೆ ಮಾರ್ಗಸೂಚಿಯಾಗಬಲ್ಲದೆಂಬ ಧನಾತ್ಮಕವಾದ ಆಶಯವಿದೆ.

## ೧.೬. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನಕ್ಕಾಗಿ ಲಂಬಾಣಿಗರ ಕುರಿತಾಗಿ ಪ್ರಕಟಗೊಂಡಿರುವ ಕೃತಿಗಳು, ಗೆಜೆಟೀಯರ್‌ಗಳು, ಪತ್ರಿಕೆಗಳು, ಬಿಡಿ ಲೇಖನಗಳು, ಜನಗಣತಿಯ ವರದಿಗಳು, ಮಾನವ ಅಭಿವೃದ್ಧಿಯ ವರದಿಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ಹಾಗೂ ವಿಮುಕ್ತ ಬುಡಕಟ್ಟುಗಳ ಕುರಿತಾಗಿ ಬಂದಿರುವ ವರದಿಗಳು, ಆಯೋಗಗಳ ವರದಿಗಳು, ಅಂತರ್ಜಾಲ ಮಾಹಿತಿಗಳು, ರಾಜ್ಯಪತ್ರ ಹಾಗೂ ಇತರೆ ಮೂಲಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

ಈ ಅಧ್ಯಯನಕ್ಕಾಗಿ ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಮತ್ತು ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ಜಿಲ್ಲೆಯ ಆರು ತಾಂಡಾಗಳನ್ನು, ಅದರಲ್ಲಿ ಎರಡು ರಿಮೋಟ್ ತಾಂಡಾಗಳನ್ನು, ಎರಡು ರಸ್ತೆ ಹತ್ತಿರದ ತಾಂಡಾಗಳನ್ನು, ಎರಡು ಗ್ರಾಮ ಹತ್ತಿರದ ತಾಂಡಾಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ತಾಂಡಾಗಳಲ್ಲಿ ವಾಸಿಸುತ್ತಿರುವ ಪ್ರತಿಯೊಂದು ಕುಟುಂಬವನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ರಿಮೋಟ್ ತಾಂಡಾಗಳೆಂದರೆ ಗ್ರಾಮ, ಪಟ್ಟಣ, ನಗರಗಳಿಂದ ದೂರದಲ್ಲಿ ಸ್ಥಾಪಿಸಲ್ಪಟ್ಟ ತಾಂಡಾಗಳು. ರಸ್ತೆ ಹತ್ತಿರದ ತಾಂಡಾಗಳೆಂದರೆ ಒಂದೂರಿನಿಂದ ಮತ್ತೊಂದೂರಿಗೆ ಸಂಪರ್ಕ ಕಲ್ಪಿಸುವ ರಸ್ತೆ ಬದಿಯಲ್ಲಿ ಸ್ಥಾಪಿಸಲ್ಪಟ್ಟ ತಾಂಡಾಗಳು ಹಾಗೂ ಗ್ರಾಮ ಹತ್ತಿರದ ತಾಂಡಾಗಳೆಂದರೆ ಗ್ರಾಮಗಳ ಪಕ್ಕದಲ್ಲಿ ಸ್ಥಾಪಿಸಲ್ಪಟ್ಟ ತಾಂಡಾಗಳು ಎಂದರ್ಥವಾಗುತ್ತದೆ. ಈ ಅರ್ಥದಲ್ಲಿ ಅಧ್ಯಯನದಾದ್ಯಂತ ರಿಮೋಟ್, ರಸ್ತೆ ಹತ್ತಿರದ ಹಾಗೂ ಗ್ರಾಮ ಹತ್ತಿರದ ತಾಂಡಾಗಳು ಎಂದು ಬಳಸಿಕೊಳ್ಳಲಾಗಿದೆ.

ಲಂಬಾಣಿಗರು ಸಂವಿಧಾನಾತ್ಮಕವಾಗಿ ಕರ್ನಾಟಕ ರಾಜ್ಯದಲ್ಲಿ ಪರಿಶಿಷ್ಟ ಜಾತಿ, ಮಹಾರಾಷ್ಟ್ರ ರಾಜ್ಯದಲ್ಲಿ ವಿಮುಕ್ತ ಬುಡಕಟ್ಟು, ಹಾಗೂ ಆಂಧ್ರ ಪ್ರದೇಶ ರಾಜ್ಯದಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಗುರುತಿಸಿಕೊಂಡಿದ್ದರೂ ಈ ಸಮುದಾಯವು ಬುಡಕಟ್ಟು ಸಮುದಾಯಗಳ ಸ್ಪಷ್ಟ ಲಕ್ಷಣಗಳನ್ನು ಹೊಂದಿರುವುದರಿಂದ ಹಾಗೂ ಒಂದೇ ಬುಡಕಟ್ಟು ಸಮುದಾಯವಾಗಿರುವುದರಿಂದ ಅಧ್ಯಯನದಾದ್ಯಂತ ಲಂಬಾಣಿಗರನ್ನು ಬುಡಕಟ್ಟು ಸಮುದಾಯವೆಂದು ಬಳಸಿಕೊಳ್ಳಲಾಗಿದೆ.

ಲಂಬಾಣಿಗರು ಕರ್ನಾಟಕ ರಾಜ್ಯದಲ್ಲಿ ಲಂಬಾಣಿ, ಮಹಾರಾಷ್ಟ್ರ ರಾಜ್ಯದಲ್ಲಿ ಲಮಾನ, ಹಾಗೂ ಆಂಧ್ರ ಪ್ರದೇಶ ರಾಜ್ಯದಲ್ಲಿ ಲಂಬಾಡಾ, ಸುಗಾಲಿ ಎಂಬ ನಾಮಧ್ಯೇಯಗಳಿಂದ ಕರೆಯಲ್ಪಡುತ್ತಿದ್ದು, ಈ ಸಮುದಾಯವು ಒಂದೇ ಬುಡಕಟ್ಟು ಸಮುದಾಯವಾಗಿರುವುದರಿಂದ ಅಧ್ಯಯನದಾದ್ಯಂತ ಈ ಸಮುದಾಯವನ್ನು ಲಂಬಾಣಿಗರು ಎಂದು ಬಳಸಿಕೊಳ್ಳಲಾಗಿದೆ.

ಅಧ್ಯಯನವನ್ನು ಪೂರ್ಣಗೊಳಿಸಲು ಚಾರಿತ್ರಿಕ ವಿಧಾನ, ಸಂಖ್ಯಾಶಾಸ್ತ್ರೀಯ ವಿಧಾನ, ಸಂದರ್ಶನ ವಿಧಾನ, ಸಮೀಕ್ಷಾ ವಿಧಾನ, ಸಹಭಾಗಿತ್ವ ವಿಧಾನ ಹಾಗೂ ಪ್ರಶ್ನಾವಳಿ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

**೧.೭. ಅಧ್ಯಾಯಗಳ ಸ್ವರೂಪ**

ಈ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದ್ದು, ಅವುಗಳ ವಿವರ ಇಂತಿದೆ.

**ಅಧ್ಯಾಯ ಒಂದು**

**ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ:** ಇದು ಅಧ್ಯಯನದ ಮೊದಲ ಅಧ್ಯಾಯ ಹೊಂದಿರುವ ಶೀರ್ಷಿಕೆಯಾಗಿದ್ದು, ಇದರಲ್ಲಿ ಅಧ್ಯಯನದ ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ಅದರ ಮಹತ್ವ, ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾದ ವಿಧಾನ ಮತ್ತು ಇದುವರೆಗೆ ಕೈಗೊಳ್ಳಲಾದ ಅಧ್ಯಯನಗಳ ಕುರಿತಾಗಿ ಸಮೀಕ್ಷೆ ಮಾಡಲಾಗಿದೆ.

**ಅಧ್ಯಾಯ ಎರಡು**

**ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದ ಲಂಬಾಣಿಗರ ಚಿತ್ರಣ:** ಈ ಅಧ್ಯಾಯದಲ್ಲಿ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳ ಹಾಗೂ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಇತಿಹಾಸ, ಭೌಗೋಳಿಕ ಸ್ವರೂಪ, ಜನಸಂಖ್ಯೆ, ಲಂಬಾಣಿಗರಿಗೆ ಆಯಾ ರಾಜ್ಯಗಳಲ್ಲಿ ಕರೆಯಲ್ಪಡುವ ನಾಮಧ್ಯೇಯಗಳು ಹಾಗೂ ಈ ಸಮುದಾಯ ಆಯಾ ರಾಜ್ಯಗಳಲ್ಲಿ ಬೇರೆ ಬೇರೆ ಸಂವಿಧಾನಾತ್ಮಕ ಪಟ್ಟಿಯಲ್ಲಿ ಸೇರಿರುವ ವಿವರಗಳನ್ನು ಕುರಿತು ಅರಿಯುವ ಪ್ರಯತ್ನವನ್ನು ಮಾಡಲಾಗಿದೆ.

**ಅಧ್ಯಾಯ ಮೂರು**

**ಲಂಬಾಣಿಗರ ಮೂಲ ಮತ್ತು ಚಾರಿತ್ರಿಕ ಹಿನ್ನೆಲೆ:** ಎಂಬ ಶೀರ್ಷಿಕೆಯನ್ನು ಹೊಂದಿರುವ ಮೂರನೆಯ ಅಧ್ಯಾಯದಲ್ಲಿ ಲಂಬಾಣಿಗರ ಮೂಲ, ಮೂಲದ ಬಗೆಗಿರುವ ಐತಿಹ್ಯಗಳು, ಲಂಬಾಣಿಗರ ಇತಿಹಾಸ, ಲಂಬಾಣಿ ಎಂಬ ಪದದ ನಿಷ್ಪತ್ತಿ ಹಾಗೂ ನಿಷ್ಪತ್ತಿ ಕುರಿತಂತೆ ವಿವಿಧ ಸಂಶೋಧಕರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಕುರಿತು ಅವಲೋಕಿಸಲಾಗಿದೆ.

**ಅಧ್ಯಾಯ ನಾಲ್ಕು**

**ಲಂಬಾಣಿಗರ ಸಾಮಾಜಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು:** ಈ ಅಧ್ಯಾಯದಲ್ಲಿ ಲಂಬಾಣಿಗರ ಗೋತ್ರಗಳು, ಉಪಗೋತ್ರಗಳು, ಕೌಟುಂಬಿಕ ಪದ್ಧತಿ, ಸಂಸ್ಕಾರಗಳು, ಆಹಾರ ಪದ್ಧತಿ, ಬೇಟೆ,

ಉಡುಗೆ-ತೊಡುಗೆ, ಹಚ್ಚೆ ಕಲೆ, ಹಬ್ಬಗಳು, ಗೋರಬೋಲಿ ಭಾಷೆ ಕುರಿತಂತೆ ಆಯಾ ರಾಜ್ಯಗಳಲ್ಲಿ ಕಂಡುಬರುವ ವ್ಯತ್ಯಾಸಗಳು ಹಾಗೂ ಅವುಗಳ ಮೇಲೆ ಸ್ಥಳೀಯ ಭಾಷೆಯ ಪ್ರಭಾವ, ನ್ಯಾಯ ಪಂಚಾಯತಿ, ಆಯಾ ರಾಜ್ಯಗಳ ಲಂಬಾಣಿಗರ ರಾಜಕೀಯ ಪ್ರಾತಿನಿಧಿತ್ವ ಮುಂತಾದ ಅಂಶಗಳನ್ನು ತುಲನಾತ್ಮಕವಾಗಿ ಅಧ್ಯಯನಿಸಲಾಗಿದೆ.

**ಅಧ್ಯಾಯ ಐದು**

**ಲಂಬಾಣಿಗರ ಆರ್ಥಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು:** ಈ ಅಧ್ಯಾಯದಲ್ಲಿ ಲಂಬಾಣಿಗರ ಆರ್ಥಿಕ ಅಂಶಗಳನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಇದರಲ್ಲಿ ಲಂಬಾಣಿಗರ ಮೂಲವೃತ್ತಿಗಳು, ಪ್ರಸ್ತುತ ವೃತ್ತಿಗಳು, ಜನಸಂಖ್ಯಾ ವಿವರ, ಲಿಂಗಾನುಪಾತ, ಮನೆಗಳ ಮಾದರಿ, ಅನುಸರಿಸುತ್ತಿರುವ ಕಸುಬುಗಳು, ಭೂ-ಹಿಡುವಳಿ, ಶೈಕ್ಷಣಿಕ ಹಂತಗಳ ವಿವರ, ಸಾಕ್ಷರತೆ, ಅನಕ್ಷರತೆ ಮುಂತಾದ ಅಂಶಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಆರು**

**ಸಮಾರೋಪ:** ಈ ಅಧ್ಯಾಯದಲ್ಲಿ ಎಲ್ಲಾ ಅಧ್ಯಾಯಗಳ ಸಂಕ್ಷಿಪ್ತ ವಿವರ, ಅಧ್ಯಯನದ ಫಲಿತಗಳು, ಸಲಹೆಗಳು ಹಾಗೂ ಮುಂದಿನ ಹೊಸ ಸಾಧ್ಯತೆಗಳ ಅಂಶಗಳನ್ನು ಕುರಿತು ವಿವರಿಸಲಾಗಿದೆ.

**ಆಧಾರ ಗ್ರಂಥಗಳು**


ಭೂಕ್ಯಾ ತಿರುಪತಿ, ಲಂಬಾಡಿ ಭಾಷಾ ಸಾಹಿತ್ಯಾಲಪೈ ತೆಲಗು ಭಾಷಾ ಪ್ರಭಾವಂ(ಎಂ.ಫಿಲ್. ಸಂಶೋಧನಾ ಪ್ರಬಂಧ), ಹೈದ್ರಾಬಾದ ವಿಶ್ವವಿದ್ಯಾಲಯ, ೨೦೦೫.

ಗಂಗಾನಾಯಕ ಕೆ ಎನ್., ಲಂಬಾಣಿ ಇತಿಹಾಸ ಮತ್ತು ಸಂಸ್ಕೃತಿ, ಪ್ರಸಾರಾಂಗ ಮಾನಸ ಗಂಗೋತ್ರಿ, ಮೈಸೂರು, ೨೦೦೭

ಜಾಧವ ಭಾಯಿ ಪ್ರೇಮಸಿಂಹ, ಬಂಜಾರ ಜಾಗೃತಿ ಕಿ ರೇಖಾಯೇ, ಭಾರತೀಯ ಬಂಜಾರಾ ಸಾಂಸ್ಕೃತಿಕ ಸಾಹಿತ್ಯ ಪರಿಷದ, ಔರಂಗಬಾದ್, ೧೯೯೦.

ಖಂಡೋಬಾ ಪಿ ಕೆ., ಕರ್ನಾಟಕದ ಲಂಬಾಣಿಗರು, ದಿ. ತೇಜ್‌ಸಿಂಗ್ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗಾ, ೧೯೯೧.

ಲಮಾಣಿ ಗಣಪತಿ ಕೆ., ಲಂಬಾಣಿಗರ ಗೋವಾ ವಲಸೆ: ಒಂದು ಸಮಾಜಶಾಸ್ತ್ರೀಯ ಅಧ್ಯಯನ (ಪಿಎಚ್ ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

ಲಮಾಣಿ ಹೆಚ್ ಡಿ., ಕರ್ನಾಟಕ ಕೆ ಲಮಾಣಿ ಜಾನಪದ ಗೀತೋಂಕಾ ಸಾಹಿತ್ಯಿಕ ಅಧ್ಯಯನ, (ಪಿಎಚ್ ಡಿ ಮಹಾಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

ಮಹಾದೇವಿಬಾಯಿ, ಚಾಮರಾಜನಗರ ಸುತ್ತಿನ ಲಂಬಾಣಿ ಸಂಸ್ಕೃತಿ, ಕೀರ್ತಿ ಪ್ರಕಾಶನ, ಚಾಮರಾಜನಗರ, ೨೦೦೭.

ನಾಯಕ ಬಾಲಾ ಕೆ., ಬಂಜಾರಾ ಧರ್ಮದ ಸಾಮಾನ್ಯ ಜ್ಞಾನ, ಶ್ಯಾಮಲಾ ಪ್ರಕಾಶನ, ಬೆಂಗಳೂರು, ೧೯೯೬.

ನಾಯಕ ಚೇನಿಯಾ ಬಿ., ಬಂಜಾರ ಚರಿತ್ರೆ, ಶ್ರೀಮತಿ ಬಿ ಲಕ್ಷ್ಮಿಬಾಯಿ ಚೇನಿಯಾ ನಾಯಕ ಹಾತಿರಾಮ ಬಾವಾಜಿ ಪಬ್ಲಿಕೇಶನ್, ಅನಂತಪುರಂ, ೧೯೯೮.

ನಾಯಕ ಡಿ ಬಿ., ಲಂಬಾಣಿ ಜನಪದ ಸಾಹಿತ್ಯ, ಬಂಜಾರಾ ಪ್ರಕಾಶನ, ಗುಲ್ಬರ್ಗಾ, ೨೦೦೦.

———, ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೪.

ನಾಯಕ ರೂಪ್ಲಾ ವೈ., ರಂಗುರಂಗಿನ ಬಂಜಾರ(ಲಂಬಾಣಿ) ಜನಾಂಗ, ಎಸ್‌ಬಿಸಿ ಲಾ ಪಬ್ಲಿಕೇಶನ್ಸ್, ಬೆಂಗಳೂರು, ೨೦೦೧.

ನಾಯಕ ಮಲ್ಲಿಕಾರ್ಜುನ ಬಿ ಹೆಚ್., ಶ್ರೀ ಸೇವಾಲಾಲ ಚರಿತ್ರೆ, ಯುಗೇಶ್ವರಿ ಪ್ರಕಾಶನ ಕೋಮಾರನಹಳ್ಳಿ ತಾಂಡಾ ಹಡಗಲಿ ತಾಲೂಕು ಬಳ್ಳಾರಿ ಜಿಲ್ಲೆ, ೨೦೦೨.

ನಾಯ್ಕ ರಾಜು ಎಸ್., ಲಂಬಾಣಿಗರಲ್ಲಿ ರಾಜಕೀಯ ಅರಿವು, ಆತ್ಮಜ್ಯೋತಿ ಪ್ರಕಾಶನ ಜ್ಞಾನ ಜ್ಯೋತಿ ನಗರ, ಬೆಂಗಳೂರು, ೨೦೦೬.

ನುಣಾವಥ ರಾಮಬಾಬು, ಲಂಬಾಡಿ ತೆಲಗು ಜಾತೀಯಾಲ ತುಲನಾತ್ಮಕ ಪರಿಶೀಲನ, (ಎಂ.ಫಿಲ್ ಸಂಶೋಧನಾ ಪ್ರಬಂಧ) ಹೈದ್ರಾಬಾದ ವಿಶ್ವವಿದ್ಯಾಲಯ, ೨೦೦೮.

ಪವಾರ ಹರಿಲಾಲ, ಬದುಕೊಂದು ಚಿತ್ತಾರ ಲಂಬಾಣಿ ಬುಡಕಟ್ಟು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೭.

———, ಲಂಬಾಣಿಗರಲ್ಲಿ ಮದುವೆ ಸಂಪ್ರದಾಯಗಳು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬.

ಪವಾರ ರುಕ್ಮಿಣಿ, ಬಂಜಾರಾ ಲೋಕ ಜೀವನ ಪದ್ಧತಿ, ಕೆ ಎಸ್ ಅಟ್ಕರೆ ಕೈಲಾಸ ಪಬ್ಲಿಕೇಶನ್, ಔರಂಗಾಬಾದ, ೨೦೦೬.

ಪ್ರಶಾಂತ ಹೆಚ್ ಡಿ., ಲಂಬಾಣಿಗಳಲ್ಲಿ ಸಾಮಾಜಿಕ ಬದಲಾವಣೆ: ಒಂದು ಸಮಾಜಶಾಸ್ತ್ರೀಯ ಅಧ್ಯಯನ, (ಪಿಎಚ್ ಡಿ ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ರಾಮಕೋಟಿ ವಿ., ಬಂಜಾರಾ ಸಮಾಜ: ಐತಿಹಾಸಿಕ ಪರಿಪ್ರೇಕ್ಷ, ಜವಾಹರ ಪುಸ್ತಕಾಲಯ ಹಿಂದಿ ಪುಸ್ತಕ ಪ್ರಕಾಶಕ ಎಂವ ವಿತರಕ, ಮಯೂರ, (ಉತ್ತರ ಪ್ರದೇಶ) ೨೦೧೨.

ರಾಠೋಡ ಮೋತಿರಾಜ, ಗೋರಮಾಟಿ, ಬಂಜಾರ ಸಾಂಸ್ಕೃತಿಕ ಸಾಹಿತ್ಯ ಪರಿಷದ ಪ್ರೇ. ಭಾಯಿ ಪ್ರೇಮಸಿಂಹ ಜಾಧವ, ಔರಂಗಬಾದ್, ೧೯೯೮.

ರಾಠೋಡ ರಮೇಶ, ಬಂಜಾರಾ ಲೋಕಗೀತ, ರವೀಶ ಪ್ರಕಾಶನ, ನಾಗಪುರ, ೨೦೦೨.

ರಾಠೋಡ ಸುಭಾಷ ವಿ., ಗೋರ ಬಂಜಾರ ಕೇಣಾವಟ, ಬಂಜಾರ ಸಂಪರ್ಕ ಕಾರ್ಯಾಲಯ, ಠಾಣೆ, ೨೦೧೧.

ರವಿ ವಿ., ಗಿರಿಜನುಲ ಜೀವಿತ ರೇಖಾ ಚಿತ್ರಾಲು–ಅನುಭವಗಾಥಲು(ಎಂ.ಫಿಲ್. ಸಂಶೋಧನಾ ಪ್ರಬಂಧ), ಹೈದ್ರಾಬಾದ ವಿಶ್ವವಿದ್ಯಾಲಯ, ೨೦೦೨.

ಸಣ್ಣರಾಮ, ಲಂಬಾಣಿ ಸಂಸ್ಕೃತಿ, ಡಾ ಸಣ್ಣರಾಮ ರೀಡರ್ ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ೧೯೯೯.

ಶ್ರೀನಿವಾಸ ಎಲ್., ಪರಿವರ್ತನೆಯ ಹಾದಿಯಲ್ಲಿ ಬುಡಕಟ್ಟು ಸಮಾಜಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

Halabar B G., Social Aspect of Economic change Among the Lambani's of North Karnataka. Karnataka University, Dharwad, 1975.

Lawrence D'souza S J. Lambanies, Unesco Literacy Resource centre, Bangalore, 1992.

Nanjundayya H V and Ananthakrishna Iyyar, The Mysore Tribes and Castes, Mysore Govt Press, 1928.

Pratap D R., The Banjara of Bapunagar A Settlement in the Urban environs of Hyderabad, TCR and TI, Tribal welfare Department Andhra Pradesh, Hyderabad, 1968.

Pratap D R., The Festivals of Banjaras of Andhra Pradesh, Tribal cultural Research and Training institute, Tribal welfare Department Andhra Pradesh, Hyderabad, 1970.

Sing K S., People of India Andhra Pradesh, Anthropological survey of India affiliated East west press Pvt. Ltd, New Delhi, 2003.

Tidake A S and Pawar A S., Population Estimation of Banjara and Vanjari, Southern Economist, December 01, 2011.

Viranna G., Tribal Political Leadership: A Study of Lambada Tribes in Worangal District in Andhra Pradesh, (M.phil) Hyderabad University, 1992.

ಅಧ್ಯಾಯ ಎರಡು

# ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದ ಲಂಬಾಣಿಗರ ಚಿತ್ರಣ

೨.೧. ಗುಲಬರ್ಗಾ ಜಿಲ್ಲೆಯ ಲಂಬಾಣಿ ಸಮುದಾಯ

೨.೨. ಸೋಲಾಪುರ ಜಿಲ್ಲೆಯ ಲಂಬಾಣಿ ಸಮುದಾಯ

೨.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿ ಸಮುದಾಯ

## ಅಧ್ಯಾಯ - ೨

# ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದ ಲಂಬಾಣಿಗರ ಚಿತ್ರಣ

**ಭಾ**ರತದಲ್ಲಿ ನಿರ್ಲಕ್ಷಕ್ಕೆ ಒಳಗಾದ ಹಲವು ಸಮುದಾಯಗಳಿವೆ. ಅವುಗಳಲ್ಲಿ ಲಂಬಾಣಿ ಸಮುದಾಯವು ಒಂದು. ಲಂಬಾಣಿ ಎಂಬುದು ಕೇವಲ ಬುಡಕಟ್ಟು ಸೂಚಕ ಶಬ್ದವಲ್ಲ, ಅದು ವೃತ್ತಿಸೂಚಕವೂ ಹೌದು. ಇಂದು ಲಮಾಣಿ, ಲಂಬಾಣಿ, ಲಮಾನ, ಲಂಬಾಡಿ ಎಂದು ಗುರುತಿಸಿ ಕೊಳ್ಳುವ ಲಂಬಾಣಿಗರು ಭಾರತದ ಬುಡಕಟ್ಟಿನ ಜನರಾಗಿದ್ದಾರೆ. ಆದರೆ ಮಧ್ಯಯುಗದ ಸ್ಥಿತ್ಯಂತರ ಕಾಲದಲ್ಲಿ ಉಜ್ವಲ ವೀರಗಾಥೆಯನ್ನು ಬರೆದವರು ಈ ಬಂಜಾರರೆಂದರೆ ಅಚ್ಚರಿಯಾಗುತ್ತದೆ. "೫ನೇ ಶತಮಾನದಿಂದ ೧೬ನೆಯ ಶತಮಾನದ ಕಾಲಾವಧಿಯನ್ನು ರಾಜಪುತ್ರ ಯುಗವೆಂದು ಕರೆಯುತ್ತೇವೆ. ಉತ್ತರ ಭಾರತದಲ್ಲಿ ಸಾವಿರ ವರ್ಷಗಳ ಕಾಲ ಏಕಚಕ್ರಾಧಿಪತ್ಯದಿಂದ ರಾಜ್ಯಭಾರ ಮಾಡಿದ್ದು, ಇತಿಹಾಸದ ಪುಟಗಳಿಂದ ವೇದ್ಯವಾಗುತ್ತದೆ. ಆ ಕಾಲಾವಧಿಯ ಅರಸು ಮನೆತನಗಳಾದ ಗೂರ್ಜರರು, ಪಾಲಮಾರರು, ಸೋಳಂಕಿಗಳು, ಚಾಂದೇಲರು, ಕಳಚೂರ ಅರಸು ಮನೆತನಗಳು ಆಳ್ವಿಕೆ ಮಾಡಿದಂತೆ ರಾಠೋಡ, ಚವ್ಹಾಣ ಮತ್ತು ಪವಾರ ಅರಸು ಮನೆತನಗಳು ರಾಜ್ಯಭಾರ ಮಾಡಿವೆ. ಶುದ್ಧ ಕ್ಷತ್ರಿಯ ಮೂಲರಾಜರು ಉತ್ತರ ಪ್ರಾಂತದ ಮಹಾರಾಷ್ಟ್ರ ರಾಜ್ಯದ ಯವತಮಾಳ ಡೆಕ್ಕನದಲ್ಲಿ ರಾಜ್ಯ ಸ್ಥಾಪನೆ ಮಾಡಿ ಆಳಿದರು. ಇವರು ಬಲಾಢ್ಯರಾಗಿ ರಾಜ್ಯಭಾರವನ್ನು ನಡೆಸಿ ಕೊಂಡಿರುವಾಗ ಕ್ಷತ್ರಿಯ ಅರಸರೇ ಕ್ಷತ್ರಿಯರಾದ ಬಂಜಾರರನ್ನು ಧರ್ಮದಿಂದ ಹೊರ ಹಾಕಿದರು. ಆಗ ಬಂಜಾರ ಕ್ಷತ್ರಿಯರು ಅನಿವಾರ್ಯವಾಗಿ ಅಲೆಯುತ್ತ ಹಿಮಾಲಯದ ಮಾರವಾ ಪ್ರಾಂತದ ಕಡೆಗೆ ವಲಸಿಗರಾಗಿ ಬಂದರು. ಈ ಪ್ರಾಂತದಲ್ಲಿ ಅದ್ವೈತ ಮತಾನುಯಾಯಿಗಳಾದ ಗೋಸಾವಿಗಳು ಹಾಗೂ ದಶನಾಮ ಸ್ಥಾಪಕರಾದ ಶ್ರೀ ಶಂಕರಾಚಾರ್ಯರು ಅನೇಕ ಶಿಷ್ಯರಿಗೆ ಬೋಧನೆ ಮಾಡುತ್ತಿದ್ದರು.

ಅಲ್ಲಿಗೆ ಹೋಗಿ ಮೂಲ ರಾಜನ ವಂಶಸ್ಥರಾದ ರಾವುಗಡದ ರಾಠೋಡ, ಚಾವುಗಡದ ಚವ್ಹಾಣ ಹಾಗೂ ಪಾವುಗಡದ ಪವಾರ ಈ ಮೂವರು ಶ್ರೀ ಶಂಕರಚಾರ್ಯರ ಶಿಷ್ಯತ್ವವನ್ನು ಪಡೆದುಕೊಂಡರು. ಸ್ವತಃ ಕ್ಷತ್ರಿಯ ಮೂಲದವರಾದ ಶಂಕರಾಚಾರ್ಯರು ರಾಠೋಡ, ಚವ್ಹಾಣ ಹಾಗೂ ಪವಾರರಾದ ಈ ಮೂವರಿಗೆ ಹೀಗೆ ಹೇಳುತ್ತಾರೆ. ಇನ್ನು ಮುಂದೆ ನಿಮಗೆ ದುರ್ದಿನಗಳೇ ಹೆಚ್ಚು, ಈಗಾಗಲೇ ನಿಮ್ಮ ಬಂಧು ಬಾಂಧವರು ನಿಮ್ಮನ್ನು ಹೊಡೆದು ಓಡಿಸಿರುವದರಿಂದ ಪುನಃ ಅವರ ಜೊತೆ ತಂಟೆ ತಗಾದೆ ಮಾಡದೇ ನಿಮ್ಮ ಆಚಾರ ವಿಚಾರಗಳು ಇತರೆ ಜನ ಸಮುದಾಯಗಳಿಗಿಂತ ಬೇರೆಯೇ ಆಗಿರುವದರಿಂದ ನೀವು ಇನ್ನು ಮೇಲೆ ಗೋರ್ ಕ್ಷತ್ರಿಯರಾಗಿರಿ ಎಂದು ಉಪದೇಶಿಸಿದರು. ಅಂದಿನಿಂದ ಇಂದಿನವರೆಗೆ ಗೋರಭಾಯಿಗಳೆಂದು, ಬಂಜಾರಿಗಳೆಂದು, ಲಂಬಾಣಿಗರೆಂದು ಕರೆಯಿಸಿಕೊಳ್ಳುತ್ತಾ ಬಂದಿದ್ದಾರೆ. ಘೋರಿಯು ಹತನಾದ ಬಳಿಕ ರಜಪೂತ ಕ್ಷತ್ರಿಯ ವಂಶಜರಾದ ಲಂಬಾಣಿಗರು ಮುಸ್ಲಿಮರ ಹೆದರಿಕೆಯಿಂದ ಬಚಾವಾಗಲು ಮೂರು ಭಾಗವಾಗಿ ಚದುರಿ ಹೋದರು. ಒಂದು ರಜಪೂತ ಕ್ಷತ್ರಿಯ ಬಂಜಾರರು ಅರಣ್ಯಪಾಲಾದರೆ, ಇನ್ನೊಂದು ಗುಂಪು ಪಟ್ಟಣ ಸೇರಿ ಸೋಮವಂಶ ಕ್ಷತ್ರಿಯ ಮಾರವಾಡಿಗಳಾದರು. ಮೂರನೇಯ ಗುಂಪು ಬೇರೆ ದೇಶಗಳಿಗೆ ವಲಸೆ ಹೋಗಿ ರೋಮಾ ಬಂಜಾರಿ, ತುರ್ಕಿ ಬಂಜಾರಿ, ಟರ್ಕಿಯಾ ಬಂಜಾರಿಗಳೆಂದು ಕರೆಯಿಸಿಕೊಂಡರು" (ರಾಠೋಡ ಪಂಡಿತ: ೨೦೧೨:೧). ಹೀಗೆ ಪ್ರಪಂಚದ ಬೇರೆ ಬೇರೆ ದೇಶಗಳಾದ ಬಲ್ಗೇರಿಯಾ, ರುಮೇನಿಯಾ, ಹಂಗೇರಿ, ಸ್ವಿಡ್ಜರಲ್ಯಾಂಡ, ಫ್ರಾನ್ಸ, ಇಂಗ್ಲೆಂಡ, ಜರ್ಮನಿ, ಸ್ಪೇನ್, ಗ್ರೀಸ್, ಸ್ವೀಡನ್, ಬ್ರಿಟನ್ ಮುಂತಾದ ಕಡೆ ವಲಸೆ ಹೋಗಿ ಬದುಕನ್ನು ಕಟ್ಟಿಕೊಂಡರು. ಹೀಗೆ ವಲಸೆಗಾರರಾದ ಇವರನ್ನು ಜಿಪ್ಸಿ, ಸಿಂಧಿ, ರೋಮಾನೋ ಎಂದು ಕರೆಯಲಾಗುತ್ತಿದೆ.

"ಜಗತ್ತಿನ ೫೬ ರಾಷ್ಟ್ರಗಳಲ್ಲಿ ಸುಮಾರು ಮೂರರಿಂದ ನಾಲ್ಕು ಕೋಟಿ ಲಂಬಾಣಿ ಜನರಿದ್ದಾರೆ. ಭಾರತ ದೇಶವೊಂದರಲ್ಲಿಯೇ ಅವರ ಇಡೀ ಜನಸಂಖ್ಯೆಯ ಅರ್ಧದಷ್ಟು ಸಂಖ್ಯೆಯ ಜನರಿದ್ದಾರೆ" (ಮಹಾದೇವಿಬಾಯಿ:೨೦೦೭:೪೪). ಎಂದು ಅಭಿಪ್ರಾಯಪಟ್ಟಿದ್ದಾರೆ. ವಿಶ್ವದ ಬೇರೆ ಬೇರೆ ಭಾಗಗಳಲ್ಲಿ ಜೀವನೋಪಾಯಕ್ಕಾಗಿ ಹರಡಿಕೊಂಡಿರುವ ಲಂಬಾಣಿಗರು ವ್ಯಾಪಾರ ಮಾಡುತ್ತಾ ಈಜಿಪ್ತ, ಗ್ರೀಕ್ ಮತ್ತು ಇಟಲಿಗಳ ಮೂಲಕ ಯುರೋಪನಲ್ಲಿ ಹರಡಿಕೊಂಡರು. "ಇಟಲಿ ದೇಶದ ಉತ್ತರ ಭಾಗದ ಜಿಲ್ಲೆಯ ಹೆಸರು ಈಗ 'ಲೊಂಬಾರಡಿ' ಎಂದು ಇದೆ. ಇದು ಪುರಾತನ ಕಾಲದಿಂದ ಹಿಂದುಸ್ಥಾನದ ಲಂಬಾಣಿ ಅಥವಾ ಲಂಬಾಡಿ ವ್ಯಾಪಾರಸ್ಥರು ಇಲ್ಲಿಗೆ ಹೋಗಿ ಬರುತ್ತಿದ್ದ ವ್ಯಾಪಾರ ಸ್ಥಳ ಆಗಿತ್ತಂತೆ"(ನಾಯಕ ರೂಪ್ಲಾ ವೈ., ೨೦೧೧:೩೩). ಹೀಗೆ ವ್ಯಾಪಾರ ಮಾಡುತ್ತಾ ಯುರೋಪನಲ್ಲಿ ವಾಸವಾಗಿರುವ ಲಂಬಾಣಿಗರು ರೋಮಾನೋಗಳೆಂಬ ಹೆಸರಿನಲ್ಲಿ ಗುರುತಿಸಿಕೊಳ್ಳುತ್ತಾರೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ.

ಭಾರತವನ್ನು ಬಿಟ್ಟರೆ ಯುಗೋಸ್ಲೊವಿಯಾ ದೇಶದಲ್ಲಿ ಲಂಬಾಣಿಗರ ಸಂಖ್ಯೆ ಹೆಚ್ಚಾಗಿ ಗೋಚರಿಸುತ್ತದೆ. ಇಲ್ಲಿಯ ಲಂಬಾಣಿಗರನ್ನು 'ಜಿಪ್ಸಿ'ಗಳು ಎಂದು ಕರೆಯಲಾಗುತ್ತದೆ. ಜಿಪ್ಸಿಗಳಿಗೆ

ಯುಗೋಸ್ಲೋವಿಯಾ ದೇಶದಲ್ಲಿ ನಡೆಯುವ ಚುನಾವಣೆಗಳಲ್ಲಿ ತಮ್ಮ ಮತವನ್ನು ಚಲಾಯಿಸುವ ಹಕ್ಕಿದೆ. ಈ ದೇಶದಲ್ಲಿ ಜಿಪ್ಸಿಗಳು ಟ್ರಾಮ್, ಟ್ರಕ್ ಮುಂತಾದ ವಾಹನಗಳ ಚಾಲಕರಾಗಿ, ಹಲವಾರು ಚಿಕ್ಕಮಟ್ಟ ವ್ಯಾಪಾರಿಗಳಾಗಿ ಹೀಗೆ ಮುಂತಾದ ಉದ್ಯೋಗಗಳನ್ನು ಮಾಡುತ್ತಾ ಜೀವನವನ್ನು ಕಟ್ಟಿಕೊಂಡಿದ್ದಾರೆ. ಜಿಪ್ಸಿಗಳು ನಾವು ನಮ್ಮವರು ಎಂಬ ಭಾವನೆಯೊಂದಿಗೆ "ಅವರು ವಾಸಿಸುವ ತಾಂಡಾದ ಪ್ರದೇಶಗಳಿಗೆ ಕ್ಯಾಂಪ್ ಅಥವಾ ಕ್ಯಾರವಾನಗಳೆಂದು ಕರೆಯುತ್ತಾರೆ"(ಮಹಾದೇವಿಬಾಯಿ, ೨೦೦೭:೪೪). ಹೀಗೆ ಲಂಬಾಣಿಗರು ಜಿಪ್ಸಿ ಎಂಬ ನಾಮಧ್ಯೇಯದೊಂದಿಗೆ ಜೀವನೋಪಾಯಕ್ಕಾಗಿ ಹಲವಾರು ಉದ್ಯೋಗಗಳನ್ನು ಮಾಡುತ್ತಾ ಯುಗೋಸ್ಲೋವಿಯಾ ದೇಶದಲ್ಲಿ ವಾಸಿಸುತ್ತಿದ್ದಾರೆ.

"ಯುರೋಪಿನಲ್ಲಿ ಹರಡಿರುವ ಜಿಪ್ಸಿಗಳು ಮೂಲತಃ ಆರ್ಯ ವಂಶಕ್ಕೆ ಸೇರಿದವರಾಗಿದ್ದಾರೆ. ಅವರ ರೋಮಾನಿ ಭಾಷೆಗೆ ಸಂಸ್ಕೃತವೇ ಮೂಲವಾಗಿದೆ. ಅಲ್ಲದೇ ರೋಮಾನಿ ಭಾಷೆಯಲ್ಲಿರುವ ಹಲವಾರು ಪದಗಳು ಹಿಂದಿ, ಪಂಜಾಬಿ, ಗುಜರಾತಿ, ರಾಜಸ್ಥಾನಿ ಭಾಷೆಯ ಪದಗಳೊಂದಿಗೆ ಸಾಮ್ಯತೆ ಹೊಂದಿವೆ"(ಖಂಡೋಬಾ ಪಿ.ಕೆ., ೧೯೯೧:೨೭) ಎಂದು ಹಲವಾರು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ವಿಶ್ವದ ಬೇರೆ ಬೇರೆ ಕಡೆ ಹರಡಿರುವ ಲಂಬಾಣಿಗರ ಹಾಗೂ ಭಾರತದಲ್ಲಿಯ ಲಂಬಾಣಿಗರ ಉಡುಗೆ ತೊಡಿಗೆಗಳಲ್ಲಿ ಸಂಪೂರ್ಣ ವ್ಯತ್ಯಾಸ ಗೋಚರಿಸಿದರೂ ಇನ್ನುಳಿದ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳಾದ "ಭಾಷೆ, ಹಾಡು, ಕುಣಿತ, ಕನಸು, ಕಥೆ, ಪಂಚಾಯತ ವ್ಯವಸ್ಥೆ ಮುಂತಾದ ವಿಷಯಗಳಲ್ಲಿ ಸಾಕಷ್ಟು ಸಾಮ್ಯತೆ ಕಂಡುಬರುತ್ತದೆ. ಭಾರತೀಯ ಲಂಬಾಣಿಗರು ತಮ್ಮ ಸಮುದಾಯವನ್ನು ಬಿಟ್ಟು ಬೇರೆಯವರನ್ನು 'ಕೋರ್' ಎಂದು ಕರೆದರೆ, ವಿದೇಶ ಗಳಲ್ಲಿಯ ಲಂಬಾಣಿಗರು ಅಂತಹ ಜನರನ್ನು 'ಗಾಜೋ' ಎಂದು ಕರೆಯುತ್ತಾರೆ"(ಮಹಾದೇವಿಬಾಯಿ, ೨೦೦೭:೪೪). ಆದ್ದರಿಂದ ವಿದೇಶಗಳಲ್ಲಿರುವ ಜಿಪ್ಸಿಗಳು ಭಾರತೀಯ ಮೂಲ ನಿವಾಸಿಗಳಾಗಿದ್ದಾರೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

ಭಾರತೀಯ ಮೂಲದವರಾದ ಜಿಪ್ಸಿಗಳು ಐತಿಹಾಸಿಕ, ಭೌಗೋಳಿಕ, ಸಾಂಸ್ಕೃತಿಕ ಹೀಗೆ ಹಲವಾರು ಕಾರಣಗಳಿಂದಾಗಿ ತಮ್ಮ ಮೂಲ ನೆಲೆಯಾದ ಭಾರತವನ್ನು ಬಿಟ್ಟು ಜಗತ್ತಿನ ಬೇರೆ ಬೇರೆ ದೇಶಗಳಿಗೆ ವಲಸೆ ಹೋಗಿದ್ದಾರೆ.

ಕ್ರಿ.ಶ. ೪ನೇ ಶತಮಾನದಲ್ಲಿ ಮ್ಯಾಸಿಡೋನಿಯಾದ ಅರಸನಾದ ಅಲೆಗ್ಸಾಂಡರನು ಭಾರತದ ಮೇಲೆ ದಂಡೆತ್ತಿ ಬರುತ್ತಾನೆ. ಭಾರತಕ್ಕೆ ಪ್ರವೇಶಿಸಿದ ನಂತರ ಲಂಬಾಣಿಗರ ದೃಢಕಾಯ, ಧೈರ್ಯ, ಮನೋಸ್ಥೈರ್ಯ, ಸಾಹಸ, ಕಲೆಯಲ್ಲಿರುವ ಆಸಕ್ತಿಯನ್ನು ಗಮನಿಸಿ ತನ್ನ ಸೈನ್ಯದಲ್ಲಿ ಸೈನಿಕರಾಗಿ ಅಡುಗೆಯವರಾಗಿ, ಕುಶಲಕರ್ಮಿಗಳನ್ನಾಗಿ ಸೈನ್ಯಕ್ಕೆ ಆಹಾರ ಸರಬರಾಜು ಮಾಡಲು ಬನಿಯಗಳನ್ನಾಗಿ ನೇಮಿಸಿಕೊಂಡನು. ತಾನು ಮ್ಯಾಸಿಡೋನಿಯಾಕ್ಕೆ ಹಿಂತಿರುಗಿ ಹೋಗುವಾಗ ಲಂಬಾಣಿಗರನ್ನು ಸಹ ತನ್ನ ಜೊತೆಗೆ ಕರೆದುಕೊಂಡು ಹೋದನು. ಹೀಗೆ ಐತಿಹಾಸಿಕ ಕಾರಣಗಳಿಂದ ವಲಸೆ ಹೋದವರೇ ರೋಮಾ ಬಂಜಾರಿಗಳಾದರು. ಅಲೆಗ್ಸಾಂಡರನ ಉತ್ತರಾಧಿಕಾರಿಗಳು ಲಂಬಾಣಿಗರನ್ನು

ಹೀನಾಯವಾಗಿ ನಡೆಸಿಕೊಂಡರಲ್ಲದೇ ಬೇರೆ ಬೇರೆ ರಾಜ್ಯಗಳಲ್ಲಿ ಗುಲಾಮರನ್ನಾಗಿ ಮಾಡಲು ಪ್ರಯತ್ನಿಸಿದರು. ಇದರಿಂದ ಹೆದರಿದ ಲಂಬಾಣಿಗರು ಯುರೋಪ ಖಂಡ ಮತ್ತು ಏಷ್ಯಾ ಖಂಡದ ಅಂಚಿನಲ್ಲಿರುವ ಪ್ರದೇಶಗಳಲ್ಲಿ ವಲಸೆ ಹೋಗಿ ನೆಲೆಸಿದರು.

ಭಾರತದಲ್ಲಿ ವ್ಯಾಪಾರವನ್ನು ನಂಬಿಕೊಂಡು ಜೀವನವನ್ನು ಸಾಗಿಸುತ್ತಿದ್ದ ಲಂಬಾಣಿಗರಿಗೆ ಬ್ರಿಟಿಷರ ಆಗಮನದಿಂದ ಹಾಗೂ ಅವರ ಕೈಗಾರಿಕೆ, ವಿಜ್ಞಾನ, ತಂತ್ರಜ್ಞಾನ, ಸಾರಿಗೆ ಸಂಪರ್ಕ, ರೈಲು ಮಾರ್ಗಗಳ ಪ್ರಾರಂಭ ಹೀಗೆ ಹಲವಾರು ಹೊಸ ಹೊಸ ವ್ಯವಸ್ಥೆಯ ಸ್ಥಾಪನೆಯಿಂದಾಗಿ ತಾವು ನಂಬಿಕೊಂಡಿದ್ದ ವ್ಯಾಪಾರ ದಿನೇ ದಿನೇ ಕ್ಷೀಣಿಸುತ್ತಾ ಸ್ಥಗಿತವಾಗುವ ಹಂತ ತಲುಪಿತು. ಹೀಗಾಗಿ ಲಂಬಾಣಿಗರು ಅನಿವಾರ್ಯವಾಗಿ ತಮ್ಮ ಬದುಕನ್ನು ಕಟ್ಟಿಕೊಳ್ಳಲು ವಿಶ್ವದ ನಾನಾ ದೇಶಗಳಿಗೆ ವಲಸೆ ಹೋದರು. ಹೀಗೆ ಬೇರೆ ಬೇರೆ ದೇಶಗಳಿಗೆ ವಲಸೆ ಹೋಗಿ ನೆಲೆ ನಿಂತಿರುವ ಹಾಗೂ ಬೇರೆ ಬೇರೆ ನಾಮಧ್ಯೇಯಗಳಿಂದ ಗುರುತಿಸಿಕೊಳ್ಳುತ್ತಿರುವ ಲಂಬಾಣಿಗರನ್ನು ರೋಮಾ ಬಂಜಾರಾ ಸಮ್ಮೇಳನದ ಮೂಲಕ ಒಂದೆಡೆ ಸೇರಿಸುವ ಪ್ರಯತ್ನ ನಡೆಯಿತು.

ವಿಶ್ವದ ಮೂಲೆ ಮೂಲೆಯಲ್ಲಿ ಹರಡಿರುವ ಲಂಬಾಣಿಗರು ಒಂದೆಡೆ ಸೇರಿ ವಿಚಾರ ವಿನಿಮಯ ಮಾಡಿಕೊಳ್ಳುವ ಸದುದ್ದೇಶದಿಂದ ೧೯೭೮ರಲ್ಲಿ ಮಹಾರಾಷ್ಟ್ರದ ಮುಂಬೈ ನಗರದಲ್ಲಿ ಮೊಟ್ಟ ಮೊದಲ ರೋಮಾ ಬಂಜಾರಾ ಸಮ್ಮೇಳನ ನಡೆಯಿತು. ಈ ಪ್ರಯತ್ನದ ಎರಡನೇ ಭಾಗವೆಂಬಂತೆ ಎರಡನೇ ರೋಮಾ ಬಂಜಾರಾ ಸಮ್ಮೇಳನವು ಜಿನೀವಾದಲ್ಲಿ ನಡೆಯಿತು. ಈ ಸಮ್ಮೇಳನದಲ್ಲಿ ಶ್ರೀ ರಣಜಿತ ನಾಯಕ ಎಂಬ ಲಂಬಾಣಿ ಮುಖಂಡರು ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಇದೇ ರೀತಿಯಾಗಿ ೧೯೮೧ರಲ್ಲಿ ಮೂರನೆಯ ರೋಮಾ ಬಂಜಾರಾ ಸಮ್ಮೇಳನವು ಜರ್ಮನಿಯಲ್ಲಿ ಜರುಗಿತು. ಈ ಸಮ್ಮೇಳನದಲ್ಲಿ ಲಂಬಾಣಿ ಮುಖಂಡರಾದ "ಶ್ರೀ ರಾಮಸಿಂಗ ಭಾನಾವತ್ ಅವರು ಸೇರಿದಂತೆ ೧೫ ಜನ ಭಾರತೀಯ ಲಂಬಾಣಿ ಪ್ರತಿನಿಧಿಗಳು ಈ ಸಮ್ಮೇಳನದಲ್ಲಿ ಪಾಲ್ಗೊಂಡರು. ನಂತರ ಆ ತಂಡ ೧೧ ದೇಶಗಳನ್ನು ಸುತ್ತಾಡಿ ಲಂಬಾಣಿಗಳ ಬಗೆಗೆ ಸಾಕಷ್ಟು ಮಾಹಿತಿಯನ್ನು ಸಂಗ್ರಹಿಸಿಕೊಂಡು ಬಂದಿತು"(ಅದೇ: ಪು:೪೬). ಈ ರೀತಿಯಾಗಿ ಲಂಬಾಣಿಗರು ಅನಾನ್ಯ ಕಾರಣಗಳಿಂದ ತಮ್ಮ ಮೂಲ ನೆಲೆಯಾದ ಭಾರತವನ್ನು ಬಿಟ್ಟು ವಲಸಿಗರಾಗಿ ಪ್ರಪಂಚದ ಬೇರೆ ಬೇರೆ ದೇಶ ಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಿದ್ದಾರೆ. ತಮ್ಮ ಮೂಲ ಕಸುಬಾದ ವ್ಯಾಪಾರವನ್ನು ಬಿಟ್ಟು ಆಯಾ ದೇಶಗಳಲ್ಲಿ ಲಭ್ಯವಿರುವ ಉದ್ಯೋಗವನ್ನು ಆಶ್ರಯಿಸಿ ಬದುಕನ್ನು ಕಟ್ಟಿಕೊಂಡಿದ್ದಾರೆ. ಜಗತ್ತಿನಾದ್ಯಂತ ಹರಡಿರುವ ಲಂಬಾಣಿಗರು ರೋಮಾ ಬಂಜಾರಾ ಸಮ್ಮೇಳನದ ಮೂಲಕ ಒಂದೆಡೆ ಸೇರಿ ತಾವೆಲ್ಲರೂ ಒಂದು ಎಂಬ ಏಕತಾ ಭಾವವನ್ನು ಪ್ರದರ್ಶಿಸುತ್ತಿರುವುದು ಸ್ವಾಗತಾರ್ಹ ಸಂಗತಿಯಾಗಿದೆ.

**ಭಾರತದಲ್ಲಿ ಲಂಬಾಣಿಗರು**

ತಮ್ಮನ್ನು ತಾವು 'ಗೋರಮಾಟಿ' ಎಂದರೆ ಸುರದ್ರೂಪಿ ಜನರು ಎಂದು ಕರೆದುಕೊಳ್ಳುವ ಲಂಬಾಣಿಗರು ಮೂಲತಃ ರಾಜಸ್ಥಾನದ ರಜಪೂತ ವಂಶಕ್ಕೆ ಸೇರಿದವರಾಗಿದ್ದಾರೆ. ರಾಜಸ್ಥಾನದ

ರಜಪೂತ, ಗೂರ್ಜರು, ಮಾರವಾಡಿ ಮೊದಲಾದ ಜಾತಿ ಉಪಜಾತಿಗಳಲ್ಲಿ ಕಂಡುಬರುವ ಲೋಕಾಚಾರಗಳು, ಪದ್ಧತಿಗಳು, ರೀತಿ ನೀತಿಗಳು, ಸಂಸ್ಕಾರಗಳು, ಕುಲಗೋತ್ರಗಳು ಲಂಬಾಣಿಗರೊಂದಿಗೆ ಹೋಲಿಕೆಯಾಗುತ್ತವೆ. ಕಂಬರಲೇಜ್‌ರವರ ಪ್ರಕಾರ ಚಾರಣ ಬಂಜಾರರ ಪೈಕಿ ರಾಥೋರ್, ಪವಾರ್, ಲಬಾನಾ, ಚವ್ಹಾಣ ಮತ್ತು ಜಾಡೋನ್(ಜಾಧವ) ಇವು ರಜಪೂತರ ಮುಖ್ಯ ಪಾಡಾಗಳಾಗಿವೆ. ಮೂರನೇ ಪಾಡ(ಬಳಿ)ವಾದ ಲಬಾನಾ ಎಂಬುದು ಬಂಜಾರರು ಉಪ್ಪಿನ ವ್ಯಾಪಾರ ಮಾಡುತ್ತಿದ್ದುದರಿಂದ ಬಂದಿತು. ಹೀಗೆ ರಾಜಸ್ಥಾನ ಮೂಲದವರಾದ ಲಂಬಾಣಿಗರು ಕಾರಣಾಂತರ ಗಳಿಂದ ಭಾರತದ ತುಂಬಾ ಹರಡಿಕೊಂಡರು. ಆಯಾ ರಾಜ್ಯಗಳಲ್ಲಿ ಇವರು ಅನುಸರಿಸುವ ವೃತ್ತಿಯನ್ನಾಧರಿಸಿ ಬೇರೆ ಬೇರೆ ನಾಮಧ್ಯೇಯಗಳಿಂದ ಗುರುತಿಸಿಕೊಳ್ಳುತ್ತಿದ್ದಾರೆ. ಗುಜರಾತ ರಾಜ್ಯದಲ್ಲಿ ಲಂಬಾಣಿಗರನ್ನು ಬಣಜಾರ, ಚಾರಣ ಎಂದು ಕರೆದರೆ, ರಾಜಸ್ಥಾನದಲ್ಲಿ ಬಂಜಾರ್, ಲದೇಣಿಯಾ, ಗಮಾಳಿಯಾ, ಗವಲಿಯಾ ಎಂದು ಕರೆಯುತ್ತಾರೆ. ಆಂಧ್ರ ಪ್ರದೇಶದಲ್ಲಿ ಸುಗಾಲಿ, ಸುಕಾಲಿ, ಸುಕಾಳಿ, ಲಂಬಾಡಾ, ತಮಿಳುನಾಡಿನಲ್ಲಿ ಸುಗಾಲಿ, ಲಬಾಡಿ, ಬಿಹಾರದಲ್ಲಿ ಬಂಜಾರ, ಓರಿಸ್ಸಾದಲ್ಲಿ ಲಬಾನಿ, ಬಂಜಾರಿ, ಮಹಾರಾಷ್ಟ್ರದಲ್ಲಿ ಲಮಾನ, ಲಮಾನಿ, ಕರ್ನಾಟಕದಲ್ಲಿ ಲಮಾಣಿ, ಲಂಬಾಣಿ, ಲಮಾನ, ಲಮಾಣ ಹೀಗೆ ಬೇರೆ ಬೇರೆ ರಾಜ್ಯಗಳಲ್ಲಿ ವಿಭಿನ್ನ ನಾಮಧ್ಯೇಯಗಳಿಂದ ಕರೆಯಲ್ಪಡುತ್ತಾರೆ. ಇದಕ್ಕೆ ಪ್ರಮುಖವಾಗಿ ಮೂರು ಕಾರಣಗಳು ಕಂಡುಬರುತ್ತವೆ. ೧) "ಬಂಜಾರಾ ಅಥವಾ ಲಮಾಣಿ ಶಬ್ದಗಳ ಮೇಲೆ ಸ್ಥಾನೀಯ ಭಾಷೆಗಳ ಪ್ರಭಾವ. ೨) ಆಯಾ ರಾಜ್ಯಗಳಲ್ಲಿ ವಿಭಿನ್ನ ವೃತ್ತಿಗಳನ್ನು ಕೈಗೊಂಡಿರುವುದು. ೩) ಕೆಲವು ಹೆಸರುಗಳು ಆ ಸಮಾಜದಲ್ಲಿಯ ಕೆಳವರ್ಗವನ್ನು ಸೂಚಿಸುವಂಥವುಗಳು"(ನಾಯ್ಕ ರಾಜು ಎನ್:೨೦೦೬:೬೩). ಭಾರತದಾದ್ಯಂತ ತಮ್ಮದೇ ಆದ ವೈಶಿಷ್ಟ್ಯತೆಗಳೊಂದಿಗೆ ಬದುಕುತ್ತಿರುವ ಲಂಬಾಣಿಗರಲ್ಲಿ ಒಟ್ಟು ೨೭ ಪರ್ಯಾಯ ಹೆಸರುಗಳು ಕಂಡುಬರುತ್ತಿವೆ.

**ಪರ್ಯಾಯ ನಾಮಧ್ಯೇಯಗಳು**

ಲಂಬಾಣಿಗರ ಪರ್ಯಾಯ ಹೆಸರುಗಳನ್ನು ಸಾಂಸ್ಕೃತಿಕ ಹಾಗೂ ಸಾಮಾಜಿಕ ದೃಷ್ಟಿಯಿಂದ ಪರಾಮರ್ಶಿಸಿ, ಆಯಾ ನಾಮಧ್ಯೇಯಗಳ ಹಿಂದಿರುವ ಔಚಿತ್ಯವನ್ನು ಇಲ್ಲಿ ಗಮನಿಸಬಹುದಾಗಿದೆ.

ಸಾಮಾನ್ಯವಾಗಿ ಲಂಬಾಣಿಗರನ್ನು ಹೆಚ್ಚಾಗಿ ಬಂಜಾರಾ ಎಂಬ ಹೆಸರಿನಿಂದ ಕರೆಯುತ್ತಾರೆ. ಲಂಬಾಣಿ ಎಂಬುದು ಅವರ ಜಾತಿ ಸೂಚಕ ಪದವಾಗಿದ್ದು; ಬಂಜಾರ ಅಥವಾ ಬನಾಜಾರ್ ಎಂಬುದು ಇವರು ಮೂಲತ ವ್ಯಾಪಾರಿಗಳಾಗಿದ್ದರೆಂಬುದನ್ನು ಸೂಚಿಸುತ್ತದೆ. ಲಂಬಾಣಿಗರು ತಾಂಡಾಗಳಲ್ಲಿ, ಬಣಗಳಲ್ಲಿ, ಗುಂಪುಗಳಲ್ಲಿ ವಾಸಿಸುತಿದ್ದುದರಿಂದ ಬಣಜಾರರು ಎಂಬ ಹೆಸರು ಬಂದಿರಬಹುದು. ವಾಣಿಜ್ಯ ಎಂಬ ಶಬ್ದ ಸ್ಥಳೀಯ ಭಾಷೆಯ ಪ್ರಭಾವಕ್ಕೆ ಸಿಲುಕಿ ಅಪಭ್ರಂಶಗೊಂಡು ರಾಜಸ್ಥಾನಿ ಭಾಷೆಯಲ್ಲಿ ಬನಜಾರಾ, ಗುಜರಾತಿ ಭಾಷೆಯಲ್ಲಿ ವನಜಾರಾ, ಉರ್ದು ಭಾಷೆಯಲ್ಲಿ ಬನಜಾರೆ, ಮರಾಠಿ ಭಾಷೆಯಲ್ಲಿ ಬಂಜಾರಿ ಎಂಬುದಾಗಿ ಕರೆಯಲ್ಪಟ್ಟಿದೆ.

ಇವರು ವ್ಯಾಪಾರಕ್ಕಾಗಿ ತಮ್ಮ ದನಕರುಗಳ ಮೇಲೆ ಖಾದ್ಯ ಪದಾರ್ಥಗಳನ್ನು ಹೇರಿಕೊಂಡು ದುರ್ಗಮವಾದ ಕಾಡುಗಳ ಮೂಲಕ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದರಿಂದ ವನಚರ → ವನಜಾರ → ಬನಜಾರ → ಬಣಜಾರ → ಬಂಜಾರ ಎಂದಾಗಿರಬೇಕು. "ಪಾರ್ಸಿ ಭಾಷೆಯಲ್ಲಿ ಬ್ರಿಂಜ ಎಂದರೆ ಅಕ್ಕಿ. ಅಕ್ಕಿಯನ್ನು ತರುವವನಿಗೆ ಬಂಜಾರಾ ಎಂದು ಕರೆದಿರಬೇಕು. ಹೀಗಾಗಿ

೧. ವಾಣಿಜ್ಯಕಾರ → ವಾನಿಜ್ಜಾರ್ →ಬನಜಾರ

೨. ಬನ + ಜಾರ → ಬನಜಾರಾ = ಕಾಡಿನ ರಾಜ

೩. ಬಂಜರು ಭೂಮಿಯ ಮೇಲೆ ಇರುವವ = ಬನಜಾರಾ

೪. ಬ್ರಜವಾಸಿ → ಬ್ರಿಂಜವಾಸಿ → ಬ್ರಿನಜಾರಾ → ಬನಜಾರಾ

೫. ವನದಲ್ಲಿ ತಿರುಗುವವ, ಬಂಜರು ಭೂಮಿಯ ಮಾಲಿಕ = ಬಂಜಾರಾ"(ಪವಾರ ರಾಮಕೋಟಿ ವಿ: ೨೦೧೨:೨೨-೨೩). ಬಂಜಾರಾ ಶಬ್ದವು ಸಂಸ್ಕೃತದ ವಾಣಿಜ್ಯ ಶಬ್ದದಿಂದ ಅವಿರ್ಭಾವಗೊಂಡಿದೆ. ವಾಣಿಜ್ಯ ಎಂದರೆ ವ್ಯಾಪಾರ ಎಂದಾಗುತ್ತದೆ. ಹೀಗಾಗಿ ವ್ಯಾಪಾರ ಮಾಡುವ ವೃತ್ತಿಯವರಾದ ಲಂಬಾಣಿಗರನ್ನು ಅನ್ವರ್ಥಕವಾಗಿ ಬಂಜಾರಾ ಎಂದು ಕರೆದಿರಬೇಕು. ಏಕೆಂದರೆ ಈ ಸಮುದಾಯದವರು ಆರಂಭದಲ್ಲಿ ರಾಸುಗಳ ಮೇಲೆ ಖಾದ್ಯ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ ಮಾಡುತ್ತಿದ್ದರು.

ಲಮಾಣಿ ಮತ್ತು ಲಂಬಾಡಿ ಲಭಾಣಾ: ಲಂಬಾಣಿಗರನ್ನು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಲಮಾಣಿ, ಲಂಬಾಣಿ ಮತ್ತು ಲಂಬಾಡಿ ಎಂಬ ಹೆಸರುಗಳಿಂದ ಕರೆಯುತ್ತಾರೆ. ಲಮಾಣಿ ಎಂಬ ಶಬ್ದವು ಸಂಸ್ಕೃತದ ಲವಣ(ಉಪ್ಪು) ಎಂಬ ಶಬ್ದದಿಂದ ಬಂದಿದೆ. ಲವಣ ಶಬ್ದವು ಅಪಭ್ರಂಶಗೊಂಡು ಲಮಣ, ಲಮಾಣಿ ಎಂದಾಗಿರಬೇಕು ಮೊದಲು ಲಂಬಾಣಿಗರು ಲವಣದ ಎಂದರೆ ಉಪ್ಪಿನ ವ್ಯಾಪಾರವನ್ನು ಮಾಡುತ್ತಿದ್ದುದರಿಂದ ವೃತ್ತಿ ಸೂಚಕವಾಗಿ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ವಾಸಿಸುವ ಲಂಬಾಣಿಗರಿಗೆ ಲಮಾಣಿ, ಲಂಬಾಡಿ ಎಂದು ಕರೆದಿರಬಹುದು. ಲಭಾಣಾ ಮತ್ತು ಲೋಭಾಣಾ ಹೆಸರಿನ ಜಾತಿಯ ಜನರು ಪಂಜಾಬ ರಾಜ್ಯದಲ್ಲಿ ವಾಸಿಸುತ್ತಾರೆ. ಬನಜಾರಾ ಮತ್ತು ಲಭಾಣಾ, ಲೋಭಾಣಾ ಜನರಲ್ಲಿ ಯಾವುದೇ ವ್ಯತ್ಯಾಸವಿಲ್ಲ ಎಂಬುದು ಹಲವು ಜನ ವಿದ್ವಾಂಸರ ಅಭಿಪ್ರಾಯವಾಗಿದೆ.

ಲಂಬಾಣಿಗರನ್ನು ಗುಜರಾತ, ರಾಜಸ್ಥಾನ ಸೇರಿದಂತೆ ಇನ್ನಿತರ ಕಡೆಗಳಲ್ಲಿ ಬಳದಿಯಾ, ಲದೇಣಿಯಾ ಎಂಬ ಹೆಸರುಗಳಿಂದ ಕರೆಯುತ್ತಾರೆ. ಬಳದಿಯಾ ಎಂಬ ಶಬ್ದವು 'ಬಳದ' ಎಂಬ ಶಬ್ದದಿಂದ ಬಂದಿದೆ. ಬಳದ ಎಂಬುದು ಎತ್ತು ಎಂಬ ಅರ್ಥವನ್ನೀಯುತ್ತದೆ. ಪೂರ್ವದಲ್ಲಿ ಲಂಬಾಣಿಗರು ವ್ಯಾಪಾರ ವೃತ್ತಿಯನ್ನು ಮಾಡುತಿದ್ದಾಗ ಎತ್ತುಗಳನ್ನೆ ವ್ಯಾಪಾರದ ಮೂಲ ಸಾಧನವಾಗಿ ಬಳಸುತ್ತಿದ್ದರು. ವ್ಯಾಪಾರದ ಸಾಮಾನು ಸರಂಜಾಮುಗಳನ್ನು ಎತ್ತುಗಳ ಮೇಲೆ ಹೇರಿಕೊಂಡು

ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುತ್ತಾ ವ್ಯಾಪಾರ ಮಾಡುತ್ತಿದ್ದರು. ಮೊಘಲರ ಸೈನ್ಯಕ್ಕೆ ಆಹಾರವನ್ನು ಪೂರೈಸುತ್ತಿದ್ದ ಕಾಲದಲ್ಲಿ ಎತ್ತುಗಳನ್ನೆ ಪ್ರಮುಖ ಸಾಧನವನ್ನಾಗಿಸಿಕೊಂಡು, ಅಡೆ ತಡೆಯಿಲ್ಲದೆ ಘೋರ ಅರಣ್ಯಗಳ ಮೂಲಕ ಸಾಗಿ ಆಹಾರವನ್ನು ಪೂರೈಸುತ್ತಿದ್ದರು. ಹೀಗೆ ಎತ್ತುಗಳನ್ನು ಆಶ್ರಯಿಸಿ ಕೊಂಡು ಜೀವನವನ್ನು ಕಟ್ಟಿಕೊಂಡಿದ್ದರಿಂದ ಕೆಲವೆಡೆ ಲಂಬಾಣಿಗರಿಗೆ ಬಳದಿಯಾ ಎಂಬ ಹೆಸರು ಬಂದಿರಬೇಕು.

ಲಾದೇನಿಯಾ ಅಥವಾ ಲದೇಣಿಯಾ ಎಂಬುದು ಗುಜರಾತ ಮತ್ತು ರಾಜಸ್ಥಾನ ರಾಜ್ಯಗಳ ಲಂಬಾಣಿಗರಿಗಿರುವ ಪ್ರಾಂತೀಯ ಹೆಸರು. ಲಾದೇನಿಯಾ ಅಥವಾ ಲದೇಣಿಯಾ ಎಂಬ ಶಬ್ದಗಳು ಹಿಂದಿ ಭಾಷೆಯ ಲಾದ, ಲಾದೆ ಶಬ್ದಗಳಿಂದ ಬಂದಿವೆ. 'ಲಾದ' ಎಂದರೆ ಹೇರು ಎಂದಾಗುತ್ತದೆ. ಲಂಬಾಣಿಗರು ಮೊದಲು ತಮ್ಮ ದನಕರುಗಳ ಮೇಲೆ ಭಾರವಾದ ವಸ್ತುಗಳನ್ನು ಮತ್ತು ಆಹಾರ ಸಾಮಗ್ರಿಗಳನ್ನು ಹೇರಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಬರಾಜು ಮಾಡುತ್ತಿದ್ದರು. ಹೀಗಾಗಿ ಇವರಿಗೆ ಲದೇಣಿಯಾ ಎಂಬ ಹೆಸರು ಬಂದಿರಬೇಕು. ಲದೇಣಿಯಾ ಎಂದರೆ ಇನ್ನೊಂದು ಅರ್ಥದಲ್ಲಿ ಸಂಚಾರಿ, ತಿರುಗುವವ ಎಂದಾಗುತ್ತದೆ. ಲಂಬಾಣಿಗರು ಮೂಲತಃ ಅಲೆಮಾರಿಗಳಾಗಿದ್ದು, ಜೀವನ ನಿರ್ವಹಣೆಗಾಗಿ ಹಾಗೂ ವ್ಯಾಪಾರಕ್ಕಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದರು. ಹೀಗಾಗಿ ಲದೇಣಿಯಾ ಎಂಬ ಹೆಸರು ಬಂದಿರಬೇಕು. ಇಂದಿಗೂ ಲಂಬಾಣಿಗರಲ್ಲಿ ಲದೇಣಿಯಾ ಎಂಬ ಶಬ್ದವನ್ನು ಬೈಗುಳಾಗಿಯಾ ಕೂಡಾ ಉಪಯೋಗಿಸುತ್ತಾರೆ.

**ಸುಗಾಲಿ:** ಆಂಧ್ರ ಪ್ರದೇಶ, ಕೇರಳ, ತಮಿಳುನಾಡಿನ ಬಹುತೇಕ ಭಾಗಗಳಲ್ಲಿ ಲಂಬಾಣಿಗರನ್ನು ಸುಗಾಲಿ, ಸುಕಾಳಿ, ಸುಕಾಲಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. "ಸು ಎಂದರೆ ಒಳ್ಳೆಯ, ಉತ್ತಮ ಎಂದರ್ಥ ಗಾ ಎಂದರೆ ಗೋವು ಲಾ ಅಥವಾ ಲಿ ಯ ತಾತ್ಪರ್ಯ ಪೋಷಣೆ ಅಥವಾ ಪಾಲನೆ ಎಂದಾಗುತ್ತದೆ. ಒಟ್ಟಾರೆ ಸುಗಾಲಿ ಶಬ್ದದ ಅರ್ಥ ಗೋವುಗಳನ್ನು ಉತ್ತಮವಾದ ರೀತಿಯಲ್ಲಿ ಸಂಪೋಷಿಸುವುದು ಎಂದರ್ಥವಾಗುತ್ತದೆ" (ಅದೇ: ಪು: ೩೩). ತೆಲುಗು ಭಾಷೆಯಲ್ಲಿ ಗೋವುಗಳಿಗೆ ಸುಗಾಲಿ ಎಂದು ಕರೆಯುತ್ತಾರೆ. ಹೀಗಾಗಿ ಗೋವುಗಳನ್ನು ಸಾಕುವವನಿಗೆ ಸುಗಾಲಿ ಎನ್ನಲಾಗುತ್ತದೆ. ಲಂಬಾಣಿಗರು ಮೊದಲಿನಿಂದಲೂ ಗೋವುಗಳ ಪಾಲಕರಾಗಿದ್ದು, ಅವುಗಳನ್ನು ಸಾಧನವನ್ನಾಗಿ ಮಾಡಿಕೊಂಡು ವ್ಯಾಪಾರ ಮಾಡುತ್ತಿದ್ದರು. ಹೀಗಾಗಿ ಈ ಭಾಗಗಳಲ್ಲಿ ಲಂಬಾಣಿಗರನ್ನು ಸುಗಾಲಿ ಎಂದು ಕರೆಯುತ್ತಾರೆ. ಇಂದಿಗೂ ಲಂಬಾಣಿಗರು 'ಹುಡಸುಕಾಳಿ'(ಹೋಗೊ ದನ ಕಾಯುವವನೆ) ಎಂಬ ಪದವನ್ನು ಬೈಗುಳಾಗಿ ಬಳಸುತ್ತಿರುವದು ಕಂಡುಬರುತ್ತದೆ.

ಗೌರ, ಗವಾರ, ಗಾವಾರಿಯಾ, ಗಂವಾರಿಯಾ, ಗಮಳಿಯಾ, ಗಾಮಲಾ, ಗಂವಾರಾ ಪದಗಳು ಗೌಡ ಎನ್ನುವ ಪದದಿಂದ ಬಂದಿವೆ. ಗೌರ ಎಂಬ ಪದಕ್ಕೆ ಗೌಡ ಎಂಬ ಪದವು ಮೂಲವಾಗಿದೆ. ಪಂಜಾಬಿ ಭಾಷೆಯಲ್ಲಿ 'ಗೌಡ' ಶಬ್ದವನ್ನು ಗೌರ ಎಂದು ಉಚ್ಚರಿಸುತ್ತಾರೆ. ರಾಜಸ್ಥಾನದ ಮೂಲದಿಂದ ಸಂಚರಿಸುತ್ತಾ ಹೋದ ಗೌಡ ಸಮುದಾಯ ಪಂಜಾಬ ರಾಜ್ಯಕ್ಕೆ

ಹೋಗಿ ಉಚ್ಚಾರಣೆಯಿಂದ ಗೌರ ಎಂದಾಗಿರಬೇಕು. ಗವಾರ, ಗವಾರಿಯಾ, ಗಂವಾರಿಯಾ, ಗಮಳಿಯಾ, ಗಾಮಲಾ, ಗಂವಾರಾ ಎಂಬ ಹೆಸರುಗಳು ಗ್ರಾಮದಲ್ಲಿ ಇರುವವ, ಗ್ರಾಮಿಗ ಎಂಬ ಅರ್ಥವನ್ನು ನೀಡುತ್ತವೆಂದು ಖಂಡೋಬಾ ಪಿ ಕೆ ರವರು ಅಭಿಪ್ರಾಯಪಟ್ಟಿದ್ದಾರೆ. ಲಂಬಾಣಿಗರು ನಾವು ನಮ್ಮವರು ಎಂಬ ಭಾವನೆಯಿಂದ ತಮ್ಮದೇ ಆದ ಪ್ರತ್ಯೇಕ ಸಮುದಾಯಗಳಾದ ತಾಂಡಾಗಳಲ್ಲಿ ವಾಸಿಸುವುದರಿಂದ ಈ ಜನರನ್ನು ಪಂಜಾಬ ಮತ್ತು ಇತರ ಭಾಗಗಳಲ್ಲಿ ಗೌರ, ಗವಾರ, ಗವಾರಿಯಾ ಹೀಗೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

ಕಂಗಿ, ಕಂಗಷಿಯಾ ಹಾಗೂ ಫಾಣದ ಎಂಬ ಪದಗಳು ವೃತ್ತಿ ಸೂಚಕ ಪದಗಳಾಗಿದ್ದು; ವೃತ್ತಿಯನ್ನಾಧರಿಸಿ ಪಂಜಾಬ ಮತ್ತು ರಾಜಸ್ಥಾನಗಳಲ್ಲಿ ಲಂಬಾಣಿಗರನ್ನು ಕಂಗಿ, ಕಂಗಷಿಯಾ ಹೀಗೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಪಂಜಾಬಿ ಭಾಷೆಯ ಕಂಘಿ ಎನ್ನುವ ಶಬ್ದವನ್ನೆ ರಾಜಸ್ಥಾನದಲ್ಲಿ ಕಾಂಗಸಿಯಾ, ಕಾಂಘಟಿಯಾ ಎಂದು, ಮಹಾರಾಷ್ಟ್ರದಲ್ಲಿ ಫಣಾಡ, ಫಣದ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಈ ಪದಗಳಿಗೆ ಬಾಚಣಿಕೆ ಎಂಬ ಅರ್ಥ ಧ್ವನಿಸುತ್ತದೆ.

ಶೀರಕಿಬಂದ, ಶಿರಕಿವಾಲಾ ಎಂಬ ಹೆಸರುಗಳಿಂದ ಕರೆಯಲ್ಪಡುವ ಲಂಬಾಣಿಗರು ದೆಹಲಿ, ಉತ್ತರಪ್ರದೇಶ, ರಾಜಸ್ಥಾನ ಮತ್ತು ಪಂಜಾಬ ರಾಜ್ಯಗಳಲ್ಲಿ ಗೋಚರಿಸುತ್ತಾರೆ. ಶೀರಕಿಬಂದ, ಶೀರಕಿವಾಲಾ ಎಂಬ ಹೆಸರುಗಳು ಉದ್ಯೋಗ ಆಧಾರಿತ ನಾಮಧ್ಯೇಯಗಳಾಗಿದ್ದು, ಈ ಭಾಗದಲ್ಲಿ ವಾಸಿಸುವ ಲಂಬಾಣಿಗರು 'ಶಿರಕಿ' ಎಂಬ ಹುಲ್ಲಿನಿಂದ ಚಾಪೆಗಳನ್ನು ಹೆಣೆಯುತ್ತಾರೆ, ಹಾಗೂ ಹಗ್ಗವನ್ನು ತಯಾರಿಸುತ್ತಾ ತಮ್ಮ ಉಪಜೀವನವನ್ನು ಸಾಗಿಸುತ್ತಾರೆ. ಹೀಗಾಗಿ ಈ ಭಾಗದ ಲಂಬಾಣಿಗರನ್ನು ಶಿರಕಿಬಂದ, ಶಿರಕಿವಾಲಾ ಎಂಬ ಹೆಸರುಗಳಿಂದ ಕರೆಯುತ್ತಾರೆ. "ದೆಹಲಿಯಲ್ಲಿ ಶಿರಕಿ ಮಾರ್ಕೆಟ್ ಈ ಜನರ ವ್ಯಾಪಾರಕ್ಕಾಗಿಯೆ ಮೀಸಲಿರುವ ಸ್ಥಳವಾಗಿದೆ" (ಖಂಡೋಬಾ ಪಿ ಕೆ:೧೯೯೧:೧೩). ಎನ್ನುವ ಮೂಲಕ ಲೇಖಕರು ದೆಹಲಿಯಲ್ಲಿ ಲಂಬಾಣಿಗರು ತಮ್ಮದೇ ಆದ ವ್ಯಾಪಾರ ಸ್ಥಳ ಹೊಂದಿರುವ ವಿಚಾರವನ್ನು ಸ್ಪಷ್ಟಪಡಿಸಿದ್ದಾರೆ.

'ಸಿಂಗಾಡೆ ಬಂಜಾರಾ' ಎಂಬ ಪದವು ವೇಷ ಭೂಷಣ ಹಾಗೂ ವೃತ್ತಿ ಸೂಚಕ ಪದವಾಗಿದೆ. ಮಥುರಾ ಹಾಗೂ ಅದರ ಸುತ್ತಮುತ್ತಲಿನ ಇತರ ಪ್ರದೇಶಗಳಲ್ಲಿ ವಾಸವಾಗಿರುವ ಲಂಬಾಣಿಗರು ತಮ್ಮ ತಲೆ ಕೂದಲನ್ನು ಕೊಂಬುಗಳ ಆಕಾರ ಮಾಡಿ ಅದರ ಮೇಲೆ ಬಣ್ಣ ಬಣ್ಣದ ವಸ್ತ್ರಗಳನ್ನು ಹಾಕಿಕೊಳ್ಳುತ್ತಾರೆ. ಹೀಗಾಗಿ ತಲೆಯ ಮೇಲಿನ ಭಾಗವು ಕೊಂಬಿನಂತೆ ಕಾಣುವಂತಿರುತ್ತದೆ. ಕೊಂಬಿಗೆ ಗೋರಬೋಲಿಯಲ್ಲಿ 'ಸಿಂಗ್' ಎಂದು ಕರೆಯುತ್ತಾರೆ. ಹೀಗೆ ತಲೆಗೆ ಕೊಂಬು ಧರಿಸುವ ಸಮುದಾಯವಾದ್ದರಿಂದ ವೇಷ ಭೂಷಣದ ಆಧಾರದ ಮೇಲೆ ಲಂಬಾಣಿಗರನ್ನು ಸಿಂಗಾಡೆ, ಸಿಂಗಾಡಿಯಾ ಎಂದು ಕರೆಯಲಾಗುತ್ತದೆ. ಅಲ್ಲದೇ ಲಂಬಾಣಿಗರು ದನಕರುಗಳನ್ನು ಹೆಚ್ಚಾಗಿ ಸಾಕುವುದರಿಂದಾಗಿ, ದನಕರುಗಳು ಸತ್ತುಹೋದ ಮೇಲೆ ಅವುಗಳ ಕೊಂಬಿನಿಂದ ಹಲವಾರು ಬಗೆಯ ವಿಶೇಷ ವಸ್ತುಗಳನ್ನು ತಯಾರಿಸಿ ಮಾರಾಟ ಮಾಡುತ್ತಿದ್ದರು. ದನಕರುಗಳ ಸಿಂಗದಿಂದ

ಉತ್ಪನ್ನವಾದ ವಸ್ತುಗಳನ್ನು ಮಾರಾಟ ಮಾಡುವ ಲಂಬಾಣಿಗರನ್ನು ಸಿಂಗಾಡಿಯಾ, ಸಿಂಗಾಡೆ ಎಂಬ ಹೆಸರುಗಳಿಂದ ಕರೆಯುತ್ತಾರೆ. ಹೀಗೆ ಭಾರತದಾದ್ಯಂತ ಹರಡಿಕೊಂಡಿರುವ ಲಂಬಾಣಿಗರು ಒಂದೇ ಬುಡಕಟ್ಟಿಗೆ ಸೇರಿದವರಾಗಿದ್ದರೂ, ಅವರು ಆಯಾ ಪ್ರಾಂತದಲ್ಲಿ ಮಾಡುವ ಬೇರೆ ಬೇರೆ ಕೆಲಸ ಕಾರ್ಯಗಳಿಂದಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿದ್ದಾರೆ.

ಲಂಬಾಣಿಗರ ವ್ಯಾಪಾರವು ಭಾರತದಲ್ಲಿ ಸರಾಗವಾಗಿ ಸಾಗುತ್ತಿದ್ದ ಸಮಯದಲ್ಲಿ ಬ್ರಿಟಿಷರು ಭಾರತಕ್ಕೆ ವ್ಯಾಪಾರಕ್ಕಾಗಿ ಬಂದು ಭಾರತವನ್ನು ವಸಾಹತುವನ್ನಾಗಿಸಿಕೊಂಡರು. ಕ್ರಮೇಣ ಕ್ರಿ.ಶ.೧೬೦೦ ರಲ್ಲಿ ಕಲ್ಕತ್ತಾದಲ್ಲಿ ಈಸ್ಟ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದರು. ಕೇವಲ ವ್ಯಾಪಾರಕ್ಕೆ ಸೀಮಿತವಾಗಿರದ ಬ್ರಿಟಿಷರು ಕಾಲಾಂತರದಲ್ಲಿ ಭಾರತದಲ್ಲಿ ರಾಜ್ಯಭಾರ ಮಾಡಲು ಪ್ರಯತ್ನಿಸಿದರು. ತಮ್ಮದೇ ಆದ ಕಾಯ್ದೆ ಕಾನೂನುಗಳು, ಶೈಕ್ಷಣಿಕ ಸಂಸ್ಥೆಗಳು ಹಾಗೂ ವ್ಯಾಪಾರಕ್ಕಾಗಿ ತಮ್ಮದೇ ಆದ ನಾಣ್ಯವನ್ನು ಜಾರಿಗೆ ತಂದರು. ಅಲ್ಲದೇ ೧೮೫೮ರಲ್ಲಿ ಮೊಟ್ಟ ಮೊದಲ ಬಾರಿಗೆ ಮುಂಬೈಯಿಂದ ಠಾಣೆಯವರೆಗೆ ರೈಲು ಸಂಚಾರವನ್ನು ಪ್ರಾರಂಭಿಸಿ ಸಾರಿಗೆ ಸಂಪರ್ಕ ಕ್ಷೇತ್ರದಲ್ಲಿ ಕ್ರಾಂತಿಯನ್ನುಂಟು ಮಾಡಿದರು. ಇಲ್ಲಿಯವರೆಗೆ ದೇಶಿಯ ರಾಜರ ನಾಣ್ಯಗಳನ್ನು ಬಳಸಿಕೊಂಡು ಎತ್ತುಗಳ ಮೇಲೆ ವ್ಯಾಪಾರ ಮಾಡುತ್ತಿದ್ದ ಲಂಬಾಣಿಗರು ಬ್ರಿಟಿಷರ ಸಾರಿಗೆ ಸಂಪರ್ಕಗಳೊಂದಿಗೆ ಪೈಪೋಟಿ ನಡೆಸಲು ಸಾಧ್ಯ ವಾಗಲಿಲ್ಲ. ಅಲ್ಲದೇ ದೇಶಿಯ ರಾಜರುಗಳನ್ನು ೧೭೫೭ರ ಪ್ಲಾಸಿ ಕದನದಿಂದ ಬ್ರಿಟಿಷರು ಒಬ್ಬೊಬ್ಬರನ್ನಾಗಿ ಸೋಲಿಸುತ್ತಾ, ತಮ್ಮ ರಾಜ್ಯಭಾರವನ್ನು ವಿಸ್ತರಿಸುತ್ತಾ ಸಾಗಿದರು. ದೇಶಿಯ ರಾಜರ ಸೈನ್ಯಗಳಿಗೆ ಆಹಾರ ಪೂರೈಸುತ್ತಿದ್ದ ಲಂಬಾಣಿಗರು ಕೂಡಾ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಅಲ್ಲದೇ ಲಂಬಾಣಿಗರು ಮಾಡುತ್ತಿದ್ದ ರಫ್ತು ಕಾರ್ಯವನ್ನು ಬ್ರಿಟಿಷರು ತಮ್ಮ ಸಾರಿಗೆ ಸಂಪರ್ಕದಿಂದಾಗಿ ವೇಗವಾಗಿ ಮಾಡಲು ಪ್ರಾರಂಭಿಸಿದರು. ಹೀಗಾಗಿ ಎತ್ತುಗಳ ಮೇಲೆ ನಿಧಾನಗತಿಯಿಂದ ಸಾಗುತ್ತಿದ್ದ ಲಂಬಾಣಿಗರ ವ್ಯಾಪಾರವು ಕ್ರಮೇಣ ನಿಂತು ಹೋಯಿತು. ಲಂಬಾಣಿಗರು ವ್ಯಾಪಾರ ವೃತ್ತಿಯನ್ನು ಕಳೆದುಕೊಂಡು ಕಷ್ಟಮಯ ಜೀವನ ಸಾಗಿಸುತ್ತಿದ್ದ ಕಾಲದಲ್ಲಿ ಗಾಯದ ಮೇಲೆ ಬರೆ ಎಳೆದಂತೆ ೧೮೭೧ರಲ್ಲಿ ಬ್ರಿಟಿಷರು ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಜಾರಿಗೊಳಿಸಿದರು.

ಈ ಕಾನೂನಿನಿಂದಾಗಿ ಲಂಬಾಣಿಗರು ಬೇರೆ ಬೇರೆ ಪ್ರದೇಶಕ್ಕೆ ಸಂಚರಿಸದೇ, ವ್ಯಾಪಾರ ಮಾಡದೇ ತೀರ ಕಷ್ಟ ಅನುಭವಿಸಬೇಕಾಯಿತು. ಸ್ಥಳೀಯವಾಗಿ ಸಿಕ್ಕ ಚಿಕ್ಕ ಪುಟ್ಟ ಕೆಲಸಗಳನ್ನು ಮಾಡುತ್ತಾ ತಮ್ಮ ಹೈನುಗಾರಿಕೆಯ ಉತ್ಪನ್ನಗಳಾದ ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ ಹಾಗೂ ತುಪ್ಪಗಳನ್ನು ಮಾರಿ ಹೊಟ್ಟೆ ತುಂಬಿಸಿಕೊಳ್ಳಲಾರಂಭಿಸಿದರು. ಅಲ್ಲದೇ ಸ್ಥಳೀಯವಾಗಿ ಕಾಡಿನಲ್ಲಿ ಸಿಗುವ ಹಣ್ಣು ಹಂಪಲುಗಳನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಲಂಬಾಣಿಗರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಬೇಕಾದಲ್ಲಿ ಬ್ರಿಟಿಷರ ಚೆಕ್‌ಪೋಷ್ಟಗಳ ಹಾಗೂ ಪೋಲಿಸ ಸ್ಟೇಷನ್‌ಗಳ ಅನುಮತಿ ಪಡೆಯಬೇಕಾಗುತ್ತಿತ್ತು. ಬ್ರಿಟಿಷ ಸರ್ಕಾರವು ೧೮೯೦ರಲ್ಲಿ ಸುತ್ತೋಲೆಯೊಂದನ್ನು ಹೊರಡಿಸಿ ಲಂಬಾಣಿಗರನ್ನು 'ಅಪರಾಧಿ ಬುಡಕಟ್ಟು ಸಮುದಾಯ' ಎಂದು ಪರಿಗಣಿಸುವ

ಮೂಲಕ ಲಂಬಾಣಿಗರು ಒಂದು ಕಡೆಯಿಂದ ಮತ್ತೊಂದು ಕಡೆ ಎತ್ತುಗಳ ಮೇಲೆ ವ್ಯಾಪಾರ ಮಾಡುವುದನ್ನು ನಿರ್ಬಂಧಿಸಲಾಯಿತು. ಮುಂದುವರೆದು ಬ್ರಿಟಿಷರು "೧೯೨೪ರಲ್ಲಿ ಕ್ರಿಮಿನಲ್ ಟ್ರೈಬ್ಸ್ ಕಾನೂನಿನ ವ್ಯಾಪ್ತಿಯನ್ನು ವಿಸ್ತರಿಸಿ ಇಡೀ ಲಂಬಾಣಿ ಸಮುದಾಯವನ್ನು ಒಡ್ಡರು, ಕೊರಮರು, ಕೊರಚರು, ಎರಕುಲ ಮುಂತಾದವರೊಡನೆ ಅಪರಾಧಿ ಸಮುದಾಯವೆಂದು ನಿರ್ಧರಿಸಿ ಶಾಸನ ಮಾಡಲಾಯಿತು"(ನಾಯ್ಕ ರಾಜು ಎನ್: ೨೦೦೬:೬೮). ಅಪರಾಧಿ ಬುಡಕಟ್ಟುಗಳ ಕಾನೂನುಗಳಿಂದಾಗಿ ಸ್ವತಂತ್ರ್ಯವಾಗಿ ಸಾವಿರಾರು ಎತ್ತುಗಳ ಮೇಲೆ ರಫ್ತು ವ್ಯಾಪಾರ ಮಾಡುತ್ತಾ ಸ್ವಯಂ ಪರಿಪೂರ್ಣತೆಯ ಜೀವನವನ್ನು ಕಟ್ಟಿಕೊಂಡಿದ್ದ ಲಂಬಾಣಿಗರು ಹೊಟ್ಟೆ ಹೊರೆಯಲು ಕಷ್ಟ ಕಾರ್ಪಣ್ಯಗಳನ್ನು ಪಡಬೇಕಾಯಿತು. ಆರ್ಥಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಸಿರಿವಂತ ಜೀವನ ನಡೆಸುತಿದ್ದ ಲಂಬಾಣಿಗರು ಬ್ರಿಟಿಷ ಸರ್ಕಾರದ ಕಾನೂನುಗಳಿಂದಾಗಿ ಬ್ರಿಟಿಷರಿಗೆ ಹಿಡಿಶಾಪ ಹಾಕುತ್ತಾ ಅನಿವಾರ್ಯವಾಗಿ ಕಾಡುಗಳನ್ನು ಸೇರಿಕೊಳ್ಳಬೇಕಾಯಿತು. ಗ್ರಾಮ, ನಗರಗಳಿಂದ ದೂರ ಸಾಗಬೇಕಾಯಿತು. ಹೀಗೆ ಬ್ರಿಟಿಷರ ಹೆದರಿಕೆಯಿಂದಾಗಿ ಬೆಟ್ಟ, ಗುಡ್ಡ, ಗಿರಿ, ಕಂದರಗಳಲ್ಲಿ ವಾಸಮಾಡುತ್ತಾ ಅಲ್ಲಲ್ಲಿಯೇ ಚಿಕ್ಕ ಚಿಕ್ಕ ತಾಂಡಾಗಳನ್ನು ರೂಪಿಸಿಕೊಂಡು ವ್ಯಾಪಾರ ವಂಚಿತರಾಗಿ, ಉದ್ಯೋಗ ವಂಚಿತರಾಗಿ, ಶಿಕ್ಷಣ ವಂಚಿತರಾಗಿ ಕಿತ್ತುತಿನ್ನುವ ಬರ್ಬರವಾದ ಬಡತನದಿಂದ ಜೀವನ ಸಾಗಿಸುವಂತಾಯಿತು.

### ಸ್ವಾತಂತ್ರ್ಯ ನಂತರ ಲಂಬಾಣಿಗರ ಸ್ಥಿತಿಗತಿಗಳು

೧೯೪೭ರ ಅಗಸ್ಟ ೧೫ರಂದು ಭಾರತವು ಹೋರಾಟದ ಮೂಲಕ ಸ್ವಾತಂತ್ರ್ಯವನ್ನು ಪಡೆಯಿತು. ಸುಮಾರು ಮೂರು ಶತಮಾನಗಳ ಕಾಲ ಬ್ರಿಟಿಷರ ದಾಸ್ಯ ಸಂಕೋಲೆಯಲ್ಲಿ ಬರ್ಬರ ಜೀವನವನ್ನು ಸಾಗಿಸುತ್ತಿದ್ದ ಭಾರತೀಯರು ಸ್ವಾತಂತ್ರ್ಯದಿಂದಾಗಿ ನಿಟ್ಟುಸಿರಿನಿಂದ ಮುಕ್ತರಾದರು. ಕ್ರಿ.ಶ. ೧೯೨೪ ಮತ್ತು ನಂತರದಲ್ಲಿ ಜಾರಿಯಾಗಿದ್ದ ಕ್ರಿಮಿನಲ್ ಟ್ರೈಬ್ಸ್ ಕಾನೂನು ದೇಶದ ಸಂಸ್ಕೃತಿಗೆ ಹಾಗೂ ಸಮಾನತೆಗೆ ವಿರುದ್ಧವಾಗಿದೆ ಎಂದರಿತ ಭಾರತ ಸರ್ಕಾರ ೧೯೪೯ರಲ್ಲಿ ಕ್ರಿಮಿನಲ್ ಟ್ರೈಬ್ಸ್ ವಿಚಾರಣಾ ಸಮಿತಿಯನ್ನು ರಚಿಸಿತು. ಮುಂದೆ ಕ್ರಿ.ಶ. ೧೯೫೦ ಜನವರಿ ೨೬ರಂದು ಭಾರತವು ಸ್ವಾತಂತ್ರ್ಯವಾದ ಸಂವಿಧಾನವನ್ನು ಅಂಗೀಕರಿಸಿತು. ಕ್ರಿಮಿನಲ್ ಟ್ರೈಬ್ಸನ ವಿಚಾರಣಾ ಸಮಿತಿಯು ಕ್ರಿ.ಶ. ೧೯೨೪ ಮತ್ತು ನಂತರದ ಎಲ್ಲಾ ಕ್ರಿಮಿನಲ್ ಟ್ರೈಬ್ಸ್ ಕಾನೂನುಗಳು ಭಾರತ ಸಂವಿಧಾನದ ೧೫, ೧೬, ೧೭, ೩೮ ಮತ್ತು ೪೬ನೇ ವಿಧಿಗಳಿಗೆ ವಿರುದ್ಧವಾಗಿರುವದರಿಂದ ಈ ಕಾನೂನನ್ನು ರದ್ದುಗೊಳಿಸಬೇಕೆಂದು ಶಿಫಾರಸ್ಸು ಮಾಡಿತು. ಕ್ರಿಮಿನಲ್ ಟ್ರೈಬ್ಸ್ ವಿಚಾರಣಾ ಸಮಿತಿಯ ಶಿಫಾರಸ್ಸಿನ ಮೇರೆಗೆ ಭಾರತ ಸರ್ಕಾರವು ಕ್ರಿಮಿನಲ್ ಟ್ರೈಬ್ಸ್ ಕಾನೂನನ್ನು ಕ್ರಿ.ಶ. ೧೯೫೨ ಅಗಸ್ಟ ೩೧ರಂದು ರದ್ದುಗೊಳಿಸಿತು. ತಮ್ಮದಲ್ಲದ ತಪ್ಪಿಗೆ ಸುಮಾರು ಮೂರು ದಶಕಗಳ ಕಾಲ ಅಪರಾಧಿ ಎನಿಸಿಕೊಂಡು ಸಾರ್ವಜನಿಕ ಜೀವನದಿಂದ ದೂರವಾಗಿ ಕಷ್ಟತಮವಾದ ಜೀವನವನ್ನು ದೂಡುತ್ತಿದ್ದ ಲಂಬಾಣಿಗರು ಭಾರತ ಸರ್ಕಾರದ ಈ ನಿರ್ಧಾರದಿಂದಾಗಿ ಚೇತರಿಸಿಕೊಳ್ಳುವಂತಾಯಿತು. ಅಂದಿನಿಂದ ಭಾರತ ಸರ್ಕಾರವು ಲಂಬಾಣಿಗರನ್ನು 'ಡಿ ನೋಟಿಪೈಡ್ ಟ್ರೈಬ್ಸ್' ಎಂದರೆ 'ವಿಮುಕ್ತ ಬುಡಕಟ್ಟು' ಎಂದು ಪರಿಗಣಿಸಿತು.

ಭಾರತ ಸಂವಿಧಾನವು ಜಾರಿಗೆ ಬಂದ ನಂತರ ತಲೆತಲಾಂತರದಿಂದ ತುಳಿತಕ್ಕೆ ಒಳಗಾದ ಜನರನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿ, ಈ ಜನರ ಹಿತರಕ್ಷಣೆಗಾಗಿ ಹಾಗೂ ಉನ್ನತಿಗಾಗಿ ಸಂವಿಧಾನಿಕ ಕ್ರಮಗಳು ಹಾಗೂ ಶಾಸನಾತ್ಮಕ ಕ್ರಮಗಳು ಎಂದು ಎರಡು ರೀತಿಯ ರಕ್ಷಣಾ ಕ್ರಮಗಳನ್ನು ಜಾರಿಗೆ ತಂದಿತು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಶೇ. ೮೦ಕ್ಕೂ ಅಧಿಕ ಸಂಖ್ಯೆಯ ಜಾತಿಗಳು ಅಸ್ಪೃಶ್ಯತೆ, ಗುಲಾಮಗಿರಿ, ಜೀತದಾಳು ಹೀಗೆ ಮುಂತಾದ ಅಮಾನುಷ ಆಚರಣೆಗಳಿಗೆ ಬಲಿಯಾಗಿವೆ. ಈ ಅಂಶಗಳನ್ನು ಮನಗಂಡಿದ್ದ ಸಂವಿಧಾನಕರ್ತರುಗಳು ಈ ಅಮಾನುಷ ಆಚರಣೆಗಳನ್ನು ತೊಡೆದು ಹಾಕಲು ಹಾಗೂ ಸಮಾನತೆಯನ್ನು ಸ್ಥಾಪಿಸಲು ಸಂವಿಧಾನದಲ್ಲಿಯೇ ಮುನ್ನೇರ್ಪಾಡುಗಳನ್ನು ಮಾಡಿದ್ದಾರೆ.

ಭಾರತದ ಸಂವಿಧಾನವು ತನ್ನ ಪೂರ್ವ ಪೀಠಿಕೆಯಲ್ಲಿಯೇ ಭಾರತದ ಎಲ್ಲಾ ಪ್ರಜೆಗಳಿಗೂ ಯಾವುದೇ ಪಕ್ಷಪಾತ ಮಾಡದೆ ಸಮಾನ ಹಕ್ಕುಗಳನ್ನು ಮತ್ತು ಅವಕಾಶಗಳನ್ನು ನೀಡುವುದೆಂದು, ಎಲ್ಲರಿಗೂ ಸಮಾನವಾಗಿ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ನ್ಯಾಯವನ್ನು ನೀಡುವುದೆಂದು ಭರವಸೆ ನೀಡಿದೆ. ಸಂವಿಧಾನದ ೧೪, ೧೫, ೧೬ ಮತ್ತು ೧೭ನೇ ವಿಧಿಗಳು ಸಮಾನತೆಯ ಹಕ್ಕಿನ ಬಗ್ಗೆ ವಿವರಗಳನ್ನು ಒಳಗೊಂಡಿದೆ.

"೧೪ನೇ ವಿಧಿಯನ್ವಯ ದೇಶದಲ್ಲಿ ವಾಸಿಸುವ ಎಲ್ಲರೂ ಕೂಡ ಸಮಾನರು ಎಲ್ಲರಿಗೂ ಜಾತಿ, ಸಮುದಾಯ ಲಿಂಗದ ಭೇಧವಿಲ್ಲದೇ ಕಾನೂನಿನ ಅಡಿಯಲ್ಲಿ ಸಮಾನವಾಗಿ ಪರಿಗಣಿಸಬೇಕು ಎಂದು ಹೇಳುತ್ತದೆ"(ಸುರೇಶ ಕೆ ಎಮ್: ೨೦೧೦:೭೦-೭೧).

೧೫ನೇ ವಿಧಿಯ ಪ್ರಕಾರ ಯಾವುದೇ ವ್ಯಕ್ತಿಗೆ ಜಾತಿ, ಸಮುದಾಯ, ಮತ, ಧರ್ಮ, ಭಾಷೆ, ಲಿಂಗ, ಜನ್ಮಸ್ಥಳ ಮುಂತಾದವುಗಳ ಆಧಾರದ ಮೇಲೆ ಭೇಧಭಾವ ಮಾಡುವಂತಿಲ್ಲ. ಈ ವಿಧಿಯಂತೆ ಸಾರ್ವಜನಿಕ ಬಾವಿ, ರಸ್ತೆ, ವಾಚನಾಲಯ, ಮನರಂಜನಾ ಸ್ಥಳಗಳು, ಚಿತ್ರಮಂದಿರ, ಹೋಟೆಲುಗಳು, ಶೈಕ್ಷಣಿಕ ಸಂಸ್ಥೆಗಳು ಮುಂತಾದವುಗಳಿಗೆ ಪ್ರವೇಶ ನೀಡುವಲ್ಲಿ ಯಾವುದೇ ರೀತಿಯ ತಾರತಮ್ಯ ಮಾಡುವಂತಿಲ್ಲ.

೧೬ನೇ ವಿಧಿಯನ್ವಯ ಸಾರ್ವಜನಿಕ ಹುದ್ದೆ ಅಥವಾ ಸರ್ಕಾರಿ ನೌಕರಿ ಪಡೆದುಕೊಳ್ಳಲು ಅಥವಾ ಸೇರಲು ಭಾರತೀಯ ಪ್ರಜೆಗಳೆಲ್ಲರೂ ಅರ್ಹರಾಗಿರುತ್ತಾರೆ. ಜಾತಿ, ಧರ್ಮ, ಸಮುದಾಯ, ಮತ, ಪಂಥ ಇತ್ಯಾದಿಗಳ ಆಧಾರದ ಮೇಲೆ ತಾರತಮ್ಯ ತೋರಿಸದೇ ಎಲ್ಲರಿಗೂ ಸಮಾನ ಅವಕಾಶಗಳನ್ನು ಸರ್ಕಾರ ಒದಗಿಸಿಕೊಡತಕ್ಕದ್ದು.

ಆದರೆ ಈ ವಿಧಿ ಅನ್ವಯ ಉದ್ಯೋಗ ಪಡೆಯುವಲ್ಲಿ ಎಲ್ಲರೂ ಸಮಾನರು ಎಂಬುದಕ್ಕೆ ಮೂರು ವಿನಾಯತಿಗಳನ್ನು ಭಾರತದ ಸಂಸತ್ತು ಒದಗಿಸಿದೆ.

೧. ೧೯೫೭ರ ಸಾರ್ವಜನಿಕ ಉದ್ಯೋಗ(ನಿವಾಸಿಗಳ ಆಯ್ಕೆ) ಅನ್ವಯ ಸ್ಥಳೀಯರಿಗೆ ಉದ್ಯೋಗ ಒದಗಿಸುವ ಅವಕಾಶವನ್ನು ಆಂಧ್ರ ಪ್ರದೇಶ ರಾಜ್ಯ ಒದಗಿಸಿದೆ.

೨. ರಾಜ್ಯಗಳು ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗ ಮತ್ತು ಸ್ತ್ರೀಯರಿಗೆ ರಾಜ್ಯ ಸೇವೆಗಳಿಗೆ ಸಂಬಂಧಿಸಿದಂತೆ ಮೀಸಲಾತಿಯನ್ನು ನೀಡಲು ಅವಕಾಶ ಕಲ್ಪಿಸಿದೆ.

೩. ಧಾರ್ಮಿಕ ಸಂಸ್ಥೆಗಳು ಅಥವಾ ಒಂದು ನಿರ್ದಿಷ್ಟವಾದಂತಹ ಸಮುದಾಯದ ಸದಸ್ಯರಿಗೆ ಕೆಲವು ಕಛೇರಿಗಳಲ್ಲಿ ಮೀಸಲಾತಿ ನೀಡಲಾಗಿದೆ.

"೧೭ನೇ ವಿಧಿಯ ಪ್ರಕಾರ ಅಸ್ಪೃಶ್ಯತೆಯನ್ನು ಬಹಿಷ್ಕರಿಸಲಾಗಿದೆ. ಅಸ್ಪೃಶ್ಯತೆಯ ಆಚರಣೆಯು ಶಿಕ್ಷಾರ್ಹ ಅಪರಾಧವೆನಿಸುತ್ತದೆ. ಅಸ್ಪೃಶ್ಯತೆ ಸಮಾಜದ ಒಂದು ಪಿಡುಗು. ಇದು ನಮ್ಮಲ್ಲಿ ಶತಮಾನ ಗಳಿಂದ ಉಳಿದುಕೊಂಡು ಬಂದಿರುವುದು ನಿಜಕ್ಕೂ ದುರಂತದ ವಿಷಯ. ಸಾರ್ವಜನಿಕ ಸ್ಥಳಗಳಾದ ವಿದ್ಯಾಮಂದಿರ, ಆಸ್ಪತ್ರೆ, ಪೂಜಾ ಮಂದಿರ, ಹೋಟೆಲ್, ಅಂಗಡಿ, ಸಿನಿಮಾ ಮಂದಿರ, ಕೆರೆ, ಬಾವಿ ಮುಂತಾದ ಸ್ಥಳಗಳಲ್ಲಿ ಪ್ರವೇಶ ಹಾಗೂ ಉಪಯೋಗವನ್ನು ನಿರಾಕರಿಸುವಂತಿಲ್ಲ.

೧೯ನೇ ವಿಧಿಯು ಆರು ವಿಧದ ಸ್ವಾತಂತ್ರ್ಯವನ್ನು ವ್ಯಕ್ತಿಗಳಿಗೆ ಒದಗಿಸಿದೆ. ಮೂಲ ಸಂವಿಧಾನದಲ್ಲಿ ಏಳು ವಿಧದ ಸ್ವಾತಂತ್ರ್ಯಗಳಿದ್ದವು ಆದರೆ ೧೯೭೮ರ ೪೪ನೇ ತಿದ್ದುಪಡಿಯಲ್ಲಿ ಆಸ್ತಿಯನ್ನು ಹೊಂದುವ, ಮಾರುವ ಹಕ್ಕನ್ನು ಮೂಲಭೂತ ಸ್ವಾತಂತ್ರ್ಯದಿಂದ ತೆಗೆದು ಹಾಕಲಾಯಿತು"(ಸುರೇಶ ಕೆ ಎಮ್: ೨೦೧೦:೭೨). ಪ್ರಸ್ತುತ ವಾಕ್ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ, ಶಸ್ತ್ರರಹಿತವಾಗಿ ಹಾಗೂ ಶಾಂತಿಯುತವಾಗಿ ಸಭೆ ಸೇರುವ ಸ್ವಾತಂತ್ರ್ಯ, ಸಂಘ ಸಂಸ್ಥೆಗಳನ್ನು ರಚಿಸಿಕೊಳ್ಳುವ ಸ್ವಾತಂತ್ರ್ಯ, ಚಲನ ಅಥವಾ ಸಂಚರಿಸುವ ಸ್ವಾತಂತ್ರ್ಯ, ಭಾರತದ ಯಾವುದೇ ಭಾಗದಲ್ಲಾದರೂ ವಾಸಿಸುವ ಅಥವಾ ನೆಲೆಸುವ ಸ್ವಾತಂತ್ರ್ಯ, ಯಾವುದೇ ಉದ್ಯೋಗ, ವೃತ್ತಿ ಅಥವಾ ವ್ಯವಹಾರ ಹೊಂದುವ ಸ್ವಾತಂತ್ರ್ಯ ಹೀಗೆ ಒಟ್ಟು ಆರು ಸ್ವಾತಂತ್ರ್ಯಗಳನ್ನು ನೀಡಲಾಗಿದೆ.

೨೧ನೇ ವಿಧಿಯಂತೆ ಪ್ರತಿಯೊಬ್ಬ ನಾಗರಿಕನಿಗೂ ಜೀವಿಸುವ ಹಕ್ಕನ್ನು ನೀಡಲಾಗಿದೆ. ಕಾನೂನಿನ ಮೂಲಕ ರೂಪಿಸಿರುವ ನಿಯಮಗಳ ಸಂದರ್ಭಗಳನ್ನು ಹೊರತುಪಡಿಸಿ ಯಾವುದೇ ವ್ಯಕ್ತಿಯ ಜೀವವನ್ನು ಅಥವಾ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವಂತಿಲ್ಲ.

"೨೧ ಎ ವಿಧಿಯನ್ನು ಭಾರತದ ಸಂವಿಧಾನಕ್ಕೆ ೨೦೦೨ರಲ್ಲಿ ೮೬ನೇ ತಿದ್ದುಪಡಿಯನ್ನು ಮಾಡುವ ಮೂಲಕ ಸೇರ್ಪಡೆಗೊಳಿಸಲಾಯಿತು. ಈ ವಿಧಿ ಅನ್ವಯ ೬ ರಿಂದ ೧೪ ವರ್ಷದ ಒಳಗಿನ ಎಲ್ಲಾ ಮಕ್ಕಳು ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಪಡೆಯುವದು ಅವರ ಹಕ್ಕನ್ನಾಗಿಸಿದೆ. ಈ ವಿಧಿಯ ಮೂಲಕ ಶಿಕ್ಷಣದ ಮಹತ್ತರ ಗುರಿಯಾದ 'ಎಲ್ಲರಿಗೂ ಶಿಕ್ಷಣ' ಎಂಬ ಧ್ಯೇಯವನ್ನು ಸಾಧಿಸುವ ಪ್ರಯತ್ನ ಮಾಡಲಾಗುತ್ತಿದೆ.

೨೩ನೇ ವಿಧಿಯು ಜೀತಪದ್ಧತಿಯನ್ನು ಹೋಗಲಾಡಿಸಲು ಸಹಾಯಕಾರಿಯಾಗಿದೆ. ಇದರನ್ವಯ ಬಲವಂತದ ದುಡಿಮೆಯನ್ನು ನಿಷೇಧಿಸಿದ್ದು, ಅಂತಹ ಆಚರಣೆ ಶಿಕ್ಷಾರ್ಹವಾಗಿದೆ. ಈ ವಿಧಿಯಲ್ಲಿ ಗುಲಾಮಗಿರಿ ಎಂಬ ಪದಕ್ಕೆ ಬದಲಾಗಿ `Traffic in human beings` ಎಂಬ ಪದವನ್ನು ಬಳಸ ಲಾಗಿದೆ. Traffic in human beings ಎಂಬುದು ಈ ಕೆಳಗಿನ ಅಂಶಗಳನ್ನು ನಿಷೇಧಿಸುತ್ತದೆ.

೧. ಮನುಷ್ಯನನ್ನು ಮಾರುವದು ಮತ್ತು ಕೊಳ್ಳುವುದು.

೨. ಹೆಣ್ಣು ಮಕ್ಕಳನ್ನು ವೇಶ್ಯಾವಾಟಿಕೆಗೆ ಬಳಸುವದು.

೩. ದೇವದಾಸಿ ಪದ್ಧತಿ ನಿಷೇಧ

೪. ಗುಲಾಮಗಿರಿ ಪದ್ಧತಿಯ ನಿಷೇಧ

೨೪ನೇ ವಿಧಿಯನ್ವಯ ೧೪ ವರ್ಷದ ಒಳಗಿನ ಮಕ್ಕಳನ್ನು ಅಪಾಯಕಾರಿ ಚಟುವಟಿಕೆಗಳಿಗೆ ತೊಡಗಿಸುವುದನ್ನು ನಿಷೇಧಿಸಲಾಗಿದೆ. ಈ ವಿಧಿ ಅನ್ವಯ ಕಾರ್ಖಾನೆಗಳಲ್ಲಿ, ಗಣಿಗಳಲ್ಲಿ, ರೈಲ್ವೆ ಕೆಲಸಗಳಲ್ಲಿ ಮಕ್ಕಳನ್ನು ತೊಡಗಿಸುವುದನ್ನು ನಿಷೇಧಿಸಲಾಗಿದೆ.

೨೫ನೇ ವಿಧಿ ಅನ್ವಯ ಪ್ರತಿಯೊಬ್ಬರಿಗೂ ಧಾರ್ಮಿಕ ಆಚರಣೆಯನ್ನು ಮಾಡಲು ಅವಕಾಶವಿದೆ. ಭಾರತವು ಜಾತ್ಯಾತೀತ ರಾಷ್ಟ್ರವಾಗಿದ್ದು, ಪ್ರತಿಯೊಬ್ಬರು ತಮಗಿಷ್ಟವಾದ ಧರ್ಮವನ್ನು ಸ್ವೀಕರಿಸಲು ಮತ್ತು ಪ್ರಚಾರ ಮಾಡಲು ಧಾರ್ಮಿಕ ಆಚರಣೆಗಳನ್ನು ಮಾಡಲು ಅವಕಾಶ ಕಲ್ಪಿಸಿದೆ" (ಅದೇ: ಪು: ೭೪-೭೬).

೨೬ನೇ ವಿಧಿ ಅನ್ವಯ ಪ್ರತಿಯೊಬ್ಬರಿಗೂ ಧಾರ್ಮಿಕ ಪಂಥ ಅಥವಾ ಗುಂಪುಗಳನ್ನು, ಧಾರ್ಮಿಕ ಸಂಸ್ಥೆಗಳನ್ನು ಸ್ಥಾಪಿಸುವ, ಚರ ಮತ್ತು ಸ್ಥಿರ ಆಸ್ತಿಯನ್ನು ಹೊಂದುವ ಮತ್ತು ಅವುಗಳನ್ನು ಧಾರ್ಮಿಕ ಉದ್ದೇಶಕ್ಕಾಗಿ ಬಳಸಿಕೊಳ್ಳುವ ಸ್ವಾತಂತ್ರ್ಯವಿದೆ. ಇಲ್ಲಿ ಧಾರ್ಮಿಕ ಸಂಸ್ಥೆಯನ್ನು ರಕ್ಷಿಸುವುದಕ್ಕೆ ಅಥವಾ ಧರ್ಮ ಪ್ರಚಾರ ಮಾಡುವುದಕ್ಕೆ ಯಾರೂ ವಂತಿಗೆ ಅಥವಾ ತೆರಿಗೆ ಕೊಡುವಂತಿಲ್ಲ. ಮತ್ತು ಸರ್ಕಾರದ ಧನ ಸಹಾಯದ ಮೂಲಕ ನಡೆಯುವ ವಿದ್ಯಾಸಂಸ್ಥೆಗಳಲ್ಲಿ ಧಾರ್ಮಿಕ ವಿಷಯವನ್ನು ಬೋಧಿಸುವ ಅಥವಾ ಪ್ರಚಾರ ಮಾಡುವ ಅವಕಾಶವಿರುವುದಿಲ್ಲ.

"೨೯ನೇ ವಿಧಿಯು ದೇಶದಲ್ಲಿ ವಾಸಿಸುವ ಪ್ರತಿಯೊಬ್ಬ ನಾಗರಿಕನು ತನ್ನದೇ ಆದ ಧರ್ಮ, ಸಂಸ್ಕೃತಿ, ಆಚಾರ ವಿಚಾರಗಳನ್ನು ಉಳಿಸಿಕೊಳ್ಳಲು ಹಾಗೂ ಆಚರಿಸಲು ಅವಕಾಶ ಕಲ್ಪಿಸಿದೆ. ಹಾಗೂ ಈ ವಿಧಿ ಅನ್ವಯ ಯಾವುದೇ ಶೈಕ್ಷಣಿಕ ಸಂಸ್ಥೆಯಲ್ಲಿ ಜಾತಿ, ಜನಾಂಗ, ಸಂಸ್ಕೃತಿ, ಭಾಷೆಯ ಮೇಲೆ ಪ್ರವೇಶವನ್ನು ನಿರಾಕರಿಸಿದಂತೆ ತಡೆಯುತ್ತದೆ. ಈ ಮೂಲಕ ಈ ವಿಧಿಯು ಭಾಷಾ ಅಲ್ಪಸಂಖ್ಯಾತರ ಹಾಗೂ ಧಾರ್ಮಿಕ ಅಲ್ಪಸಂಖ್ಯಾತರ ಹಿತರಕ್ಷಣೆಯನ್ನು ಕಾಯ್ದುಕೊಂಡಿದೆ.

೨೯(೧)ನೇ ವಿಧಿ ಪ್ರಕಾರ ದೇಶದ ಯಾವುದೇ ಭಾಗದಲ್ಲಿ ನೆಲೆಸಿರುವ ಯಾವುದೇ ಪ್ರಜೆಗಳು ಭಾಷೆ, ಲಿಪಿ ಅಥವಾ ಸಂಸ್ಕೃತಿಯನ್ನು ಹೊಂದಿದ್ದರೆ ಅವುಗಳನ್ನು ರಕ್ಷಿಸುವ ಹಕ್ಕನ್ನು ಪಡೆದಿದ್ದಾರೆ" (ಸುರೇಶ ಕೆ ಎಮ್: ೨೦೧೦:೭೨).

"೪೬ನೇ ವಿಧಿಯ ಅನ್ವಯ ಭಾರತ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ದವರ ಕ್ಷೇಮಾಭಿವೃದ್ಧಿಗಾಗಿ ವಸತಿ ನಿಲಯಗಳನ್ನು ಬಾಲಕ ಮತ್ತು ಬಾಲಕಿಯರಿಗೆ ಪ್ರತ್ಯೇಕವಾಗಿ

ನಿರ್ಮಿಸಿದೆ. ೧೯೯೦-೧೯೯೧ನ್ನು ಸಾಮಾಜಿಕ ನ್ಯಾಯ ವರ್ಷವೆಂದು ಆಚರಿಸಿ ಸರ್ಕಾರವು ಉಚಿತ ಪಠ್ಯ ಪುಸ್ತಕಗಳನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದ ವೈದಕೀಯ ಮತ್ತು ಇಂಜಿನಿಯರಿಂಗ ವರೆಗೆ ಅಭ್ಯಾಸ ಮಾಡುವ ಮಕ್ಕಳಿಗೆ ವಿತರಿಸಿತು" (ಅದೇ:ಪು:೯೦).

"೩೩೦(೧)ನೇ ವಿಧಿಯಂತೆ ಭಾರತದ ಲೋಕಸಭೆಯಲ್ಲಿ ಅನುಸೂಚಿತ ಜಾತಿಗಳಿಗೆ ಹಾಗೂ ಬುಡಕಟ್ಟು ಜನರಿಗೆ ಸ್ಥಾನಗಳನ್ನು ಮೀಸಲಿರಿಸಬೇಕು.

೩೩೦(೨)ನೇ ವಿಧಿ ಅನ್ವಯ ಪರಿಶಿಷ್ಟ ಜಾತಿಗಳಿಗೆ ಮತ್ತು ಬುಡಕಟ್ಟುಗಳಿಗೆ ಮೀಸಲಿಡಬೇಕಾದ ಸ್ಥಾನಗಳ ಸಂಖ್ಯೆಯು ಆ ರಾಜ್ಯದಲ್ಲಿರುವ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಸಮುದಾಯಗಳ ಜನಸಂಖ್ಯೆಯನ್ನು ಆ ರಾಜ್ಯದ ಒಟ್ಟು ಜನಸಂಖ್ಯೆಗೆ ಯಾವ ಪ್ರಮಾಣದ ಸ್ಥಾನ ಹೊಂದಿದೆಯೋ ಅದನ್ನು ಆಧರಿಸಿ ಸ್ಥಾನ ನಿಗದಿಪಡಿಸಬೇಕು. ಸಾಧ್ಯವಾದಷ್ಟು ಮಟ್ಟಿಗೆ ಲೋಕಸಭೆಯಲ್ಲೂ ಆ ರಾಜ್ಯಕ್ಕೆ ಹಂಚಲಾದ ಒಟ್ಟು ಸಂಖ್ಯೆಯಲ್ಲಿ ಅದೇ ಪ್ರಮಾಣವನ್ನು ಆಧರಿಸಬೇಕು ಎಂದು ತಿಳಿಸುತ್ತದೆ.

೩೩೨ನೇ ವಿಧಿಯ ಪ್ರಕಾರ ರಾಜ್ಯಗಳ ವಿಧಾನ ಸಭೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಗೆ ಸ್ಥಾನಗಳನ್ನು ಮೀಸಲಿಡುವುದು" (ಅದೇ: ಪು:೩೪೪-೩೪೫).

ಶತಶತಮಾನಗಳಿಂದ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಿತವನ್ನು ಕಾಪಾಡಲು ವಿಶೇಷ ಸವಲತ್ತುಗಳನ್ನು ಸಂವಿಧಾನವು ಒದಗಿಸಿತು. ಸಂವಿಧಾನವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಒದಗಿಸಿದ ಸವಲತ್ತುಗಳನ್ನು ಹಾಗೂ ಸರ್ಕಾರವು ಕಾಲಕಾಲಕ್ಕೆ ಕೈಗೊಳ್ಳುವ ಕಾರ್ಯಕ್ರಮಗಳ ಸದ್ಬಳಕೆಯಾಗುತ್ತಿದೆಯೇ ಎಂಬುದನ್ನು ಪರಿಶೀಲಿಸಲು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಹಿತರಕ್ಷಣೆ ಕಾಯಲು ೩೩೮ನೇ ವಿಧಿ ಅನ್ವಯ ರಾಷ್ಟ್ರಪತಿಗಳು ವಿಶೇಷ ಅಧಿಕಾರಿಯನ್ನು ನೇಮಿಸುವ ಅವಕಾಶವನ್ನು ಭಾರತ ಸಂವಿಧಾನವು ಒದಗಿಸಿತು. ಈ ವಿಶೇಷ ಅಧಿಕಾರಿಗಳು ಸಮಗ್ರವಾಗಿ ಕಾರ್ಯನಿರ್ವಹಿಸಲು ಸಾಧ್ಯವಿಲ್ಲದ ಕಾರಣ ೩೩೮ನೇ ವಿಧಿಗೆ ತಿದ್ದುಪಡಿ ತಂದು ವಿಶೇಷ ಅಧಿಕಾರಿಯ ಸ್ಥಾನಕ್ಕೆ ಬಹು ಸದಸ್ಯರನ್ನು ಒಳಗೊಂಡ ಒಂದು ಆಯೋಗವನ್ನು ೧೯೭೮ರಲ್ಲಿ ರಚಿಸಿತು.

"೩೪೧ನೇ ವಿಧಿಯನ್ವಯ ರಾಷ್ಟ್ರಪತಿಗಳು ಭಾರತದ ಭೂ ಪ್ರದೇಶದ ಯಾವುದೇ ರಾಜ್ಯದ ಅಥವಾ ಭಾಗದಲ್ಲಿನ ಜಾತಿಗಳು, ಮೂಲವಂಶಗಳು ಅವುಗಳ ಒಳಗುಂಪುಗಳನ್ನು ಆ ರಾಜ್ಯದ ರಾಜ್ಯಪಾಲರೊಡನೆ ಸಮಾಲೋಚಿಸಿ ಪರಿಶಿಷ್ಟ ಜಾತಿಯ ಗುಂಪಿಗೆ ಅಧಿಸೂಚನೆ ಮೂಲಕ ಸೇರಿಸಬಹುದು.

೩೪೧(೨)ನೇ ವಿಧಿಯಂತೆ ಸಂಸತ್ತು ಕಾನೂನಿನ ಮೂಲಕ ಯಾವುದೇ ಜಾತಿ, ಮೂಲವಂಶ ಅಥವಾ ಅದರೊಳಗಿನ ಗುಂಪನ್ನು ಅಧಿಸೂಚನೆ ಮೂಲಕ ಪರಿಶಿಷ್ಟ ಜಾತಿಗಳ ಪಟ್ಟಿಗೆ ಸೇರಿಸಬಹುದು ಅಥವಾ ಅದರಿಂದ ತೆಗೆದುಹಾಕಬಹುದು.

೩೪೨(೧)ನೇ ವಿಧಿಯ ಪ್ರಕಾರ ರಾಷ್ಟ್ರಪತಿಗಳು ಭಾರತದ ಭೂ ಪ್ರದೇಶದ ಯಾವುದೇ ರಾಜ್ಯದ ಅಥವಾ ಭಾಗದಲ್ಲಿನ ಬುಡಕಟ್ಟುಗಳನ್ನು ಮೂಲ ವಂಶಗಳು ಅವುಗಳೊಳಗಿನ ಗುಂಪುಗಳನ್ನು ಆ ರಾಜ್ಯದ ರಾಜ್ಯಪಾಲರೊಡನೆ ಸಮಾಲೋಚಿಸಿ ಪರಿಶಿಷ್ಟ ಪಂಗಡಗಳ ಗುಂಪಿಗೆ ಅಧಿಸೂಚನೆ ಮೂಲಕ ಸೇರಿಸಬಹುದು.

೩೪೨(೨)ನೇ ವಿಧಿಯಂತೆ ಸಂಸತ್ತು ಕಾನೂನಿನ ಮೂಲಕ ಯಾವುದೇ ಜಾತಿ, ಮೂಲವಂಶ, ಅಥವಾ ಬುಡಕಟ್ಟನ್ನು ಅದರೊಳಗಿನ ಗುಂಪನ್ನು ಅಧಿಸೂಚನೆ ಮೂಲಕ ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸೇರಿಸಬಹುದು ಅಥವಾ ಅದರಿಂದ ತೆಗೆದು ಹಾಕಬಹುದು ಎಂದು ತಿಳಿಸುತ್ತದೆ" (ಅದೇ: ಪು:೩೫೦).

ಭಾರತ ಸಂವಿಧಾನದ ೩೪೧ ಮತ್ತು ೩೪೨ನೇ ವಿಧಿಗಳ ಅನ್ವಯ ಹಾಗೂ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ತಿದ್ದುಪಡಿ ಆ್ಯಕ್ಟ್ ೧೯೭೬ರ ಪ್ರಕಾರ ಲಂಬಾಣಿಗರನ್ನು ಆಯಾ ರಾಜ್ಯಗಳಲ್ಲಿ ಕರೆಯುವ ಹೆಸರಿನ ಆಧಾರದ ಮೇಲೆ ಕೇಂದ್ರ ಸರ್ಕಾರವು ಕೆಲವು ರಾಜ್ಯ ಗಳಲ್ಲಿ ಪರಿಶಿಷ್ಟ ಜಾತಿ, ಇನ್ನು ಕೆಲವು ರಾಜ್ಯಗಳಲ್ಲಿ ಪರಿಶಿಷ್ಟ ಪಂಗಡದ ಸ್ಥಾನಮಾನ ನೀಡಿದೆ.

ಆಂಧ್ರ ಪ್ರದೇಶ, ಬಿಹಾರ, ಗುಜರಾತ, ಓರಿಸ್ಸಾ, ಪಶ್ಚಿಮ ಬಂಗಾಳ ರಾಜ್ಯಗಳಲ್ಲಿ ಲಂಬಾಣಿಗರು ಸಂವಿಧಾನಾತ್ಮಕವಾಗಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿದ್ದು, ದೆಹಲಿ, ಹಿಮಾಚಲ ಪ್ರದೇಶ, ಕರ್ನಾಟಕ, ರಾಜಸ್ಥಾನ ಮತ್ತು ಕೇರಳ ರಾಜ್ಯಗಳಲ್ಲಿ ಸಂವಿಧಾನಾತ್ಮಕವಾಗಿ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿದ್ದಾರೆ. ಇನ್ನುಳಿದ ರಾಜ್ಯಗಳಲ್ಲಿ ವಿಮುಕ್ತ ಬುಡಕಟ್ಟು, ಇತರೆ ಹಿಂದುಳಿದ ಜಾತಿಗಳ ಪಟ್ಟಿಯಲ್ಲಿದ್ದಾರೆ. ಒಂದೇ ಬುಡಕಟ್ಟಿನ, ಒಂದೇ ಸಮುದಾಯದವರಾದ ಲಂಬಾಣಿಗರನ್ನು ಭಾರತದ ಬೇರೆ ಬೇರೆ ರಾಜ್ಯಗಳಲ್ಲಿ ಸಂವಿಧಾನಾತ್ಮಕವಾಗಿ ಬೇರೆ ಬೇರೆ ಪಟ್ಟಿಯಲ್ಲಿಟ್ಟಿರುವುದು ಗೋಚರಿಸುತ್ತದೆ. ಹೀಗೆ ಒಂದೇ ಸಮುದಾಯಕ್ಕೆ ಸೇರಿದ ಲಂಬಾಣಿಗರನ್ನು ಸಂವಿಧಾನಾತ್ಮಕವಾಗಿ ಬೇರೆ ಬೇರೆ ಪಟ್ಟಿಯಲ್ಲಿ ಸೇರಿಸಿರುವುದರಿಂದ ಈ ಜನರ ಅಭಿವೃದ್ಧಿ ಕುಂಠಿತವಾಗಿದೆ. ಅಲ್ಲದೇ ಭಾರತದಾದ್ಯಂತ ವಿಭಿನ್ನ ನಾಮಧ್ಯೇಯಗಳಿಂದ ಗುರುತಿಸುವುದರಿಂದ ತಾವೆಲ್ಲರೂ ಒಂದೇ ಎಂಬ ಭಾವನೆ ಹೊಂದಲು ಈ ವಿಭಿನ್ನ ನಾಮಧ್ಯೇಯಗಳು ಮಾರಕವಾಗಿವೆ. ಇವರನ್ನು ಬೇರೆ ಬೇರೆ ಪಟ್ಟಿಯಲ್ಲಿಟ್ಟಿರುವುದರಿಂದ ಜನಗಣತಿಯ ಸಮಯದಲ್ಲಿ ಲಂಬಾಣಿಗರ ಸರಿಯಾದ ಜನಸಂಖ್ಯೆಯ ಮಾಹಿತಿ ಸಿಗುತ್ತಿಲ್ಲ. ಆದ್ದರಿಂದ ಲಂಬಾಣಿಗರನ್ನು ಒಂದೇ ನಾಮಧ್ಯೇಯದಡಿಯಲ್ಲಿ ಗುರುತಿಸಿ, ಇವರನ್ನು ದೇಶದಾದ್ಯಂತ ಯಾವುದಾದರೊಂದು ಪರಿಶಿಷ್ಟರ ಪಟ್ಟಿಗೆ ಸೇರಿಸುವುದು ನ್ಯಾಯೋಚಿತವಾಗಿದೆ.

### ೨.೧. ಕರ್ನಾಟಕದ ರಾಜ್ಯದ ಪರಿಸರದ ಕಿರುನೋಟ

**ಪೀಠಿಕೆ:** ಕರ್ನಾಟಕ ರಾಜ್ಯಕ್ಕೆ ಭವ್ಯವಾದ ಪ್ರಾಚೀನ ಪರಂಪರೆಯಿದೆ. ಇದು ಹೊಂದಿರುವ ಪ್ರಾಕೃತಿಕ ಸಂಪತ್ತು, ಸಾಂಸ್ಕೃತಿಕ ಶ್ರೀಮಂತಿಕೆ ಉಜ್ವಲ ಭವಿಷ್ಯವನ್ನು ರೂಪಿಸಿಕೊಳ್ಳಲು ನಾಡಿನ ಜನತೆಗೆ ಸ್ಫೂರ್ತಿದಾಯಕವಾಗಿದೆ. ಭೌಗೋಳಿಕವಾಗಿ ದಕ್ಷಿಣ ಭಾರತದ ನೈರುತ್ಯ ಭಾಗದಲ್ಲಿರುವ

## ಕರ್ನಾಟಕ

ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ ಜಿಲ್ಲೆ



ಕರ್ನಾಟಕಕ್ಕೆ ಮಾನವಶಾಸ್ತ್ರೀಯ ವಸ್ತುಸಂಗ್ರಹಾಲಯ ಎಂದು ಕರೆಯಲಾಗಿದೆ. ದ್ರಾವಿಡರು, ಇಂಡೋ-ಆರ್ಯನ್ ಸಮುದಾಯಗಳ ಜೊತೆ ಜೊತೆಗೆ ಬೇರೆ ಬೇರೆ ಪಂಗಡಗಳ ಲಕ್ಷಣಗಳನ್ನು ಇಲ್ಲಿ ಕಾಣಬಹುದಾಗಿದೆ. ಇದು ತನ್ನದೇ ಆದ ಸನ್ನಿವೇಶ, ವಿವಿಧ ಭೂ-ಸ್ವರೂಪಗಳು, ಸುಂದರವಾದ ವನಸ್ಪತಿ, ವರ್ಣಮಯವಾದ ಪ್ರಾಣಿಸಂಕುಲ, ಉತ್ಕೃಷ್ಟವಾದ ಮಣ್ಣು, ಅದ್ವಿತೀಯವಾದ ಜಲ ಸಂಪನ್ಮೂಲಗಳು, ಅಮೂಲ್ಯವಾದ ಖನಿಜ ಸಂಪತ್ತು, ಜನಸಂಪತ್ತು, ಸಾರಿಗೆ-ಸಂಪರ್ಕ, ಮಾಧ್ಯಮಗಳು ಮುಂತಾದ ವೈವಿಧ್ಯತೆಯುಳ್ಳ ಭೌಗೋಳಿಕ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಹೊಂದಿದೆ.

ಕರ್ನಾಟಕ ರಾಜ್ಯವು ಕನ್ನಡ ಭಾಷೆಯನ್ನು ಪ್ರಧಾನವಾಗಿ ಮಾತನಾಡುವ ಜನರು ವಾಸಿಸುವ ಪ್ರದೇಶವಾಗಿದ್ದು, ಉತ್ಕೃಷ್ಟ ಹಾಗೂ ಶ್ರೀಮಂತ ಧಾರ್ಮಿಕ ಮತ್ತು ಕಲಾ ಪರಂಪರೆಯನ್ನು ಹೊಂದಿದೆ. ರಾಜ್ಯದ ಪುರಾತನ ದೇವಾಲಯಗಳು ಭಕ್ತರ ಧಾರ್ಮಿಕ ನಿಷ್ಠೆಯ ಪ್ರತೀಕವಾಗಿವೆ. ರಾಜ್ಯದ ಮಾನವ ಸಂಪನ್ಮೂಲದಲ್ಲಿ ಜನಾಂಗೀಯ ಹಾಗೂ ಧಾರ್ಮಿಕ ವೈವಿಧ್ಯವನ್ನು ಕಾಣಬಹುದಾಗಿದೆ. ಈ ಮಾನವ ಸಂಪನ್ಮೂಲವು ವೃತ್ತಿಪರ, ಉದ್ಯಮಶೀಲ ಹಾಗೂ ಪ್ರಗತಿಶೀಲ ಕೌಶಲ್ಯದೊಂದಿಗೆ ರಾಜ್ಯವು ಭವಿಷ್ಯದಲ್ಲಿ ಒಂದು ಪ್ರಮುಖ ಕೇಂದ್ರವಾಗಿ ಹೊರಹೊಮ್ಮುವ ಭರವಸೆ ನೀಡುತ್ತದೆ.

**ಹೆಸರಿನ ಮೂಲ**

'ಕರ್ನಾಟಕ' ಎಂಬ ಹೆಸರಿನ ನಿಷ್ಪನ್ನದ ಬಗ್ಗೆ ಏಕಾಭಿಪ್ರಾಯವಿಲ್ಲ. ಕರ್ನಾಟಕ, ಕರ್ಣಾಟಕ, ಮತ್ತು ಕನ್ನಡ ಎಂಬ ಶಬ್ದಗಳು ಭಾಷೆ ಹಾಗೂ ಪ್ರದೇಶಗಳೆರಡನ್ನು ಅರ್ಥೈಸುವಂತೆ ಬಳಕೆಯಾದಂತಿದೆ. "ಇತಿಹಾಸಕಾರರು ಮತ್ತು ಕವಿಗಳು ಕರ್ನಾಟಕದ ಭಾಗಗಳನ್ನು 'ಕುಂತಳ', 'ಬನವಾಸಿ ದೇಶ' ಹಾಗೂ 'ಮಹಿಷಕ' ಎಂತಲೂ ವರ್ಣಿಸಿರುವರು. ಡಾ ಶಂ ಭಾ ಜೋಶಿಯವರ ಮತಾನುಸಾರ ಕರ್ನಾಟಕ ಎಂಬ ಶಬ್ದವು 'ಕುಗ್' ಅಥವಾ 'ಕಳ್' ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ ಎಂದು ತಿಳಿದುಬರುತ್ತದೆ. ಮಹಾರಾಷ್ಟ್ರದ 'ಖಾನ್' ದೇಶವನ್ನು ಹಿಂದೆ ಕನ್ನಡ ದೇಶವೆಂದು ಕರೆದಿರುವ ಬಗ್ಗೆ ಕಲ್ಪನೆಗಳಿವೆ. 'ಕರ್+ನಾಡು' ಅಂದರೆ ಕಪ್ಪು ಮಣ್ಣಿನಿಂದ ಕೂಡಿರುವ ನಾಡು ಎಂಬುದರಿಂದ ಈ ಹೆಸರು ಉತ್ಪತ್ತಿಯಾದ ಬಗ್ಗೆ ಮತ್ತೊಂದು ಅಭಿಪ್ರಾಯವಿದೆ. ತಮಿಳುನಾಡಿನ ಕೆಲವು ಕೃತಿಗಳಲ್ಲಿ 'ಕರುನಾಟ್' ಎಂಬ ಶಬ್ದದಿಂದ ಈ ನಾಡನ್ನು ಕರೆದಿರುವುದು ತಿಳಿದುಬರುತ್ತದೆ. 'ಕರುನಾಟ್' ಎಂದರೆ ಎತ್ತರವಾದ ಪ್ರದೇಶವೆಂದರ್ಥ. ಅಂದರೆ ಪೂರ್ವ ಘಟ್ಟಗಳಿಗಿಂತ ಎತ್ತರಕ್ಕಿರುವ ದೊಡ್ಡದಾದ ನಾಡು. ಕೆಲವು ತಮಿಳು ಶಾಸನಗಳಲ್ಲಿ 'ಕನ್ನಾಟ', 'ಕನ್ನಾಟಕ' ಹಾಗೂ 'ಕನ್ನಾಡಗರುಂ' ಎಂದೆಲ್ಲಾ ಇತರ ರೂಪಗಳಿವೆ. ಕೆಲವಡೆ ಕರ್ಣಾಟಕ ಎಂಬ ಶಬ್ದವು ಉಲ್ಲೇಖವಾಗಿದೆ." (ಮಲ್ಲಪ್ಪ ಪಿ: ೨೦೦೮:೩). ಈ ರೀತಿಯಾಗಿ ಸುಮಾರು ೨೦೦೦ ವರ್ಷಗಳ ಹಿಂದಿನಿಂದಲೂ 'ಕರ್ನಾಟಕ'ವೆಂಬ ಶಬ್ದವು ಬಳಕೆಯಲ್ಲಿರುವುದು ತಿಳಿದುಬಂದಿದೆ.

### ರಾಜ್ಯ ನೆಲೆಗೊಂಡಿರುವ ಸ್ಥಳ

"ಕರ್ನಾಟಕ ರಾಜ್ಯವು ಸರಿಸುಮಾರು ೧೧° ೩೫ ರಿಂದ ೧೮° ೩೦ ಉತ್ತರ ಅಕ್ಷಾಂಶ ಮತ್ತು ೭೪° ೦೫ ರಿಂದ ೭೮° ೪೦ರ ಪೂರ್ವ ರೇಖಾಂಶಗಳ ನಡುವೆ ನೆಲೆಗೊಂಡಿರುವ ಪ್ರಸ್ಥಭೂಮಿಯ ಭಾಗವಾಗಿದೆ. ಇಲ್ಲಿಯ ಪಶ್ಚಿಮ ಮತ್ತು ಪೂರ್ವಘಟ್ಟ ಶ್ರೇಣಿಗಳು ನೀಲಗಿರಿ ಪರ್ವತ ಶ್ರೇಣಿಗಳೊಡನೆ ಕೂಡಿಕೊಳ್ಳುತ್ತವೆ. ರಾಜ್ಯವು ದಕ್ಷಿಣ ಭಾರತದ ಡೆಕ್ಕನ್ ಪ್ರಸ್ಥಭೂಮಿ ಪ್ರದೇಶದ ಪಶ್ಚಿಮ ಭಾಗದಲ್ಲಿದೆ" (ಅನೀಸ್ ಸಿರಾಜ್ ಎಸ್:೨೦೧೧:೬). ರಾಜ್ಯದ ಪಶ್ಚಿಮಕ್ಕೆ ಅರಬ್ಬೀ ಸಮುದ್ರವಿದೆ. ವಾಯುವ್ಯದಲ್ಲಿ ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳಿವೆ. ಉತ್ತರದಲ್ಲಿ ಮಹಾರಾಷ್ಟ್ರ, ಪೂರ್ವದಲ್ಲಿ ಆಂಧ್ರ ಪ್ರದೇಶ, ನೈರುತ್ಯದಲ್ಲಿ ಕೇರಳ, ದಕ್ಷಿಣದಲ್ಲಿ ಕೇರಳ ಮತ್ತು ತಮಿಳುನಾಡು ರಾಜ್ಯಗಳಿವೆ. ಉತ್ತರ ದಕ್ಷಿಣವಾಗಿ ರಾಜ್ಯವು ಸುಮಾರು ೭೫೦ ಕಿ.ಮಿ ಮತ್ತು ಪೂರ್ವ-ಪಶ್ಚಿಮವಾಗಿ ಸು. ೪೦೦ ಕಿ.ಮಿ ವಿಸ್ತರಿಸಿದ್ದು ಒಟ್ಟು ಸುಮಾರು ೧,೯೧,೭೯೧ ಚದರ ಕಿಲೋಮೀಟರ ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ.

### ಕರ್ನಾಟಕ ರಾಜ್ಯದ ಇತಿಹಾಸ

"ಕರ್ನಾಟಕಕ್ಕೆ ಭಾರತದಲ್ಲೇ ಉಜ್ವಲವಾದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆ ಇದೆ. ಕರ್ನಾಟಕದ ಹೆಸರು ವ್ಯಾಸ ಮಹಾಭಾರತದಲ್ಲೇ ಉಲ್ಲೇಖವಾಗಿದೆ. ಕರಿಯ ಮಣ್ಣಿನ ನಾಡು ಎಂಬರ್ಥದ ಪದಗಳು ಸೇರಿ ಕರ್ನಾಟಕ ಎಂದಾಗಿದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. 'ಕರುನಾಡು' ಅಥವಾ ಎತ್ತರದ ಭೂಮಿ ಇರುವ ನಾಡು ಎಂಬುದೇ ಕರ್ನಾಟಕ ಆಗಿದೆ ಎಂದು ಹೇಳುವವರಿದ್ದಾರೆ.

ಕ್ರಿ.ಪೂ. ೩ನೇ ಶತಮಾನದಲ್ಲಿ ಮೌರ್ಯರ ಅಶೋಕನ ಆಳ್ವಿಕೆಗೆ ಕರ್ನಾಟಕದ ಬಹುಭಾಗ ಒಳಪಟ್ಟಿದ್ದು, ಆ ಚಕ್ರವರ್ತಿಯ ಎಂಟು ಶಾಸನಗಳು ಕರ್ನಾಟಕದಲ್ಲಿ ಸಿಕ್ಕಿವೆ.(ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಕೊಪ್ಪಳಗಳಲ್ಲಿ ಒಟ್ಟು ಮೂರು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಸಿದ್ಧಾಪುರಗಳಲ್ಲಿ ಮೂರು, ಬಳ್ಳಾರಿ ಜಿಲ್ಲೆಯ ನಿಟ್ಟೂರು, ಉದಗೋಳಗಳಲ್ಲಿ ಎರಡು. ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಬರುವ 'ಇಸಿಲ' (ಕೋಟೆ ಇರುವ ಊರು) ಎಂಬ ಸ್ಥಳನಾಮವೇ ತೇದಿಯಿರುವ ಕನ್ನಡ ಭಾಷೆಯ ಮೊದಲ ಪದ" (ಶೇಷಗಿರಿರಾವ ಎಲ್ ಎಸ್ ಚನ್ನಬಸಪ್ಪ ಗೊರು ಚಂದ್ರಶೇಖರ ರಾ ನಂ: ೨೦೦೬:೩೫). ಕ್ರಿ.ಶ. ೧೭೯೯ರಲ್ಲಿ ಟಿಪ್ಪು ಸುಲ್ತಾನನ ಅವನತಿಯ ನಂತರ ಹಳೆ ಮೈಸೂರು ಪ್ರಾಂತ್ಯವು ಅಸ್ತಿತ್ವಕ್ಕೆ ಬಂದಿತು. ೧೮೮೧ರ ವೇಳೆಗೆ ಬೆಂಗಳೂರು, ಮೈಸೂರು, ಕೋಲಾರ, ಕಡೂರು, ತುಮಕೂರು, ಚಿತ್ರದುರ್ಗ, ಮತ್ತು ಶಿವಮೊಗ್ಗವೆಂಬ ೭ ಜಿಲ್ಲೆಗಳನ್ನೊಳಗೊಂಡಿತ್ತು. ೧೮೮೬ರಲ್ಲಿ ಹಾಸನ ಜಿಲ್ಲೆ ಮತ್ತು ೧೯೩೯ರಲ್ಲಿ ಮಂಡ್ಯ ಜಿಲ್ಲೆಗಳು ರೂಪಿತಗೊಂಡು ಒಟ್ಟು ೯ ಜಿಲ್ಲೆಗಳನ್ನೊಳಗೊಂಡ ಪ್ರಾಂತ್ಯವಾಗಿ ಪರಿಣಮಿಸಿತು. ೧೯೫೬ರ ಭಾಷಾವಾರು ರಾಜ್ಯ ಪುನರ್ ವಿಂಗಡಣೆಯ ಫಲವಾಗಿ ನಮ್ಮ ರಾಜ್ಯದ ಭೌಗೋಳಿಕ ಮೇರೆಗಳು ಮತ್ತು ವಿಸ್ತೀರ್ಣಗಳೆರಡೂ ಮಾರ್ಪಾಡುಗೊಂಡವು, ಅದರೊಂದಿಗೆ ರಾಜ್ಯದ ಕ್ಷೇತ್ರ ಮತ್ತು ಜನಸಂಖ್ಯೆಗಳೆರಡರಲ್ಲೂ ಹೆಚ್ಚಳ ಉಂಟಾಯಿತು.

ಪ್ರಸಕ್ತ ಕರ್ನಾಟಕ ರಾಜ್ಯವು ಈ ಹಿಂದೆ ಬೇರೆ ಬೇರೆ ಪ್ರಾಂತಗಳಲ್ಲಿ ಹರಿದು ಹಂಚಿ ಹೋಗಿತ್ತು. ರಾಜ್ಯ ಪುನರ್‌ವಿಂಗಡಣಾ ಕಾಯಿದೆಯು ಕನ್ನಡ ಭಾಷೆ ಮಾತನಾಡುವವರನ್ನೆಲ್ಲಾ ಒಟ್ಟುಗೂಡಿಸಿತು. ಮುಂಬೈ ಕರ್ನಾಟಕ ಪ್ರಾಂತ್ಯದಿಂದ ಬೆಳಗಾವಿ, ಬಿಜಾಪುರ, ಧಾರವಾಡ, ಮತ್ತು ಉತ್ತರ ಕನ್ನಡ ಜಿಲ್ಲೆಗಳು, ಮದ್ರಾಸು ಕರ್ನಾಟಕ ಪ್ರಾಂತ್ಯದಿಂದ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೋಯಿಮುತ್ತೂರು ಜಿಲ್ಲೆಗೆ ಸೇರಿದ ಕೊಳ್ಳೆಗಾಲದ ತಾಲೂಕುಗಳು, ಹೈದ್ರಾಬಾದ್ ಕರ್ನಾಟಕ ಪ್ರಾಂತ್ಯದಿಂದ ಕಲಬುರ್ಗಿ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳು ಹಾಗೂ ಕೊಡಗು ಪ್ರಾಂತ್ಯವೂ ಸೇರಿಕೊಂಡಿದ್ದಿತು. ಪರಿಣಾಮವಾಗಿ ೧೯೫೬ನೇ ನವೆಂಬರ್ ೧ ರಿಂದ 'ವಿಶಾಲ ಮೈಸೂರು' ಉದಯವಾಯಿತು. ಇದಾದ ೧೭ ವರ್ಷಗಳು ಉರುಳಿದ ಮೇಲೆ ೧೯೭೩ ನವೆಂಬರ್ ೧ ರಂದು ನಮ್ಮ ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣ ಮಾಡಲಾಯಿತು.

**ಕೃಷಿ**

ಕೃಷಿ ರಾಜ್ಯದ ಆರ್ಥಿಕತೆಗೆ ತನ್ನದೇ ಆದ ಬೆಂಬಲವನ್ನು ನೀಡುತ್ತಿದೆ. ಕರ್ನಾಟಕದಲ್ಲಿ ಶೇ. ೬೯ ಜನರು ಕೃಷಿ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಬೆಳೆಗೆ ಉಪಯೋಗಿಸ ಲಾಗಿರುವ ಭೂಮಿಯ ವಿಸ್ತೀರ್ಣ ಮತ್ತಿತರ ವಿಷಯಗಳನ್ನು ಗ್ರಾಮ ಲೆಕ್ಕಿಗರು ಸರ್ವೆ ನಂಬರುಗಳ ಪ್ರಕಾರ ಆರ್ ಟಿ ಸಿ ಗಳಲ್ಲಿ ನಮೂದಿಸುತ್ತಾರೆ. ಈ ರಾಜ್ಯದಲ್ಲಿ ಬೆಳೆಯುವ ಬೆಳೆಗಳೆಂದರೆ ಏಕದಳ ಧಾನ್ಯಗಳು, ದ್ವಿದಳ ಧಾನ್ಯಗಳು, ಎಣ್ಣೆ ಕಾಳುಗಳು ಮತ್ತು ವಾಣಿಜ್ಯ ಬೆಳೆಗಳು ಮುಂತಾದವುಗಳು.

**ಸಾಕ್ಷರತೆ**

ಸಾಕ್ಷರ ಅಥವಾ ಅಕ್ಷರಸ್ಥರೆಂದರೆ, ಭಾಷೆಯೊಂದನ್ನು ಅರ್ಥ ಮಾಡಿಕೊಂಡು ಓದಿ ಬರೆಯುವ ಸಾಮರ್ಥ್ಯವುಳ್ಳ ಏಳುವರ್ಷ ಮತ್ತು ಅದಕ್ಕಿಂತ ಹೆಚ್ಚಿನ ವಯೋಮಾನದ ವ್ಯಕ್ತಿ ಎಂದರ್ಥ. ೨೦೧೧ರ ಜನಗಣತಿಯಂತೆ ರಾಜ್ಯದ ಸಾಕ್ಷರರ ಪ್ರಮಾಣ ೭೫.೩೬ ಪ್ರತಿಶತವಾಗಿದೆ. ಇದರಲ್ಲಿ ಕ್ರಮವಾಗಿ ಪುರುಷರು ಶೇ. ೮೩ರಷ್ಟು ಹಾಗೂ ಮಹಿಳೆಯರು ಶೇ. ೬೮ ರಷ್ಟಿದ್ದಾರೆ.

**ಜನತೆ**

ಯಾವುದೇ ಪ್ರದೇಶ ಅಥವಾ ರಾಜ್ಯದ ಆರ್ಥಿಕಾಭಿವೃದ್ಧಿಯು ಜನಸಂಖ್ಯೆಯ ಗಾತ್ರ ಮತ್ತು ಗುಣಮಟ್ಟವನ್ನಾಧರಿಸಿರುತ್ತದೆ. ಎಲ್ಲಾ ಸಂಪನ್ಮೂಲಗಳಲ್ಲಿ ಮಾನವ ಸಂಪನ್ಮೂಲ ಅತ್ಯಮೂಲ್ಯವಾದದ್ದು. ಉತ್ತಮ ಗುಣಮಟ್ಟವುಳ್ಳ ಮಿತವಾದ ಜನಸಂಖ್ಯೆಯು ಸಂಪತ್ತಾಗಿ ಪರಿಣಮಿಸಬಲ್ಲದು. ೨೦೧೧ರ ಜನಗಣತಿಯಂತೆ ಕರ್ನಾಟಕದ ಒಟ್ಟು ಜನಸಂಖ್ಯೆ ೬,೧೦,೯೫,೨೯೭ ಇದ್ದು, ಇದರಲ್ಲಿ ೩,೦೯,೬೬,೬೫೭ ಪುರುಷರು ಹಾಗೂ ೩,೦೧,೨೮,೬೪೦ ಮಹಿಳೆಯರ ಪ್ರಮಾಣವಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ೩,೭೪,೬೯,೩೩೫ ಅಂದರೆ ಶೇ. ೬೧.೩೩ರಷ್ಟು ಹಾಗೂ ನಗರ ಪ್ರದೇಶಗಳಲ್ಲಿ ೨,೩೬,೨೫,೯೬೨ ಅಂದರೆ ಶೇ. ೩೮.೬೭ರಷ್ಟು ಜನರು ವಾಸಿಸುತ್ತಿರುವುದು ಕಂಡುಬರುತ್ತದೆ. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಬೆಂಗಳೂರು ಜಿಲ್ಲೆ ೯೬,೨೧,೫೫೧ ಜನಸಂಖ್ಯೆಯೊಂದಿಗೆ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೫.೭೫ರಷ್ಟು ಪಾಲುದಾರಿಕೆಯೊಂದಿಗೆ ಪ್ರಥಮ ಸ್ಥಾನದಲ್ಲಿದೆ.

ಕೊಡಗು ಜಿಲ್ಲೆಯು ೫,೫೪,೫೧೯ ಜನಸಂಖ್ಯೆಯೊಂದಿಗೆ ಶೇ. ೦.೯೧ರಷ್ಟು ಪಾಲುದಾರಿಕೆಯನ್ನು ಹೊಂದಿ ಕೊನೆಯ ಸ್ಥಾನದಲ್ಲಿದ್ದು, ಕಡಿಮೆ ಜನಸಂಖ್ಯೆಯುಳ್ಳ ಜಿಲ್ಲೆಯೆನಿಸಿದೆ. ೨೦೦೧ ರಿಂದ ೨೦೧೧ರ ದಶಕದಲ್ಲಿ ರಾಜ್ಯದ ಜನಸಂಖ್ಯೆಯ ಏರಿಕೆ ಪ್ರಮಾಣ ೮೨,೪೪,೭೩೫ರಷ್ಟು ಇದ್ದು, ಇದರಲ್ಲಿ ಪುರುಷರ ಪ್ರಮಾಣ ೪೦,೬೭,೭೩೯ ಹಾಗೂ ಮಹಿಳೆಯರ ಪ್ರಮಾಣ ೪೧,೭೬,೯೯೬ರಷ್ಟು ಏರಿಕೆಯಾಗಿರುವುದು ಕಂಡುಬರುತ್ತದೆ.

**ಕರ್ನಾಟಕದಲ್ಲಿ ಲಂಬಾಣಿಗರ ಜನಸಂಖ್ಯೆಯ ವಿವರ**

ಕರ್ನಾಟಕದ ಲಂಬಾಣಿಗರು ತಮ್ಮದೇ ಆದ ಸ್ವತಂತ್ರ್ಯ ವಾಸಸ್ಥಾನಗಳಾದ ತಾಂಡಾಗಳನ್ನು ರಚಿಸಿಕೊಂಡು ಜೀವಿಸುತ್ತಿದ್ದರೂ ಕೂಡ ತಾಂಡಾಗಳಿಗೆ ಪ್ರತ್ಯೇಕ ಹಳ್ಳಿಯ ಸ್ಥಾನಮಾನಗಳಿಲ್ಲ. ಸಮೀಪದ ಗ್ರಾಮಗಳಿಂದಲೇ ತಾಂಡಾಗಳನ್ನು ಗುರುತಿಸುವುದರಿಂದ ಹಾಗೂ ತಾಂಡಾಗಳನ್ನು ಗ್ರಾಮಗಳ ಭಾಗವೆಂದು ಪರಿಗಣಿಸುವುದರಿಂದ, ಅಲ್ಲದೇ ಲಂಬಾಣಿಗರು ಹೆಚ್ಚಾಗಿ ವಲಸೆ ಹೋಗುವು ದರಿಂದ ಜನಗಣತಿಯ ವರದಿಯಲ್ಲಿ ಲಂಬಾಣಿಗರ ಜನಸಂಖ್ಯೆ ಸ್ಪಷ್ಟವಾಗಿ ನಮೂದಾಗುವುದಿಲ್ಲ. ಸ್ವಾತಂತ್ರ್ಯ ನಂತರದ ವರ್ಷಗಳಲ್ಲಿ ೧೯೭೨ರ ಹೊತ್ತಿಗೆ ಆಗಿನ ಕರ್ನಾಟಕ ರಾಜ್ಯದ ಮುಖ್ಯಮಂತ್ರಿ ಗಳಾಗಿದ್ದ ದೇವರಾಜ ಅರಸರು ವಹಿಸಿದ ಆಸಕ್ತಿಯಿಂದ ೮-೮-೧೯೭೨ರಲ್ಲಿ ನೇಮಕಗೊಂಡ ಎಲ್.ಜಿ. ಹಾವನೂರ ಆಯೋಗವು ತನ್ನ ದೀರ್ಘವಾದ ವರದಿಯನ್ನು ೯-೧೧-೧೯೭೫ರಂದು ಮಂಡಿಸಿತು. ಈ ವರದಿಯಂತೆ "ಕರ್ನಾಟಕ ರಾಜ್ಯದ ಲಂಬಾಣಿಗರ ಒಟ್ಟು ಜನಸಂಖ್ಯೆ ೩,೫೩,೮೮೨" (ಹಾವನೂರ ಎಲ್.ಜಿ:೧೯೭೫:೨೦) ಎಂದು ಉಲ್ಲೇಖಿಸಲಾಗಿದೆ. ಈ ಅಂಕಿ ಸಂಖ್ಯೆ ಕೂಡ ೧೯೭೧ರ ಜನಗಣತಿಯ ವರದಿಯನ್ನು ಅವಲಂಬಿಸಿ ಮಾಡಿದ ಅಂದಾಜು ಪಟ್ಟಿಯಾಗಿದೆ ಎಂದು ಡಾ ಪಿ ಕೆ ಖಂಡೋಬಾರವರು ಅಭಿಪ್ರಾಯಪಟ್ಟಿದ್ದಾರೆ.

೧೯೯೬-೯೭ರಲ್ಲಿ ಅಖಿಲ ಕರ್ನಾಟಕ ಬಂಜಾರಾ ವಿದ್ಯಾರ್ಥಿ ವೇದಿಕೆಯು ಕರ್ನಾಟಕದಲ್ಲಿಯ ಲಂಬಾಣಿಗರ ಜನಸಂಖ್ಯೆಯನ್ನು ಕಲೆ ಹಾಕುವ ಉದ್ದೇಶದಿಂದ ಕರ್ನಾಟಕದ ಕೊಡಗು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯನ್ನು ಹೊರತು ಪಡಿಸಿ, ಉಳಿದೆಲ್ಲ ಜಿಲ್ಲೆಗಳಲ್ಲಿ ಸಂಚರಿಸಿ ಲಂಬಾಣಿಗರ ಜನಸಂಖ್ಯೆಯನ್ನು ದಾಖಲಿಸಿದೆ. ಕರ್ನಾಟಕ ಬಂಜಾರಾ ಕೈಪಿಡಿಯಂತೆ ಕರ್ನಾಟದ ಲಂಬಾಣಿಗರ ಜಿಲ್ಲಾವಾರು ಜನಸಂಖ್ಯೆ ಈ ರೀತಿಯಾಗಿದೆ.

"ಬೆಂಗಳೂರು – ೫೩,೧೮೫

ಬೆಳಗಾಂ – ೨೮,೨೨೦

ಬಳ್ಳಾರಿ – ೧,೧೩,೯೯೨

ಬಿಜಾಪುರ – ೨,೪೪,೫೬೩

ಚಿಕ್ಕಮಗಳೂರು – ೫೯,೮೨೪

ಧಾರವಾಡ – ೧,೨೮,೮೦೧

ಗುಲಬರ್ಗಾ – ೨,೬೮,೫೪೪

ಹಾಸನ – ೨೬,೯೭೦

ಕೋಲಾರ – ೧೦,೭೮೯

ಮಂಡ್ಯ – ೨,೨೮೯

ಮೈಸೂರು – ೨೦,೨೮೭

ರಾಯಚೂರು – ೧,೦೫,೯೮೦

ಶಿವಮೊಗ್ಗ – ೧,೫೯,೮೩೬

ತುಮಕೂರ – ೬೫,೨೧೨

ಉತ್ತರ ಕನ್ನಡ – ೬,೩೫೯" (ಅಖಿಲ ಕರ್ನಾಟಕ ಬಂಜಾರಾ ವಿದ್ಯಾರ್ಥಿ ವೇದಿಕೆ (ರಿ): ೧೯೯೭:೬೦). ಈ ಮೇಲಿನ ಅಂಕಿಸಂಖ್ಯೆಯನ್ನು ಗಮನಿಸಿದಾಗ ಗುಲಬರ್ಗಾ, ಬಿಜಾಪೂರ, ಶಿವಮೊಗ್ಗ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ಪ್ರಮಾಣದ ಲಂಬಾಣಿಗರು ವಾಸಿಸುತ್ತಿರುವುದು ಸ್ಪಷ್ಟವಾಗುತ್ತದೆ. ಅದರಂತೆ ಮಂಡ್ಯ, ಉತ್ತರ ಕನ್ನಡ, ಕೋಲಾರ ಮತ್ತು ಮೈಸೂರು ಜಿಲ್ಲೆಗಳಲ್ಲಿ ಅತಿ ಕಡಿಮೆ ಪ್ರಮಾಣದ ಲಂಬಾಣಿಗರು ವಾಸಿಸುತ್ತಿರುವುದು ಗೋಚರಿಸುತ್ತದೆ. ಬಂಜಾರಾ ಕೈಪಿಡಿಯಂತೆ ಕರ್ನಾಟಕದಾದ್ಯಂತ ಲಂಬಾಣಿಗರ ಒಟ್ಟು ಸಂಖ್ಯೆ ೧೪೯೬೦೭೮ ಇರುವುದು ಕಂಡುಬರುತ್ತದೆ.

೨೦೦೧ರ ಜನಗಣತಿಯಂತೆ ಕರ್ನಾಟಕ ರಾಜ್ಯದಲ್ಲಿ ವಾಸಿಸುತ್ತಿರುವ ಲಂಬಾಣಿಗರ ಜಿಲ್ಲಾವಾರು ಜನಸಂಖ್ಯೆ ಈ ರೀತಿಯಾಗಿದೆ.

**ಕೋಷ್ಟಕ ೨.೧. ಕರ್ನಾಟಕ ರಾಜ್ಯದ ಲಂಬಾಣಿಗರ ಜಿಲ್ಲಾವಾರು ೨೦೦೧ರ ಜನಸಂಖ್ಯಾ ವಿವರ**

| ಜಿಲ್ಲೆ | ಪುರುಷರ ಸಂಖ್ಯೆ | ಮಹಿಳೆಯರ ಸಂಖ್ಯೆ | ಒಟ್ಟು |
|---|---|---|---|
| ೧. ಬೆಳಗಾವಿ | ೧೧,೬೦೫ | ೧೦,೭೧೦ | ೨೨,೩೧೫ |
| ೨. ಬಾಗಲಕೋಟ | ೨೦,೧೭೧ | ೧೯,೧೫೮ | ೩೯,೩೨೯ |
| ೩. ಬಿಜಾಪುರ | ೬೧,೪೫೭ | ೫೬,೦೦೯ | ೧,೧೭,೪೬೬ |
| ೪. ಗುಲಬರ್ಗಾ | ೧,೦೬,೭೧೬ | ೧,೦೦,೪೪೧ | ೨,೦೭,೧೫೭ |
| ೫. ಬೀದರ್ | ೨೪,೩೨೦ | ೨೨,೭೦೨ | ೪೭,೦೨೨ |
| ೬. ರಾಯಚೂರ | ೨೨,೨೬೩ | ೨೦,೯೦೪ | ೪೩,೧೬೭ |

| | | | |
|---|---|---|---|
| ೭. ಕೊಪ್ಪಳ | ೧೫,೯೪೦ | ೧೫,೨೦೩ | ೩೧,೧೪೩ |
| ೮. ಗದಗ | ೧೯,೬೬೯ | ೧೮,೪೯೨ | ೩೮,೧೮೪ |
| ೯. ಧಾರವಾಡ | ೫,೨೧೬ | ೪,೮೧೬ | ೧೦,೦೩೨ |
| ೧೦. ಉತ್ತರ ಕನ್ನಡ | ೩,೬೯೦ | ೩,೪೪೨ | ೭,೧೩೨ |
| ೧೧. ಹಾವೇರಿ | ೨೨,೬೫೩ | ೨೦,೯೦೫ | ೪೩,೫೫೮ |
| ೧೨. ಬಳ್ಳಾರಿ | ೩೩,೯೨೦ | ೩೧,೮೮೫ | ೬೫,೮೦೫ |
| ೧೩. ಚಿತ್ರದುರ್ಗ | ೨೩,೭೫೪ | ೨೨,೯೮೯ | ೪೬,೭೪೩ |
| ೧೪. ದಾವಣಗೆರೆ | ೪೬,೯೭೬ | ೪೪,೦೯೨ | ೯೧,೦೬೮ |
| ೧೫. ಶಿವಮೊಗ್ಗ | ೨೫,೩೩೯ | ೨೪,೫೫೦ | ೪೯,೮೮೯ |
| ೧೬. ಉಡುಪಿ | ೪೬೭ | ೪೪೨ | ೯೦೯ |
| ೧೭. ಚಿಕ್ಕಮಗಳೂರು | ೧೮,೦೦೨ | ೧೭,೭೦೫ | ೩೫,೭೦೭ |
| ೧೮. ತುಮಕೂರು | ೧೮,೩೧೪ | ೧೭,೨೦೦ | ೩೫,೫೧೪ |
| ೧೯. ಕೋಲಾರ | ೪,೩೭೦ | ೪,೨೫೪ | ೮,೬೨೪ |
| ೨೦. ಬೆಂಗಳೂರು | ೪,೭೭೬ | ೪,೦೨೧ | ೮,೭೯೭ |
| ೨೧. ಬೆಂಗಳೂರು ಗ್ರಾಮಾಂತರ | ೯,೭೪೨ | ೮,೯೦೪ | ೧೮,೬೪೬ |
| ೨೩. ಮಂಡ್ಯ | ೫೨೧ | ೫೦೩ | ೧,೦೨೪ |
| ೨೪. ಹಾಸನ | ೯,೦೫೩ | ೮,೮೫೬ | ೧೭,೯೦೯ |
| ೨೫. ದಕ್ಷಿಣ ಕನ್ನಡ | ೪೧೦ | ೩೧೪ | ೭೨೪ |
| ೨೫. ಕೊಡಗು | ೨೩೯ | ೨೪೬ | ೪೮೫ |
| ೨೬. ಮೈಸೂರು | ೧,೦೫೩ | ೯೭೮ | ೨,೦೩೧ |
| ೨೭. ಚಾಮರಾಜ ನಗರ | ೩,೮೩೨ | ೩,೧೨೬ | ೬,೯೫೮ |

(ಮೂಲ: ೨೦೦೧ರ ಭಾರತೀಯ ಜನಗಣತಿ)

ಈ ಮೇಲಿನ ಅಂಕಿ ಸಂಖ್ಯೆಗಳನ್ನು ಗಮನಿಸಿದಾಗ ಗುಲಬರ್ಗಾ, ಬಿಜಾಪೂರ ಹಾಗೂ ದಾವಣಗೆರೆ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ಲಂಬಾಣಿಗರು ವಾಸಿಸುತ್ತಿರುವುದು ಕಂಡುಬರುತ್ತದೆ. ಅದರಂತೆ ಕೊಡಗು, ದಕ್ಷಿಣ ಕನ್ನಡ, ಉಡುಪಿ ಹಾಗೂ ಮಂಡ್ಯ ಜಿಲ್ಲೆಗಳಲ್ಲಿ ಅತಿ ಕಡಿಮೆ ಸಂಖ್ಯೆಯ ಲಂಬಾಣಿಗರು ವಾಸಿಸುತ್ತಿದ್ದಾರೆ. ಕರ್ನಾಟಕದಾದ್ಯಂತ ವಾಸಿಸುತ್ತಿರುವ ಲಂಬಾಣಿಗರ ಒಟ್ಟು ಜನಸಂಖ್ಯೆ ೯,೯೭,೩೩೮ ಇದೆ. ಇದರಲ್ಲಿ ೫,೧೪,೪೯೧ ಪುರುಷರು ಹಾಗೂ ೪,೮೨,೮೪೭ ಮಹಿಳೆಯರ ಸಂಖ್ಯಾ ಪ್ರಮಾಣವಾಗಿದೆ. ೧೯೯೧ರ ಜನಗಣತಿಯಂತೆ ಕರ್ನಾಟಕದ ಲಂಬಾಣಿಗರ ಒಟ್ಟು ಸಂಖ್ಯೆ ೮,೭೩,೫೦೫ ಆಗಿದ್ದು ೨೦೦೧ ಜನಗಣತಿಗೆ ಹೋಲಿಸಿದಾಗ ೧,೭೩,೮೩೩ರಷ್ಟು ಜನಸಂಖ್ಯೆ ಬೆಳವಣಿಗೆ ಹೊಂದಿರುವುದು ಸ್ಪಷ್ಟವಾಗುತ್ತದೆ. ೨೦೧೧ರ ಜನಗಣತಿಯಂತೆ ಕರ್ನಾಟಕ ರಾಜ್ಯದಲ್ಲಿ ವಾಸಿಸುತ್ತಿರುವ ಲಂಬಾಣಿಗರ ಒಟ್ಟು ಜನಸಂಖ್ಯೆ ೧೨,೬೭,೦೩೬ ಇದೆ. ಅದರಲ್ಲಿ ೬,೫೦,೮೧೫ ಪುರುಷರು ಹಾಗೂ ೬,೧೬,೨೨೧ ಮಹಿಳೆಯರಿದ್ದಾರೆ.

### ೨.೧.೧. ಗುಲಬರ್ಗಾ ಜಿಲ್ಲೆಯ ಕಿರುನೋಟ

**ಪೀಠಿಕೆ:** "ವಿಸ್ತೀರ್ಣದಲ್ಲಿ ರಾಜ್ಯದ ೨ನೇ ದೊಡ್ಡ ಜಿಲ್ಲೆಯಾಗಿರುವ"(ಕರ್ನಾಟಕ ಅಂಕಿ ಅಂಶಗಳ ನೋಟ೨೦೦೯-೧೦:೨೦೧೧:೧೫). ಈ ಪ್ರದೇಶ ವೈವಿಧ್ಯಮಯವಾದ ಸಂಪತ್ತುಗಳಿಂದ ಕೂಡಿದ ಹಿಂದುಳಿದ ಪ್ರದೇಶ ಎಂದು ಹೇಳಬಹುದಾಗಿದೆ. ಇಂದು ಆರ್ಥಿಕ ಮಾನದಂಡಗಳಿಂದ ಕರ್ನಾಟಕದ ಇತರೆ ಜಿಲ್ಲೆಗಳಿಗೆ ಹೋಲಿಸಿದರೆ ಹಿಂದುಳಿದ ಪ್ರದೇಶವೆಂಬ ಭಾವನೆ ಇದ್ದರೂ ತನ್ನದೇ ಆದ ಉಜ್ವಲ ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಜಾನಪದೀಯ ಪರಂಪರೆಗಳನ್ನು ಹೊಂದಿದೆ. ಈ ಜಿಲ್ಲೆಯು ರಾಜ್ಯದ ತೊಗರಿಯ ಕಣಜ, ಸಿಮೆಂಟ್‌ನ ಅಕ್ಷಯ ಪಾತ್ರೆಯಾಗಿ ರಾಜ್ಯದ ಆರ್ಥಿಕ ಸಮೃದ್ಧತೆಯ ಸಂಕೇತಗಳಾಗಿರುವಂತೆ, ಜಿಲ್ಲೆಯ ಸಾಕಷ್ಟು ಪ್ರೇಕ್ಷಣೀಯ ಸ್ಥಳಗಳು ಮತೀಯ ಸಾಮರಸ್ಯಕ್ಕೆ, ಹಿಂದೂ, ಮುಸ್ಲಿಂ ಭಾವೈಕ್ಯತೆಗೆ ಸಾಕ್ಷಾಧಾರಗಳಾಗಿ ಇಂದಿಗೂ ಜನಮನದಲ್ಲಿ ಅಚ್ಚಳಿಯದೇ ಉಳಿದಿವೆ.

ಹಳೆಯ ಮೈಸೂರು ರಾಜ್ಯವು ೧೯೫೬ರಲ್ಲಿ ಪುನರ್‌ರಚನೆಗೊಂಡಾಗ ಹೈದ್ರಾಬಾದ್ ಸಂಸ್ಥಾನದಿಂದ ರಾಜ್ಯಕ್ಕೆ ವರ್ಗಾವಣೆಗೊಂಡ ಮೂರು ಜಿಲ್ಲೆಗಳ ಪೈಕಿ ಗುಲಬರ್ಗಾ ಒಂದಾಗಿದೆ. ಈ ಮೂರೂ ಜಿಲ್ಲೆಗಳ ಗುಂಪನ್ನು ಇಂದಿಗೂ 'ಹೈದ್ರಾಬಾದ್ ಕರ್ನಾಟಕ ಪ್ರದೇಶ' ಎಂತಲೇ ಕರೆಯಲಾಗುತ್ತಿದೆ. ಈ 'ಹಿಂದುಳಿದ ಪ್ರದೇಶ' ಎಂಬ ಹಣೆಪಟ್ಟಿಯನ್ನು ೩೭೧(ಜೆ) ಕಲಂನ ಜಾರಿಯಿಂದ ಅಳಿಯುವ ಕಾಲ ಬಂದಿದ್ದು ಈ ಭಾಗದ ಜನರ ಸುದೈವವಾಗಿದೆ.

**ಹೆಸರಿನ ಮೂಲ**

"ಗುಲಬರ್ಗಾವನ್ನು ಕಲಬುರ್ಗಿ ಮತ್ತು ಗುಲಬರ್ಗಾ ಎಂಬ ಎರಡು ಪರ್ಯಾಯ ಹೆಸರು ಗಳಿಂದ ಕರೆಯಲಾಗುತ್ತದೆ. ಇದು ಐತಿಹಾಸಿಕವಾಗಿ ಸು. ಕ್ರಿ.ಶ. ೧೨-೧೩ನೇ ಶತಮಾನದ ಚಿನಮಳ್ಳಿ ಶಿಲಾಶಾಸನದಲ್ಲಿ 'ಕಲಂಬರಿಗೆ' ಎಂದು ಉಲ್ಲೇಖಿತಗೊಂಡಿದೆ. ಬೀದರ್ ಜಿಲ್ಲೆಯ ಶಾಸನ ಒಂದರಲ್ಲಿ

ಇದೇ ರೂಪ ದಾಖಲಾಗಿದ್ದು, ಇವು ಗುಲಬರ್ಗಾದ ಪ್ರಾಚೀನ ರೂಪಗಳಾಗಿವೆ. ಕ್ರಿ.ಶ. ೧೯೩೭ರ ಬೇಲೂರು ಶಾಸನ ಹಾಗೂ ೧೫೩೭ರ ಶಿರವಾಳದ ಶಿಲಾಶಾಸನಗಳಲ್ಲಿ ಇದು ಕ್ರಮವಾಗಿ 'ಕಲುಬರಗೆ' ಹಾಗೂ 'ಕಲಬುರಿಗೆ' ಎಂದು ದಾಖಲಾಗಿದೆ. ವಿಜಯನಗರಕ್ಕೆ ಬಂದಿದ್ದ ಪರ್ಶಿಯನ್ ರಾಯಭಾರಿ ರಝಾಕನು ಇದನ್ನು 'ಕಲಬುರ್ಗ್' ಎಂದೇ ಹೇಳಿದ್ದಾನೆ. ಗುಲಬರ್ಗಾ ಎಂಬ ನಾಮಪದದ ನಿಷ್ಪತ್ತಿಗೆ ಸಂಬಂಧಿಸಿದಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗುಲಬರ್ಗಾ ಎಂಬುದು ಹೆಚ್ಚು ಕಡಿಮೆ ಕಲಬುರಗಿ ಪದದ ಫಾರಸೀಕರಣವಾಗಿದ್ದು, ಫಾರಸಿಯಲ್ಲಿ 'ಗುಲ್' ಎಂದರೆ ಹೂವು, 'ಬರ್ಗ್' ಎಂದರೆ 'ಎಲೆ' ಎಂಬ ಅರ್ಥವಿದೆ. 'ಕಲಬುರಗಿ' ಎಂಬ ಅಚ್ಚ ಕನ್ನಡ ರೂಪವೇ ಮಹಮದೀಯರಿಗೆ ಮೊದಮೊದಲು 'ಕಲಬುರ್ಗ್' ಎಂದೆನಿಸಿ ಮುಂದೆ ಅದೇ 'ಗುಲಬರ್ಗಾ' ಎಂದಾದಂತೆ ತೋರುತ್ತದೆ. ಒಟ್ಟಿನಲ್ಲಿ ಕಲಬುರ್ಗಿ ಎಂಬ ಹೆಸರು ಕ್ರಿ.ಶ. ೧೬ನೇ ಶತಮಾನದವರೆಗೂ ರೂಢಿಯಲ್ಲಿದ್ದು ಮುಸ್ಲಿಂರ ಆಡಳಿತದ ಪ್ರಭಾವದಿಂದಾಗಿ ನಂತರದಲ್ಲಿ ಗುಲಬರ್ಗಾ ಎಂಬ ರೂಪವನ್ನು ಪಡೆದಿದೆಯೆಂದು"(ಪಾಟೀಲ ಎಂ ಬಿ :೧೯೯೭:೧-೨) ಅಭಿಪ್ರಾಯಪಡಲಾಗಿದೆ.

**ಜಿಲ್ಲೆ ನೆಲೆಗೊಂಡಿರುವ ಸ್ಥಳ**

ಕರ್ನಾಟಕ ರಾಜ್ಯದಲ್ಲಿನ ೩೦ ಜಿಲ್ಲೆಗಳ ಪೈಕಿ ಗುಲಬರ್ಗಾವು ಕೂಡ ಒಂದಾಗಿದೆ. ಇದು ರಾಜ್ಯದ ಉತ್ತರ ಭಾಗದಲ್ಲಿ ನೆಲೆಗೊಂಡಿದ್ದು, ಉತ್ತರ ಅಕ್ಷಾಂಶ ೧೭°೧೦ ಡಿಗ್ರಿ ಮತ್ತು ೧೭°೪೫ ಡಿಗ್ರಿಗಳ ನಡುವೆ ಮತ್ತು ಪೂರ್ವ ರೇಖಾಂಶ ೭೬°೧೦ ಡಿಗ್ರಿ ಮತ್ತು ೭೭°೪೫ರ ಡಿಗ್ರಿಗಳ ನಡುವೆ ನೆಲೆಗೊಂಡಿದೆ. ಇದರ ಪಶ್ಚಿಮ ದಿಕ್ಕಿನಲ್ಲಿ ಕರ್ನಾಟಕ ರಾಜ್ಯದ ಬಿಜಾಪುರ ಜಿಲ್ಲೆ ಮತ್ತು ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಗಳಿದ್ದರೆ, ಪೂರ್ವದಲ್ಲಿ ಆಂಧ್ರದ ರಂಗಾರೆಡ್ಡಿ ಮತ್ತು ಮೆಹಬೂಬ ನಗರ ಜಿಲ್ಲೆಗಳಿವೆ. ಉತ್ತರದಲ್ಲಿ ಕರ್ನಾಟಕದ ಬೀದರ್, ರಾಯಚೂರು ಮತ್ತು ಮಹಾರಾಷ್ಟ್ರದ ಉಸ್ಮಾನಾಬಾದ್ ಜಿಲ್ಲೆಗಳಿವೆ. ಈ ಜಿಲ್ಲೆಯಲ್ಲಿ ಪ್ರಸ್ತುತ ೭ ತಾಲೂಕುಗಳಿವೆ, ಅವುಗಳೆಂದರೆ ಅಫಜಲಪುರ, ಆಳಂದ, ಚಿಂಚೋಳಿ, ಚಿತ್ತಾಪೂರ, ಗುಲಬರ್ಗಾ, ಜೇವರ್ಗಿ ಮತ್ತು ಸೇಡಂ.

**ಜಿಲ್ಲೆಯ ಇತಿಹಾಸ**

ಮಗಧ ವಂಶದ ನಂತರ ನಂದರ ಉತ್ತರಾಧಿಕಾರಿಗಳಾದ ಮೌರ್ಯರು ಕರ್ನಾಟಕದ ಕೆಲವು ಪ್ರದೇಶಗಳ ಮೇಲೆ ತಮ್ಮ ಪ್ರಭುತ್ವ ಹೊಂದಿದ್ದರು. ಆ ಅವಧಿಯಲ್ಲಿ ಗುಲಬರ್ಗಾ ಜಿಲ್ಲಾ ಪ್ರದೇಶವು ಅವರ ಆಳ್ವಿಕೆಯಲ್ಲಿ ಇದ್ದಿರಬೇಕು. ಮೌರ್ಯರ ಉತ್ತರಾಧಿಕಾರಿಗಳಾದ ಶಾತವಾಹನರು ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ್ದರೆನ್ನುವುದಕ್ಕೆ ಸನ್ನತಿಯಲ್ಲಿ ದೊರೆತಿರುವ ಶಾಸನವು ಆಧಾರವಾಗಿದೆ.

ಕ್ರಿ.ಶ. ೯ನೇ ಶತಮಾನದಲ್ಲಿ ಗುಲಬರ್ಗಾ ಜಿಲ್ಲೆಯು ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿತ್ತು. ಸೇಡಂ ತಾಲೂಕಿನ ಮಳಖೇಡ ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಇವರ ನಂತರ ಕಲ್ಯಾಣಿ ಚಾಲುಕ್ಯರು ಬಸವಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ನಡೆಸಿದರು. ಈಗಿನ ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ವಾರಂಗಲ್ಲಿನ ಅರಸರ ಅಧೀನದ ಪ್ರದೇಶ ಗಳಾಗಿದ್ದವು.

ಕ್ರಿ.ಶ. ೧೨೯೪ ರಿಂದ ೧೩೪೭ರವರೆಗೆ ಗುಲಬರ್ಗಾ ಜಿಲ್ಲೆಯು ದೆಹಲಿ ಸಾಮ್ರಾಜ್ಯದ ಭಾಗವಾಗಿಯೇ ಮುಂದುವರೆಯಿತು. ಮುಂದೆ ಅಲ್ಲಾಹುದ್ದೀನ್ ಹಸನ್‌ಗಂಗು ಬಹಮನ್‌ಷಾ ೧೩೪೭ರಲ್ಲಿ ಬಹಮನಿ ಸಾಮ್ರಾಜ್ಯವನ್ನು ಸ್ಥಾಪಿಸಿದಾಗ ಗುಲಬರ್ಗಾ ಅವರ ರಾಜಧಾನಿಯಾಯಿತು. ಮೊಘಲ್ ಸಾಮ್ರಾಜ್ಯದ ಚಕ್ರವರ್ತಿಯಾದ ಔರಂಗಜೇಬನು ದಕ್ಷಿಣ ಭಾರತದ ದಂಡಯಾತ್ರೆ ಕೈಗೊಂಡಾಗ ಗುಲಬರ್ಗಾ ಮೊಘಲರ ಕೈವಶವಾಯಿತು. ಔರಂಗಜೇಬನ ಮರಣಾನಂತರ ಮೊಘಲ್ ಸಾಮ್ರಾಜ್ಯದಲ್ಲಿ ಅಂತಃಕಲಹಗಳು ಸಂಭವಿಸಿ ನಂತರ ಗುಲಬರ್ಗಾದ ಇತರ ಭಾಗಗಳು ನಿಜಾಮ ರಾಜ್ಯಕ್ಕೆ ಸೇರಿದವು.

೧೯೦೧ರ ಜನಗಣತಿ ವರದಿಯಂತೆ ಗುಲಬರ್ಗಾ ಜಿಲ್ಲೆಯನ್ನು ಲಿಂಗಸುಗೂರು, ಉಸ್ಮಾನಾಬಾದ್ ಮತ್ತು ರಾಯಚೂರು ಜಿಲ್ಲೆಗಳು ಸೇರಿದ್ದ ವಿಭಾಗಕ್ಕೆ ಸೇರಿಸಲಾಗಿತ್ತು. ೧೯೦೫ರಲ್ಲಿ ಗುಲಬರ್ಗಾ ಜಿಲ್ಲೆಯನ್ನು ಮೂರು ಕಂದಾಯ ಉಪ-ವಿಭಾಗಗಳಾಗಿ ವಿಂಗಡಿಸಲಾಗಿತ್ತು. ಮುಂದೆ ೧೯೪೯ರಲ್ಲಿ ಭಾರತ ಸರ್ಕಾರವು ದೇಶಾದ್ಯಂತ ೧,೫೦೦ ಜಹಗೀರುಗಳನ್ನು ರದ್ದುಪಡಿಸಿತು. ಆ ಸಮಯದಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಕೆಲವೊಂದು ಮಾರ್ಪಾಡುಗಳೊಂದಿಗೆ ಹೊಸ ತಾಲೂಕುಗಳಾದ ಆಳಂದ, ಅಫಜಲ್‌ಪುರ, ಚಿತ್ತಾಪೂರ ಮತ್ತು ತಾಂಡೂರುಗಳನ್ನು ರಚಿಸಲಾಯಿತು.

೧೯೫೬ರ ವರೆಗೆ ಹಿಂದಿನ ಹೈದ್ರಾಬಾದ್ ರಾಜ್ಯದ ನಾಲ್ಕು ಸುಭಾಗಳಲ್ಲಿ ಒಂದು ಎಂದು ಪರಿಣಿಸಲ್ಪಟ್ಟ ಗುಲಬರ್ಗಾವನ್ನು ವಿಶಾಲ ಮೈಸೂರು ರಾಜ್ಯದ ನಾಲ್ಕು ಕಂದಾಯ ವಿಭಾಗಗಳಲ್ಲಿ ಒಂದರ ಕೇಂದ್ರ ಕಾರ್ಯ ಸ್ಥಳವನ್ನಾಗಿ ಮಾಡಲಾಯಿತು. ಪ್ರಸ್ತುತದಲ್ಲಿ "ಗುಲಬರ್ಗಾ ಜಿಲ್ಲೆಯಲ್ಲಿ ೭ ತಾಲೂಕುಗಳು, ೩೨ ಹೋಬಳಿಗಳು ಮತ್ತು ೯೧೮ ಗ್ರಾಮಗಳಿವೆ"(ಕರ್ನಾಟಕ ಅಂಕಿ ಅಂಶಗಳ ನೋಟ ೨೦೦೯-೧೦:೨೦೧೧:೧).

**ಜನತೆ**

ಗುಲಬರ್ಗಾ ಜಿಲ್ಲೆಯು ೭ ತಾಲೂಕುಗಳನ್ನು ಒಳಗೊಂಡಿದ್ದು, ಭೌಗೋಳಿಕವಾಗಿ ಕರ್ನಾಟಕದ ಈಶಾನ್ಯ ಭಾಗದಲ್ಲಿ ಎತ್ತರವಾದ ವ್ಯಾಪಕ ಪ್ರದೇಶದಲ್ಲಿದೆ. ಈ ಜಿಲ್ಲೆಯು ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಎಲ್ಲೆಗಳಿಂದ ಸುತ್ತುವರೆದಿದ್ದು ಅಲ್ಲಿಯ ಜನಜೀವನದ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರಿದೆ. ಒಂದು ಪ್ರದೇಶದ ಸಮಗ್ರ ಅಧ್ಯಯನಕ್ಕೆ ಆ ಪ್ರದೇಶದ ಜನಸಂಖ್ಯಾ ಬೆಳವಣಿಗೆ ಮುಖ್ಯವಾಗಿರುತ್ತದೆ. ೨೦೧೧ರ ಜನಗಣತಿಯಂತೆ ಗುಲಬರ್ಗಾ ಜಿಲ್ಲೆಯ ಒಟ್ಟು ಜನಸಂಖ್ಯೆ ೨೫,೬೬,೩೨೬ ಇದ್ದು, ಇದರಲ್ಲಿ ೧೩,೦೧,೭೫೫ ರಷ್ಟು ಪುರುಷರು ಹಾಗೂ ೧೨,೬೪,೫೭೧ ರಷ್ಟು ಮಹಿಳೆಯರ ಪ್ರಮಾಣವಿರುವುದು ಕಂಡುಬರುತ್ತದೆ. ಈ ಜಿಲ್ಲೆಯು ಒಟ್ಟು ಏಳು ತಾಲೂಕುಗಳನ್ನು ಒಳಗೊಂಡಿದೆ. ಆಳಂದ ತಾಲೂಕು ೩,೪೨,೨೦೭, ಅಫ್ಜಲಪುರ ೨,೨೦,೩೩೯, ಚಿಂಚೋಳಿ ೨,೫೪,೨೮೭, ಚಿತ್ತಾಪುರ ೪,೦೪,೧೮೮, ಗುಲಬರ್ಗಾ ೮,೨೯,೮೩೦, ಜೇವರಗಿ ೨,೯೬,೯೦೩, ಸೇಡಂ ೨,೧೮,೫೭೨ರಷ್ಟು ಜನಸಂಖ್ಯೆಯನ್ನು ಹೊಂದಿದೆ.

**ಲಿಂಗಾನುಪಾತ**

ಲಿಂಗಾನುಪಾತವೆಂದರೆ ಪ್ರತಿ ಸಾವಿರ ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆ ಈ ಸ್ತ್ರಿ ಪುರುಷರ ಪ್ರಮಾಣಗಳು ಒಂದು ಪ್ರದೇಶದಲ್ಲಿನ ಸಂಪ್ರದಾಯಗಳು ಜನರ ವಲಸೆ, ಸ್ತ್ರೀ-ಪುರುಷರ ಸಾವಿನ ಪ್ರಮಾಣದ ಅಂತರಗಳನ್ನು ಅವಲಂಬಿಸಿರುತ್ತದೆ. ೨೦೧೧ರ ಜನಗಣತಿಯ ಪ್ರಕಾರ ಗುಲಬರ್ಗಾ ಜಿಲ್ಲೆಯ ಲಿಂಗಾನುಪಾತ ೯೭೧ ಇದೆ.

**ಕೃಷಿ**

ನಮ್ಮ ದೇಶ ಕೃಷಿ ಪ್ರಧಾನ ದೇಶವಾಗಿರುವಂತೆ ನಮ್ಮ ಜಿಲ್ಲೆಯು ಕೂಡ ಕೃಷಿ ಪ್ರಧಾನ ಜಿಲ್ಲೆಯಾಗಿದೆ. ಒಂದು ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ನಿರ್ವಹಿಸುವಲ್ಲಿ ಕೃಷಿ ಅತ್ಯಂತ ಮಹತ್ವದ ಪಾತ್ರವಹಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಸಂಪ್ರದಾಯಿಕ ವ್ಯವಸಾಯವು ಕ್ರಮೇಣ ವಾಣಿಜ್ಯೀಕರಣದತ್ತ ವಾಲುತ್ತಿರುವುದನ್ನು ಕಾಣಬಹುದಾಗಿದೆ. ಜೊತೆಗೆ ಕೃಷಿಯೊಂದಿಗೆ ಪಶುಪಾಲನೆ, ತೋಟಗಾರಿಕೆ, ಹೈನೋದ್ಯಮ, ರೇಷ್ಮೆ ವ್ಯವಸಾಯ, ಕೋಳಿಸಾಕಾಣಿಕೆಯಂತಹ ಪೂರಕ ಕಸುಬುಗಳು ಆರಂಭಗೊಂಡು ಕೃಷಿ ವಲಯವನ್ನು ವಿಸ್ತಾರಗೊಳಿಸಿವೆ. ಈ ಜಿಲ್ಲೆಯಲ್ಲಿ ಕೃಷಿಯು ಮಳೆಯಾಧಾರಿತ ವಾಗಿದ್ದು ಜಿಲ್ಲೆಯ ಬಹುತೇಕ ಭಾಗವು ಒಣಭೂಮಿ ಬೇಸಾಯದಿಂದ ಕೂಡಿದೆ.

**ಸಾಕ್ಷರತೆ**

ಸಾಕ್ಷರತೆಯಲ್ಲಿ ಅತ್ಯಂತ ಹಿಂದುಳಿದಿರುವ ಜಿಲ್ಲೆಗಳಲ್ಲಿ ಗುಲಬರ್ಗಾ ಜಿಲ್ಲೆ ಕೂಡ ಒಂದಾಗಿದೆ. ಈ ಕಾರಣದಿಂದಾಗಿ ಇದರ ಮಾನವ ಅಭಿವೃದ್ಧಿ ಮಟ್ಟವು ಅತ್ಯಂತ ಕೆಳಮಟ್ಟದಲ್ಲಿದೆ. ಇದು ಜಿಲ್ಲೆ ಆರ್ಥಿಕವಾಗಿ ಹಿಂದುಳಿದಿರುವುದಕ್ಕೂ ಕಾರಣವಾಗಿದೆ. ಅಭಿವೃದ್ಧಿಯ ದೃಷ್ಟಿಯಿಂದ ತಕ್ಷಣವೇ ಗಮನಹರಿಸಬೇಕಾದ ಕ್ಷೇತ್ರ ಇದಾಗಿದ್ದು, ೨೦೧೧ರ ಜನಗಣತಿಯಂತೆ ಗುಲಬರ್ಗಾ ಜಿಲ್ಲೆಯ ಸಾಕ್ಷರತೆಯು ೫೬ ಪ್ರತಿಶತವಾಗಿದೆ.

**ಲಂಬಾಣಿಗರು**

ವಿಶಿಷ್ಟವಾದ ವೇಷ ಭೂಷಣ, ಸಂಸ್ಕೃತಿ, ಸಂಪ್ರದಾಯಗಳಿಂದಲೇ ಥಟ್ಟನೇ ಗುರುತಿಸಲ್ಪಡುವ ಲಂಬಾಣಿಗರು ಕರ್ನಾಟಕದ ತುಂಬಾ ಹರಡಿಕೊಂಡಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ವಾಸಿಸುವ ಅಸಂಖ್ಯಾತ ಸಮುದಾಯಗಳೊಂದಿಗೆ ಸಹೋದರತ್ವದ ಭಾವನೆಯಿಂದ, ಅನನ್ಯವಾದ ಹೊಂದಾಣಿಕೆ ಯಿಂದ ಸುಂದರವಾದ ಬದುಕನ್ನು ಕಟ್ಟಿಕೊಂಡಿರುವ ಲಂಬಾಣಿಗರು ಗ್ರಾಮಗಳಿಂದ ಅನತಿ ದೂರದಲ್ಲಿ ತಾಂಡಾಗಳನ್ನು ಕಟ್ಟಿಕೊಂಡು ವಾಸಿಸುತಿದ್ದಾರೆ. ತಾಂಡಾಗಳಿಗೆ ಪ್ರತ್ಯೇಕವಾದ ನಾಮಧೇಯ ಗಳಿರದೇ ಸಮೀಪದ ಗ್ರಾಮಗಳ ಹೆಸರಿನಿಂದಲೇ ಕರೆಯುತ್ತಾರೆ. ಉದಾಹರಣೆಗೆ ಮಳಖೇಡ ಗ್ರಾಮದ ಹತ್ತಿರ ಇರುವ ತಾಂಡಾವನ್ನು ಮಳಖೇಡ ತಾಂಡಾ, ಟೆಂಗಳಿ ಗ್ರಾಮದ ಹತ್ತಿರ ಇರುವ ತಾಂಡಾವನ್ನು ಟೆಂಗಳಿ ತಾಂಡಾ. ಈ ರೀತಿಯಾಗಿ ತಾಂಡಾಗಳನ್ನು ಆಯಾ ಗ್ರಾಮಗಳ ಹೆಸರು ಗಳಿಂದಲೇ ಗುರುತಿಸುತ್ತಾರೆ. ಕೆಲವು ತಾಂಡಾಗಳು ಆಯಾ ತಾಂಡಾದ ನಾಯಕನ ಹೆಸರುಗಳಿಂದ

ಗುರುತಿಸಲ್ಪಡುತ್ತವೆ. ಉದಾಹರಣೆಗೆ ಹೀರಾ ನಾಯಕ ತಾಂಡಾ, ಬಾಪುನಾಯಕ ತಾಂಡಾ. ಹೀಗೆ ತಮ್ಮದೇ ಆದ ವಾಸಸ್ಥಾನಗಳನ್ನು ರಚಿಸಿಕೊಂಡು ನಾವು ನಮ್ಮವರು ಎಂಬ ಭಾವನೆಯಿಂದ ಬದುಕನ್ನು ಸಾಗಿಸುತಿದ್ದಾರೆ.

ತಮ್ಮನ್ನು ತಾವು ಗೋರಮಾಟಿ ಎಂದು ಕರೆದುಕೊಳ್ಳುವ ಲಂಬಾಣಿಗರು ಮೂಲತಃ ಅಲೆಮಾರಿ ಸಮುದಾಯದವರಾಗಿದ್ದು, ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುತ್ತಾ ವ್ಯಾಪಾರ ಮಾಡುತಿದ್ದರು. ಇವರು ಕರ್ನಾಟಕಕ್ಕೆ ಎಲ್ಲಿಂದ ಹಾಗೂ ಯಾವಾಗ ಬಂದರು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ "ಲಂಬಾಣಿ ಕವಿಗಳಾದ ಚಾರಣ ಹಾಗೂ ಭಾಟ (ಢಾಡಿ)ರ ಜನಪದ ಗೀತೆ ಹಾಗೂ ಕಥೆಗಳಲ್ಲಿ ಪೃಥ್ವಿರಾಜ ಚವ್ಹಾಣ, ಅಲ್ಹಾ ಉದಲ್, ಜಯಮಲ್-ಫತಮಲ್ ಮುಂತಾದ ವೀರಶಿರೋಮಣಿಗಳ ಶೌರ್ಯ-ಪರಾಕ್ರಮಗಳ ವರ್ಣನೆ ಬರುತ್ತದೆ. ಹಾಗೆಯೇ ಕನ್ನೋಜ, ಅಜಮೇರ್, ದಿಲ್ಲಿ ಮುಂತಾದ ಪ್ರಾಂತ್ಯಗಳ ಮೇಲೆ ವಿದೇಶಿಗರ ಆಕ್ರಮಣ ಕುರಿತ ಅನೇಕ ಜನಪದ ಕಥೆಗಳು ಪ್ರಚಲಿತವಾಗಿವೆ" (ನಾಯ್ಕ ರಾಜು ಎನ್ ೨೦೦೬:೫೮). ಇದರಿಂದ ಲಂಬಾಣಿಗರು ಮೂಲತಃ ಉತ್ತರ ಭಾರತದ ಮೂಲದವರಾಗಿದ್ದಾರೆ ಎಂಬುದು ಸ್ಪಷ್ಟವಾಗಿ ವಿದಿತವಾಗುತ್ತದೆ. ಹಾಗೇಯೇ ಗುಂಪುಗಳಲ್ಲಿ ನೆಲೆಸಿರುವ ಈ ಜನರ ವೇಷ-ಭೂಷಣ, ಭಾಷೆ ಹಾಗೂ ಸಂಸ್ಕಾರ ಮುಂತಾದವುಗಳಿಂದ ಇವರು ಗುಜರಾತ ಇಲ್ಲವೇ ರಾಜಸ್ಥಾನಕ್ಕೆ ಸಂಬಂಧಿಸಿದವ ರೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಇದರ ಅರ್ಥ ಈ ಜನರು ಆ ಪ್ರಾಂತ್ಯಗಳ ಮೂಲ ನಿವಾಸಿಗಳೇ ಆಗಿದ್ದಾರೆ.

ತಮ್ಮ ಅಸಂಖ್ಯಾತ ರಾಸುಗಳ ಮೇಲೆ ಖಾದ್ಯಪದಾರ್ಥಗಳನ್ನು ಹೇರಿಕೊಂಡು ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುತ್ತಾ ವ್ಯಾಪಾರ ಮಾಡುತ್ತಿದ್ದ ಲಂಬಾಣಿಗರು ಕಾಲ ಕ್ರಮೇಣ ಕರ್ನಾಟಕದಲ್ಲಿ ನೆಲೆಗೊಂಡಿದ್ದಾರೆ. ಆಧುನಿಕ ಸಾರಿಗೆ ಸಂಪರ್ಕದಿಂದಾಗಿ ತಮ್ಮ ಮೂಲ ಉದ್ಯೋಗವಾದ ವ್ಯಾಪಾರ ದಿಂದ ವಂಚಿತರಾದ ಇವರು ಬದುಕನ್ನು ಕಟ್ಟಿಕೊಳ್ಳಲು ಕೃಷಿಯನ್ನು ಅವಲಂಬಿಸಿದರು. ಜೊತೆಗೆ ಲಭ್ಯವಿರುವ ಅನೇಕ ಉದ್ಯೋಗಗಳಲ್ಲಿ ತೊಡಗಿಕೊಂಡರು. ರಟ್ಟೆಯ ಬಲವನ್ನು ನಂಬಿಕೊಂಡು ಬದುಕನ್ನು ರೂಪಿಸಿಕೊಂಡಿರುವ ಲಂಬಾಣಿಗರು ಬಡವರಾಗಿದ್ದು, ಅತಿ ಕಡಿಮೆ ಪ್ರಮಾಣದ ಕೃಷಿ ಭೂಮಿಯನ್ನು ಹೊಂದಿದ್ದಾರೆ. ಇವರಲ್ಲಿ ಸಿಂಹಪಾಲು ಜನರು ಕೃಷಿ ಕೂಲಿಯನ್ನು ನೆಚ್ಚಿಕೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅಲ್ಲದೇ ಸಮೀಪದ ಗ್ರಾಮ ನಗರಗಳಲ್ಲಿ ದೊರೆಯುವ ಉದ್ಯೋಗಗಳಾದ ಗಾರೆ ಕೆಲಸ, ರಸ್ತೆ ನಿರ್ಮಿಸುವ ಕೆಲಸ, ಭಾರವಾದ ವಸ್ತುಗಳನ್ನು ಸಾಗಿಸುವುದು, ಕಣಿವೆ, ಕಾಲುವೆಗಳನ್ನು ನಿರ್ಮಿಸುವುದು, ಆಟೋ ಚಾಲನೆ ಹೀಗೆ ಶಾರೀರಿಕವಾಗಿ ಪರಿಶ್ರಮದ ಕೆಲಸಗಳನ್ನು ನೆಚ್ಚಿಕೊಂಡಿದ್ದಾರೆ.

ಲಂಬಾಣಿ ಮಹಿಳೆಯರು ಪುರುಷನಿಗೆ ಸರಿಸಮಾನವಾಗಿ ಕೃಷಿ ಹಾಗೂ ಕೃಷಿ ಕೂಲಿಯನ್ನು ಮಾಡುತ್ತಾ, ಹಾಲು, ಮೊಸರು, ಹಣ್ಣು, ಕಟ್ಟಿಗೆ, ಹುಲ್ಲು ಮುಂತಾದ ವಸ್ತುಗಳನ್ನು ನಗರಗಳಿಗೆ

ತಂದು ಮಾರುತ್ತಾರೆ. ಇಂತಹ ಅತಿ ಕಡಿಮೆ ಆದಾಯ ತರುವ ಉದ್ಯೋಗಗಳಲ್ಲಿ ತೊಡಗಿಕೊಂಡಿರುವುದರಿಂದ, ಕುಡಿತದಂತಹ ದುಶ್ಚಟಗಳಿಗೆ ಒಳಗಾಗಿರುವುದರಿಂದ ಹಾಗೂ ಹಬ್ಬ ಹರಿದಿನಗಳಿಗೆ, ಸಭೆ, ಸಮಾರಂಭಗಳಿಗೆ ದುಂದು ವೆಚ್ಚ ಮಾಡುವುದರಿಂದ ಇಂದಿಗೂ ಕೂಡಾ ಬಡತನದಲ್ಲಿಯೇ ಬದುಕುತ್ತಿದ್ದಾರೆ. ಲಂಬಾಣಿಗರನ್ನು ಕರ್ನಾಟಕದಲ್ಲಿ ಲಂಬಾಣಿ, ಲಮಾಣಿ, ಲಮಾನಿ, ಸುಗಾಲಿ, ಸುಕಾಲಿ, ಹೀಗೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

### ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಲಂಬಾಣಿಗರು

ಭಾರತವು ಹಲವಾರು ಭಾಷಾ ಸಮೂಹಗಳು, ಮತೀಯ ಹಾಗೂ ಜಾತಿ ಸಮೂಹಗಳಿಂದ ಕೂಡಿರುವ ಒಂದು ವಿಶಿಷ್ಟವಾದ ದೇಶ. ಭಾರತದ ಜನಸಮುದಾಯವು ಇಲ್ಲಿ ಕಾಣಬರುವ ಸಾವಿರಾರು ಜಾತಿಸಮೂಹಗಳಲ್ಲಿ ಹಂಚಿ ಹೋಗಿದೆ. ಅಂತಸ್ತು ಸೂಚಕ ಸಮೂಹವಾಗಿರುವ ಜಾತಿಯ ಮೂಲಕ ಜನರನ್ನು ಸಾಮಾಜಿಕವಾಗಿ ಗುರುತಿಸುವ ಕ್ರಮ ಇಲ್ಲಿ ಇಂದಿಗೂ ಮುಂದುವರಿದಿದೆ. ಪ್ರತಿಯೊಂದು ಜಾತಿಯು ಕೂಡಾ ತನ್ನದೇ ಆದ ಅಂತಸ್ತನ್ನು ಹೊಂದಿದ್ದು ಮೇಲು-ಕೀಳು ಉಚ್ಚ-ನೀಚ ಎಂಬ ಭಾವನೆಗಳು ಬೆಳೆಯಲು ಕಾರಣವಾಗಿದೆ.

ಭಾರತೀಯ ಸಮಾಜದ ಜಾತಿಗಳ ಶ್ರೇಣಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ಹಾಗೂ ಪರಂಪರಾಗತವಾಗಿ ಹಲವಾರು ಬಗೆಯ ಅನರ್ಹತೆಗಳಿಗೆ ಒಳಗಾಗಿರುವ ಜಾತಿಗಳನ್ನು ಕಾನೂನಿನ ಪರಿಭಾಷೆಯಲ್ಲಿ ಪರಿಶಿಷ್ಟ ಜಾತಿಗಳು ಎಂದು ಕರೆಯಲಾಗುತ್ತದೆ. ಬ್ರಿಟಿಷರು ನೇಮಿಸಿದ್ದ ಸೈಮನ್ ಕಮಿಷನ್ ಆಯೋಗವು ಮೊಟ್ಟ ಮೊದಲ ಬಾರಿಗೆ 'ಶೆಡೂಲ್ಡ್ ಕಾಸ್ಟ್' ಎಂಬ ಪರಿಕಲ್ಪನೆಯನ್ನು ಪರಿಚಯಿಸಿತು. ಭಾರತದ ಜಾತಿಗಳಲ್ಲಿ ಅತ್ಯಂತ ಕೆಳಮಟ್ಟದಲ್ಲಿರುವ ಹಾಗೂ ಅಸ್ಪೃಶ್ಯತೆಯ ಬೇಗೆಗೆ ಸಿಲುಕಿದ್ದ ಜಾತಿಗಳನ್ನು ಬ್ರಿಟಿಷರು ಆರಂಭದಲ್ಲಿ ಬಾಹ್ಯ ಜಾತಿಗಳು ಎಂದು ಕರೆದರು. ಕ್ರಿಶ. ೧೯೨೮ರ ಸೈಮನ್ ಆಯೋಗದ ವರದಿ ಮತ್ತು ೧೯೩೫ರ ಭಾರತ ಸರ್ಕಾರದ ಕಾಯ್ದೆ ಇವುಗಳಲ್ಲಿ ಮೊದಲಬಾರಿಗೆ 'ಶೆಡ್ಯೂಲ್ಡ್ ಕಾಸ್ಟ್' ಎಂಬ ಪದವು ಬಳಕೆಗೆ ಬಂದಿತು. ಶೆಡ್ಯೂಲ್ ಎಂಬ ಇಂಗ್ಲೀಷ ಭಾಷೆಯ ಪದಕ್ಕೆ ಪಟ್ಟಿ, ತಪ್ಸೀಲು, ವಿವರ ಎಂಬ ಅರ್ಥವಿದೆ. ಹೀಗಾಗಿ ಶೆಡ್ಯೂಲ್ಡ ಕಾಸ್ಟ ಎಂದರೆ ಪಟ್ಟಿ ಮಾಡಲ್ಪಟ್ಟ ಜಾತಿಗಳು ಅಥವಾ ಅನುಸೂಚಿತ ಜಾತಿಗಳ ಪಟ್ಟಿ ಅಥವಾ ತಪ್ಸಿಲು ಎಂದರ್ಥವಾಗುತ್ತದೆ.

ಲಂಬಾಣಿಗರು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಹೀಗೆ ಮುಂತಾದ ಜೀವನದ ವಿವಿಧ ಕ್ಷೇತ್ರಗಳಲ್ಲಿ ತೀರಾ ಹಿಂದುಳಿದಿರುವುದನ್ನು ಹಾಗೂ ಅವರ ಕನಿಷ್ಟತಮವಾದ ಜೀವನವನ್ನು ಗುರುತಿಸಿದ ಕರ್ನಾಟಕದ ಘನ ಸರ್ಕಾರವು ೧೯೫೭ರಲ್ಲಿ ಲಂಬಾಣಿಗರನ್ನು ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸಿತು.

**ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿ (ತಿದ್ದುಪಡಿ) ಆದೇಶ, ೧೯೫೬**

ಈ ಆದೇಶದಂತೆ "ಕೊಡಗು, ಬೆಳಗಾವಿ, ಬಿಜಾಪೂರ, ಧಾರವಾಡ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಗುಲಬರ್ಗಾ, ರಾಯಚೂರ ಮತ್ತು ಬೀದರ ಜಿಲ್ಲೆ ಹಾಗೂ ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕು ಪ್ರದೇಶಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರನ್ನು ಹೊರತುಪಡಿಸಿ ರಾಜ್ಯದ ಇತರೆ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಲಾಯಿತು" (ಕೇಂದ್ರ ಹಾಗೂ ರಾಜ್ಯ ಸರ್ಕಾಗಳು ಜಾತಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಕುರಿತು ಹೊರಡಿಸಲಾದ ಪ್ರಮುಖ ಆದೇಶಗಳ ಸಂಗ್ರಹ:೧೯೫೦ ರಿಂದ ಪೆಬ್ರುವರಿ ೨೦೦೯:೧೩). ಹೀಗಾಗಿ ಈ ಜಿಲ್ಲೆಗಳ ಲಂಬಾಣಿಗರು ಪರಿಶಿಷ್ಟ ಜಾತಿಯ ಸೌಲಭ್ಯವನ್ನು ಪಡೆಯುವಂತಾಯಿತು. ಆದರೆ ಬೀದರ, ಗುಲಬರ್ಗಾ, ರಾಯಚೂರ, ಬಿಜಾಪೂರ, ಧಾರವಾಡ, ಬೆಳಗಾವಿ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಕೊಡಗು ಜಿಲ್ಲೆಯ ಲಂಬಾಣಿಗರು ವಿಮುಕ್ತ ಬುಡಕಟ್ಟು (ಡಿ ನೋಡಫೈಡ್ ಟ್ರೇಬ್ಸ್) ಪಟ್ಟಿಗೆ ಸೇರಿದರು. ಈ ಪ್ರಾದೇಶಿಕ ನಿರ್ಬಂಧವು ೧೯೭೬ರ ಕಾಯಿದೆ ಅನ್ವಯವಾಗುವವರೆಗೂ ಜಾರಿಯಲ್ಲಿತ್ತು.

**೧೯೭೬ರ ತಿದ್ದುಪಡಿ ಕಾಯಿದೆ**

"ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಆದೇಶ (ತಿದ್ದುಪಡಿ ಕಾಯಿದೆ ೧೯೭೬ರ ಅನ್ವಯ ಪ್ರದೇಶ ನಿರ್ಬಂಧನೆಯನ್ನು ತೆಗೆದುದರಿಂದಾಗಿ ಪ್ರವರ್ತನ (ಜಾರಿ) ಸರ್ಕಾರಿ ಆದೇಶ ಸಂಖ್ಯೆ ನಂ: SWL ೮೬ SAD ೭೭ ದಿನಾಂಕ ೨-೦೭-೧೯೭೭"(ನಾಯ್ಕ ರಾಜು ಎನ್: ೨೦೦೬: ೭೭). ಈ ಕಾಯ್ದೆಯಿಂದಾಗಿ ಪ್ರಾಂತೀಯ ಭೇದಭಾವಗಳನ್ನು ತೊಡೆದು ಹಾಕಿ ಕರ್ನಾಟಕದಾದ್ಯಂತ ವಾಸಿಸುತ್ತಿರುವ ಲಂಬಾಣಿಗರನ್ನು ಪರಿಶಿಷ್ಟ ಜಾತಿಯ ಪಟ್ಟಿಗೆ ಒಳಪಡಿಸಲಾಯಿತು.

"ಪ್ರಸ್ತಾವನೆ: ೧. ಸರ್ಕಾರಿ ಆದೇಶ (ಮೇಲಿನ (೧)ನ್ನು ಓದಿಕೊಳ್ಳವುದು) ಹಿಂದುಳಿದ ವರ್ಗ ಹಿಂದುಳಿದ ಜನಾಂಗ, ಹಿಂದುಳಿದ ಜಾತಿ ಮತ್ತು ಹಿಂದುಳಿದ ಬುಡಕಟ್ಟುಗಳನ್ನು ನಿರ್ದೇಶನ ಮಾಡಲಾಗಿದೆ.

೨. ಸರ್ಕಾರಿ ಆದೇಶ (ಮೇಲಿನ ೨ನ್ನು ಓದಿಕೊಳ್ಳುವುದು) ರಾಜ್ಯದ ವಿವಿಧ ಪ್ರದೇಶಗಳಲ್ಲಿ ಅನುಸೂಚಿತ ಜಾತಿ ಮತ್ತು ಅನುಸೂಚಿತ ವರ್ಗಗಳೆರಡರಲ್ಲಿ ಬರುವ ೧೯ ಜಾತಿಗಳ ಸರಿಯಾದ ಸ್ಥಾನವನ್ನು ಸ್ಪಷ್ಟವಾಗಿ ಸೂಚಿಸಲಾಗಿದೆ.

೩. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ (ಮೇಲಿನ ೩ನ್ನು ಓದಿಕೊಳ್ಳುವುದು) ಆದೇಶ ೨-೯-೧೯೭೬ರಂದು ಸಂಸತ್ತಿನಲ್ಲಿ ಪಾಸಾಗಿ ಅಂದಿನಿಂದಲೇ ಜಾರಿಗೆ ಬರುವಂತೆ ಕೇಂದ್ರ ಸರ್ಕಾರವು ಆದೇಶ ನೀಡಿತು.

೪. ಭಾರತ ಸರ್ಕಾರ ಗೃಹ ಸಚಿವಾಲಯ, ನವದೆಹಲಿ ತನ್ನ ಘೋಷಣೆ (ಮೇಲಿನ ೪ನ್ನು ಓದಿಕೊಳ್ಳುವುದು) ಯಲ್ಲಿ ೧೯೭೭ ಜುಲೈ ೨೭ರಿಂದಲೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ

ಆದೇಶ(ತಿದ್ದುಪಡಿ) ೧೯೭೬ರ ಕಾಯಿದೆಯನ್ನು ಜಾರಿಗೆ ಬರುವಂತೆ ಸೂಚಿಸಲಾಯಿತು" (ಸೋಸಿಯಲ್ ವೆಲ್‌ಫೇರ್ ಆ್ಯಂಡ ಲೇಬರ ಡಿಪಾರ್ಟಮೆಂಟ್ ೧೯೭೭). ಈ ಮೇಲಿನ ಆದೇಶದಂತೆ ಬಂಜಾರಾ, ಲಂಬಾಣಿ ಮತ್ತು ಅದರ ಪರ್ಯಾಯ ಪದಗಳಾದ ಲಂಬಾಕಾ, ಲಂಬಾಡಿ, ಲಮಾಣಿ, ಸುಗಾಲಿ, ಸುಕಾಲಿ ಇವುಗಳನ್ನು ಪಟ್ಟಿಗೆ ಸೇರಿಸಿತು.

"ಜಾತಿ ಪತ್ರಗಳನ್ನು ಜಾರಿ ಮಾಡಲು ಅಧಿಕಾರವಿರುವ ತಹಸೀಲ್ದಾರರು ಸರ್ಕಾರಿ ಆದೇಶ ಸಂಖ್ಯೆ SWL ೨೮೫ SAD ೭೮ ದಿನಾಂಕ ೨೭-೦೩-೧೯೮೦ರ ಆದೇಶವನ್ನು ಅನುಸರಿಸಿ ಲಂಬಾಡ, ಲಂಬಾಡಿ, ಲಂಬಾಣಿ, ಸುಗಾಲಿ ಮತ್ತು ಸುಕಾಲಿ ಜಾತಿಗಳ ಜನರನ್ನು ರಾಷ್ಟ್ರಪತಿಗಳ ಅದೇಶದಲ್ಲಿರುವಂತೆ ಕರ್ನಾಟಕ ರಾಜ್ಯಾದ್ಯಂತ ಬಂಜಾರ, ಲಂಬಾಣಿ ಎಂದು ಪರಿಗಣಿಸಿ ಅವರಿಗೆ ಪರಿಶಿಷ್ಟ ಜಾತಿ ಪತ್ರ ಕೊಡಬೇಕೆಂಬುದಾಗಿ ಕರ್ನಾಟಕ ಸರ್ಕಾರ ಅದೇಶವನ್ನು ಹೊರಡಿಸಿದೆ" (ನಾಯ್ಕ ರಾಜು ಎನ್: ೨೦೦೬:೮೦). ಈ ಮೇಲ್ಕಾಣಿಸಿದ ಆದೇಶಗಳಂತೆ ಕರ್ನಾಟಕ ಸರ್ಕಾರವು ಲಂಬಾಣಿಗರನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಿದ್ದು, ಉದ್ಯೋಗ ಹಾಗೂ ಶಿಕ್ಷಣದಲ್ಲಿ ಶೇ. ೧೫ರಷ್ಟು ಮೀಸಲಾತಿಯನ್ನು ಪರಿಶಿಷ್ಟ ಜಾತಿಯ ಪಟ್ಟಿಗೆ ನೀಡಿದೆ. ರಾಜ್ಯ ಸರ್ಕಾರವು ಪರಿಶಿಷ್ಟ ಜಾತಿಗಳ ಕಲ್ಯಾಣಕ್ಕಾಗಿ ಜಾರಿಗೆ ತಂದಿರುವ ಹಲವಾರು ಯೋಜನೆಗಳಲ್ಲಿ ಲಂಬಾಣಿಗರು ಕೂಡಾ ಫಲಾನುಭವಿಗಳಾಗಿದ್ದಾರೆ.

## ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗುಲಬರ್ಗಾ ಜಿಲ್ಲೆಯ ತಾಂಡಾಗಳ ವಿವರ

೧. **ತೆಂಗಳಿ ತಾಂಡಾ:** ಗುಲಬರ್ಗಾ ಜಿಲ್ಲೆ ತಾಲೂಕು ಕೇಂದ್ರವಾದ ಚಿತ್ತಾಪುರದಿಂದ ೨೩ ಕಿ.ಮೀ. ದೂರದಲ್ಲಿರುವ ತೆಂಗಳಿ ತಾಂಡಾ. ತೆಂಗಳಿ ಗ್ರಾಮಪಂಚಾಯತಿಗೆ ಒಳಪಡುವ ರಿಮೋಟ್ ತಾಂಡಾವಾಗಿದೆ. ಈ ತಾಂಡಾಕ್ಕೆ ನೇರವಾಗಿ ಸರ್ಕಾರಿ ಸಾರಿಗೆ ಸಂಪರ್ಕ ವ್ಯವಸ್ಥೆ ಇರದ ಕಾರಣ ೪ ಕಿ.ಮೀ. ದೂರವಿರುವ ತೆಂಗಳಿ ಗ್ರಾಮದವರೆಗೆ ಕಾಲ್ನಡಿಗೆಯಲ್ಲಿಯೇ ತೆರಳುತ್ತಾರೆ.

ಭೌಗೋಳಿಕವಾಗಿ ಪ್ರಾಕೃತಿಕ ಸೌಂದರ್ಯದ ತಾಣವಾದ ಈ ತಾಂಡಾದ ಪಕ್ಕದಲ್ಲಿ ಕಾಗಿಣಾ ನದಿ ಸೇರುವ ಚಿಕ್ಕದಾದ ತೊರೆಯಿದೆ. ತಾಂಡಾದ ಸುತ್ತಲೂ ಫಲವತ್ತಾದ ಭೂ ಪ್ರದೇಶವಿರುವುದರಿಂದ ತಾಂಡಾದ ಬಹುಜನರು ಕೃಷಿ ಮತ್ತು ಕೃಷಿಕೂಲಿಕಾರ್ಮಿಕತೆಯಲ್ಲಿ ತೊಡಗಿರುವುದು ಕಂಡುಬರುತ್ತದೆ.

ಈ ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥಮಿಕ ಹಂತದವರೆಗೆ ಶಾಲೆಯಿದ್ದರೂ. ತೆಂಗಳಿ ಗ್ರಾಮದ ಸರ್ಕಾರಿ ಪ್ರೌಢಶಾಲೆ ತಾಂಡಾದ ಪಕ್ಕದಲ್ಲಿಯೇ ಇರುವುದರಿಂದ ತಾಂಡಾದ ಬಹುಪಾಲು ಮಕ್ಕಳು ಪ್ರೌಢ ಹಂತದವರೆಗಿನ ಶಿಕ್ಷಣವನ್ನು ಪಡೆಯುವಲ್ಲಿ ಸಫಲರಾಗಿದ್ದಾರೆ. ಆದರೆ ಪದವಿ ಹಂತ ತಲುಪಿದ ಮಕ್ಕಳ ಸಂಖ್ಯೆ ಬಹಳ ಕಡಿಮೆ ಇದೆ.

ಪುರುಷ ಮಹಿಳೆಯರೀರ್ವರೂ ದುಡಿಮೆಯಲ್ಲಿ ಸಮ ಸಹಭಾಗಿತ್ವ ಹೊಂದಿದ್ದಾರೆ. ಇವರ ಆರ್ಥಿಕತೆ ಹೆಚ್ಚಾಗಿ ಕೃಷಿಕೂಲಿ ಕಾರ್ಮಿಕತೆಯನ್ನೇ ಅವಲಂಬಿಸಿರುವುದರಿಂದ ಬಹಳಷ್ಟು ಮಾಳಿಗೆ ಮನೆಗಳು ಕಂಡುಬರುತ್ತವೆ. ಆಧುನಿಕತೆಯ ಪ್ರಭಾವ ಕಡಿಮೆ ಇರುವ ಈ ತಾಂಡಾದಲ್ಲಿ ಹಿರಿಯ

ನಾಗರಿಕರಲ್ಲಿ ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಕಂಡುಬರುತ್ತವೆ. ಹಾಗೆಯೇ ಸಾಂಸ್ಕೃತಿಕ ಸಂಭ್ರಮಗಳಾದ ಎಲ್ಲಾ ಹಬ್ಬಾಚರಣೆಗಳು ಇವರಲ್ಲಿ ಜಾರಿಯಲ್ಲಿದ್ದು, ಇಂದಿಗೂ ಕಂಡುಬರುತ್ತಿರುವ ಬೇಟೆಗಾರಿಕೆ ಇವರ ಮೂಲ ಪ್ರವೃತ್ತಿಯ ಕುರುಹಾಗಿ ಉಳಿದುಕೊಂಡಿರುವುದು ಕಂಡುಬರುತ್ತದೆ.

**೨. ಹಾಗರಗಾ ತಾಂಡಾ :** ಜಿಲ್ಲಾ ಕೇಂದ್ರವಾದ ಗುಲಬರ್ಗಾದಿಂದ ೧೭ ಕಿ.ಮೀ. ದೂರದಲ್ಲಿರುವ ಹಾಗರಗಾ ತಾಂಡಾ ಕುಸನೂರ ಗ್ರಾಮಪಂಚಾಯತಿ ಮತ್ತು ಗುಲಬರ್ಗಾ ತಾಲೂಕಿಗೆ ಒಳಪಡುತ್ತವೆ. ಯಾವುದೇ ಸರ್ಕಾರಿ ಸಾರಿಗೆ ಸಂಪರ್ಕ ವ್ಯವಸ್ಥೆ ಇರದ ಈ ತಾಂಡಾ ಹಾಗರಗಾ ಗ್ರಾಮದಿಂದ ೩ ಕಿ.ಮೀ. ದೂರದಲ್ಲಿರುವ ರಿಮೋಟ್ ತಾಂಡಾವಾಗಿದೆ.

ಭೌಗೋಳಿಕವಾಗಿ ಈ ತಾಂಡಾದ ಸುತ್ತಲೂ ಹೆಚ್ಚಾಗಿ ಬರಡು ಭೂಪ್ರದೇಶವಿರುವ ಕಾರಣ ತಾಂಡಾವಾಸಿಗಳು ಭಿನ್ನ ಭಿನ್ನ ಉದ್ಯೋಗಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ದಿನಗೂಲಿ ಕೆಲಸಗಳಲ್ಲಿ ಹೆಚ್ಚಾಗಿ ತೊಡಗಿಕೊಂಡಿರುವ ಇವರ ಆದಾಯ ಬಡತನ ರೇಖೆಗಿಂತ ಕೆಳಗಿರುವುದು ಕಂಡುಬರುತ್ತದೆ. ತಾಂಡಾದ ಸುತ್ತಲೂ ಬಯಲು ಪ್ರದೇಶವಿರುವುದರಿಂದ ಬೇಟೆಗಾರಿಕೆ ಕಂಡುಬರುವುದಿಲ್ಲ. ಇವರು ತಮ್ಮ ಆರ್ಥಿಕತೆಯ ಮೂಲವಾಗಿ ಕುರಿಸಾಗಣಿಕೆ, ಕೋಳಿ ಸಾಕಾಣಿಕೆ, ಪಶುಸಂಗೋಪನೆಯಲ್ಲಿ ಹೆಚ್ಚಾಗಿ ತೊಡಗಿಕೊಂಡಿದ್ದಾರೆ. ಸಮುದಾಯದ ಬಗೆಗೆ ಗಾಢ ಅಭಿಮಾನ ಹೊಂದಿರುವ ಇವರು ತಮ್ಮ ನಿತ್ಯ ವ್ಯವಹಾರಕ್ಕೆ ಗೋರಬೋಲಿ ಭಾಷೆಯನ್ನೇ ಬಳಸುತ್ತಿದ್ದಾರೆ. ಜಿಲ್ಲಾ ಕೇಂದ್ರಕ್ಕೆ ಹತ್ತಿರವಿರುವ ಕಾರಣ ಯುವ ಪೀಳಿಗೆಯ ವೇಷ ಭೂಷಣಗಳ ಮೇಲೆ ಆಧುನಿಕತೆಯ ಪ್ರಭಾವ ಕಂಡುಬರುತ್ತಿದ್ದರೂ ಹಿರಿಯ ನಾಗರಿಕರು ಸಂಪ್ರದಾಯಿಕ ಉಡುಗೆ ತೊಡುಗೆಗಳನ್ನೇ ಧರಿಸುತ್ತಿದ್ದಾರೆ.

ಈ ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥಮಿಕ ಶಾಲೆಯಿದ್ದು, ಪ್ರೌಢಶಿಕ್ಷಣಕ್ಕೆ ಜಿಲ್ಲಾ ಕೇಂದ್ರಕ್ಕೆ ತೆರಳಬೇಕಾಗಿರುವುದು ಅನಿವಾರ್ಯವಾದ ಕಾರಣ ಬಹುತೇಕ ಮಕ್ಕಳ ಶಿಕ್ಷಣ ಪ್ರಾಥಮಿಕ ಹಂತದಲ್ಲಿಯೇ ಕೊನೆಗೊಳ್ಳುತ್ತಿದ್ದು, ಬೆರಳೆಣಿಕೆಯ ಜನರು ಮಾತ್ರ ಮುಂದಿನ ಹಂತದ ಶಿಕ್ಷಣ ಪಡೆದುಕೊಳ್ಳುತ್ತಿದ್ದಾರೆ.

**೩. ಹೀರು ನಾಯಕ ತಾಂಡಾ:** ಗುಲಬರ್ಗಾ ಜಿಲ್ಲೆಯ ತಾಲೂಕು ಕೇಂದ್ರವಾದ ಅಫಜಲಪೂರ ದಿಂದ ೧೯ ಕಿ.ಮೀ. ದೂರವಿರುವ ಹೀರು ನಾಯಕ ತಾಂಡಾ ಬಳ್ಳೂರ್ಗಿ ಗ್ರಾಮದ ಹತ್ತಿರವಿದ್ದು, ಬಳ್ಳೂರ್ಗಿ ಗ್ರಾಮಪಂಚಾಯತಿಗೆ ಒಳಪಡುವ ಗ್ರಾಮ ಹತ್ತಿರದ ತಾಂಡಾವಾಗಿದೆ.

ಹೀರು ನಾಯಕ ತಾಂಡಾದ ಜನರ ಪ್ರಧಾನ ಉದ್ಯೋಗ ಕೃಷಿಯಾಗಿದ್ದು, ಹೆಚ್ಚಿನ ಪ್ರಮಾಣದ ಭೂಮಿ ಒಣ ಬೇಸಾಯದ ಭೂಮಿಯಾಗಿದೆ. ಜೋಳ ಮತ್ತು ತೊಗರಿ ಇಲ್ಲಿಯ ಪ್ರಮುಖ ಬೆಳೆಗಳಾಗಿವೆ. ಚಿಕ್ಕ ಚಿಕ್ಕ ಭೂ ಹಿಡುವಳಿದಾರರಾಗಿರುವ ಇವರಲ್ಲಿ ಕೆಲವರು ತಮ್ಮ ಭೂಮಿಯನ್ನು ಗ್ರಾಮದ ದೊಡ್ಡ ರೈತರಿಗೆ ಗೇಣಿಗೆ ನೀಡಿ ಕೃಷಿ ಕಾರ್ಮಿಕರಾಗಿ ದುಡಿಯುತ್ತಾ ಬದುಕನ್ನು ಕಟ್ಟಿ

ಕೊಂಡಿದ್ದಾರೆ. ಆಕಳು, ಎಮ್ಮೆಗಳನ್ನು ಹೆಚ್ಚಾಗಿ ಸಾಕಾಣಿಕೆ ಮಾಡುತ್ತಿರುವ ಇವರು ಹೈನುಗಾರಿಕೆಯ ಉತ್ಪನ್ನಗಳನ್ನು ಮಾರಾಟ ಮಾಡುತ್ತಾರೆ. ಮೇಕೆ ಹಾಗೂ ಕೋಳಿ ಸಾಕಾಣಿಕೆಯು ಕಂಡುಬರುತ್ತದೆ.

ಹೀರು ನಾಯಕ ತಾಂಡಾದ ಹೆಚ್ಚಿನ ಸಂಖ್ಯೆಯ ಮನೆಗಳು ಪೂರ್ವದಿಕ್ಕಿಗೆ ದ್ವಾರಗಳನ್ನು ಹೊಂದಿವೆ. ಮನೆಗೆ ಹೊಂದಿಕೊಂಡು ಸಾಕುಪ್ರಾಣಿಗಳಿಗಾಗಿ ಕೊಟ್ಟಿಗೆಯನ್ನು ನಿರ್ಮಿಸಿಕೊಂಡಿದ್ದಾರೆ. ಹೆಚ್ಚಿನ ಸಂಖ್ಯೆಯ ಮಾಳಿಗೆ ಮನೆಗಳು ಕಂಡುಬರುತ್ತಿದ್ದು, ಬೆರಳೆಣಿಕೆಯ ಆರ್.ಸಿ.ಸಿ. ಮನೆಗಳು ಕಂಡುಬರುತ್ತವೆ.

ತಾಂಡಾದಲ್ಲಿ ಅಂಗನವಾಡಿ ಹಾಗೂ ಪ್ರಾಥಮಿಕ ಶಾಲೆ ಇದ್ದು, ಮುಂದಿನ ವಿದ್ಯಾಭ್ಯಾಸಕ್ಕಾಗಿ ಬಳ್ಳೂರ್ಗಿ ಹಾಗೂ ತಾಲೂಕು ಕೇಂದ್ರವಾದ ಅಫಜಲಪುರಕ್ಕೆ ತೆರಳುತ್ತಾರೆ. ಸಾಂಪ್ರದಾಯಿಕ ಉಡುಗೆ ತೊಡುಗೆ ಮಧ್ಯಮ ವಯಸ್ಕರಲ್ಲಿ ಹಾಗೂ ಹಿರಿಯ ನಾಗರಿಕಲ್ಲಿ ಕಂಡುಬರುತ್ತವೆ. ಯುವಕರು ಮತ್ತು ಯುವತಿಯರು ಆಧುನಿಕ ಉಡುಪುಗಳನ್ನು ಧರಿಸುತ್ತಿದ್ದಾರೆ. ಮಾಂಸಾಹಾರಿಗಳಾದ ಇವರಲ್ಲಿ ಬೇಟೆಗಾರಿಕೆ ಅಪರೂಪವಾಗಿ ಕಂಡುಬರುತ್ತದೆ. ಇಂದಿಗೂ ತಮ್ಮ ಸಮುದಾಯದೊಳಗೆ ಉಂಟಾಗುವ ಚಿಕ್ಕ ಪುಟ್ಟ ಕಲಹ, ವ್ಯಾಜ್ಯಗಳನ್ನು ನ್ಯಾಯ ಪಂಚಾಯಿತಿಯ ಮೂಲಕ ಬಗೆಹರಿಸಿ ಕೊಳ್ಳುತ್ತಿರುವುದು ಕಂಡುಬರುತ್ತದೆ.

**೪. ಮಳಖೇಡ ತಾಂಡಾ:** ತಾಲೂಕು ಕೇಂದ್ರವಾದ ಸೇಡಂದಿಂದ ೧೮ ಕಿ.ಮೀ. ದೂರದಲ್ಲಿರುವ ಮಳಖೇಡ ತಾಂಡಾ ವಾಗ್ಧರಿ ರೆಬ್ಬನಪಲ್ಲಿ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವಂತ ಮಳಖೇಡ ಗ್ರಾಮದ ಹತ್ತಿರ ಕಾಗಿಣಾ ನದಿ ತೀರದ ಮೇಲೆ ಕಂಡುಬರುತ್ತದೆ. ಈ ತಾಂಡಾದ ಸುತ್ತಲೂ ಫಲವತ್ತಾದ ಭೂ ಪ್ರದೇಶವಿದ್ದು, ಹೆಚ್ಚಿನ ಜನರು ವ್ಯವಸಾಯ, ಕೃಷಿಕೂಲಿ ಕಾರ್ಮಿಕತೆಯಲ್ಲಿ ತೊಡಗಿಕೊಂಡಿದ್ದಾರೆ. ಗಾರೆ ಕೆಲಸ ಮತ್ತು ಹತ್ತಿರದ ರಾಜಶ್ರೀ ಸಿಮೆಂಟ್ ಕಾರ್ಖಾನೆಯ ಕೆಲಸಗಳಲ್ಲೂ ತೊಡಗಿದ್ದಾರೆ.

ಮಳಖೇಡ ಗ್ರಾಮ ಹೋಬಳಿಯಾಗಿರುವುದರಿಂದ ತಾಂಡಾದ ಮಹಿಳೆಯರು ತರಕಾರಿ, ಹಣ್ಣುಗಳ ಮಾರಾಟದಲ್ಲೂ ತೊಡಗಿಕೊಂಡಿದ್ದಾರೆ. ಇದು ಇವರ ಆರ್ಥಿಕತೆಯ ಇನ್ನೊಂದು ಮೂಲವಾಗಿದೆ. ಈ ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥರ್ಮಿಕ ಶಾಲೆಯಿದ್ದರೂ ತಾಂಡಾ ಹತ್ತಿರದ ಹೋಬಳಿ ಗ್ರಾಮವಾದ ಮಳಖೇಡದಲ್ಲಿ ಪದವಿಪೂರ್ವ ಹಂತದವರೆಗೆ ಶೈಕ್ಷಣಿಕ ಸೌಲಭ್ಯವಿರುವ ಕಾರಣ ಇಲ್ಲಿ ಶೈಕ್ಷಣಿಕ ಪ್ರಗತಿ ಕಂಡುಬರುತ್ತದೆ. ತಾಂಡಾದಲ್ಲಿ ಹೆಚ್ಚಾಗಿ ಮಾಳಿಗೆ ಮನೆಗಳು ಕಂಡುಬರುತ್ತವೆ. ರಸ್ತೆ ಡಾಂಬರೀಕರಣ ಮತ್ತು ಶೌಚಾಲಯಗಳ ಕೊರತೆ ಇರುವ ಕಾರಣ ನೈರ್ಮಲ್ಯೀಕರಣದ ತೊಂದರೆಯಿದೆ.

ಇವರು ಸಾಮಾಜಿಕವಾಗಿ ಪಿತೃಪ್ರಧಾನ ಕುಟುಂಬಗಳನ್ನು ಹೊಂದಿದ್ದು, ಲಂಬಾಣಿ ಸಂಪ್ರದಾಯ ದಂತೆ ವಿವಾಹ, ಹಬ್ಬಾಚರಣೆಗಳನ್ನು ನೆರವೇರಿಸುತ್ತಾರೆ. ಇವರು ಮಾಂಸಾಹಾರವನ್ನು ಹೆಚ್ಚಾಗಿ ಬಳಸುತ್ತಿದ್ದರೂ. ಪ್ರಸ್ತುತ ದಿನಗಳಲ್ಲಿ ಬೇಟೆಗಾರಿಕೆ ಕಂಡುಬರುತ್ತಿಲ್ಲ.

**೫. ಜೈನಾಪುರ ತಾಂಡಾ:** ತಾಲೂಕು ಕೇಂದ್ರವಾದ ಜೇವರ್ಗಿಯಿಂದ ೧೨ ಕಿ.ಮೀ. ದೂರದಲ್ಲಿರುವ ಜೈನಾಪುರ ತಾಂಡಾ ಕೆಲ್ಲೂರದಿಂದ ಆಂದೋಲಾ ಗ್ರಾಮಕ್ಕೆ ತೆರಳುವಾಗ ರಸ್ತೆ ಹತ್ತಿರದಲ್ಲಿ ಕಂಡುಬರುತ್ತದೆ. ಪದವಿ ಮತ್ತು ಸ್ನಾತಕೋತ್ತರ ಪದವಿ ಹೊಂದಿದವರ ಸಂಖ್ಯೆ ತೀರಾ ಕಡಿಮೆ ಪ್ರಮಾಣದಲ್ಲಿದೆ. ಈ ತಾಂಡಾದಲ್ಲಿ ಸ್ವಯಂ ಕೃಷಿಕರಿಗಿಂತಲೂ ಕೃಷಿಕೂಲಿ ಕಾರ್ಮಿಕತೆಯಲ್ಲಿ ತೊಡಗಿದವರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ಭೂ ಹಿಡುವಳಿಗಳಲ್ಲಿ ನೀರಾವರಿ ಅಲ್ಪಪ್ರಮಾಣದಲ್ಲಿದ್ದು, ಒಣಭೂಮಿ ಹೆಚ್ಚಾಗಿ ಕಂಡುಬರುತ್ತದೆ. ಈ ತಾಂಡಾವಾಸಿಗಳ ಆರ್ಥಿಕ ಆದಾಯದ ಇನ್ನೊಂದು ಪ್ರಮುಖ ಮೂಲವೆಂದರೆ ಪಶುಸಂಗೋಪನೆ. ಇದರಲ್ಲಿ ಕೋಳಿಸಾಗಾಣಿಕೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಹಾಗೆಯೇ ಇವರು ವಾಸಿಸುವ ಮನೆಗಳಲ್ಲಿ ಮಾಳಿಗೆ ಮನೆಗಳು ಹೆಚ್ಚಿನ ಪ್ರಮಾಣದಲ್ಲಿದ್ದು, ಬೆರಳಣಿಕೆಯಷ್ಟು ಮಾತ್ರ ಆರ್.ಸಿ.ಸಿ. ಮನೆಗಳಿರುವುದು ಕಂಡುಬರುತ್ತವೆ. ಉಳಿದಂತೆ ತಾಂಡಾದ ಜನರು ನಿತ್ಯ ಜೀವನಕ್ಕೆ ಅಗತ್ಯವಿರುವ ಮೂಲಭೂತ ಸೌಲಭ್ಯಗಳ ಕೊರತೆ ಕಂಡುಬರುತ್ತದೆ.

ಈ ತಾಂಡಾ ರಸ್ತೆ ಹತ್ತಿರದ ತಾಂಡಾವಾಗಿರುವುದರಿಂದ ಇವರಿಗೆ ನಗರ ಸಂಪರ್ಕ ಬಹು ಸರಳ. ಇವರು ನಿರಂತರವಾಗಿ ನಗರ ಸಂಪರ್ಕ ಹೊಂದಿರುವುದರಿಂದ ಇವರ ಜೀವನದ ಮೇಲೆ ಆಧುನಿಕತೆಯ ಗಾಢ ಪ್ರಭಾವವಾಗಿರುವುದು ಕಂಡುಬರುತ್ತದೆ. ಹಿರಿಯ ನಾಗರಿಕರು ಮಾತ್ರ ಸಾಂಪ್ರದಾಯಿಕ ವೇಷಭೂಷಣಗಳನ್ನು ಧರಿಸುತ್ತಿದ್ದಾರೆ. ಇವರ ವೈವಾಹಿಕ, ಸಾಮಾಜಿಕ, ಧಾರ್ಮಿಕ ಆಚರಣೆಗಳಿಗೂ ಕೂಡ ಆಧುನಿಕತೆಯ ಸ್ಪರ್ಶವಾಗಿರುವುದು ಈ ತಾಂಡಾದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

**೬. ಸಿಟಿಫಾರ್ಮ್ ತಾಂಡಾ:** ವಾಗ್ಧರಿ ರೆಬ್ಬನಪಲ್ಲಿ ರಾಜ್ಯ ಹೆದ್ದಾರಿಗೆ ಹತ್ತಿರವಿರುವ ಈ ತಾಂಡಾ ತಾಲೂಕು ಕೇಂದ್ರವಾದ ಆಳಂದದಿಂದ ೦೮ ಕಿ.ಮೀ. ದೂರದಲ್ಲಿದೆ. ಈ ತಾಂಡಾ ಭೌಗೋಳಿಕವಾಗಿ ಬಯಲು ಪ್ರದೇಶದಿಂದ ಕೂಡಿದ್ದು, ಒಣಭೂಮಿ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ. ಈ ತಾಂಡಾದ ಸುತ್ತಲಿನ ಜಮೀನು ನೀರಾವರಿ ರಹಿತವಾಗಿದೆ. ಇಲ್ಲಿ ಕೃಷಿ ಪ್ರಧಾನ ಕುಟುಂಬಗಳೇ ಹೆಚ್ಚಾಗಿದ್ದು. ಕೃಷಿ ಮತ್ತು ಕೃಷಿಕಾರ್ಮಿಕತೆಯಲ್ಲಿ ತೊಡಗಿಕೊಂಡಿದ್ದಾರೆ. ಇವರ ಆರ್ಥಿಕತೆಯ ಇನ್ನೊಂದು ಮೂಲವೆಂದರೆ ಹೈನುಗಾರಿಕೆ. ಹಾಲು ಮತ್ತು ಹಾಲಿನ ಉತ್ಪನ್ನಗಳ ಮಾರಾಟ ಮಾಡಲು ಇವರಿಗೆ ಆಳಂದ ತಾಲೂಕು ಅನುಕೂಲಕರ ಪಟ್ಟಣವಾಗಿದೆ. ಈ ತಾಂಡಾದಲ್ಲಿ ಪ್ರಾಥಮಿಕ ಹಂತದವರೆಗೆ ಶೈಕ್ಷಣಿಕ ಸೌಲಭ್ಯವಿದ್ದು, ರಸ್ತೆ ಹತ್ತಿರದ ತಾಂಡಾವಾಗಿರುವ ಕಾರಣ ಸಾರಿಗೆ ಸೌಲಭ್ಯವಿದ್ದು, ಮುಂದಿನ ಹಂತದ ಶಿಕ್ಷಣ ಪಡೆಯುತ್ತಿದ್ದಾರೆ. ಆದರೂ ಸಮೀಕ್ಷೆಯ ಪ್ರಕಾರ ಈ ತಾಂಡಾದಲ್ಲಿ ಪದವಿ ಹಂತದ ಶಿಕ್ಷಣ ಪಡೆದವರ ಸಂಖ್ಯೆ ಬೆರಳೆಣಿಕೆಯಷ್ಟಿದ್ದು, ಸ್ನಾತಕೋತ್ತರ ಶಿಕ್ಷಣ ಪಡೆದವರ ಸಂಖ್ಯೆ ಶೂನ್ಯವಾಗಿದೆ.

ಸಾಮಾಜಿಕವಾಗಿ ಈ ತಾಂಡಾದಲ್ಲಿ ಕೂಡ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಿದೆ. ಮನೆಯ ಯಜಮಾನನ ನೇತೃತ್ವದಲ್ಲಿಯೇ ಎಲ್ಲಾ ಕಾರ್ಯಗಳು ಜರುಗುತ್ತವೆ. ಮಾಳಿಗೆ ಮನೆಗಳ ಸಂಖ್ಯೆ ಹೆಚ್ಚಾಗಿದ್ದು, ಬೆರಳೆಣಿಕೆಯಷ್ಟು ಮಾತ್ರ ಆರ್.ಸಿ.ಸಿ. ಮನೆಗಳಿವೆ. ಇವರು ಸಾಂಪ್ರದಾಯಿಕವಾಗಿ ಲಂಬಾಣಿ ಸಮುದಾಯದ ಎಲ್ಲಾ ಹಬ್ಬಾಚರಣೆಗಳನ್ನು ಆಧುನಿಕತೆಯ ಪ್ರಭಾವದಿಂದ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಆಚರಿಸುತ್ತಿದ್ದಾರೆ.

ಹಚ್ಚೆ ಕಲೆಯಂತಹ ಪದ್ಧತಿಗಳು, ಸಂಪ್ರದಾಯಿಕ ಉಡುಗೆ ತೊಡುಗೆಗಳು ರಸ್ತೆ ಹತ್ತಿರದ ತಾಂಡಾಗಳ ಯುವಕರಲ್ಲಿ ಸಂಪೂರ್ಣವಾಗಿ ಇಲ್ಲವಾಗಿವೆ. ವಿಶೇಷವಾಗಿ ಹೇಳುವುದಾದರೆ ಇವರ ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಆಧುನೀಕತೆಯ ಲೇಪನವಾಗಿದೆ.

### ೨.೨. ಮಹಾರಾಷ್ಟ್ರ ರಾಜ್ಯದ ಪರಿಸರದ ಕಿರುನೋಟ

**ಮಹಾರಾಷ್ಟ್ರ : ಅಧ್ಯಯನಕ್ಕೆ ಆಯ್ಕೆ ಮಾಡಲಾದ ಸೋಲಾಪುರ ಜಿಲ್ಲೆ**






**ಪೀಠಿಕೆ:** ಮಹಾರಾಷ್ಟ್ರವು ಸಂಪದ್ಭರಿತ ಪರಂಪರೆಯನ್ನು ಹೊಂದಿದ್ದು, ಅದರ ಪ್ರಾಕೃತಿಕ ಸಂಪತ್ತು ಉಜ್ವಲ ಭವಿಷ್ಯವನ್ನು ರೂಪಿಸಲು ನಾಡಿನ ಜನತೆಗೆ ಸ್ಫೂರ್ತಿದಾಯಕವಾಗಿದೆ. ಅದರ ಭೌಗೋಳಿಕ ಸನ್ನಿವೇಶ, ನೈಸರ್ಗಿಕ ಸಂಪತ್ತು ಅಂದರೆ ಇಲ್ಲಿನ ನದಿಗಳು, ಬೆಟ್ಟಗಳು, ಕಣಿವೆಗಳು, ಮೈದಾನಗಳು, ಅರಣ್ಯಗಳು ಮತ್ತು ಇತರೆ ಸಂಪನ್ಮೂಲಗಳು ವೈವಿಧ್ಯತೆಯಿಂದ ಕೂಡಿದ್ದು ಹೇರಳವಾಗಿವೆ. ಹಾಗೆಯೇ ರಾಜ್ಯವು ಪ್ರೇಕ್ಷಣೀಯ ಸ್ಥಳಗಳಿಗೂ ಮತ್ತು ಕೈಗಾರಿಕಾ ಸಂಪನ್ಮೂಲಕ್ಕೂ ಅಷ್ಟೇ ಹೆಸರುವಾಸಿಯಾಗಿದೆ. ಭಾರತದ ಹಣಕಾಸು ಮತ್ತು ವಾಣಿಜ್ಯ ನಗರವೆಂದು ಪ್ರಖ್ಯಾತವಾದ ಮುಂಬೈ

ನಗರ ಮಹಾರಾಷ್ಟ್ರ ರಾಜ್ಯದ ರಾಜಧಾನಿಯಾಗಿದೆ. ಮರಾಠಿ ಭಾಷೆಯು ರಾಜ್ಯದ ಆಡಳಿತಾತ್ಮಕ ಭಾಷೆಯಾಗಿದೆ. ಪ್ರಪಂಚದಲ್ಲಿಯೇ ಎರಡನೇ ಅತಿದೊಡ್ಡ 'ಚಲನಚಿತ್ರ ನಿರ್ಮಾಣ ನಗರ' ಎಂಬ ಪ್ರಖ್ಯಾತಿಯನ್ನು ಪಡೆದುಕೊಂಡಿದೆ. ಈ ರಾಜ್ಯದ ಪ್ರಸಿದ್ಧವಾದ ನಗರಗಳೆಂದರೆ ಮುಂಬೈ ಮತ್ತು ಪೂನಾ. ಈ ಎರಡು ನಗರಗಳು ಶೈಕ್ಷಣಿಕ ಹಾಗೂ ಸಂಶೋಧನಾ ದೃಷ್ಟಿಯಿಂದ ಪ್ರಸಿದ್ಧಿ ಪಡೆದು ಕೊಂಡಿವೆ. ಆಧುನಿಕ ಮಹಾರಾಷ್ಟ್ರವು ದೇಶೀಯ ಸಂಪ್ರದಾಯ, ಪರಂಪರೆಗಳ ಮತ್ತು ಪಾಶ್ಚಿಮಾತ್ಯ ಶಿಕ್ಷಣಗಳೆರಡರ ಸಮ್ಮಿಶ್ರಣದಿಂದ ಕೂಡಿದೆ.

ಪ್ರವಾಸೋದ್ಯಮ ಮತ್ತು ಸಂಸ್ಕೃತಿಗಳೆರಡನ್ನು ಈ ರಾಜ್ಯದ ಪರಂಪರೆ ಒಳಗೊಂಡಿದ್ದು, ಇದರಿಂದ ರಾಜ್ಯದ ಸಮುದಾಯಗಳಲ್ಲಿ ಪರಸ್ಪರ ಪ್ರೀತಿ, ಸಾಮರಸ್ಯತೆಗಳು ಕಂಡುಬರುತ್ತವೆ.

**ಹೆಸರಿನ ಮೂಲ**

ಮಹಾರಾಷ್ಟ್ರದ ಶಬ್ದಶಃ ಅರ್ಥ ಮಹಾನ್ ಅಥವಾ ಶ್ರೇಷ್ಠರಾಷ್ಟ್ರ ಎಂದರ್ಥ. ಮಹಾರಾಷ್ಟ್ರ ಎಂಬುದು ಎರಡು ಭಿನ್ನ ಸಂಸ್ಕೃತ ಪದಗಳಿಂದ ನಿಷ್ಪನ್ನವಾಗಿದೆ. ಮಹಾ+ರಾಷ್ಟ್ರ=ಮಹಾರಾಷ್ಟ್ರ ಎಂದರೆ ದೊಡ್ಡದು, ಮಹತ್ವದ್ದು ಎಂದರ್ಥವಾಗುತ್ತದೆ. ರಾಷ್ಟ್ರ ಎಂದರೆ ದೇಶ ಎಂದರ್ಥವಾಗುತ್ತದೆ. ಆದ್ದರಿಂದ ಮಹಾರಾಷ್ಟ್ರ ಎಂಬುದು 'ದೊಡ್ಡ ರಾಜ್ಯ' ಎಂಬ ಅರ್ಥವನ್ನು ನೀಡುತ್ತದೆ.

ಈ ಮಹಾರಾಷ್ಟ್ರ ಎಂಬುದು ಋಗ್ವೇದದಲ್ಲಿ 'ರಾಷ್ಟ್ರ' ಎಂತಲೂ, ಅಶೋಕ ಚಕ್ರವರ್ತಿಯ ಶಿಲಾಶಾಸನಗಳಲ್ಲಿ 'ರಾಷ್ಟ್ರೀಯ' ಎಂತಲೂ, ನಂತರದ ದಿನಗಳಲ್ಲಿ ಹುಯೆನ್‌ತ್ಸಾಂಗ್ ಮತ್ತು ಇತರ ಪ್ರವಾಸಿಗರಿಂದ 'ಮಹಾರಾಷ್ಟ್ರ' ಎಂದು ದೃಢೀಕರಿಸಲ್ಪಟ್ಟಿದೆ. ಭಾರತದ ಪ್ರಾಚೀನ ಭಾಷೆಗಳಲ್ಲೊಂದಾದ ಪ್ರಾಕೃತ ಭಾಷೆಯ 'ಮಹಾರಾಷ್ಟ್ರಿ' ಎಂಬುದರಿಂದ ಮಹಾರಾಷ್ಟ್ರ ಎಂಬ ಪದವು ನಿಷ್ಪನ್ನ ಹೊಂದಿದಂತೆ ಕಂಡುಬರುತ್ತದೆ.

**ರಾಜ್ಯವು ನೆಲೆಗೊಂಡಿರುವ ಸ್ಥಳ**

ಈ ರಾಜ್ಯವು ಪಶ್ಚಿಮದಲ್ಲಿ ಅರಬ್ಬೀ ಸಮುದ್ರದಿಂದಲೂ, ವಾಯುವ್ಯದಲ್ಲಿ ಗುಜರಾತ ಮತ್ತು ಕೇಂದ್ರಾಡಳಿತ ಪ್ರದೇಶವಾದ ದಾದ್ರಾ-ನಗರ ಹವೇಲಿಗಳಿಂದಲೂ, ಈಶಾನ್ಯ ಭಾಗದಲ್ಲಿ ಮಧ್ಯಪ್ರದೇಶ ರಾಜ್ಯದಿಂದಲೂ, ಪೂರ್ವದಲ್ಲಿ ಛತ್ತೀಸಗಡ ರಾಜ್ಯದಿಂದಲೂ, ದಕ್ಷಿಣದಲ್ಲಿ ಕರ್ನಾಟಕ ರಾಜ್ಯದಿಂದಲೂ, ನೈಋತ್ಯದಲ್ಲಿ ಗೋವಾ ರಾಜ್ಯದಿಂದಲೂ ಸುತ್ತುವರಿಯಲ್ಪಟ್ಟಿದೆ.

ಮಹಾರಾಷ್ಟ್ರವು ಭೌಗೋಳಿಕವಾಗಿ ಭಾರತದ ಮೂರನೇ ದೊಡ್ಡ ರಾಜ್ಯವಾಗಿದೆ. ಭಾರತದ ಒಟ್ಟು ಭೂಪ್ರದೇಶದಲ್ಲಿ ಇದರ ಪಾಲು ಪ್ರತಿಶತ ೯.೮೪ರಷ್ಟಿದೆ. ಈ ರಾಜ್ಯದ ಒಟ್ಟು ಭೌಗೋಳಿಕ ವಿಸ್ತೀರ್ಣ ೩,೦೭,೭೧೩ ಚ.ಕಿ.ಮೀ ಇದೆ.

ರಾಜ್ಯದ ಭೌಗೋಳಿಕ ಭೂಪಟದ ವಿಭಿನ್ನ ಆಕಾರಗಳಿಗೆ ಪ್ರಮುಖ ಕಾರಣಗಳೆಂದರೆ, ಈ ರಾಜ್ಯವು ಒಳಗೊಂಡಿರುವ ಹಚ್ಚಹಸುರಾಗಿರುವ ಪರ್ವತಗಳು, ವಿಶಾಲವಾದ ಕರಾವಳಿಯ ತೀರಪ್ರದೇಶ ಹಾಗೂ ಬೃಹತ್ತಾಗಿ ನಿರ್ಮಿತಗೊಂಡಿರುವ ಕೋಟೆ ಕೊತ್ತಲಗಳು. ಮೊಘಲ್ ಚಕ್ರಾಧಿಪತ್ಯದ ಕಟು

ವಿರೋಧಿಯೂ, ಮರಾಠಾ ರಾಜಮನೆತನದ ಸಂಸ್ಥಾಪಕನೂ ಆದ ಛತ್ರಪತಿ ಶಿವಾಜಿ ಮಹಾರಾಜನಿಂದ ಆಳಲ್ಪಟ್ಟ ಭೂಪ್ರದೇಶವಾಗಿದೆ.

ಭಾರತದ ಪರ್ಯಾಯ ದ್ವೀಪದ ಉತ್ತರ ಕೇಂದ್ರ ಭಾಗದಲ್ಲಿ ಈ ರಾಜ್ಯವು ಸ್ಥಾಪಿತಗೊಂಡಿದ್ದು, ಅರಬ್ಬೀ ಸಮುದ್ರವು ಈ ರಾಜ್ಯಕ್ಕೆ ಪಶ್ಚಿಮ ಕರಾವಳಿಯ ತೀರವಾಗಿದೆ.

ಜನಸಂಖ್ಯೆ ಮತ್ತು ಪ್ರಾದೇಶಿಕ ವಿಸ್ತಾರಗಳೆರಡರಿಂದಲೂ ಮಹಾರಾಷ್ಟ್ರ ರಾಜ್ಯವು ಭಾರತದ ಮೂರನೆಯ ದೊಡ್ಡ ರಾಜ್ಯವಾಗಿದೆ. ಅರಬ್ಬೀ ಸಮುದ್ರಕ್ಕೆ ಹೊಂದಿಕೊಂಡಂತೆ ಈ ರಾಜ್ಯದ ಕರಾವಳಿ ತೀರದ ಉದ್ದ ೫೩೦ ಕಿ.ಮೀ. ಇದೆ.

**ಮಹಾರಾಷ್ಟ್ರ ರಾಜ್ಯದ ಇತಿಹಾಸ**

ಮಹಾರಾಷ್ಟ್ರ ಎಂಬ ಹೆಸರು 'ರಥಿ' ಎಂಬುದರಿಂದ ಉಗಮ ಹೊಂದಿದೆಯೆಂದು ನಂಬಲಾಗಿದೆ. ಈ ಪದದ ಅರ್ಥ 'ರಥದ ಚಾಲಕ' ಎಂದಾಗುತ್ತದೆ. ಪ್ರಥಮ ಬೌದ್ಧ ಗುಹೆಗಳ ನಿರ್ಮಾಣದೊಂದಿಗೆ ಕ್ರಿಪೂ. ೨ನೇ ಶತಮಾನದಿಂದ ಮಹಾರಾಷ್ಟ್ರದ ಇತಿಹಾಸ ದಾಖಲೆಗೊಂಡಿದೆ. ಕ್ರಿಶ. ೭ನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ ಹುಯೆನ್‌ತ್ಸಾಂಗ್‌ನ ಬರಹಗಳಲ್ಲಿಯೂ ಕೂಡ ಮಹಾರಾಷ್ಟ್ರ ಹೆಸರಿನ ಉಲ್ಲೇಖ ಕಂಡುಬರುತ್ತದೆ. ಶಿವಾಜಿ ಭೋಸ್ಲೆ ಮರಾಠಾ ರಾಜಮನೆತನದ ಸ್ಥಾಪಕನಾಗಿದ್ದು, ಈತ ತನ್ನ ಜೀವನದುದ್ದಕ್ಕೂ ಮೊಘಲರೊಂದಿಗೆ ಹೋರಾಡಿರುವುದು ತಿಳಿದುಬರುತ್ತದೆ. ೧೬೮೦ರಲ್ಲಿ ಶಿವಾಜಿಯ ಮರಣದ ವೇಳೆಗೆ ದಖನ್‌ನ ಬಹುಭಾಗ ಮರಾಠರ ಆಡಳಿತಕ್ಕೆ ಒಳಪಟ್ಟಿರುವುದು ತಿಳಿದುಬರುತ್ತದೆ.

ಶಿವಾಜಿ ಭಾರತವನ್ನಾಳಿದ ಪ್ರಸಿದ್ಧ ಮತ್ತು ದಕ್ಷ ಆಡಳಿತಗಾರರಲ್ಲಿ ಒಬ್ಬನಾಗಿದ್ದು, ಈತನ ಕಾಲದಲ್ಲಿ ಮಹಾರಾಷ್ಟ್ರ ಸರ್ವವಿಧದಲ್ಲಿ ಪ್ರಗತಿ ಹಾಗೂ ಪ್ರಸಿದ್ಧಿ ಪಡೆದಿತ್ತು. ಶಿವಾಜಿಯ ಪ್ರಸಿದ್ಧಿಗೆ ಮತ್ತು ಯಶಸ್ಸಿಗೆ ಸಂಭಾಜಿಯೇ ಕಾರಣನಾಗಿದ್ದರೂ ಈತ ಶಿವಾಜಿಯ ತಂದೆಯಾದ ಷಹಾಜಿಯಷ್ಟು ಪ್ರಸಿದ್ಧನಾಗಿರಲಿಲ್ಲ. ಕ್ರಿಶ. ೧೬೮೦ ರಿಂದ ಕ್ರಿಶ. ೧೭೦೭ರವರೆಗಿನ ಕಾಲಾವಧಿಯನ್ನು ಮರಾಠಾ ಇತಿಹಾಸದಲ್ಲಿ ಅಸ್ಥಿರತೆಯ ಕಾಲಾವಧಿ ಎಂದು ಕರೆಯಲಾಗಿದೆ. ಮಹಾರಾಷ್ಟ್ರ ರಾಜ್ಯದಲ್ಲಿ ಆಳ್ವಿಕೆ ಮಾಡಿದ ಇತರ ಪ್ರಮುಖರೆಂದರೆ ಬಾಲಾಜಿ ವಿಶ್ವನಾಥ (೧೭೧೨ ರಿಂದ ೧೭೨೧), ಬಾಜಿರಾವ ಪೇಶ್ವೆ (೧೭೨೧ ರಿಂದ ೧೭೪೦), ನಾನಾಸಾಹೇಬ ಪೇಶ್ವೆ (೧೭೪೦ ರಿಂದ ೧೭೬೧), ಮಾಧವರಾವ ಪೇಶ್ವೆ (೧೭೬೧ ರಿಂದ ೧೭೭೨), ನಾರಾಯಣರಾವ ಪೇಶ್ವೆ (೧೭೭೨ ರಿಂದ ೧೭೭೩), ಸವಾಯಿ ಮಾಧವರಾವ ಪೇಶ್ವೆ (೧೭೭೪ ರಿಂದ ೧೭೯೫), ೨ನೇ ಬಾಜಿರಾಯ ಪೇಶ್ವೆ (೧೭೯೫ ರಿಂದ ೧೮೦೨).

೧೮೦೩ರಲ್ಲಿ ಅಹ್ಮದ್‌ನಗರ ಕೋಟೆಯ ಅವಸಾನ ಭಾರತೀಯ ಅರಸರ ಆಳ್ವಿಕೆಯ ಪತನದ ಮತ್ತು ದಖನ್ ಪ್ರಾಂತದಲ್ಲಿ ಬ್ರಿಟೀಷ್ ಆಳ್ವಿಕೆಯ ಪ್ರಾರಂಭದ ಗುರುತಾಗಿದೆ. ನಂತರ ೧೮೦೪ರಲ್ಲಿ ಜನರಲ್ ವೆಲ್ಲೆಸ್ಲಿಯಿಂದ ಡೆಕ್ಕನ್‌ನ ಚೋಅಸ್ ಎಂಬ ರಾಜ್ಯದಲ್ಲಿ ಬ್ರಿಟೀಷರ ಮಿಲಿಟರಿ ಆಡಳಿತ ಜಾರಿಗೆ ಬಂದು ಪೇಶ್ವೆಗಳು ಕೇವಲ ನಾಮಮಾತ್ರ ಪ್ರಮುಖರಾಗಿ ಉಳಿದರು.

ಪ್ರಸ್ತುತ ಮಹಾರಾಷ್ಟ್ರ ರಾಜ್ಯ ೧೯೬೦ರಲ್ಲಿ ರಚನೆಯಾಯಿತು. ಮುಂಬೈ ಈ ರಾಜ್ಯದ ರಾಜಧಾನಿ ನಗರವಾಗಿದೆ. ಈ ರಾಜ್ಯ ರಚನೆಯ ನಂತರ ಮರಾಠಿ ಮತ್ತು ಗುಜರಾತಿ ಭಾಷಾ ಪ್ರದೇಶಗಳು ಪ್ರತ್ಯೇಕಗೊಂಡವು. ಮಹಾರಾಷ್ಟ್ರ ರಾಜ್ಯವು ಉತ್ತರ ಭಾರತ ಮತ್ತು ದಕ್ಷಿಣ ಭಾರತಗಳೆರಡರ ಮಧ್ಯದ ಸಾಂಸ್ಕೃತಿಕ ಸ್ವಾಂಗೀಕರಣದ ಕೊಂಡಿಯಾಯಿತು.

**ಕೃಷಿ**

ಭಾರತವು ಕೃಷಿ ಪ್ರಧಾನವಾದ ದೇಶ. ಅಂತೆಯೇ ಮಹಾರಾಷ್ಟ್ರವೂ ಕೂಡ ಕೃಷಿ ಪ್ರಧಾನವಾದ ರಾಜ್ಯವಾಗಿದೆ. ಆದಾಗ್ಯೂ ಇತ್ತೀಚೆಗೆ ಹೆಚ್ಚಿನ ಪ್ರಮಾಣದ ಕೈಗಾರಿಕೆಗಳ ಸ್ಥಾಪನೆಯಿಂದ ಕೃಷಿಯಾಧರಿಸಿ ಜೀವಿಸುವವರ ಸಂಖ್ಯೆ ಸ್ವಲ್ಪ ಕಡಿಮೆಯಾಗಿದೆ. ರಾಜ್ಯದ ಮೈದಾನ ಮತ್ತು ಕರಾವಳಿ ಭಾಗಗಳು ಸಮತಟ್ಟಾಗಿವೆ. ಆದರೆ ಮೈದಾನ ಭಾಗಗಳಲ್ಲಿ ಮಳೆಯ ಹಂಚಿಕೆಯು ಅಕಾಲಿಕ ಮತ್ತು ಅನಿಶ್ಚಿತವಾಗಿದ್ದು, ಆಗಾಗ್ಗೆ ಕ್ಷಾಮವು ತಲೆದೋರುವುದು. ಇಂತಹ ಕಡೆ ನೀರಾವರಿ ಸೌಲಭ್ಯವು ಅವಶ್ಯವಾಗಿದೆ. ರಾಜ್ಯದ ಕೃಷಿಯಿಂದ ಆಹಾರ ಮತ್ತು ಕಚ್ಚಾ ಪದಾರ್ಥಗಳು ದೊರೆಯುವುದರ ಜೊತೆಗೆ ರಾಷ್ಟ್ರೀಯ ಆದಾಯ ಮತ್ತು ರಾಜ್ಯದ ಆದಾಯದ ಮೂಲ ಆಕರವೂ ಆಗಿರುತ್ತದೆ.

ಮಹಾರಾಷ್ಟ್ರ ರಾಜ್ಯದಲ್ಲಿ ಅನೇಕ ಪ್ರಕಾರದ ಬೆಳೆಗಳನ್ನು ಬೆಳೆಯಲಾಗುತ್ತದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಹತ್ತಿ, ಕಬ್ಬು, ಜೋಳ, ಎಣ್ಣೆಕಾಳುಗಳು, ಶೇಂಗಾ, ಅಲಸಂದಿ, ಅವರೆ, ತೊಗರಿ, ಸಜ್ಜೆ, ಗೋಧಿ, ರಾಗಿ, ತೋಟಗಾರಿಕೆ ಬೆಳೆಗಳು, ತಂಬಾಕು ಮುಖ್ಯವಾದವುಗಳಾಗಿವೆ.

**ಜನತೆ**

ಯಾವುದೇ ಪ್ರದೇಶ ಅಥವಾ ರಾಜ್ಯದ ಆರ್ಥಿಕಾಭಿವೃದ್ಧಿಯು ಜನಸಂಖ್ಯೆಯ ಗಾತ್ರ ಮತ್ತು ಗುಣಮಟ್ಟವನ್ನಾಧರಿಸಿರುತ್ತದೆ. ಸಂಪನ್ಮೂಲಗಳಲ್ಲಿ ಮಾನವ ಸಂಪತ್ತು ಅಮೂಲ್ಯವಾದುದು. ಏಕೆಂದರೆ ಮಾನವ ಆತನ ಬುದ್ಧಿವಂತಿಕೆ ಹಾಗೂ ಕಾರ್ಯದಕ್ಷತೆಯಿಂದ ಇತರ ಸಂಪನ್ಮೂಲಗಳನ್ನು ಪಡೆಯಬಲ್ಲ ಕ್ರಿಯಾಶೀಲ ಉತ್ಪಾದಕ ಉತ್ತಮ ಗುಣಮಟ್ಟವುಳ್ಳ ಮಿತವಾದ ಜನಸಂಖ್ಯೆಯು ದೇಶದ ಸಂಪತ್ತಾಗಿ ಪರಿಣಮಿಸುವುದು.

ಭಾರತದ ಒಟ್ಟು ೨೮ ರಾಜ್ಯಗಳಲ್ಲಿ ಮಹಾರಾಷ್ಟ್ರವು ಒಂದಾಗಿದ್ದು ೩,೦೭,೭೧೩ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಮಹಾರಾಷ್ಟ್ರ ರಾಜ್ಯವು ೩೫ ಜಿಲ್ಲೆಗಳನ್ನು ಒಳಗೊಂಡಿದೆ. ೨೦೧೧ರ ಜನಗಣತಿಯಂತೆ ರಾಜ್ಯದ ಒಟ್ಟು ಜನಸಂಖ್ಯೆ ೧೧,೨೩,೭೪,೩೩೩. ಇದರಲ್ಲಿ ೫,೮೨,೪೩,೦೫೬ ಪುರುಷರು ಹಾಗೂ ೫,೪೧,೩೧,೨೭೭ ಮಹಿಳೆಯರಿರುವುದು ಕಂಡುಬರುತ್ತದೆ. ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ೬,೧೫,೫೬,೦೭೪ ಜನಸಂಖ್ಯೆಯಿದ್ದು, ಇದರಲ್ಲಿ ೩,೧೫,೩೯,೦೩೪ ಪುರುಷರು ಹಾಗೂ ೩,೦೦,೧೭,೦೪೦ ಮಹಿಳೆಯರು. ನಗರ ಪ್ರದೇಶಗಳಲ್ಲಿ ೨,೬೭,೦೪,೦೨೨ ಪುರುಷರು, ೨,೪೧,೧೪,೨೩೭ ಮಹಿಳೆಯರನ್ನೊಳಗೊಂಡಂತೆ ಒಟ್ಟು ೫,೦೮,೧೮,೨೫೯ ಜನಸಂಖ್ಯೆ ಕಂಡುಬರುತ್ತದೆ. ಮಹಾರಾಷ್ಟ್ರದ ಗ್ರಾಮೀಣ ಭಾಗದಲ್ಲಿ ಶೇ. ೫೪.೭೮ರಷ್ಟು ಹಾಗೂ ನಗರ ಪ್ರದೇಶಗಳಲ್ಲಿ ಶೇ. ೪೫.೨೨ರಷ್ಟು ಪ್ರಮಾಣದ ಜನಸಂಖ್ಯೆ ವಾಸಿಸುತ್ತಿರುವುದು ಕಂಡುಬರುತ್ತದೆ.

**ಕೋಷ್ಟಕ ೨.೨. ಮಹಾರಾಷ್ಟ್ರ ರಾಜ್ಯದ ಜಿಲ್ಲಾವಾರು ೨೦೧೧ರ ಜನಸಂಖ್ಯಾ ವಿವರ**

| ಕ್ರಸಂ. | ಜಿಲ್ಲೆಗಳು | ಒಟ್ಟು ಜನಸಂಖ್ಯೆ | ಗಂಡು | ಹೆಣ್ಣು |
|---|---|---|---|---|
| ೧. | ಧುಲೇ | ೨೦,೫೦,೮೬೨ | ೧೦,೫೪,೦೩೧ | ೯,೯೬,೮೩೧ |
| ೨. | ಜಲಗಾಂವ | ೪೨,೨೯,೯೧೭ | ೨೧,೯೭,೩೬೫ | ೨೦,೩೨,೫೫೨ |
| ೩. | ಬುಲದಾಣಾ | ೨೫,೮೬,೨೫೮ | ೧೩,೩೭,೫೬೦ | ೧೨,೪೮,೬೯೮ |
| ೪. | ಅಕೋಲಾ | ೧೮,೧೩,೯೦೬ | ೯,೩೨,೩೩೪ | ೮,೮೧,೫೭೨ |
| ೫. | ವಾಸಿಮ | ೧೧,೯೭,೧೬೦ | ೬,೨೦,೩೦೨ | ೫,೭೬,೮೫೮ |
| ೬. | ಅಮರಾವತಿ | ೨೮,೮೮,೪೪೫ | ೧೪,೮೦,೭೬೮ | ೧೪,೦೭,೬೭೭ |
| ೭. | ವಾರ್ಧಾ | ೧೩,೦೦,೭೭೪ | ೬,೬೮,೩೮೫ | ೬,೩೨,೩೮೯ |
| ೮. | ನಾಗಪುರ | ೪೬,೫೩,೫೭೦ | ೨೩,೮೪,೯೭೫ | ೨೨,೬೮,೫೯೫ |
| ೯. | ಭಂಡಾರಾ | ೧೨,೦೦,೩೩೪ | ೬,೦೫,೫೨೦ | ೫,೯೪,೮೧೪ |
| ೧೦. | ಗೊಂಡಿಯಾ | ೧೩,೨೨,೫೦೭ | ೬,೬೧,೫೫೪ | ೬,೬೦,೯೫೩ |
| ೧೧. | ಗಡಚಿರೋಲಿ | ೧೦,೭೨,೯೪೨ | ೫,೪೨,೩೨೮ | ೫,೩೦,೬೧೪ |
| ೧೨. | ಚಂದ್ರಪುರ | ೧೪,೨೮,೯೨೯ | ೭,೨೬,೧೦೬ | ೭,೦೨,೮೨೩ |
| ೧೩. | ಯವತಮಾಳ | ೨೭,೭೨,೩೪೮ | ೧೪,೧೯,೯೬೫ | ೧೩,೫೨,೩೮೩ |
| ೧೪. | ನಾಂದೇಡ | ೩೩,೬೧,೨೯೨ | ೧೭,೩೦,೦೭೫ | ೧೬,೩೧,೨೧೭ |
| ೧೫. | ಹಿಂಗೋಲಿ | ೧೧,೭೭,೩೪೫ | ೬,೦೬,೨೯೪ | ೫,೭೧,೦೫೧ |
| ೧೬. | ಪರಭಣಿ | ೧೨,೬೬,೨೮೦ | ೬,೫೧,೮೮೬ | ೬,೧೪,೩೯೪ |
| ೧೭. | ಜಾಲನಾ | ೧೯,೫೯,೦೪೬ | ೧೦,೧೧,೪೭೩ | ೯,೪೭,೫೭೩ |
| ೧೮. | ಔರಂಗಾಬಾದ | ೨೦,೮೧,೧೧೨ | ೧೦,೮೧,೮೨೫ | ೯,೯೯,೨೮೭ |
| ೧೯. | ನಾಸಿಕ | ೬೧,೦೭,೧೮೭ | ೩೧,೫೭,೧೮೬ | ೨೯,೫೦,೦೦೧ |
| ೨೦. | ಠಾಣೆ | ೧,೧೦,೬೦,೧೪೮ | ೫೮,೬೫,೦೭೮ | ೫೧,೯೫,೦೭೦ |
| ೨೧. | ಮುಂಬೈಸಬ್‌ಅರ್ಬನ | ೯೩,೫೬,೯೬೨ | ೫೦,೩೧,೩೨೩ | ೪೩,೨೫,೬೩೯ |
| ೨೨. | ಮುಂಬೈ | ೩೦,೮೫,೪೧೧ | ೧೬,೮೪,೬೦೮ | ೧೪,೦೦,೮೦೩ |

| | | | | |
|---|---|---|---|---|
| ೨೩. | ರಾಯಗಡ | ೨೬,೩೪,೨೦೦ | ೧೩,೪೪,೩೪೫ | ೧೨,೮೯,೮೫೫ |
| ೨೪. | ಪುಣೆ | ೯೪,೨೯,೪೦೮ | ೪೯,೨೪,೧೦೫ | ೪೫,೦೫,೩೦೩ |
| ೨೫. | ಅಹಮದನಗರ | ೪೫,೪೩,೧೫೯ | ೨೩,೪೨,೮೨೫ | ೨೨,೦೦,೩೩೪ |
| ೨೬. | ಬಿಡ್ | ೨೫,೮೫,೦೪೯ | ೧೩,೪೯,೧೦೬ | ೧೨,೩೫,೯೪೩ |
| ೨೭. | ಲಾತೂರ | ೨೪,೫೪,೧೯೬ | ೧೨,೭೩,೧೪೦ | ೧೧,೮೧,೦೫೬ |
| ೨೮. | ಉಸ್ಮಾನಾಬಾದ | ೧೬,೫೭,೫೭೬ | ೮,೬೧,೫೩೫ | ೭,೯೬,೦೪೧ |
| ೨೯. | ಸೋಲಾಪುರ | ೪೩,೧೭,೭೫೬ | ೨೨,೨೭,೮೫೨ | ೨೦,೮೯,೯೦೪ |
| ೩೦. | ಸಾತಾರಾ | ೩೦,೦೩,೭೪೧ | ೧೫,೧೦,೮೪೨ | ೧೪,೯೨,೮೯೯ |
| ೩೧. | ರತ್ನಗಿರಿ | ೧೬,೧೫,೦೬೯ | ೭,೬೧,೧೨೧ | ೮,೫೩,೯೪೮ |
| ೩೨. | ಸಿಂಧುದುರ್ಗ | ೮,೪೯,೬೫೧ | ೪,೧೭,೩೩೨ | ೪,೩೨,೩೧೯ |
| ೩೩. | ಕೊಲ್ಹಾಪುರ | ೩೮,೭೬,೦೦೧ | ೧೯,೮೦,೬೫೮ | ೧೮,೯೫,೩೪೩ |
| ೩೪. | ಸಾಂಗಲಿ | ೨೮,೨೨,೧೪೩ | ೧೪,೩೫,೭೨೮ | ೧೩,೮೬,೪೧೫ |
| ೩೫. | ನಂದುರಾಬಾದ | ೧೬,೪೮,೨೯೫ | ೮,೩೩,೧೭೦ | ೮,೧೫,೧೨೫ |

**(ಮೂಲ: ೨೦೧೧ರ ಭಾರತೀಯ ಜನಗಣತಿ)**

೨೦೧೧ರ ಜನಗಣತಿಯಂತೆ ಮಹಾರಾಷ್ಟ್ರ ರಾಜ್ಯದ ಜಿಲ್ಲಾವಾರು ಜನಸಂಖ್ಯೆಯನ್ನು ವೀಕ್ಷಿಸಿದಾಗ ಠಾಣೆ ಜಿಲ್ಲೆಯು ಅತಿ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿದ್ದು, ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೯.೮೪ರಷ್ಟು ಜನಸಂಖ್ಯಾ ಪಾಲನ್ನು ಹೊಂದಿ ಮೊದಲನೆಯ ಸ್ಥಾನದಲ್ಲಿದೆ. ಪುಣೆ ಜಿಲ್ಲೆಯು ಶೇ. ೮.೩೯ರಷ್ಟು ಜನಸಂಖ್ಯಾ ಪಾಲನ್ನು ಪಡೆದು ಎರಡನೇ ಸ್ಥಾನದಲ್ಲಿದೆ. ಸಿಂಧುದುರ್ಗ ಜಿಲ್ಲೆಯು ಅತೀ ಕಡಿಮೆ ಜನಸಂಖ್ಯೆಯನ್ನು ಹೊಂದಿದ ಜಿಲ್ಲೆಯಾಗಿದ್ದು, ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೦.೭೫ರಷ್ಟು ಪ್ರಮಾಣದ ಪಾಲನ್ನು ಹೊಂದಿ ಕೊನೆಯ ಸ್ಥಾನದಲ್ಲಿ ಎಂದರೆ ೩೫ನೇ ಸ್ಥಾನದಲ್ಲಿರುವುದು ಕಂಡುಬರುತ್ತದೆ.

### ೨.೨.೧. ಸೋಲಾಪುರ ಜಿಲ್ಲೆಯ ಕಿರುನೋಟ

**ಪೀಠಿಕೆ:** ಮಹಾರಾಷ್ಟ್ರ ರಾಜ್ಯದ ಪ್ರಮುಖ ಜಿಲ್ಲೆಯಾದ ಸೋಲಾಪುರ ವಿಶೇಷ ವೈದ್ಯಕೀಯ ಚಿಕಿತ್ಸೆಗಳಿಗೆ, ಬಟ್ಟೆ ಗಿರಣಿಗಳಿಗೆ, ಇತರ ಕೈಗಾರಿಕೆಗಳಿಗೆ ಮಾತ್ರವಲ್ಲದೆ, ಐತಿಹಾಸಿಕ ದೃಷ್ಟಿಕೋನದಿಂದಲೂ ಕೂಡ ವೈಶಿಷ್ಟ್ಯತೆಯನ್ನು ಹೊಂದಿದೆ. ಇದಕ್ಕೆ ಪ್ರಮುಖ ಕಾರಣವೆಂದರೆ ಈ ಜಿಲ್ಲೆ ಭಾರತದ ಸ್ವಾತಂತ್ರ್ಯ ಪೂರ್ವದಿಂದಲೂ ಸ್ವಾತಂತ್ರ್ಯವನ್ನು ಹೊಂದಿತ್ತು. ಸೋಲಾಪುರ ಜಿಲ್ಲೆಯ ನಾಗರಿಕರು

೧೯೩೦ನೇ ಇಸ್ವಿಯ ಮೇ ೯, ೧೦, ೧೧ನೇ ತಾರೀಖಿನಂದು ಮೂರು ದಿವಸಗಳ ಸ್ವಾತಂತ್ರ್ಯವನ್ನು ಅನುಭವಿಸಿದ್ದರು. ಹೀಗೆ ಈ ಜಿಲ್ಲೆ ಪ್ರಾಚೀನ ಕಾಲದಿಂದ ಇಂದಿನವರೆಗೆ ಹಲವು ಕಾರಣಗಳಿಂದ ರಾಜ್ಯದಲ್ಲಿ ವಿಶೇಷತೆಯನ್ನು ಪಡೆದಿದೆ.

**ಹೆಸರಿನ ಮೂಲ**

ಸೋಲಾಪುರ ಎಂಬ ಪದವು ಎರಡು ಶಬ್ದಗಳಿಂದ ಉತ್ಪತ್ತಿಯಾಗಿದೆ. ಅವುಗಳೆಂದರೆ 'ಸೋಲಾ' ಮತ್ತು 'ಪುರ'. ಸೋಲಾ ಎಂದರೆ ಹದಿನಾರು. ಪುರ ಎಂದರೆ ಹಳ್ಳಿ ಎಂದರ್ಥ. ಪ್ರಸ್ತುತ ನಗರವಾಗಿರುವ ಸೋಲಾಪುರ ಪ್ರಾಚೀನ ಕಾಲದಲ್ಲಿ ಹದಿನಾರು ಹಳ್ಳಿಗಳಿಂದ ಕೂಡಿದ್ದಾಗಿತ್ತು. ಅವುಗಳೆಂದರೆ ಅದಿಲ್‌ಪುರ, ಅಹ್ಮದ್‌ಪುರ, ಚಾಪಲ್ದೇವ್, ಫತೇಪುರ, ಕಾಲಾಜಪುರ, ಜಮ್ದೆರ್‌ವಾಡಿ, ಲದರ್‌ಪುರ, ಖಾಂದರ್ವ್‌ವಾಡಿ, ಮಹ್ಮದ್‌ಪುರ, ರಾಣಾಪುರ, ಸಂದಲ್ಪುರ, ಶೆಕ್ಪುರ, ಸೋಲಾಪುರ, ಸೋನಲಗಿ, ಸೋನಾಪುರ ಮತ್ತು ವೈದಕವಾಡಿ.

ಇತ್ತೀಚಿನ ಸಂಶೋಧನೆಗಳಿಂದ ತಿಳಿದುಬಂದಿರುವ ಮತ್ತೊಂದು ಅಂಶವೆಂದರೆ, ಕಲ್ಯಾಣಿ ಕಲಚೂರಿಯರ ಕಾಲದ ಸಾಹಿತ್ಯಿಕ ಆಧಾರವು ಶಿವಯೋಗಿ ಶ್ರೀ ಸಿದ್ಧರಾಮನ ನೆಲೆವೀಡಾಗಿರುವುದರಿಂದ ಈ ಪಟ್ಟಣವು 'ಸೊನ್ನಲಗಿ' ಎಂದು ಜನಪ್ರಿಯತೆಗೆ ಬಂದಿತು. ಇದೇ ಮುಂದೆ ಉಚ್ಚಾರದಲ್ಲಿ ಬದಲಾವಣೆ ಹೊಂದಿ 'ಸೊನ್ನಲಿಗಿ' ಎಂದಾಯಿತು. ಮುಂದೆ ಈ ಜಿಲ್ಲೆಯನ್ನಾಳಿದ ಯಾದವರ ಕಾಲದವರೆಗೂ 'ಸೊನ್ನಲಿಗೆ' ಎಂತಲೇ ಕರೆಯಲ್ಪಟ್ಟಿತು. ಸೊನ್ನಲಿಗೆ ಕಾಲಾಂತರದಲ್ಲಿ ಸೋಲಾಪುರ ಎಂದು ಕರೆಯಲ್ಪಟ್ಟಿತು.

**ಜಿಲ್ಲೆ ನೆಲೆಗೊಂಡಿರುವ ಸ್ಥಳ**

ಮಹಾರಾಷ್ಟ್ರ ರಾಜ್ಯದ ಒಂದು ಪ್ರಮುಖ ಜಿಲ್ಲೆಯಾದ ಸೋಲಾಪುರ ೧೪೮೪೪.೬ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ರಸ್ತೆ ಮತ್ತು ರೈಲು ಮಾರ್ಗಗಳೆರಡರಿಂದಲೂ ರಾಜ್ಯದ ರಾಜಧಾನಿಯಾದ ಮುಂಬೈಯಿಂದ ೪೧೦ ಕಿ.ಮೀಗಳ ಅಂತರದಲ್ಲಿ ಈ ಜಿಲ್ಲೆ ಕಂಡುಬರುತ್ತದೆ. ಮುಂಬೈ-ಚೆನ್ನೈ ಮತ್ತು ಮುಂಬೈ-ಹೈದ್ರಾಬಾದ್ ರೈಲ್ವೆ ಮಾರ್ಗದಲ್ಲಿ ಈ ನಗರವಿದೆ. ಈ ಜಿಲ್ಲೆಯು ಪೂನಾದಿಂದ ೨೪೫ ಕಿ.ಮೀ ಮತ್ತು ಹೈದ್ರಾಬಾದ್‌ದಿಂದ ೩೦೫ ಕಿ.ಮೀ ಅಂತರದಲ್ಲಿ ಕಂಡುಬರುತ್ತದೆ. ಈ ನಗರದಿಂದ ಹಾದುಹೋಗುವ ಪ್ರಮುಖ ರಾಷ್ಟ್ರೀಯ ಹೆದ್ದಾರಿಗಳೆಂದರೆ ಎನ್. ಹೆಚ್-೯, ಎನ್. ಹೆಚ್-೧೩ ಮತ್ತು ಎನ್. ಹೆಚ್-೨೧೧.

ಸೋಲಾಪುರ ಜಿಲ್ಲೆಯು ೧೧ ತಾಲೂಕುಗಳನ್ನು ಒಳಗೊಂಡಿದ್ದು, ಜಿಲ್ಲೆಯ ಗಡಿರೇಖೆಯಲ್ಲಿ ಉತ್ತರಕ್ಕೆ ಅಹ್ಮದ್‌ನಗರ, ಉಸ್ಮಾನಾಬಾದ್ ಜಿಲ್ಲೆ. ಪೂರ್ವಕ್ಕೆ ಗುಲಬರ್ಗಾ ಜಿಲ್ಲೆ. ದಕ್ಷಿಣದಲ್ಲಿ ಸಾಂಗ್ಲಿ ಮತ್ತು ಬಿಜಾಪುರ ಜಿಲ್ಲೆಗಳು ಹಾಗೆಯೇ ಪಶ್ಚಿಮಕ್ಕೆ ಪೂನಾ ಮತ್ತು ಸಾತಾರಾ ಜಿಲ್ಲೆಗಳು ಕಂಡುಬರುತ್ತವೆ.

**ಜನತೆ**

ಮಹಾರಾಷ್ಟ್ರ ರಾಜ್ಯದ ೩೫ ಜಿಲ್ಲೆಗಳಲ್ಲಿ ಸೋಲಾಪುರ ಜಿಲ್ಲೆಯು ಒಂದಾಗಿದ್ದು, ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ.೩.೮೪ರಷ್ಟು ಪ್ರಮಾಣದ ಪಾಲನ್ನು ಹೊಂದಿ ಏಳನೆಯ ಸ್ಥಾನದಲ್ಲಿ ನಿಲ್ಲುತ್ತದೆ. ೨೦೧೧ರ ಜನಗಣತಿಯಂತೆ ೨೨,೨೭,೮೫೨ ಪುರುಷರು ಹಾಗೂ ೨೦,೮೯,೯೦೪ ಮಹಿಳೆಯರನ್ನೊಳಗೊಂಡಂತೆ ಒಟ್ಟು ೪೩,೧೭,೭೫೬ ಜನಸಂಖ್ಯೆಯನ್ನು ಹೊಂದಿದೆ. ಸೋಲಾಪುರ ಜಿಲ್ಲೆಯು ಗ್ರಾಮೀಣ ಭಾಗದಲ್ಲಿ ೧೫,೧೮,೩೪೩ ಪುರುಷರು, ೧೪,೦೦,೩೨೨ ಮಹಿಳೆಯರಿದ್ದು ಒಟ್ಟು ೨೯,೧೮,೬೬೫. ನಗರ ಪ್ರದೇಶಗಳಲ್ಲಿ ೭,೦೯,೫೦೯ ಪುರುಷರು ಮತ್ತು ೬,೮೯,೫೮೨ ಮಹಿಳೆಯನ್ನೊಳಗೊಂಡಂತೆ ಒಟ್ಟು ೧೩,೯೯,೦೯೧ ಜನರು ವಾಸಿಸುತ್ತಿರುವದು ಕಂಡುಬರುತ್ತದೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಶೇ. ೬೭.೬೦ ಹಾಗೂ ನಗರ ಪ್ರದೇಶಗಳಲ್ಲಿ ಶೇ. ೩೨.೪೦ರಷ್ಟು ಜನಸಂಖ್ಯೆ ಇರುವುದು ಸ್ಪಷ್ಟವಾಗಿ ಗೋಚರಿಸುತ್ತಿದೆ.

ಸೋಲಾಪುರ ಜಿಲ್ಲೆಯು ಹನ್ನೊಂದು ತಾಲೂಕುಗಳನ್ನು ಒಳಗೊಂಡಿದೆ. ೨೦೧೧ರ ಜನಗಣತಿಯಂತೆ ಕರಮಳಾ ತಾಲೂಕು ೨೫೪೪೮೯, ಮಾಢಾ ೩೨೪೦೨೭, ಬಾರ್ಸಿ ೩೭೨೭೧೧, ಉತ್ತರ ಸೋಲಾಪುರ ೧೦೫೭೩೫೨, ಮೊಹೊಳ ೨೭೬೯೨೦, ಪಂಢರಾಪುರ ೪೪೨೩೬೮, ಮಾಳಸಿರಾಸ ೪೮೫೬೪೫, ಸಂಗೋಲ ೩೨೨೮೪೫, ಮಂಗಳವೇಡಾ ೨೦೫೯೩೨, ದಕ್ಷಿಣ ಸೋಲಾಪುರ ೨೬೦೮೯೭, ಅಕ್ಕಲಕೋಟ ೩೧೪೫೭೦ ಜನಸಂಖ್ಯೆಯನ್ನು ಹೊಂದಿರುವದು ಕಂಡುಬರುತ್ತದೆ. ಸೋಲಾಪುರ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಉತ್ತರ ಸೋಲಾಪುರ ತಾಲೂಕು ಶೇ. ೨೪.೪೮ರಷ್ಟು ಪ್ರಮಾಣದ ಜನಸಂಖ್ಯೆ ಹೊಂದಿ ಮೊದಲನೇ ಸ್ಥಾನದಲ್ಲಿದ್ದರೆ, ಮಾಳಸಿರಾಸ ತಾಲೂಕು ಶೇ. ೧೧.೨೫ರಷ್ಟು ಪ್ರಮಾಣದ ಪಾಲನ್ನು ಹೊಂದಿ ಎರಡನೇ ಸ್ಥಾನದಲ್ಲಿದೆ. ಮಂಗಳವೇಡಾ ತಾಲೂಕು ಅತೀ ಕಡಿಮೆ ಜನಸಂಖ್ಯೆಯನ್ನು ಹೊಂದಿ ಕೊನೆಯ ಎಂದರೆ ಹನ್ನೊಂದನೇ ಸ್ಥಾನದಲ್ಲಿದೆ. ಈ ತಾಲೂಕು ಸೋಲಾಪುರ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಶೇ. ೪.೭೭ರಷ್ಟು ಪ್ರಮಾಣದ ಜನಸಂಖ್ಯೆಯನ್ನು ಹೊಂದಿದೆ.

**ಲಂಬಾಣಿಗರು**

**ವಿಮುಕ್ತ ಬುಡಕಟ್ಟು ಪಟ್ಟಿಯಲ್ಲಿ ಲಂಬಾಣಿಗರು:** ಲಂಬಾಣಿಗರು ಮೂಲತಃ ಒಂದು ಅಲೆಮಾರಿ ಸಮುದಾಯವಾಗಿದ್ದು ವ್ಯಾಪಾರವು ಇವರ ಬದುಕಿನ ಆಧಾರಸ್ತಂಭವಾಗಿತ್ತು. ತಮ್ಮ ರಾಸುಗಳ ಮೇಲೆ ಉಪ್ಪನ್ನು ಹೇರಿಕೊಂಡು ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಾ ಸ್ವತಂತ್ರ್ಯ ಜೀವನವನ್ನು ಸಾಗಿಸುತ್ತಿದ್ದರು. ಆದರೆ ಬ್ರಿಟಿಷರ ಆಗಮನದಿಂದಾಗಿ ಆಧುನಿಕ ಸಾರಿಗೆ ಸಂಪರ್ಕಗಳಾದ ವಾಹನ ವ್ಯವಸ್ಥೆ ರೈಲ್ವೆ ಮುಂತಾದವು ಜಾರಿಗೆ ಬಂದಿದ್ದರಿಂದ ಬುಡಕಟ್ಟು ಜನರ ಬದುಕಿಗೆ ದೊಡ್ಡ ಪೆಟ್ಟು ತಗುಲಿತು. ಬ್ರಿಟಿಷರ ಆಧುನಿಕ ವ್ಯವಸ್ಥೆಯಿಂದಾಗಿ ಈ ಸಮುದಾಯದವರ ವ್ಯಾಪಾರವು ಸಂಪೂರ್ಣವಾಗಿ ನಿಂತು ಹೋಗಿದ್ದರಿಂದ ಬದುಕು ದುರ್ಬರಗೊಂಡಿತು. ಹೀಗಾಗಿ ಜೀವನದ ಅನಿವಾರ್ಯತೆಗಾಗಿ ಹೊಟ್ಟೆ

ತುಂಬಿಸಿಕೊಳ್ಳಲು ಚಿಕ್ಕ ಪುಟ್ಟ ಅಪರಾಧಗಳನ್ನು ಮಾಡಲು ಪ್ರಾರಂಭಿಸಿದರು. ಈ ಚಿಕ್ಕ ಪುಟ್ಟ ಅಪರಾಧಗಳನ್ನು ಆಯುಧವನ್ನಾಗಿಸಿಕೊಂಡ ಬ್ರಿಟಿಷ ಕಂಪನಿ ಸರ್ಕಾರವು ಈ ಸಮುದಾಯ ಗಳನ್ನು ನಿಯಂತ್ರಿಸುವ ಉದ್ದೇಶದಿಂದ ೧೮೭೧ ರಿಂದ ೧೯೪೭ರವರೆಗೆ ಮೇಲಿಂದ ಮೇಲೆ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಪರಿಷ್ಕರಿಸುತ್ತ, ವಿಸ್ತರಿಸುತ್ತ ಜಾರಿಗೊಳಿಸಿತು.

"ಯಾವುದೇ ಅಪರಾಧ ಮಾಡದೇ ತಮ್ಮ ಪಾಡಿಗೆ ತಾವು ಸ್ವತಂತ್ರವಾಗಿ ಸ್ವಾಭಿಮಾನದಿಂದ ಬದುಕುತಿದ್ದ ಜನರನ್ನು ಅಪರಾಧದಲ್ಲಿ ತೊಡಗಬೇಕಾದಂತಹ ಅನಿವಾರ್ಯತೆಗೆ ನೂಕಿದವರೇ ಬ್ರಿಟಿಷರು. ತರುವಾಯ ಸಮಾಜ ಸುಧಾರಣೆಯ ಹೆಸರಿನಲ್ಲಿ ಅಂತಹ ಸಮುದಾಯಗಳನ್ನು ವಸಾಹತುಗಳಲ್ಲಿ ಬಂಧನಗೊಳಿಸಿದವರೂ ಅವರೇ. ಒಟ್ಟಾರೆಯಾಗಿ ಹೇಳುವದಾದರೆ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ತಮ್ಮ ವಿರುದ್ದ ನಿಲ್ಲುವವರ ಮೇಲೆ ಸೇಡು ತೀರಿಸಿಕೊಳ್ಳುವ ಒಂದು ಅಸ್ತ್ರವಾಗಿ ಬಳಸಿಕೊಂಡರೆಂಬುದಂತೂ ಸತ್ಯ" (ಮಲ್ಲಿಕಾರ್ಜುನ ಭೀಮರಾಯ:೨೦೦೯:೨೧). ಅಪರಾಧಿ ಬುಡಕಟ್ಟು ಕಾಯ್ದೆಯಡಿ ಈ ಸಮುದಾಯದ ವ್ಯಕ್ತಿಗಳ ತಿರುಗಾಟವನ್ನು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಳಿಸುವುದು. ಒಟ್ಟಾರೆ ಅವರ ಚಟುವಟಿಕೆಗಳನ್ನು ನಿಯಂತ್ರಣಗೊಳಿಸುವುದು ಅಪರಾಧಿ ಬುಡಕಟ್ಟು ಜನರ ಮಕ್ಕಳನ್ನು ಅವರಿಂದ ಬೇರ್ಪಡಿಸಿ ಶಿಕ್ಷಣ ಕೊಡಿಸುವುದು, ಪುನರ್ವಸತಿ ಕಲ್ಪಿಸುವುದು, ಅಲೆಮಾರಿತನವನ್ನು ಬಿಟ್ಟು ಒಂದೆಡೆ ನೆಲೆನಿಲ್ಲಿಸುವುದು. ಆದೇಶ ಧಿಕ್ಕರಿಸಿ ನಡೆದವರನ್ನು ಕಡ್ಡಾಯವಾಗಿ ಶಿಕ್ಷಿಸುವುದು, ಯಾವುದೇ ಗುಂಪು, ಬುಡಕಟ್ಟು, ವ್ಯಕ್ತಿ ಜಾಮೀನುರಹಿತ ಅಪರಾಧಗಳಲ್ಲಿ ತೊಡಗಿದ್ದರೆ ಅಂತಹವರನ್ನು ಅಪರಾಧಿ ಬುಡಕಟ್ಟು ಎಂದು ಘೋಷಿಸುವುದು. ಅಂತಹ ಜನರ ನೋಂದಣಿ ಮಾಡಿಕೊಳ್ಳುವುದು, ಕೈ ಬೆರಳಿನ ಗುರುತುಗಳನ್ನು ಪಡೆಯುವುದು ಹೀಗೆ ಅನೇಕ ಬಗೆಗಳಲ್ಲಿ ಬುಡಕಟ್ಟು ಜನರನ್ನು ಹಿಂಸಿಸಿ ತಮ್ಮ ಅಧೀನದಲ್ಲಿಟ್ಟುಕೊಳ್ಳಲು ಬ್ರಿಟಿಷ ಕಂಪನಿ ಸರ್ಕಾರವು ಸತತವಾಗಿ ಪ್ರಯತ್ನಿಸುತ್ತಲೇ ಬಂದಿತು.

**೧೯೫೨ರ ಅಪರಾಧಿ ಬುಡಕಟ್ಟು ಕಾನೂನು ರದ್ದುಪಡಿಸುವ ಕಾಯ್ದೆ**

ಅವೈಜ್ಞಾನಿಕವಾಗಿರುವ ಹಾಗೂ ಶೋಷಣೆಯ ಮೂಲವಾಗಿರುವ ಅಪರಾಧಿ ಬುಡಕಟ್ಟು ಕಾಯ್ದೆಯನ್ನು ಜಮ್ಮು ಮತ್ತು ಕಾಶ್ಮೀರಗಳನ್ನು ಹೊರತುಪಡಿಸಿ ಇಡಿ ದೇಶಕ್ಕೆ ಅನ್ವಯವಾಗುವಂತೆ ಭಾರತ ಸರ್ಕಾರವು ೩೧ ಅಗಸ್ಟ ೧೯೫೨ ರಂದು ಅಪರಾಧಿ ಬುಡಕಟ್ಟು ಎಂಬ ಹಣೆಪಟ್ಟಿ ಹೊಂದಿದ ಈ ಸಮುದಾಯಗಳನ್ನು ವಿಮುಕ್ತ ಬುಡಕಟ್ಟುಗಳು ಅಥವಾ ಡಿನೋಟಿಫೈಡ್ ಟ್ರೈಬ್ಸ ಎಂದು ಕರೆಯಲಾಯಿತು.

"ವಸಾಹತುಶಾಹಿ ಕಾಲಘಟ್ಟದಲ್ಲಿ ೧೮೭೧ ಹಾಗೂ ಅದರ ನಂತರ ಕ್ರಿಮಿನಲ್ ಟ್ರೈಬ್ಸ್ ಆ್ಯಕ್ಟ್‌ನ ಅಡಿಯಲ್ಲಿ ಪಟ್ಟಿ ಮಾಡಲಾದ ಸಮುದಾಯಗಳನ್ನು ಅಥವಾ ಗುಂಪುಗಳನ್ನು ೧೯೫೦ರ ನಂತರದಲ್ಲಿ ವಿಮುಕ್ತಗೊಳಿಸಲಾಯಿತು. ಇಂದು ಭಾರತದ ಯಾವುದೇ ಪ್ರದೇಶದಲ್ಲಿ ಕಾಣಸಿಗುವ ಇವರನ್ನು ವಿಮುಕ್ತ ಬುಡಕಟ್ಟು ಎಂದು ವ್ಯಾಖ್ಯಾನಿಸುವುದು" (ಮೇತ್ರಿ ಕೆ ಎಂ., ಗುರುಲಿಂಗಯ್ಯ

೨೦ :೨೦೧೦:೧೩). ಮಹಾರಾಷ್ಟ್ರದ ಲಂಬಾಣಿಗರು ಹಲವಾರು ವರ್ಷಗಳ ಕಾಲ ಅಪರಾಧಿ ಬುಡಕಟ್ಟು ಕಾಯ್ದೆಯಿಂದಾಗಿ ಕಷ್ಟ, ನಷ್ಟ ಶೋಷಣೆಯನ್ನು ಅನುಭವಿಸಿ ೧೯೫೨ರ ಅಪರಾಧಿ ಬುಡಕಟ್ಟು ಕಾನೂನು ರದ್ದುಪಡಿಸುವ ಕಾಯ್ದೆಯಿಂದಾಗಿ ಶೋಷಣಾತ್ಮಕ ಬದುಕಿನಿಂದ ಹೊರಬಂದು ಸ್ವತಂತ್ರ ಬದುಕನ್ನು ಕಟ್ಟಿಕೊಳ್ಳುವಂತಾಯಿತು. ಮಹಾರಾಷ್ಟ್ರ ಸರ್ಕಾರವು ಇಂತಹ ಸಮುದಾಯಗಳನ್ನು ಗುರುತಿಸಿ ೧೯೬೧ರಲ್ಲಿ ವಿಮುಕ್ತ ಬುಡಕಟ್ಟು ಪಟ್ಟಿಯಲ್ಲಿ ಸೇರಿಸಿತು.

**ಮಹಾರಾಷ್ಟ್ರದ ವಿಮುಕ್ತ ಬುಡಕಟ್ಟು ಪಟ್ಟಿಯಲ್ಲಿ ಲಂಬಾಣಿಗರು**

"ಮಹಾರಾಷ್ಟ್ರ ಸರ್ಕಾರದ ಶಿಕ್ಷಣ ಮತ್ತು ಸಾಮಾಜಿಕ ಕಲ್ಯಾಣ ಇಲಾಖೆಯ ಆದೇಶ ಸಂಖ್ಯೆ ಸಿ.ಬಿ.ಸಿ ೧೩೬೧ ಎಮ್ ದಿನಾಂಕ ೨೧ ನವಂಬರ್ ೧೯೬೧ರಂತೆ ಈ ಕೆಳಗಿನ ಜಾತಿ ಸಮುದಾಯ ಗಳನ್ನು ವಿಮುಕ್ತ ಬುಡಕಟ್ಟು ಪಟ್ಟಿಯಲ್ಲಿ ಸೇರಿಸಲಾಯಿತು.

೧. ಬೇರಾಡ್, ಬೇಡರ್, ನಾಯ್ಕವಾಡಿ, ತಳವಾರ, ವಾಲ್ಮೀಕಿ

೨. ಬೆಸ್ತರ, ಸಂಚಲು ವಡ್ಡರ

೩. ಭಾಮ್ಟ, ಭಾಮ್ಟಿ, ಗಿರಣಿ ವಡ್ಡರ, ಕಮತಿ, ಪಾತ್ರೋಟ್, ಠಕಾರಿ, ಉಚಲೇ

೪. ಕೈಕಾಡಿ, ಧೊಂಟ್ಲೆ, ಕೊರ್ವ, ಮಕಡವಾಲಾ ಅಥವಾ ಕೊಂಚಿಕೊರವ, ಪಮ್‌ಲೋರ್

೫. ಕಂಜರ ಭಾಟ, ಛಾರ, ಕಂಜರ್, ನಟ

೬. ಕಟಬು

೭. ಲಮಾನ್, ಬಂಜಾರಾ, ಕಚಕಿವಾಲೆ ಬಂಜಾರಾ, ಲಮಾನ ಬಂಜಾರ, ಲಂಬಾಡಾಸ್

೮. ಫಾಸೆ ಪಾರ್ಧಿ, ಪಾಲ ಪಾರ್ಧಿ

೯. ರಾಜ ಪಾರ್ಧಿ, ಚಿತಾ ಪಾರ್ಧಿ, ಗವನ ಪಾರ್ಧಿ, ಹರಣ ಶಿಕಾರಿ, ತಾಕಣಕಾರ್

೧೦. ರಜಪೂತ ಭಾಮ್ಟಾ, ಪರದೇಶಿ ಭಾಮ್ಟಾ, ಪರದೇಶಿ ಭಾಮ್ಟಿ

೧೧. ರಾಮೋಶಿ

೧೨. ವಡ್ಡರ, ಗಾಡಿ ವಡ್ಡರ, ಜಾತಿ ವಡ್ಡರ, ಮಾಟಿ ವಡ್ಡರ, ಪಾಥರ್‌ವತ್

೧೩. ವಾಘ್ರಿ" (Deopujari:2012:427-430). ಹೀಗೆ ಲಂಬಾಣಿಗರು ೧೯೬೧ ರಿಂದ ಮಹಾರಾಷ್ಟ್ರ ರಾಜ್ಯದಲ್ಲಿ ವಿಮುಕ್ತ ಬುಡಕಟ್ಟು ಪಟ್ಟಿಯಲ್ಲಿದ್ದಾರೆ.

"ಮಹಾರಾಷ್ಟ್ರ ಸರ್ಕಾರದ ಶಿಕ್ಷಣ ಮತ್ತು ಸಾಮಾಜಿಕ ಕಲ್ಯಾಣ ಇಲಾಖೆಯ ಸುತ್ತೋಲೆ ಸಂಖ್ಯೆ ೧೪೬೪/೧೪೬೬೯೧-ಎಮ್ ಸಚಿವಾಲಯ ಬಾಂಬೆ, ದಿನಾಂಕ: ೧೮ ಫೆಬ್ರುವರಿ ೧೯೬೫ರ ಸತ್ತೋಲೆಯಂತೆ ಈಗಾಗಲೇ ಮೂಲ ಸಮುದಾಯವಾಗಿರುವ ಬಂಜಾರರನ್ನು ರಾಜ್ಯದ ವಿಮುಕ್ತ

ಬುಡಕಟ್ಟು ಪಟ್ಟಿಯಲ್ಲಿ ಸೇರಿಸಲಾಗಿದೆ. ಆದರೆ ಈ ಲಮಾನ ಸಮುದಾಯವನ್ನು ರಾಜ್ಯದಾದ್ಯಂತ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಹೀಗಾಗಿ ವಿಮುಕ್ತ ಬುಡಕಟ್ಟು ಕ್ರಮ ಸಂಖ್ಯೆ ೭ರಲ್ಲಿರುವ ಬಂಜಾರಾ ಸಮುದಾಯಕ್ಕೆ ಪರ್ಯಾಯವಾಗಿ ಈ ಕೆಳಗಿನ ಪರ್ಯಾಯ ಪದಗಳನ್ನು ಸೇರಿಸಲಾಗಿದೆ. ೭) ಬಂಜಾರಾ, ಗೋರ ಬಂಜಾರಾ, ಲಮಾಡಾ ಅಥವಾ ಲಂಬಾಡಾ, ಲಂಭಾನಿ, ಚಾರಣ ಬಂಜಾರಾ, ಲಭಾನ, ಮಥುರಾ ಲಭಾನ, ಕಚಿಕಿವಾಲೇ ಬಂಜಾರಾ, ಲಮಾನ ಬಂಜಾರಾ, ಲಮಾನ ಅಥವಾ ಲಮಾನಿ, ಲಬಾನ, ಕೊರ್ರ‍್ಯಾ ಅಥವಾ ಜಾಂಗಡ್, ಥಾಲಿ ಅಥವಾ ಥಾಲಿಯಾ, ಥಾಡಿ ಅಥವಾ ದಾರಿ, ಸಿಂಗಾರಿ, ನಾವಿ ಬಂಜಾರಾ, ಜೋಗಿ ಬಂಜಾರಾ, ಶಿಂಗವಾಲೇ ಬಂಜಾರಿ, ಶಿಂಗವಾಲೇ ವಂಜಾರಿ" (ಅದೇ:ಪು:೪೩೨).

"ಮಹಾರಾಷ್ಟ್ರ ಸರ್ಕಾರದ ಸಾಮಾಜಿಕ ಕಲ್ಯಾಣ, ಸಾಂಸ್ಕೃತಿಕ, ಕ್ರೀಡಾ ಮತ್ತು ಪ್ರವಾಸೊದ್ಯಮ ಇಲಾಖೆಯ ಸುತ್ತೋಲೆ ಸಂಖ್ಯೆ ಸಿ.ಬಿ.ಸಿ ೧೪೬೪/೧೪೬೯೧ ಜೆ ಸಚಿವಾಲಯ ಬಾಂಬೆ-೩೨ ದಿನಾಂಕ ೨೬ ಮಾರ್ಚ ೧೯೬೩

ಸರ್ಕಾರಿ ಸುತ್ತೋಲೆ, ಶಿಕ್ಷಣ ಮತ್ತು ಸಾಮಾಜಿಕ ಕಲ್ಯಾಣ ಇಲಾಖೆ ಸಂಖ್ಯೆ ಸಿ.ಬಿ.ಸಿ-೧೪೬೪-೧೪೬೯೧ ಎಮ್ ದಿನಾಂಕ ೧೮ ಫೆಬ್ರವರಿ ೧೯೬೫ನ್ನು ಓದಿಕೊಳ್ಳುವುದು.

**ಸುತ್ತೋಲೆ:** ಈ ಮೇಲಿನ ಆದೇಶ ಸಂಖ್ಯೆಯ ಮೂಲಕ ಬಂಜಾರಾ ಸಮುದಾಯಕ್ಕೆ ಸೇರಿಸಲಾದ ಈ ಕೆಳಕಂಡ ಪರ್ಯಾಯ ಪದಗಳನ್ನು ತೆಗೆದು ಹಾಕಲು ಆದೇಶಿಸಿದೆ. ಪರ್ಯಾಯ ಪದಗಳು: ಕೊರ್ರ‍್ಯಾ ಅಥವಾ ಜಾಂಗಡ, ಶಿಂಗವಾಲೇ ಬಂಜಾರಿ, ಶಿಂಗವಾಲೆ ವಂಜಾರಿ" (ಅದೇ:ಪು:೪೩೬). ಈ ಮೇಲಿನ ಆದೇಶದಂತೆ ಲಂಬಾಣಿಗರನ್ನು ಮಹಾರಾಷ್ಟ್ರ ಸರ್ಕಾರವು ವಿಮುಕ್ತ ಬುಡಕಟ್ಟು- ಅ ಪಟ್ಟಿಯಲ್ಲಿ ಸೇರಿಸಿದ್ದು, ಉದ್ಯೋಗ ಹಾಗೂ ಶಿಕ್ಷಣದಲ್ಲಿ ಶೇ. ೩ರಷ್ಟು ಮೀಸಲಾತಿಯನ್ನು ವಿಮುಕ್ತ ಬುಡಕಟ್ಟುಗಳ ಪಟ್ಟಿಗೆ ನೀಡಲಾಗಿದೆ. ರಾಜ್ಯ ಸರ್ಕಾರವು ವಿಮುಕ್ತ ಬುಡಕಟ್ಟುಗಳ ಕಲ್ಯಾಣಕ್ಕಾಗಿ ಜಾರಿಗೆ ತಂದಿರುವ ಹಲವಾರು ಯೋಜನೆಗಳಲ್ಲಿ ಲಂಬಾಣಿಗರು ಕೂಡಾ ಫಲಾನುಭವಿಗಳಾಗಿದ್ದಾರೆ.

**ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಸೋಲಾಪುರ ಜಿಲ್ಲೆಯ ತಾಂಡಾಗಳ ವಿವರ**

೧. **ಮೇತ್ರಿ ತಾಂಡಾ:** ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯ ಅಕ್ಕಲಕೋಟ ತಾಲೂಕಿನ ಮೇತ್ರಿ ತಾಂಡಾವು ಮುಖ್ಯರಸ್ತೆ ಮತ್ತು ಗ್ರಾಮಗಳೆರಡರಿಂದಲೂ ಬಹುದೂರವಿರುವ ಕಾರಣ ರಿಮೋಟ್ ತಾಂಡಾವೆಂದು ಪರಿಗರಣಿಸಲ್ಪಟ್ಟಿದೆ. ಅಕ್ಕಲಕೋಟ ತಾಲೂಕಿನಿಂದ ಈ ತಾಂಡಾ ೨೯ ಕಿ.ಮೀ. ದೂರದಲ್ಲಿದ್ದು, ಸಿನ್ನೂರ ಗ್ರಾಮಪಂಚಾಯತಿ ವ್ಯಾಪ್ತಿಗೆ ಸೇರಿಕೊಂಡಿದೆ. ಈ ತಾಂಡಾ ಭೌಗೋಳಿಕವಾಗಿ ಸುಂದರ ಪ್ರಾಕೃತಿಕ ಮಡಿಲಲ್ಲಿದ್ದು, ತಾಂಡಾದ ಸುತ್ತಲೂ ಶುದ್ಧವಾದ ಹವಾಮಾನ ಕಂಡುಬರುತ್ತದೆ. ಇಲ್ಲಿ ಒಣಭೂಮಿಯು ಹೆಚ್ಚಿನ ಪ್ರಮಾಣದಲ್ಲಿದ್ದು, ನೀರಾವರಿ ಅಲ್ಪ ಪ್ರಮಾಣದಲ್ಲಿ ಕಂಡುಬರುತ್ತದೆ. ಭೂ ಹಿಡುವಳಿದಾರರ ಸಂಖ್ಯೆ ಹೆಚ್ಚಾಗಿದ್ದು, ಭೂ ರಹಿತರ ಸಂಖ್ಯೆ ಕಡಿಮೆ ಇದ್ದರೂ ಕೃಷಿ ಕೂಲಿಕಾರ್ಮಿಕತೆ ಹೆಚ್ಚಾಗಿ ಕಂಡುಬರುತ್ತಿದೆ. ಏಕೆಂದರೆ ಅಲ್ಪ ಭೂ ಹಿಡುವಳಿದಾರರು

ತಮ್ಮ ಜಮೀನನ್ನು ಗೇಣಿಗೆ ನೀಡಿ ಕೃಷಿಕೂಲಿ ಕಾರ್ಮಿಕತೆಯಲ್ಲಿ ತೊಡಗಿಕೊಂಡಿದ್ದಾರೆ. ಇನ್ನೂ ಕೆಲವು ಜನರು ಗಾರೆ, ಇಟ್ಟಿಗೆ, ಸಿಮೆಂಟ್ ಕೆಲಸಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಈ ತಾಂಡಾಕ್ಕೆ ಹತ್ತಿರದಲ್ಲಿ ಯಾವುದೇ ಗಣಿಗಳಿರದ ಕಾರಣ ಇಲ್ಲಿ ಕೋರೆ ಕೆಲಸ ಕಂಡುಬರುವುದಿಲ್ಲ.

ಈ ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥಮಿಕ ಶಾಲೆಯಿದ್ದರೂ ಮುಂದಿನ ಹಂತದ ಶಿಕ್ಷಣವನ್ನು ಬೇರೆ ಕಡೆಯಿಂದ ಪಡೆದುಕೊಂಡಿದ್ದಾರೆ. ಆದರೂ ಡಿಪ್ಲೋಮಾ ಮತ್ತು ಸ್ನಾತಕೋತ್ತರ ಶಿಕ್ಷಣ ಪಡೆದವರ ಸಂಖ್ಯೆ ಶೂನ್ಯ ಪ್ರಮಾಣದಲ್ಲಿದೆ.

ಈ ತಾಂಡಾ ಬಯಲು ಪ್ರದೇಶದಲ್ಲಿರುವುದರಿಂದ ಶುಚಿತ್ವ ಮತ್ತು ನೈರ್ಮಲೀಕರಣ ಕಂಡು ಬರುತ್ತದೆ. ಈ ತಾಂಡಾದಲ್ಲಿ ಅಲ್ಪಪ್ರಮಾಣದ ಬೇಟೆಗಾರಿಕೆ ಇಂದಿಗೂ ಕಂಡುಬರುತ್ತಿದ್ದು, ಮೂಲತಃ ಮಾಂಸಾಹಾರಿಗಳಾದ ಇವರಲ್ಲಿ ಕುರಿ ಮತ್ತು ಕೋಳಿ ಸಾಕಾಣಿಕೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಹಣಕಾಸಿನ ಅಗತ್ಯವೆನಿಸಿದರೆ ಇವುಗಳ ಮಾರಾಟದಲ್ಲಿ ತೊಡಗುತ್ತಾರೆ. ಜೊತೆಗೆ ಹಬ್ಬ ಹರಿದಿನಗಳಲ್ಲಿ ಆಹಾರಕ್ಕಾಗಿಯೂ ಬಳಸುತ್ತಿದ್ದಾರೆ. ಈ ತಾಂಡಾಗಳಲ್ಲಿ ಇಂದಿಗೂ ವಿವಾಹದಂತಹ ಆಚರಣೆಗಳನ್ನು ಸಾಂಪ್ರದಾಯಿಕವಾಗಿ ಆಚರಿಸುತ್ತಿದ್ದು, ಸಂಪ್ರದಾಯಿಕ ಉಡುಗೆ ತೊಡುಗೆಗಳು ಹೆಚ್ಚಾಗಿ ಕಂಡುಬರುತ್ತಿವೆ.

**೨. ಕಾಮತ್ತಿ ಪಟ್ಲ್ಯಾ ತಾಂಡಾ:** ಸೋಲಾಪುರ ಜಿಲ್ಲೆಯ ಮೋಳ ತಾಲೂಕಿನಿಂದ ೨೩ ಕಿ.ಮೀ. ದೂರದಲ್ಲಿ ಕಂಡುಬರುವ ಈ ತಾಂಡಾ ಕಾಮತ್ತಿ ಗ್ರಾಮಪಂಚಾಯತಿಗೆ ಒಳಪಟ್ಟಿದೆ. ಮುಖ್ಯರಸ್ತೆ ಮತ್ತು ಗ್ರಾಮಗಳಿಂದ ದೂರದಲ್ಲಿರುವ ಈ ತಾಂಡಾ ರಿಮೋಟ್ ತಾಂಡಾವೆಂದು ಪರಿಗಣಿಸಲ್ಪಟ್ಟಿದೆ.

ಈ ತಾಂಡಾದಲ್ಲಿ ನೀರಾವರಿ ಅಲ್ಪಪ್ರಮಾಣದಲ್ಲಿಯೂ, ಒಣಬೇಸಾಯ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಬಹುತೇಕ ಜನರು ಚಿಕ್ಕ ಭೂ ಹಿಡುವಳಿದಾರರಾಗಿದ್ದು, ಸ್ವಯಂ ಕೃಷಿ ಕಾರ್ಯಕ್ಕಿಂತ ಕೃಷಿ ಕಾರ್ಮಿಕತೆಯಲ್ಲಿ ಹೆಚ್ಚಾಗಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಜೊತೆಗೆ ಕೆಲವರು ಗಾರೆ ಹಾಗೂ ಇಟ್ಟಿಗೆ ಕೆಲಸಗಳಲ್ಲಿಯೂ ತೊಡಗಿಕೊಂಡಿದ್ದಾರೆ. ಈ ತಾಂಡಾದಲ್ಲಿ ಶೈಕ್ಷಣಿಕ ಪ್ರಗತಿ ಉತ್ತಮವಾಗಿದ್ದು. ಎಲ್ಲಾ ಹಂತದಲ್ಲಿಯೂ ಶಿಕ್ಷಣ ಪಡೆದಿದ್ದಾರೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಹೊಂದಿರುವ ಈ ತಾಂಡಾದಲ್ಲಿ ಧಾರ್ಮಿಕ ವಿಧಿ ವಿಧಾನಗಳೆಲ್ಲವೂ ಮನೆಯ ಯಜಮಾನ ಮತ್ತು ತಾಂಡಾದ ನಾಯಕನ ನೇತೃತ್ವದಲ್ಲಿ ನೆರವೇರುತ್ತವೆ. ವಿವಾಹದಂತಹ ಆಚರಣೆಗಳು ಈ ತಾಂಡಾಗಳಲ್ಲಿ ಇಂದಿಗೂ ಸಾಂಪ್ರದಾಯಿಕ ಪದ್ಧತಿಯ ಮಾದರಿಯಲ್ಲಿಯೇ ನೆರವೇರುತ್ತವೆ. ಹಬ್ಬಗಳ ಮಾರನೆಯ ದಿವಸವಾದ 'ಕರಿ' ದಿನದಂದು ಬೇಟೆಗಾರಿಕೆಗೆ ತೆರಳಿ ತಂದ ಬೇಟೆಯಿಂದ ಮಾಂಸದೂಟವನ್ನು ಸವಿಯುತ್ತಾರೆ. ಹಾಗೆಯೇ ಸಾಂಪ್ರದಾಯಿಕ ಉಡುಗೆ ತೊಡುಗೆಗಳು, ಹಚ್ಚೆ ಕಲೆ ಮಧ್ಯವಯಸ್ಕರವರೆಗೆ ಕಂಡುಬರುತ್ತಿದೆ.

**೩. ಯೆಮ್ಮೈ ತಾಂಡಾ:** ಸೋಲಾಪುರ ಜಿಲ್ಲೆಯ ಬಾರ್ಶಿ ತಾಲೂಕಿನಿಂದ ೧೯ ಕಿ.ಮೀ. ದೂರದಲ್ಲಿರುವ ಈ ತಾಂಡಾ ಯಮ್ಮೈ ಗ್ರಾಮಪಂಚಾಯಿತಿಗೆ ಒಳಪಡುತ್ತದೆ. ಯಮ್ಮೈ ಗ್ರಾಮದ ಹತ್ತಿರವಿರುವ ಈ ತಾಂಡಾವನ್ನು ಗ್ರಾಮಹತ್ತಿರದ ತಾಂಡಾವೆಂದು ಪರಿಗಣಿಸಲಾಗಿದೆ.

ಭೌಗೋಳಿಕವಾಗಿ ಈ ತಾಂಡಾ ಯಮ್ಮೆ ಗ್ರಾಮಕ್ಕೆ ಹತ್ತಿರದಲ್ಲಿದ್ದು, ತಾಂಡಾ ಮತ್ತು ಗ್ರಾಮಗಳೆರಡರ ಜಮೀನಿನಲ್ಲಿ ಕೆಲಸಕ್ಕೆ ತೆರಳುವ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ಈ ತಾಂಡಾದಲ್ಲಿ ಒಣ ಬೇಸಾಯದ ಪ್ರಮಾಣ ಹೆಚ್ಚಾಗಿದ್ದು, ನೀರಾವರಿ ಅಲ್ಪ ಪ್ರಮಾಣದಲ್ಲಿ ಕಂಡುಬರುತ್ತದೆ. ಈ ತಾಂಡಾದ ಜನರು ಕೃಷಿ, ಕೃಷಿ ಕೂಲಿಕಾರ್ಮಿಕತೆಯ ಜೊತೆಗೆ ಇತರೆ ಕೆಲಸಗಳಾದ ಗಾರೆಕೆಲಸ, ಇಟ್ಟಿಗೆ ಕೆಲಸಗಳಲ್ಲಿಯೂ ಸಹ ತೊಡಗಿಕೊಂಡಿದ್ದಾರೆ.

ಶೈಕ್ಷಣಿಕವಾಗಿ ಪ್ರಗತಿ ಉತ್ತಮವಾಗಿದ್ದರೂ ಸಮೀಕ್ಷೆಯಂತೆ ಪದವಿ ಶಿಕ್ಷಣ ಪಡೆದವರ ಪ್ರಮಾಣ ಅತಿವಿರಳವಾಗಿದ್ದು, ಸ್ನಾತಕೋತ್ತರ ಶಿಕ್ಷಣ ಪಡೆದವರ ಸಂಖ್ಯೆ ಶೂನ್ಯವಾಗಿದೆ.

ಸಾಮಾಜಿಕವಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯೇ ಆಚರಣೆಯಲ್ಲಿದ್ದು, ಸಂಪ್ರದಾಯ ಆಚರಣೆಗಳು, ಧಾರ್ಮಿಕ ವಿಧಿ ವಿಧಾನಗಳು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಆಚರಿಸಲ್ಪಡುತ್ತಿವೆ. ಗ್ರಾಮ ಹತ್ತಿರ ತಾಂಡಾವಾಗಿರುವುದರಿಂದ ಇವರು ಗೋರಬೋಲಿ ಜೊತೆಗೆ ಗ್ರಾಮಸ್ಥರೊಂದಿಗೆ ವ್ಯವಹರಿಸಲು ಮರಾಠಿ ಭಾಷೆಯನ್ನು ಸಹ ಬಳಸುತ್ತಾರೆ.

**೪. ಬನ್ನತಾಂಡಾ :** ಸೋಲಾಪುರ ಜಿಲ್ಲೆಯ ಮಂಗಳವೇಡ ತಾಲೂಕಿನಿಂದ ೨೭ ಕಿ.ಮೀ. ದೂರದಲ್ಲಿ ಬರುವ ಬನ್ನತಾಂಡಾ ಬಾಲಾಜಿ ನಗರ ಗ್ರಾಮಪಂಚಾಯತಿಗೆ ಒಳಪಟ್ಟಿದ್ದು, ಬನ್ನ ಗ್ರಾಮದ ಹತ್ತಿರವಿರುವ ಗ್ರಾಮ ಹತ್ತಿರ ತಾಂಡಾವಾಗಿದೆ.

ಭೌಗೋಳಿಕವಾಗಿ ಈ ತಾಂಡಾ ಗ್ರಾಮಕ್ಕೆ ಹತ್ತಿರದಲ್ಲಿದ್ದು, ತಾಂಡಾವಾಸಿಗಳಲ್ಲಿ ಹೆಚ್ಚಿನ ಜನರು ಕೃಷಿ ಅವಲಂಬಿತರಾಗಿದ್ದಾರೆ. ಈ ತಾಂಡಾದಲ್ಲಿ ಒಣಬೇಸಾಯ ಹೆಚ್ಚಿನ ಪ್ರಮಾಣದಲ್ಲಿಯೂ, ನೀರಾವರಿ ಅಲ್ಪಪ್ರಮಾಣದಲ್ಲಿಯೂ ಕಂಡುಬರುತ್ತದೆ. ತಾಂಡಾದ ಕೆಲವರು ಹತ್ತಿರದಲ್ಲಿರುವ ಗ್ರಾಮದ ವ್ಯವಸಾಯಗಾರರಲ್ಲಿ ಕೃಷಿಕೂಲಿ ಕಾರ್ಮಿಕತೆಗೆ ತೆರಳುತ್ತಾರೆ. ಹಾಗೆಯೇ ಇನ್ನೂ ಕೆಲವರು ಕೋರೆ ಕೆಲಸ, ಗಾರೆ ಕೆಲಸಗಳಿಗೂ ತೆರಳುವುದು ಕಂಡುಬರುತ್ತದೆ. ಇವರ ಆರ್ಥಿಕತೆಯ ಇನ್ನೊಂದು ಮೂಲವೆಂದರೆ ಪಶುಸಂಗೋಪನೆ ಇವರು ಸಾಕಿರುವ ಉಳಿದೆಲ್ಲಾ ಸಾಕು ಪ್ರಾಣಿಗಳಿಗಿಂತಲೂ ಕೋಳಿ ಸಾಕಾಣಿಕೆಯ ಪ್ರಮಾಣ ಹೆಚ್ಚಾಗಿದ್ದು, ಇವುಗಳನ್ನು ಹಣಕಾಸಿನ ಅಡಚಣೆ ಉಂಟಾದಾಗ ಸಂತೆಗಳಲ್ಲಿ ಮಾರಾಟ ಮಾಡುವುದರ ಮೂಲಕ ಆರ್ಥಿಕ ತೊಂದರೆಯನ್ನು ಸರಿದೂಗಿಸಿಕೊಳ್ಳುತ್ತಾರೆ. ಜೊತೆಗೆ ಹಬ್ಬ ಹರಿದಿನಗಳ ಸಂದರ್ಭಗಳಲ್ಲಿ ಮಾಂಸಾಹಾರಕ್ಕೂ ಬಳಸುತ್ತಾರೆ.

ಶೈಕ್ಷಣಿಕವಾಗಿ ಈ ತಾಂಡಾದ ಪ್ರಗತಿ ಸಾಧಾರಣ ಮಟ್ಟದಲ್ಲಿದ್ದು, ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥಮಿಕ ಶಾಲೆ ಇರುವುದು ಕಂಡುಬರುತ್ತದೆ. ಡಿಪ್ಲೋಮಾ ಮತ್ತು ಸ್ನಾತಕೋತ್ತರ ಶಿಕ್ಷಣ ಪಡೆದವರ ಪ್ರಮಾಣ ಶೂನ್ಯ ಪ್ರಮಾಣದಲ್ಲಿದೆ.

ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಇವರು ಮೂಲಕ್ಕಿಂತಲೂ ಅಲ್ಪಸ್ವಲ್ಪ ಪ್ರಮಾಣದಲ್ಲಿ ಪರಿವರ್ತನೆ ಹೊಂದಿರುವುದು ಇವರ ವೇಷಭೂಷಣಗಳ ಆಧಾರದ ಮೇಲೆ, ಆಧುನಿಕ ರೀತಿಯ ಆಚರಣೆಗಳ ಆಧಾರದ ಮೇಲೆ ಗುರುತಿಸಬಹುದಾಗಿದೆ.

ಹಚ್ಚೆಯಂತಹ ಪ್ರಾಚೀನ ಕಲೆ ಹಿರಿಯ ನಾಗರಿಕರಲ್ಲಿ, ನಡುವಯಸ್ಸಿನ ಮಹಿಳೆಯರಲ್ಲಿ ಮಾತ್ರ ಗೋಚರಿಸುತ್ತಿದೆ. ಈ ತಾಂಡಾವಾಸಿಗಳು ಗ್ರಾಮದೊಂದಿಗೆ ನಿಕಟ ಸಂಪರ್ಕ ಹೊಂದಿರುವುದರಿಂದ ಗೋರಬೋಲಿ ಭಾಷೆಯ ಜೊತೆಗೆ ಮರಾಠಿ ಮತ್ತು ಹಿಂದಿ ಭಾಷೆಯನ್ನೂ ಸಹ ಬಲ್ಲವರಾಗಿದ್ದಾರೆ.

**೫. ಸಾವತಖೇಡ ತಾಂಡಾ :** ಸೋಲಾಪುರ ಜಿಲ್ಲೆಯ ದಕ್ಷಿಣ ಸೋಲಾಪುರ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಈ ತಾಂಡಾದಿಂದ ಸೋಲಾಪುರದಿಂದ ಹೊಟಗಿ ಗ್ರಾಮಕ್ಕೆ ತೆರಳುವ ರಸ್ತೆ ಹತ್ತಿರ ಇರುತ್ತದೆ. ಈ ತಾಂಡಾ ಹೊಟಗಿ ಗ್ರಾಮಪಂಚಾಯತ್ ವ್ಯಾಪ್ತಿಯಲ್ಲಿದೆ.

ಈ ತಾಂಡಾದಲ್ಲಿ ಸ್ವಯಂ ಕೃಷಿ ಮತ್ತು ಕೃಷಿಕೂಲಿಕಾರ್ಮಿಕತೆಗಳೆರಡೂ ಕಂಡುಬರುತ್ತಿದ್ದು, ನೀರಾವರಿಗಿಂತಲೂ ಒಣಭೂಮಿಯು ಹೆಚ್ಚಿನ ಪ್ರಮಾಣದಲ್ಲಿದೆ. ಜೊತೆಗೆ ತಾಂಡಾವು ರಸ್ತೆ ಹತ್ತಿರದಲ್ಲಿದ್ದು ಅಕ್ಕಲಕೋಟ ನಗರಕ್ಕೆ ಸಮೀಪವಿರುವ ಕಾರಣ ನಗರದ ಕಾರ್ಖಾನೆಗಳಿಗೆ ಕೂಡ ದಿನಗೂಲಿ ಕೆಲಸಕ್ಕೆ ತೆರಳುವವರ ಸಂಖ್ಯೆ ಹೆಚ್ಚಾಗಿದೆ. ಹಾಗೆಯೇ ಕೆಲವು ಮಹಿಳೆಯರು ಪಶುಸಂಗೋಪನೆಯಲ್ಲಿ ತೊಡಗಿದ್ದು, ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ನಗರದಲ್ಲಿ ಮಾರಾಟ ಮಾಡಿ ಆ ಮೂಲಕ ಕೂಡ ತಮ್ಮ ಆರ್ಥಿಕತೆಯನ್ನು ಉತ್ತಮಪಡಿಸಿಕೊಂಡಿದ್ದಾರೆ.

ಈ ತಾಂಡಾದಲ್ಲಿ ಮನೆಗಳ ಮಾದರಿಯಲ್ಲಿ ಮಾಳಿಗೆ ಮನೆಗಳ ಜೊತೆಗೆ ಆರ್.ಸಿ.ಸಿ. ಮನೆಗಳೂ ಇದ್ದು ಸಂಪ್ರದಾಯದಂತೆ ಪೂರ್ವದಿಕ್ಕಿಗೆ ಮನೆಯ ಮುಖ್ಯದ್ವಾರದ ನಿರ್ಮಾಣವಿರುವುದು ಕಂಡುಬರುತ್ತದೆ. ರೈತಾಪಿ ಕುಟುಂಬಕ್ಕೆ ಸೇರಿದ ಇವರು ಆರ್ಥಿಕತೆಯ ಸುಸ್ಥಿರತೆ ಇರುವವರು. ಆರ್.ಸಿ.ಸಿ. ಮನೆಗಳನ್ನು ನಿರ್ಮಿಸಿಕೊಂಡರೂ ಆ ಮನೆಗಳ ಪಕ್ಕದಲ್ಲಿಯೇ ಹಸು, ಎತ್ತುಗಳಿಗಾಗಿ ಕೊಟ್ಟಿಗೆಗಳನ್ನು ನಿರ್ಮಿಸಿಕೊಂಡಿದ್ದಾರೆ.

ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥಮಿಕ ಶಾಲೆ ಮಾತ್ರವಿದ್ದರೂ ರಸ್ತೆಬದಿಯ ಮತ್ತು ನಗರಕ್ಕೆ ಹತ್ತಿರವಿರುವ ಕಾರಣ ಶೈಕ್ಷಣಿಕ ಪ್ರಗತಿ ಉತ್ತಮವಾಗಿದೆ. ಶೈಕ್ಷಣಿಕ ಕ್ಷೇತ್ರದಂತೆ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿಯೂ ಇವರ ಜೀವನದಲ್ಲಿ ಆಧುನಿಕತೆಯ ಗಾಢ ಪ್ರಭಾವವಾಗಿರುವುದು ಕಂಡುಬರುತ್ತದೆ. ಸ್ತ್ರೀ ಪುರುಷರು ಧರಿಸುವ ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಕೇವಲ ಹಿರಿಯ ವಯಸ್ಕರಲ್ಲಿ ಮಾತ್ರ ಕಂಡುಬರುತ್ತವೆ. ನೋಡಿದಾಕ್ಷಣ ಲಂಬಾಣಿ ಸ್ತ್ರೀ ಎಂದು ಗುರುತಿಸುವುದಕ್ಕೆ ಕಾರಣವಾಗಿರುವ ಹಚ್ಚೆ ಕಲೆಯಂತೂ ಸಂಪೂರ್ಣ ಅಳಿವಿನಂಚಿನಲ್ಲಿದೆ. ಕೇವಲ ಪ್ರಾಣಿಬಲಿ ಸಂದರ್ಭಗಳಲ್ಲಿ ಪುರುಷರಿಂದ ಬಿಡಿಸಲ್ಪಡುವ ರಂಗೋಲಿ ಚಿತ್ರಣಗಳು ಬಹುತೇಕ ಮನೆ ಅಂಗಳಗಳಲ್ಲಿ ಸ್ತ್ರೀಯರಿಂದ ಬಿಡಿಸಲ್ಪಡುತ್ತಿರುವುದು ಇವರ ಮೇಲೆ ನಗರ ಸಂಸ್ಕೃತಿಯ ಪ್ರಭಾವ ತೋರ್ಪಡಿಸುತ್ತಿದೆ.

ಇವರು ಪ್ರತಿನಿತ್ಯ ನಗರಕ್ಕೆ ಬೇರೆ ಬೇರೆ ಕೆಲಸಗಳಿಗೆ ಹೋಗುವುದರಿಂದ ಗೋರಬೋಲಿಯ ಜೊತೆಗೆ ಮರಾಠಿ ಹಾಗೂ ಹಿಂದಿ ಭಾಷೆಯನ್ನು ಸರಾಗವಾಗಿ ಮಾತನಾಡುತ್ತಾರೆ. ಗೋರಬೋಲಿ

ಭಾಷೆಯಲ್ಲಿಯೂ ಹಲವಾರು ಮರಾಠಿ ಪದಗಳು ಸೇರ್ಪಡೆಯಾಗಿರುವುದು ಗೋರಬೋಲಿ ಭಾಷೆಯ ಮೇಲೆ ಮರಾಠಿ ಭಾಷೆಯ ಪ್ರಭಾವವಾಗಿರುವುದಕ್ಕೆ ಸಾಕ್ಷಿಯಾಗಿದೆ.

**೬. ಕುಮಟಾ ತಾಂಡಾ:** ಸೋಲಾಪುರ ಜಿಲ್ಲೆಯ ಉತ್ತರ ಸೋಲಾಪುರ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಈ ತಾಂಡಾದಿಂದ ಸೋಲಾಪುರದಿಂದ ಕುಮಟಾ ಗ್ರಾಮಕ್ಕೆ ಸಂಪರ್ಕ ಕಲ್ಪಿಸುವ ರಸ್ತೆ ಹತ್ತಿರ ಕಂಡುಬರುತ್ತದೆ. ಹಾಗೂ ಕುಮಟಾ ಗ್ರಾಮಪಂಚಾಯತ ವ್ಯಾಪ್ತಿಯಲ್ಲಿದೆ. ಇತ್ತೀಚಿನ ದಿನಗಳಲ್ಲಿ ನಿರ್ಮಿಸಲಾದ ಬಟ್ಟೆ ಕೈಗಾರಿಕೆಗಳಿಂದ ಸೋಲಾಪುರ ನಗರ ಒಂದು ವಸಾಹತು ಎಂಬಂತೆ ಗೋಚರಿಸುತ್ತಿದೆ. ಪೂರ್ವದಲ್ಲಿ ಈ ತಾಂಡಾದ ಜನರ ಪ್ರಧಾನ ಉದ್ಯೋಗ ಕೃಷಿಯಾಗಿದ್ದರೂ ಇತ್ತೀಚಿನ ದಿನಗಳಲ್ಲಿ ನಗರ ಪ್ರದೇಶದ ವಿಭಿನ್ನ ಕೆಲಸಗಳಿಗೆ ಜನರು ತೆರಳುತ್ತಿರುವುದರಿಂದ ಕೃಷಿಯವಲಂಬಿತರ ಸಂಖ್ಯೆ ಕ್ರಮೇಣ ಕ್ಷೀಣಿಸುತ್ತಿದೆ. ಜೊತೆಗೆ ಭೂ ಹಿಡುವಳಿಗಳು ಚಿಕ್ಕ ಗಾತ್ರದವುಗಳಾಗಿರುವುದರಿಂದ, ಭೂಮಿಯನ್ನು ಗೇಣಿಗೆ ನೀಡಿ ಕೃಷಿಕೂಲಿಕಾರ್ಮಿಕತೆಯಲ್ಲೂ ತೊಡಗುತ್ತಿದ್ದಾರೆ. ನಗರದ ವಿಸ್ತರಣಾ ಪ್ರದೇಶಗಳಲ್ಲಿ ಸ್ಥಾಪಿತಗೊಂಡಿರುವ ಕೈಗಾರಿಕೆಗಳಲ್ಲಿ, ಇಟ್ಟಿಗೆ ನಿರ್ಮಾಣ ಕಾರ್ಯಗಳಲ್ಲಿ, ಗಾರೆಕೆಲಸಗಳಲ್ಲಿ ತೊಡಗಿದ್ದಾರೆ. ಒಟ್ಟಿನಲ್ಲಿ ಇವರ ಆರ್ಥಿಕ ಸ್ಥಿತಿ ರಿಮೋಟ್ ಮತ್ತು ಗ್ರಾಮ ಹತ್ತಿರದ ತಾಂಡಾಗಳಿಗಿಂತ ಉತ್ತಮವಾಗಿದೆ.

ಸಾಮಾಜಿಕವಾಗಿಯೂ ಈ ತಾಂಡಾದಲ್ಲಿ ಸಾಂಪ್ರದಾಯಿಕ ಆಚರಣೆಗಳಲ್ಲಿ, ಉಡುಗೆ ತೊಡುಗೆಗಳಲ್ಲಿ, ಆಹಾರ ಪದ್ಧತಿಯಲ್ಲಿ, ಜೀವನ ವಿಧಾನಗಳೆಲ್ಲದರಲ್ಲಿ ಆಧುನಿಕತೆಯ, ನಗರ ಜೀವನದ ಗಾಢ ಪ್ರಭಾವವಾಗಿರುವುದು ಕಂಡುಬರುತ್ತಿದೆ.

ಮೂಲತಃ ಮಾಂಸಹಾರಿಗಳಾದ ಇವರಲ್ಲಿ ಬೇಟೆಗಾರಿಕೆ ನಿರಂತರ ಹವ್ಯಾಸವಾಗಿತ್ತು. ಪ್ರಸ್ತುತ ದಿನಮಾನಗಳಲ್ಲಿ ಈ ಬೇಟೆಗಾರಿಕೆ ಎಂಬುದು ರಿಮೋಟ್ ಮತ್ತು ಗ್ರಾಮಹತ್ತಿರ ತಾಂಡಾಗಳಲ್ಲಿ ಸಾಂದರ್ಭಿಕವಾಗಿ ಕಂಡುಬರುತ್ತಿದ್ದು, ರಸ್ತೆ ಹತ್ತಿರ ತಾಂಡಾಗಳಲ್ಲಿ ಸಂಪೂರ್ಣ ನಿಂತುಹೋಗಿದ್ದು, ಈ ಜನರು ಮಾಂಸಾಹಾರಕ್ಕೆ ನಗರ ಪ್ರದೇಶಗಳಲ್ಲಿರುವ ಮಾಂಸದಂಗಡಿಗಳ ಮೇಲೆ ಅವಲಂಬಿತರಾಗಿರುವುದು ಕಂಡುಬರುತ್ತದೆ.

ಅಂಗನವಾಡಿ ಕೇಂದ್ರ ಹಾಗೂ ಕಿರಿಯ ಪ್ರಾಥಮಿಕ ಶಾಲೆಗಳು ಮಾತ್ರ ಈ ತಾಂಡಾದ್ದಲ್ಲಿದ್ದು, ಇಲ್ಲಿಯ ಮಕ್ಕಳು ತಮ್ಮ ಮುಂದಿನ ಹಂತದ ವಿದ್ಯಾಭ್ಯಾಸಕ್ಕೆ ಸ್ವಲ್ಪವೇ ದೂರದಲ್ಲಿರುವ ಅಕ್ಕಲಕೋಟ ನಗರಕ್ಕೆ ತೆರಳುತ್ತಿದ್ದಾರೆ. ಹೀಗಾಗಿ ಇಲ್ಲಿಯ ಶೈಕ್ಷಣಿಕ ಪ್ರಗತಿ ಉತ್ತಮವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಈ ತಾಂಡಾದ ಜನರ ಜೀವನದ ಪ್ರತಿ ಕ್ಷೇತ್ರದಲ್ಲಿ ಆಧುನಿಕತೆಯ ಸ್ಪರ್ಶ ಕಂಡುಬರುತ್ತದೆ.

### ೨.೩. ಆಂಧ್ರ ಪ್ರದೇಶ ರಾಜ್ಯದ ಪರಿಸರದ ಕಿರುನೋಟ

**ಪೀಠಿಕೆ:** ತೆಲುಗು ಭಾಷೆಯನ್ನು ಪ್ರಧಾನವಾಗಿ ಮಾತನಾಡುವಂತಹ ಜನರು ವಾಸಿಸುವ ರಾಜ್ಯವೇ ಆಂಧ್ರ ಪ್ರದೇಶ. ಇದು ಭಾರತದ ಪರ್ಯಾಯ ದ್ವೀಪದ ಪೂರ್ವಮಧ್ಯ ಭಾಗದಲ್ಲಿದೆ.

**ಆಂಧ್ರ ಪ್ರದೇಶ : ಅಧ್ಯಯನಕ್ಕೆ ಆಯ್ಕೆ ಮಾಡಲಾದ ರಂಗಾರೆಡ್ಡಿ ಜಿಲ್ಲೆ**




ಇದು ತನ್ನದೇ ಆದ ಸನ್ನಿವೇಶ, ವಿವಿಧ ಭೂಸ್ವರೂಪಗಳು, ಸುಂದರವಾದಂತಹ ವನಸ್ಪತಿ, ವರ್ಣಮಯವಾದಂತಹ ವಿವಿಧ ಪ್ರಾಣಿ ಸಂಕುಲ, ಉತ್ಕೃಷ್ಟವಾದಂತಹ ಮಣ್ಣು, ಅದ್ವಿತೀಯವಾದ ಜಲಸಂಪನ್ಮೂಲ, ಅಮೂಲ್ಯವಾದ ಖನಿಜ ಸಂಪತ್ತು, ಜನಸಂಪತ್ತು, ಸಾರಿಗೆ ಸಂಪರ್ಕ ಮಾಧ್ಯಮಗಳು, ವೈವಿಧ್ಯತೆಯುಳ್ಳ ಸಾಹಿತ್ಯ, ಲಲಿತಕಲೆ, ಧರ್ಮ ಮತ್ತು ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ ಆಂಧ್ರದ ಪಾತ್ರವು ಮಹತ್ವವುಳ್ಳದ್ದಾಗಿದೆ.

ಆಂಧ್ರ ಪ್ರದೇಶ ರಾಜ್ಯವು ಕ್ರಿ.ಶ. ೧೯೫೬ ನವೆಂಬರ್ ೧ನೇ ತಾರೀಖಿನಂದು ರಚನೆಗೊಂಡಿದ್ದು, ಇದಕ್ಕಿಂತ ಪೂರ್ವದಲ್ಲಿ ಆಂಧ್ರ ಪ್ರದೇಶದಲ್ಲಿ ತೆಲಂಗಾಣ ಪ್ರಾಂತ, ಹೈದ್ರಾಬಾದ್ ಸಂಸ್ಥಾನ, ಕೋಸ್ಟ ಆಂಧ್ರ, ರಾಯಲಸೀಮಾ ಪ್ರಾಂತ, ಮದ್ರಾಸ್ ಪ್ರಾಂತಗಳಿದ್ದವು. ಈ ಎಲ್ಲಾ ಪ್ರಾಂತಗಳು ಕ್ರಿ.ಶ.೧೯೫೬ ನವೆಂಬರ್ ೧ರಂದು ಒಂದುಗೂಡಿ ಆಂಧ್ರ ಪ್ರದೇಶ ನಿರ್ಮಾಣವಾಯಿತು.

**ಹೆಸರಿನ ಮೂಲ**

ಆಂಧ್ರ ಶಬ್ದವು ಜಾತಿ, ದೇಶ ಮತ್ತು ಭಾಷೆಗಳ ದೃಷ್ಟಿಯಿಂದ ಅತಿ ಪ್ರಾಚೀನವಾದುದು. ಭಾರತೀಯ ನಾಗರಿಕರ ಅತೀ ಪ್ರಾಚೀನ ಜಾತಿಗಳಲ್ಲಿ ಆಂಧ್ರದವರು ಒಬ್ಬರಾಗಿದ್ದಾರೆ. 'ಅಂಧ' ಎನ್ನುವ ಪ್ರಾಕೃತ ಪದ ಅಪಭ್ರಂಶಗೊಂಡು ಆಂಧ್ರ ಎಂದಾಗಿದೆ ಎಂಬುದು ಪ್ರಾಚೀನ ವಿದ್ವಾಂಸರುಗಳ ಅಭಿಪ್ರಾಯವಾಗಿದೆ. ಆಂಧ್ರ ಶಬ್ದವು ಮೊದಲು ಜಾತಿವಾಚಕವಾಗಿ ಬಳಕೆಯಾಗಿದೆ.

ಈ ಆಂಧ್ರ ಶಬ್ದವು ಮೊಟ್ಟಮೊದಲು ಕ್ರಿ.ಪೂ. ೧೫೦೦-೧೦೦೦ದ ಮಧ್ಯಕಾಲದಲ್ಲಿ ಋಗ್ವೇದ ಬ್ರಾಹ್ಮಣ್ಯದಲ್ಲಿ ಮತ್ತು ಐತರೇಯ ಬ್ರಾಹ್ಮಣ್ಯದಲ್ಲಿ ಕಂಡುಬರುತ್ತದೆ. ಮಹಾಭಾರತ, ರಾಮಾಯಣದಲ್ಲಿಯೂ ಕೂಡ ಆಂಧ್ರ ಪ್ರದೇಶದ ಪ್ರಸ್ತಾಪ ಕಂಡುಬರುತ್ತದೆ.

ಐತರೇಯ ಬ್ರಾಹ್ಮಣ್ಯದಲ್ಲಿ ಆಂಧ್ರದವರು ಮೂಲತಃ ಉತ್ತರ ಭಾರತದ ಆರ್ಯ ಸಮುದಾಯ ದವರೆಂದು ತಿಳಿದುಬರುತ್ತದೆ. ನಂತರ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಆಗಮಿಸಿ ವಿಶ್ವಾಮಿತ್ರನ ಸಂತತಿಯವರಾದ ಪುಂಡ್ರ, ಶಬರ, ಪುಳಿಂದ ಎಂಬ ಮೊದಲಾದ ಜಾತಿಯ ಹೆಸರುಗಳಿಂದ ಗುರುತಿಸಿಕೊಂಡಿದ್ದಾರೆ. ಕ್ರಿ.ಪೂ. ೬೦೦–೪೦೦ರ ಕಾಲಾವಧಿಯ ಬೌದ್ಧ ಸಾಹಿತ್ಯ ದಲ್ಲಿಯೂ ಕೂಡ ಆಂಧ್ರ ಶಬ್ದದ ಪ್ರಸ್ತಾಪ ಕಂಡುಬರುತ್ತದೆ.

**ರಾಜ್ಯ ನೆಲೆಗೊಂಡಿರುವ ಸ್ಥಳ**

ಆಂಧ್ರ ಪ್ರದೇಶ ರಾಜ್ಯವು ಭಾರತದ ದಕ್ಷಿಣಪೂರ್ವ ಭಾಗದಲ್ಲಿ ಕಂಡುಬರುತ್ತದೆ. "ಈ ರಾಜ್ಯವು ೧೨° ೩೭' ಮತ್ತು ೧೯° ೫೪' ಉತ್ತರ ಅಕ್ಷಾಂಶ ಹಾಗೂ ೭೬° ೪೧' ಮತ್ತು ೮೪° ೪೬' ಪೂರ್ವ ರೇಖಾಂಶದಲ್ಲಿ ಕಂಡುಬರುತ್ತದೆ. ಈ ರಾಜ್ಯವು ೨,೭೬,೨೫೪ ಚ.ಕಿ.ಮೀ. ವಿಸ್ತೀರ್ಣ ಹೊಂದಿದ್ದು, ಭಾರತದ ಅತಿಹೆಚ್ಚು ವಿಸ್ತಾರದ ರಾಜ್ಯಗಳಲ್ಲಿ ನಾಲ್ಕನೇ ಸ್ಥಾನವನ್ನು ಪಡೆದುಕೊಂಡಿದೆ.

ಆಂಧ್ರ ಪ್ರದೇಶ ಭಾರತದ ಪರ್ಯಾಯ ದ್ವೀಪವಾಗಿದ್ದು, ಆಂಧ್ರ ಪ್ರದೇಶದ ಉತ್ತರ ಭಾಗದಲ್ಲಿ ಛತ್ತೀಸಘಡ ಮತ್ತು ಒರಿಸ್ಸಾ ರಾಜ್ಯಗಳು, ದಕ್ಷಿಣದಲ್ಲಿ ತಮಿಳುನಾಡು ರಾಜ್ಯ, ವಾಯುವ್ಯ ಭಾಗದಲ್ಲಿ ಮಹಾರಾಷ್ಟ್ರ ರಾಜ್ಯ, ಪಶ್ಚಿಮದಲ್ಲಿ ಕರ್ನಾಟಕ ರಾಜ್ಯ ಹಾಗೂ ಪೂರ್ವದಲ್ಲಿ ಬಂಗಾಳ ಕೊಲ್ಲಿಯಿಂದ ಸುತ್ತುವರಿಯಲ್ಪಟ್ಟಿದೆ. ಈ ರಾಜ್ಯ ಸುಮಾರು ೯೭೨ ಕಿ.ಮೀ. ಉದ್ದದ ತೀರ ಪ್ರದೇಶ ಹೊಂದಿದೆ" (Maheshwar Reddy B:2010:8). ಹೀಗೆ ರಾಜ್ಯವು ವಿಶಾಲವಾದ ಭೂ ಪ್ರದೇಶವನ್ನು ಒಳಗೊಂಡಿದೆ.

**ರಾಜ್ಯದ ಇತಿಹಾಸ**

ಆಂಧ್ರ ಪ್ರದೇಶದ ಇತಿಹಾಸ ರಾಮಾಯಣ, ಮಹಾಭಾರತಗಳ ಕಾಲಾವಧಿಯಿಂದ ತಿಳಿದುಬರುತ್ತದೆ. ಆದರೆ ಕ್ರಿ.ಪೂ. ೨೩೦ರಲ್ಲಿ ಶಾತವಾಹನರಿಂದ ಸ್ಥಾಪಿಸಲ್ಪಟ್ಟ ಸಾಮ್ರಾಜ್ಯದ ಕಾಲಾವಧಿಯಿಂದ ಲಿಖಿತ ಮೂಲಾಧಾರಗಳು ಲಭ್ಯವಾಗುತ್ತವೆ. ಇಕ್ಷ್ವಾಕು ವಂಶದವರಾದ ಶಾತವಾಹನರಿಂದ ಸುಮಾರು ೫೭ ವರ್ಷಗಳ ಕಾಲ ಈ ರಾಜ್ಯ ಆಳಲ್ಪಟ್ಟಿದೆ. ನಂತರ ಪಲ್ಲವರು ಕೃಷ್ಣಾನದಿ ತೀರದವರೆಗೆ ಸುಮಾರು ೬ನೇ ಶತಮಾನದ ಅಂತ್ಯದವರೆಗೆ ಆಳಿದರು. ಮುಂದೆ ಚಾಲುಕ್ಯ ಮತ್ತು ಕಾಕತೀಯ ರಾಜಮನೆತನಗಳು ೧೪ನೇ ಶತಮಾನದ ಅಂತ್ಯದವರೆಗೆ ಈ ರಾಜ್ಯವನ್ನಾಳಿದರು.

ಮುಂದೆ ದೆಹಲಿ ಸುಲ್ತಾನರ ಕಾಲಾವಧಿಯಲ್ಲಿ ಡೆಕ್ಕನ್ ಮತ್ತು ತೆಲಂಗಾಣ ಪ್ರಾಂತಗಳು ಮುಸ್ಲಿಂ ಅರಸರ ಆಳ್ವಿಕೆಗೆ ಒಳಪಟ್ಟವು. ಈ ಸಂದರ್ಭದಲ್ಲಿ ಸುಲ್ತಾನ ಖುಲಿ ಎಂಬ ಬಹಮನಿ ರಾಜವಂಶಸ್ಥ ತೆಲಂಗಾಣ ಪ್ರದೇಶವನ್ನಾಳಿದ. ಮುಂದೆ ಪೂರ್ವತೀರದ ಮಚಲೀಪಟ್ಟಣದವರೆಗೆ ಈತ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದ.

ಮೊಘಲರ ಕೊನೆಯ ದೊರೆ ಔರಂಗಜೇಬನ ಕಾಲದಲ್ಲಿ ನಿಜಾಮರು ಆಂಧ್ರದ ದೊರೆಗಳಾಗಿದ್ದರು. ಬ್ರಿಟಿಷರು ಮತ್ತು ಫ್ರೆಂಚರು ಹಲವು ಬಾರಿ ಇವರೊಂದಿಗೆ ಸೆಣಸಾಡಿದರು. ಮುಂದೆ ೧೯೪೭ರಲ್ಲಿ ಭಾರತ ಸ್ವತಂತ್ರಗೊಂಡ ನಂತರ ಪ್ರಸ್ತುತ ರಾಜ್ಯ ನಿರ್ಮಾಣಗೊಂಡಿತು.

**ಕೃಷಿ**

ಆಂಧ್ರ ಪ್ರದೇಶದಲ್ಲಿ ಕೃಷಿ ಮಳೆಯಾಶ್ರಿತವಾಗಿದ್ದು, ಭತ್ತ ರಾಜ್ಯದ ಪ್ರಮುಖವಾದ ಬೆಳೆಯಾಗಿದೆ. ಈ ಕಾರಣದಿಂದ ರಾಜ್ಯಕ್ಕೆ 'ಭತ್ತದ ಕಣಜ' ಎಂತಲೂ ಕರೆಯುತ್ತಾರೆ. ನದಿತೀರ ಪ್ರದೇಶಗಳಲ್ಲಿ, ಕೆರೆ, ಹಳ್ಳ, ತೊರೆಗಳಿರುವ ಭೂಪ್ರದೇಶಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಭತ್ತವನ್ನು ಬೆಳೆದರೆ, ಬಯಲು ಸೀಮೆಯ ಜಿಲ್ಲೆಗಳಲ್ಲಿ ಒಣಬೇಸಾಯ ಕೈಗೊಂಡು ಜೋಳ, ತೊಗರಿ, ಉದ್ದು, ಹೆಸರು, ಸಜ್ಜೆ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದಾರೆ.

ತಲಾ ಆದಾಯ ಜನರ ಜೀವನಮಟ್ಟದ ಸೂಚಕವಾಗಿದೆ. ೨೦೧೧-೧೨ರಲ್ಲಿ ಆಂಧ್ರ ಪ್ರದೇಶದ ರಾಜ್ಯದ ತಲಾದಾಯ ರೂ.೭೧,೫೪೦/- ಇದೆ. ೨೦೧೦-೧೧ರಲ್ಲಿ ರಾಜ್ಯದ ತಲಾದಾಯ ರೂ. ೬೨,೯೧೨/- ಇತ್ತು. ಒಂದು ವರ್ಷದಲ್ಲಿ ೧೩.೭ರಷ್ಟು ಆದಾಯದ ಪ್ರಮಾಣ ವೃದ್ಧಿಯಾಗಿದೆ.

**ಜನತೆ**

ಜನಸಂಖ್ಯೆ ಒಂದು ದೇಶದ ಆರ್ಥಿಕಾಭಿವೃದ್ಧಿಯ ಚಾಲಕಶಕ್ತಿ. ಅಭಿವೃದ್ಧಿಯು ಜನಸಂಖ್ಯೆಯ ಗಾತ್ರ ಮತ್ತು ಗುಣಮಟ್ಟವನ್ನು ಅವಲಂಬಿಸಿರುತ್ತದೆ. ಒಂದು ಪ್ರದೇಶದ ಪರಿಪೂರ್ಣ ಅಧ್ಯಯನಕ್ಕೆ ಅಲ್ಲಿಯ ಜನಸಂಖ್ಯಾ ಬೆಳವಣಿಗೆ ಪ್ರಮುಖವಾಗಿರುತ್ತದೆ. ೨೦೦೧ರ ಜನಗಣತಿಯ ಪ್ರಕಾರ ಆಂಧ್ರ ಪ್ರದೇಶದ ಜನಸಂಖ್ಯೆ ೭೫.೭ ಮಿಲಿಯನ್‌ಗಳು ಅಂದರೆ ಭಾರತದ ಒಟ್ಟು ಜನಸಂಖ್ಯೆಯ ೭.೩೭ರಷ್ಟಿದೆ. ಭಾರತದ ಹೆಚ್ಚು ಜನಸಂಖ್ಯೆ ಹೊಂದಿದ ರಾಜ್ಯಗಳಲ್ಲಿ ಆಂಧ್ರ ಪ್ರದೇಶ ೫ನೇ ಸ್ಥಾನ ಹೊಂದಿದೆ. ೨೦೧೧ರ ಜನಗಣತಿಯಂತೆ ಆಂಧ್ರ ಪ್ರದೇಶ ರಾಜ್ಯವು ೪,೨೪,೪೨,೧೪೬ ಪುರುಷರು ಮತ್ತು ೪,೨೧,೩೮,೬೩೧ ಸ್ತ್ರೀಯರನ್ನೊಳಗೊಂಡಂತೆ ಒಟ್ಟು ೮,೪೫,೮೦,೭೭೭ ಜನಸಂಖ್ಯೆಯನ್ನು ಹೊಂದಿದೆ. ರಾಜ್ಯದ ಒಟ್ಟು ಪರಿಶಿಷ್ಟ ಪಂಗಡದ ಜನಸಂಖ್ಯೆ ೫೯,೧೮,೦೭೩ ಇದ್ದು, ಇದರಲ್ಲಿ ೨೯,೬೯,೩೬೭ ಪುರುಷರು ಹಾಗೂ ೨೯,೪೮,೭೧೧ ಮಹಿಳೆಯರ ಪ್ರಮಾಣವಾಗಿದೆ.

**ಲಂಬಾಣಿ ಜನಸಂಖ್ಯೆ**

ಲಂಬಾಣಿ ಸಮುದಾಯವು ಆಂಧ್ರ ಪ್ರದೇಶ ರಾಜ್ಯಾದ್ಯಂತ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಗುರುತಿಸಿಕೊಳ್ಳುತ್ತಾರೆ. ಪರಿಶಿಷ್ಟ ಪಂಗಡದ ೩೩ ಸಮುದಾಯಗಳ ಪಟ್ಟಿಯಲ್ಲಿ ಸಂಖ್ಯಾತ್ಮಕವಾಗಿ ಲಂಬಾಣಿಗರು ಬಹುಸಂಖ್ಯಾತರಾಗಿದ್ದಾರೆ. ೨೦೦೧ರ ಜನಗಣತಿಯಂತೆ ಆಂಧ್ರ ಪ್ರದೇಶ ರಾಜ್ಯದ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ ೫೦,೨೪,೧೦೪. ಅದರಲ್ಲಿ ೨೫,೪೮,೯೫೫ ಪುರುಷರು ಹಾಗೂ ೨೪,೭೫,೮೯೯ ಸ್ತ್ರೀಯರಿದ್ದಾರೆ. ಇದರಲ್ಲಿ ಲಂಬಾಣಿಗರು ೧೦,೭೧,೫೮೯ ಪುರುಷರು ಮತ್ತು ೧೦,೦೬,೩೫೮ ಸ್ತ್ರೀಯರನ್ನೊಳಗೊಂಡಂತೆ ಒಟ್ಟು ೨೦,೭೭,೯೪೭ ಜನಸಂಖ್ಯೆಯನ್ನು ಹೊಂದಿದ್ದಾರೆ. ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆಯಲ್ಲಿ ಲಂಬಾಣಿಗರು ಶೇ.೪೧.೩೫ರಷ್ಟು ಪ್ರಮಾಣವನ್ನು ಹೊಂದಿದ್ದಾರೆ. ೨೦೦೧ರ ಜನಗಣತಿಯಂತೆ ಜಿಲ್ಲಾವಾರು ಲಂಬಾಣಿಗರ ಜನಸಂಖ್ಯೆ ಈ ರೀತಿಯಾಗಿದೆ. ಶ್ರೀಕಾಕುಳಂ-೪೩, ವಿಜಯನಗರಮ್-೪೯, ವಿಶಾಖಪಟ್ಟಣಂ-೮೨೨,

ಪೂರ್ವಗೋದಾವರಿ-೪೫೫, ಪಶ್ಚಿಮಗೋದಾವರಿ-೭೨೩, ಖಮ್ಮಂ-೨೭೧೩೭೩, ವಾರಂಗಲ್-೩೬೮೪೪೬, ಅದಿಲಾಬಾದ್-೧೦೩೩೦೩, ಮೆಹಬೂಬನಗರ-೨೪೬೮೧೦, ಕೃಷ್ಣಾ-೫೩೨೩೨, ಗುಂಟೂರು-೭೬೮೨೫, ಪ್ರಕಾಶಮ್-೧೬೯೯೦, ನೆಲ್ಲೂರು-೫೭೨, ಚಿತ್ತೂರು-೨೨೨೭೪, ಕಡಪಾ-೧೮೨೫೭, ಅನಂತಪುರ-೮೭೭೨೭, ಕರ್ನೂಲ್-೩೦೨೩೫, ರಂಗಾರೆಡ್ಡಿ-೧೨೩೭೫೩, ಹೈದ್ರಾಬಾದ್-೧೭೧೪೫, ಮೆದಕ್-೧೧೮೬೪೨, ನಿಜಾಮಾಬಾದ್-೧೪೨೩೫೫, ಕರೀಮ್‌ನಗರ-೫೧೧೫೭, ನಲಗೊಂಡ-೩೨೯೫, ಜನಸಂಖ್ಯೆಯಿದೆ. ೨೦೧೧ರ ಜನಗಣತಿಯಂತೆ ಆಂಧ್ರ ಪ್ರದೇಶ ರಾಜ್ಯದಲ್ಲಿ ವಾಸಿಸುತ್ತಿರುವ ಲಂಬಾಣಿಗರ ಒಟ್ಟು ಜನಸಂಖ್ಯೆ ೨೪,೦೭,೬೩೭ ಇದೆ. ಅದರಲ್ಲಿ ೧೨,೩೧,೦೦೬ ಪುರುಷರು ಹಾಗೂ ೧೧,೭೬,೬೩೧ ಮಹಿಳೆಯರಿದ್ದಾರೆ.

ಆಂಧ್ರ ಪ್ರದೇಶ ರಾಜ್ಯದಲ್ಲಿ ಲಂಬಾಣಿಗರ ಜನಸಂಖ್ಯೆಯು ೧೯೬೧ರ ಜನಗಣತಿಯಲ್ಲಿ ೯೬೧೭೪ ಜನಸಂಖ್ಯೆಯಿದ್ದು, ೧೯೭೧ರ ಜನಗಣತಿಯಲ್ಲಿ ೧೩೨೪೬೪ಕ್ಕೆ ವೃದ್ಧಿಯಾಗಿದೆ. ೧೯೬೧ ರಿಂದ ೧೯೭೧ರ ಅವಧಿಯಲ್ಲಿ ಲಂಬಾಣಿಗರ ಜನಸಂಖ್ಯೆಯು ಶೇ. ೩೭.೭೩ರಷ್ಟು ಏರಿಕೆಯಾಗಿದೆ. ೧೯೮೧ರ ಜನಗಣತಿಯಲ್ಲಿ ೧೧೫೮೩೪೨ ಜನಸಂಖ್ಯೆಯಿರುವುದು ಕಂಡುಬರುತ್ತದೆ. ೧೯೭೧-೧೯೮೧ರ ದಶಕದಲ್ಲಿ ಶೇ. ೭೭೪.೪೫ರಷ್ಟು ಏರಿಕೆಯಾಗಿದ್ದರೆ, ೧೯೯೧ರಲ್ಲಿ ೧೬೪೧೮೯೭ ಜನಸಂಖ್ಯೆ ಇದ್ದು, ೧೯೮೧-೧೯೯೧ರಲ್ಲಿ ಅದು ಶೇ. ೪೧.೭೪ರ ಪ್ರಮಾಣದಲ್ಲಿ ಏರಿತು. ಆದರೆ ೨೦೦೧ರಲ್ಲಿ ೧೨೯೭೯ ಜನಸಂಖ್ಯೆ ಹೊಂದಿದ್ದು, ೧೯೯೧-೨೦೦೧ರ ದಶಕದಲ್ಲಿ ಶೇ. ೨೬.೫೫ರಷ್ಟು ವೃದ್ಧಿ ಕಂಡುಬಂದಿತು. ಹಿಂದಿನ ದಶಕಗಳಿಗೆ ಹೋಲಿಸಿದರೆ ೧೯೯೧-೨೦೦೧ರ ದಶಕದಲ್ಲಿ ಲಂಬಾಣಿಗರ ಜನಸಂಖ್ಯೆಯು ಕಡಿಮೆ ಪ್ರಮಾಣದಲ್ಲಿ ಏರಿಕೆಯಾಗಿರುವುದು ಕಂಡುಬರುತ್ತದೆ.

೧೯೫೬ ನವೆಂಬರ್ ೧ರಂದು ಭಾಷಾವಾರು ಪ್ರಾಂತಗಳ ಆಧಾರದ ಮೇಲೆ ರೂಪುಗೊಂಡ ಆಂಧ್ರ ಪ್ರದೇಶ ರಾಜ್ಯ, ೨೦೧೪ರ ಆಂಧ್ರ ಪ್ರದೇಶ ಪುನರ್ ರಚನಾ ಮಸೂದೆಯಂತೆ ಸೀಮಾಂಧ್ರ ಮತ್ತು ತೆಲಂಗಾಣ ಎಂಬ ಎರಡು ರಾಜ್ಯಗಳಾಗಿ ವಿಭಜನೆಗೊಂಡಿದೆ. ತೆಲಂಗಾಣ ರಾಜ್ಯವು ಅದಿಲಾಬಾದ, ನಿಜಾಮಾಬಾದ, ಕರೀಮನಗರ, ಮೇದಕ, ವಾರಂಗಲ್, ರಂಗಾರೆಡ್ಡಿ, ಖಮ್ಮಮ್, ನಲಗೊಂಡ, ಮಹಬೂಬನಗರ ಮತ್ತು ಹೈದ್ರಾಬಾದ ಒಟ್ಟು ೧೦ ಜಿಲ್ಲೆಗಳನ್ನೊಳಗೊಂಡು ದೇಶದ ೨೯ನೆಯ ರಾಜ್ಯವಾಗಿ ಉದಯಿಸಿದೆ. ಪ್ರಸ್ತುತ ಅಧ್ಯಯನಕ್ಕೆ ಒಳಪಟ್ಟ ರಂಗಾರೆಡ್ಡಿ ಜಿಲ್ಲೆಯು ತೆಲಂಗಾಣ ರಾಜ್ಯದಲ್ಲಿದೆ.

### ೨.೩.೧. ರಂಗಾರೆಡ್ಡಿ ಜಿಲ್ಲೆಯ ಕಿರುನೋಟ

**ಹೆಸರಿನ ಮೂಲ**

ಆಂಧ್ರ ಪ್ರದೇಶದ ಇಪ್ಪತ್ತೂರು ಜಿಲ್ಲೆಗಳಲ್ಲಿ ರಂಗಾರೆಡ್ಡಿ ಪ್ರಮುಖ ಜಿಲ್ಲೆಯಾಗಿದೆ. ಹೈದ್ರಾಬಾದ್ ನಗರದ ಸುತ್ತಲಿನ ಗ್ರಾಮಾಂತರ ಪ್ರದೇಶಗಳನ್ನೊಳಗೊಂಡು ಈ ಜಿಲ್ಲೆ ನಿರ್ಮಾಣಗೊಂಡಿದೆ. ಬುರ್ಗೂಲ ರಾಮಕೃಷ್ಣರಾವ್‌ರವರ ನಾಯಕತ್ವದಲ್ಲಿ ಹೈದ್ರಾಬಾದ್ ನಗರವನ್ನು ರಾಜ್ಯದ ರಾಜ್ಯಧಾನಿಯಾಗಿ ಏರ್ಪಾಡು ಮಾಡಿದ ಮಂತ್ರಿಗಳಲ್ಲಿ, ಆಂಧ್ರ ಪ್ರದೇಶ ನಿರ್ಮಾಣದ ನಂತರ ನೀಲಂಸಂಜೀವರೆಡ್ಡಿಯವರ

ಮಂತ್ರಿಮಂಡಳದಲ್ಲಿ ವಿವಿಧ ಶಾಖೆಗಳಲ್ಲಿ ಕಾರ್ಯನಿರ್ವಹಿಸಿದ ಆಂಧ್ರ ಪ್ರದೇಶ ರಾಜ್ಯದ ಉಪ ಮುಖ್ಯಮಂತ್ರಿಯಾಗಿದ್ದ ಕೆ.ವಿ.ರಂಗಾರೆಡ್ಡಿಯವರ ಹೆಸರಿನಲ್ಲಿ ೧೯೭೮ರಲ್ಲಿ ಈ ಜಿಲ್ಲೆಯನ್ನು ರಚನೆ ಮಾಡಿದ್ದಾರೆ. "ಕೆಲವು ಹೈದ್ರಾಬಾದ್ ನಗರ ತಾಲೂಕುಗಳನ್ನು ಹಾಗೂ ಹೈದ್ರಾಬಾದ್ ಜಿಲ್ಲೆಯ ಪೂರ್ವಭಾಗದ ನಗರ ಮತ್ತು ಗ್ರಾಮೀಣ ಪ್ರದೇಶಗಳನ್ನೊಳಗೊಂಡು ೧೫ನೇ ಅಗಷ್ಟ್ ೧೯೭೮ರಲ್ಲಿ ಈ ಜಿಲ್ಲೆ ನಿರ್ಮಾಣಗೊಂಡಿದೆ" (Hand book of Statistics, Rangareddy District:2010:1).

**ಜಿಲ್ಲೆ ನೆಲೆಗೊಂಡಿರುವ ಸ್ಥಳ**

ದಖ್ಖನ್ ಪ್ರಸ್ಥಭೂಮಿ ಕೇಂದ್ರಭಾಗದಲ್ಲಿ ರಂಗಾರೆಡ್ಡಿ ಜಿಲ್ಲೆ ನೆಲೆಗೊಂಡಿದೆ. "೧೬° ೩೦' ಮತ್ತು ೧೮° ೨೦' ಉತ್ತರ ಅಕ್ಷಾಂಶದಲ್ಲಿ ೭೭° ೩೦' ಹಾಗೂ ೭೯° ೩೦' ಪೂರ್ವ ರೇಖಾಂಶದಲ್ಲಿ ಈ ಜಿಲ್ಲೆ ಕಂಡುಬರುತ್ತದೆ"(ಅದೇ: ಪು:೧). ಈ ಜಿಲ್ಲೆಯು ಉತ್ತರದಲ್ಲಿ ಮೆದಕ್ ಜಿಲ್ಲೆ, ಪೂರ್ವದಲ್ಲಿ ನಲಗೊಂಡ ಜಿಲ್ಲೆ, ದಕ್ಷಿಣದಲ್ಲಿ ಮೆಹಬೂಬನಗರ ಜಿಲ್ಲೆ, ಪಶ್ಚಿಮದಲ್ಲಿ ಗುಲಬರ್ಗಾ (ಕರ್ನಾಟಕ) ಜಿಲ್ಲೆ, ನೈರುತ್ಯದಲ್ಲಿ ಕರ್ನಾಟಕ ರಾಜ್ಯದ ಬೀದರ್ ಜಿಲ್ಲೆಯಿಂದ ಸುತ್ತುವರಿಯಲ್ಪಟ್ಟಿದ್ದು, "ಇದರ ಒಟ್ಟು ವಿಸ್ತೀರ್ಣ ೭೪೯೩ ಚ.ಕಿ.ಮೀ.ಗಳು" (ಅದೇ: ಪು:೧).

**ಕೃಷಿ**

ಈ ಜಿಲ್ಲೆಯಲ್ಲಿ ಬೆಳೆಯುವ ಪ್ರಮುಖ ಬೆಳೆಗಳೆಂದರೆ ಭತ್ತ, ಜೋಳ, ರಾಗಿ, ಎಣ್ಣೆ ಬೀಜಗಳು. ಈ ಜಿಲ್ಲೆಯಲ್ಲಿ ಬೆಳೆಯುವ ಆಹಾರ ಬೆಳೆಗಳ ಪ್ರಮಾಣ ಶೇ. ೮೩.೧ರಷ್ಟಾದರೆ, ವಾಣಿಜ್ಯ ಬೆಳೆಗಳ ಪ್ರಮಾಣ ಶೇ. ೧೬.೯ರಷ್ಟಿದೆ. ದ್ರಾಕ್ಷಿ ಬೆಳೆಯ ಉತ್ಪತ್ತಿಯಲ್ಲಿ ಈ ಜಿಲ್ಲೆ ರಾಜ್ಯದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ.

**ನೀರಾವರಿ:** ಮೂಸಿನದಿ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ ನೀರಾವರಿಯನ್ನು ಅಳವಡಿಸಿಕೊಳ್ಳಲಾಗಿದೆ. ಕಾಗಿಣ ನದಿ ನೀರಿನಿಂದ ಕೋಟಪಲ್ಲಿ ಯೋಜನೆಯಿಂದ ವಿಕಾರಾಬಾದ್, ತಾಂಡೂರ ಮತ್ತು ಮಾರಪಲ್ಲಿ ಮಂಡಲಗಳಲ್ಲಿ ನೀರಾವರಿ ಅಳವಡಿಸಿಕೊಳ್ಳಲಾಗಿದೆ. "ಜಿಲ್ಲೆಯಲ್ಲಿ ಒಟ್ಟು ೪.೮೭ ಲಕ್ಷ ಹೆಕ್ಟರ್ ಕೃಷಿ ಜಮೀನಿದ್ದು, ಇದರಲ್ಲಿ ೦.೫೬ ಲಕ್ಷ ಹೆಕ್ಟೇರ್ ಜಮೀನು ಮಾತ್ರ ನೀರಾವರಿಗೆ ಒಳಪಟ್ಟಿದೆ" (ಅದೇ:ಪು:೬).

**ಸಾಕ್ಷರತೆ ಮತ್ತು ಶಿಕ್ಷಣ**

೨೦೧೧ರ ಜನಗಣತಿಯಂತೆ ಜಿಲ್ಲೆಯ ಒಟ್ಟು ಅಕ್ಷರಸ್ಥರ ಸಂಖ್ಯೆ ೩೫,೩೮,೦೨೮. ಇದರಲ್ಲಿ ೧೯,೪೮,೭೮೪ ಗಂಡು ಮತ್ತು ೧೫,೮೯,೨೪೪ ಹೆಣ್ಣುಮಕ್ಕಳ ಪ್ರಮಾಣವಾಗಿದೆ. ಪರಿಶಿಷ್ಟ ಪಂಗಡದ ಅಕ್ಷರಸ್ಥರ ಸಂಖ್ಯೆ ೧,೦೪,೦೮೩, ಇದರಲ್ಲಿ ೬೨,೫೮೮ ಪುರುಷರು ಹಾಗೂ ೪೧,೪೯೫ ಮಹಿಳೆಯರು ಇರುವುದು ಕಂಡುಬರುತ್ತದೆ. "೨೦೦೯-೧೦ನೇ ಸಾಲಿನಿಂದ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಥಮಿಕ ಶಾಲೆಗಳ ಸಂಖ್ಯೆ ೨೬೦೦ ಇರುವುದು ಕಂಡುಬರುತ್ತದೆ. ಅದೇ ರೀತಿ ೮೩೨ ಮಾಧ್ಯಮಿಕ ಶಾಲೆಗಳು ೧೪೯೭ ಪ್ರೌಢಶಾಲೆ, ೩೫೪ ಜ್ಯೂನಿಯರ್ ಕಾಲೇಜುಗಳು, ೬೬ ಪದವಿ

ಕಾಲೇಜು, ೧೩೫ ಎಮ್.ಸಿ.ಎ. ಕಾಲೇಜುಗಳು, ೧೦೪ ಎಮ್.ಬಿ.ಎ. ಕಾಲೇಜುಗಳು, ೪ ಕಾನೂನು ಕಾಲೇಜುಗಳು, ೬ ವೈದ್ಯಕೀಯ ಕಾಲೇಜುಗಳು, ೪೬ ಬಿ.ಇಡಿ ಕಾಲೇಜುಗಳು ಕಾರ್ಯನಿರ್ವಹಿಸುತ್ತಿರುವುದು ಕಂಡುಬರುತ್ತದೆ"(Hand book of Statistics, Rangareddy District:2010:1). ಇವುಗಳಲ್ಲಿ ಸರಕಾರದಿಂದ ನಡೆಸಲ್ಪಡುತ್ತಿರುವ ಶೈಕ್ಷಣಿಕ ಸಂಸ್ಥೆಗಳು ಕಡಿಮೆ ಪ್ರಮಾಣದಲ್ಲಿದ್ದು, ಖಾಸಗಿಯವರಿಂದ ನಡೆಸಲ್ಪಡುತ್ತಿರುವ ಶೈಕ್ಷಣಿಕ ಸಂಸ್ಥೆಗಳು ಹೆಚ್ಚಿನ ಪ್ರಮಾಣದಲ್ಲಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

**ಜನತೆ**

ಆಂಧ್ರ ಪ್ರದೇಶ ರಾಜ್ಯದ ೨೩ ಜಿಲ್ಲೆಗಳಲ್ಲಿ ರಂಗಾರೆಡ್ಡಿ ಒಂದು ಜಿಲ್ಲೆಯಾಗಿದ್ದು, ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೩೫,೭೫,೦೬೪. ಜನಸಾಂದ್ರತೆ ೪೭೩. ಗ್ರಾಮೀಣ ಪ್ರದೇಶದ ಜನಸಂಖ್ಯೆ ೧೬.೩೮ ಲಕ್ಷ, ಹಾಗೆಯೇ ನಗರ ಪ್ರದೇಶದ ಜನಸಂಖ್ಯೆ ೧೯.೩೮ ಲಕ್ಷವಿದೆ. ಸ್ತ್ರೀ ಪುರುಷರ ಲಿಂಗಾನುಪಾತ ಪ್ರಮಾಣ ೧೦೦೦ಕ್ಕೆ ೯೪೪ ಇರುವುದು ಕಂಡುಬರುತ್ತದೆ.

೨೦೧೧ರ ಜನಗಣತಿಯಂತೆ ಜಿಲ್ಲೆಯು ಒಟ್ಟು ೫೨,೯೬,೭೪೧ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೨೭,೦೧,೦೦೮ ಪುರುಷರು ಹಾಗೂ ೨೫,೯೫,೭೩೩ ಮಹಿಳೆಯರನ್ನು ಒಳಗೊಂಡಿದೆ. ಜಿಲ್ಲೆಯ ನಗರ ಪ್ರದೇಶಗಳಲ್ಲಿ ೧೮,೯೯,೯೫ ಪುರುಷರು ಮತ್ತು ೧೮,೧೯,೧೭೭ ಮಹಿಳೆಯರನ್ನೊಳಗೊಂಡಂತೆ ಒಟ್ಟು ೩೭,೧೯,೧೨೭ ಜನರು ವಾಸಿಸುತ್ತಿದ್ದಾರೆ. ಗ್ರಾಮೀಣ ಭಾಗದಲ್ಲಿ ಒಟ್ಟು ೧೮,೭೭,೫೯೪ ಜನಸಂಖ್ಯೆಯಿದ್ದು, ಇದರಲ್ಲಿ ೮,೦೧,೦೧೩ ಪುರುಷರು ಹಾಗೂ ೭,೭೬,೫೫೬ ಮಹಿಳೆಯರಿರುವದು ಕಂಡುಬರುತ್ತದೆ. ಜಿಲ್ಲೆಯು ರಾಜ್ಯದ ಒಟ್ಟು ಜನಸಂಖ್ಯೆಯ ಶೇ. ೬.೨೬ರಷ್ಟು ಜನಸಂಖ್ಯಾ ಪ್ರಮಾಣವನ್ನು ಹೊಂದಿದೆ. ರಂಗಾರೆಡ್ಡಿ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಭಾಗದಲ್ಲಿ ವಾಸಿಸುವವರ ಪ್ರಮಾಣ ಶೇ. ೨೯.೭೮ರಷ್ಟಿದ್ದು, ನಗರ ಪ್ರದೇಶಗಳಲ್ಲಿ ವಾಸಿಸುವವರ ಪ್ರಮಾಣ ಶೇ. ೭೦.೨೨ರಷ್ಟಿರುವುದು ಕಂಡುಬರುತ್ತದೆ. ಜೀವನೋಪಾಯಕ್ಕಾಗಿ ಗ್ರಾಮೀಣ ಬಡಜನರು ಕೂಲಿಯನ್ನು ಅರಸುತ್ತಾ ಹಾಗೂ ಶ್ರೀಮಂತರು ವಿಲಾಸಿ ಬದುಕನ್ನು ಬಯಸುತ್ತಾ ನಗರಗಳಿಗೆ ವಲಸೆ ಹೋಗುತ್ತಿರುವುದು ಈ ಅಂಕಿಅಂಶಗಳಿಂದ ಸ್ಪಷ್ಟವಾಗುತ್ತದೆ.

**ಲಂಬಾಣಿಗರ ಜನಸಂಖ್ಯೆ**

ಲಂಬಾಣಿಗರನ್ನು ಆಂಧ್ರ ಪ್ರದೇಶ ರಾಜ್ಯದಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಗುರುತಿಸುತ್ತಾರೆ. ೨೦೧೧ರ ಜನಗಣತಿಯಂತೆ ರಂಗಾರೆಡ್ಡಿ ಜಿಲ್ಲೆಯಲ್ಲಿ ವಾಸಿಸುತ್ತಿರುವ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ ೨,೧೮,೭೫೭. ಇದರಲ್ಲಿ ೧,೧೨,೭೬೮ ಪುರುಷರು ಹಾಗೂ ೧,೦೫,೯೮೯ರಷ್ಟು ಮಹಿಳೆಯರಿರುವುದು ಕಂಡುಬರುತ್ತದೆ. ರಂಗಾರೆಡ್ಡಿ ಜಿಲ್ಲೆಯ ಗ್ರಾಮೀಣ ಭಾಗದಲ್ಲಿ ೬೮,೭೪೮ ಪುರುಷರು ಹಾಗೂ ೬೫,೧೪೨ ಮಹಿಳೆಯರನ್ನೊಳಗೊಂಡಂತೆ ಒಟ್ಟು ಜನಸಂಖ್ಯೆ ೧,೩೩,೮೯೦ ಹಾಗೂ ನಗರ ಪ್ರದೇಶದಲ್ಲಿ ೪೪,೦೨೦ ಪುರುಷರು ಹಾಗೂ ೪೦,೮೪೭ ಮಹಿಳೆಯರು ಒಟ್ಟು ೮೪,೮೬೭ ಜನಸಂಖ್ಯೆ ವಾಸಿಸುತ್ತಿರುವುದು ಕಂಡುಬರುತ್ತದೆ. ರಂಗಾರೆಡ್ಡಿ ಜಿಲ್ಲೆಯ ಗ್ರಾಮೀಣ

ಪ್ರದೇಶಗಳಲ್ಲಿ ಶೇ. ೬೧.೨೦ರಷ್ಟು ಹಾಗೂ ನಗರ ಪ್ರದೇಶಗಳಲ್ಲಿ ಶೇ.೩೮.೮೦ರಷ್ಟು ಪ್ರಮಾಣದಲ್ಲಿ ಪರಿಶಿಷ್ಟ ಪಂಗಡದ ಜನರು ಕಂಡುಬರುತ್ತಾರೆ. ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಬರುವ ಲಂಬಾಣಿಗರು ರಂಗಾರೆಡ್ಡಿ ಜಿಲ್ಲೆಯಾದ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ೨೦೧೧ರ ಜನಗಣತಿಯಂತೆ ಜಿಲ್ಲೆಯಾದ್ಯಂತ ಒಟ್ಟು ೧,೨೩,೭೫೩ ಲಂಬಾಣಿಗರು ವಾಸಿಸುತ್ತಿರುವದು ಗೋಚರಿಸುತ್ತದೆ. ರಂಗಾರೆಡ್ಡಿ ಜಿಲ್ಲೆಯ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆಯಲ್ಲಿ ಲಂಬಾಣಿಗರ ಪ್ರಮಾಣ ಶೇ. ೮೪.೭೨ರಷ್ಟಿರುವುದು ಸ್ಪಷ್ಟವಾಗುತ್ತದೆ. ೨೦೧೧ರ ಜನಗಣತಿಯಂತೆ ಲಂಬಾಣಿಗರ ಜನಸಂಖ್ಯೆ ಪ್ರಮಾಣದಲ್ಲಿ ವಾರಂಗಲ್ ಜಿಲ್ಲೆಯು ೩,೬೮,೪೪೬ ಜನಸಂಖ್ಯೆಯನ್ನು ಹೊಂದಿ ಮೊದಲ ಸ್ಥಾನದಲ್ಲಿದ್ದರೆ, ರಂಗಾರೆಡ್ಡಿ ಜಿಲ್ಲೆಯು ಆರನೇ ಸ್ಥಾನದಲ್ಲಿ ನಿಲ್ಲುತ್ತದೆ. ಅದರಂತೆ ರಾಜ್ಯದ ಒಟ್ಟು ಲಂಬಾಣಿಗರ ಜನಸಂಖ್ಯೆಯಾದ ೨೦,೭೭,೯೪೭ರಲ್ಲಿ ರಂಗಾರೆಡ್ಡಿ ಜಿಲ್ಲೆ ಶೇ. ೫.೯೬ರಷ್ಟು ಪ್ರಮಾಣವನ್ನು ಹೊಂದಿದೆ. ೨೦೧೧ರ ಜನಗಣತಿಯಂತೆ ರಂಗಾರೆಡ್ಡಿ ಜಿಲ್ಲೆಯಲ್ಲಿ ವಾಸಿಸುತ್ತಿರುವ ಲಂಬಾಣಿಗರ ಒಟ್ಟು ಜನಸಂಖ್ಯೆ ೧,೫೮,೮೪೯ ಇದೆ. ಅದರಲ್ಲಿ ೮೨,೧೬೬ ಪುರುಷರು ಹಾಗೂ ೭೬,೬೮೩ ಮಹಿಳೆಯರಿದ್ದಾರೆ.

**ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಲಂಬಾಣಿಗರು**

ಇಂದಿನ ಆಧುನಿಕ ಮಾನವನು ತನ್ನ ಐತಿಹಾಸಿಕ ನಡಿಗೆಯಲ್ಲಿ ದಾಪುಗಾಲಿರಿಸುತ್ತಾ ಪ್ರಪಂಚವನ್ನು ಅತಿ ಚಿಕ್ಕದನ್ನಾಗಿಸಿಕೊಂಡಿದ್ದಾನೆ. ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಪ್ರಗತಿಯನ್ನು ಸಾಧಿಸುತ್ತಾ ತನ್ನ ಕೀರ್ತಿ ಪತಾಕೆಯನ್ನು ಹಾರಿಸಿದ್ದಾನೆ. ಚಂದ್ರಗ್ರಹದ ಮೇಲೆ ಕಾಲಿಟ್ಟು ಈಗ ಮಂಗಳ ಗ್ರಹಕ್ಕೆ ಹಾರುವ ಸನ್ನಾಹದಲ್ಲಿದ್ದಾನೆ. ಹಾಗೆಂದ ಮಾತ್ರಕ್ಕೆ ಜಗತ್ತಿನ ಎಲ್ಲಾ ಮಾನವ ಸಮೂಹಗಳು ಈ ಅತ್ಯುಚ್ಛ ಹಂತಕ್ಕೆ ತಲುಪಿವೆ ಎಂದರ್ಥವಲ್ಲ. ಬಾಹ್ಯ ಜಗತ್ತಿನ ಪರಿವೇ ಇಲ್ಲದೇ ಅಕ್ಷರ ಪೂರ್ವ ಸ್ಥಿತಿಯಲ್ಲಿ ಕಾಡು ಮೇಡುಗಳಲ್ಲಿ, ಬೆಟ್ಟಗುಡ್ಡಗಳಲ್ಲಿ, ಗಿರಿಕಂದರಗಳಲ್ಲಿ ನಾವು ನಮ್ಮವರು ಎಂಬ ಭಾವನೆಯಿಂದ ತಮ್ಮದೇ ಪ್ರತ್ಯೇಕ ಹಾಡಿಗಳಲ್ಲಿ ಹಲವಾರು ಸಮಸ್ಯೆಗಳೊಂದಿಗೆ ಬದುಕುತ್ತಿರುವ ದೊಡ್ಡ ಸಂಖ್ಯೆಯ ಜನವರ್ಗಗಳು ಪ್ರಪಂಚದಾದ್ಯಂತ ಗೋಚರಿಸುತ್ತವೆ. ಮೂಲ ನಿವಾಸಿಗಳೆಂದು, ದೇಶಿಯ ಜನವರ್ಗವೆಂದು, ಆದಿವಾಸಿಗಳೆಂದು, ಆದಿಪ್ರಜೆಗಳೆಂದು ವಿವಿಧ ಹೆಸರುಗಳಿಂದ ಕರೆಯಲ್ಪಡುವ ಇಂತಹ ದೇಶಿಯ ಜನವರ್ಗಗಳು ಇಲ್ಲದ ದೇಶವೇ ಇಲ್ಲ ಎನ್ನಬಹುದು. ಅದರಲ್ಲೂ ಭಾರತದಲ್ಲಿ ಆದಿವಾಸಿಗಳು ದೇಶದ ಉದ್ದಗಲಕ್ಕೂ ವ್ಯಾಪಿಸಿದ್ದು ಸಾಮಾನ್ಯವಾಗಿ ಎಲ್ಲಾ ರಾಜ್ಯಗಳಲ್ಲಿಯೂ ಕಂಡುಬರುತ್ತಾರೆ.

ಟ್ರೈಬ್ ಎಂಬ ಇಂಗ್ಲೀಷ ಶಬ್ದವು ಲ್ಯಾಟಿನ ಭಾಷೆಯ ಟ್ರೈಬಸ್ ಎಂಬ ಮೂಲ ಪದದಿಂದ ಉತ್ಪತ್ತಿ ಹೊಂದಿರುವುದು. ಟ್ರೈಬಸ್ ಎಂಬುದಕ್ಕೆ ಪ್ರಾಚೀನ ರೋಮ್ ಜನತೆಯ ರಾಜಕೀಯ ಭಾಗ ಅಥವಾ ಆಡಳಿತ ಪ್ರಾಂತ ಅಥವಾ ಮಂಡಲ ಎಂಬ ಅರ್ಥವಿದೆ. ಕಾಲಾಂತರದಲ್ಲಿ ಟ್ರೈಬ್ಸ್ ಎಂಬ ಪದವನ್ನು ಪಶ್ಚಿಮದ ಜಗತ್ತಿನಲ್ಲಿ ಸಮುದಾಯವಾಗಿ ರೂಪು ತಳೆಯುವ ಕುಟುಂಬಗಳ ಸಂಕಲನ ಎಂದು ಅರ್ಥವಿಸಲಾಗುತ್ತಿತ್ತು.

"ಕಿಟೆಲ್ಲರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ ಕುಟುಂಬ ಹಾಗೂ ಕುಲ ಎಂಬ ಅರ್ಥವನ್ನು ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲ ಭಾಷೆಯಲ್ಲಿ ಬಳಕೆಯಾದ ಟ್ರೈಬ್ ಎಂಬ ಪದಕ್ಕೆ ಸಮಾನಾರ್ಥಕ ಪದವೆಂದು ಬಳಸಲಾಗುತ್ತಿದೆ. ಇದು ಲ್ಯಾಟೀನ್ ಭಾಷೆಯ ಟ್ರೈಬಸ್ ಎಂಬ ಪದದಿಂದ ಉಗಮಗೊಂಡಿದೆ. ಗ್ರೀಕ್ ಮತ್ತು ರೋಮನ ಲೇಖಕರು ಲ್ಯಾಟಿಯ ಜಿಲ್ಲೆಯಲ್ಲಿ ನೆಲಸಿದ ಬುಡಕಟ್ಟಿನರಿಗೆ ಪ್ರಪ್ರಥಮವಾಗಿ ಟ್ರೈಬ್ ಎಂಬ ಪದ ಬಳಸಿರುವುದು ವೇದ್ಯವಾಗುತ್ತದೆ. ಸಮಾಜ ರಚನೆಯ ಮೂಲಕ್ಕೆ ಕುಟುಂಬ ಹಾಗೂ ರಕ್ತ ಸಂಬಂಧಿಯ ಕುಲಗಳು ಆಧಾರ ಸ್ಥಂಬಗಳಾಗಿರುವುದರಿಂದ ಕುಟುಂಬ ಹಾಗೂ ರಕ್ತ ಸಂಬಂಧ ಹೊಂದಿದ ಕುಲಗಳ ಕೂಟಕ್ಕೆ ಕನ್ನಡದಲ್ಲಿ ಬುಡಕಟ್ಟು ಎಂಬ ಪದ ಬಳಸಿರುವುದು ಸಮಂಜಸವಾಗಿದೆ. ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಜನಜಾತಿ ಎಂಬ ಹೆಸರುಗಳಿಂದಲೂ ಕರೆಯಲಾಗಿದೆ" (ಮೇತ್ರಿ ಕೆ ಎಂ., ಗುರುಲಿಂಗಯ್ಯ ಎಂ: ೨೦೧೦:೪೧-೪೨). ಒಂದೇ ನಾಮಧ್ಯೇಯ ದೊಂದಿಗೆ ಗುರುತಿಸಿಕೊಳ್ಳುತ್ತಾ, ಒಂದು ನಿರ್ದಿಷ್ಟವಾದ ಭೌಗೋಳಿಕ ಪ್ರದೇಶದಲ್ಲಿ ವಾಸಿಸುತ್ತಾ, ಒಂದೇ ಭಾಷೆಯನ್ನು ಮಾತನಾಡುತ್ತಾ, ಸಂಸ್ಕೃತಿ ಮತ್ತು ಸಂಪ್ರದಾಯಗಳಿಗೆ ಸಂಬಂಧಿಸಿದಂತೆ ಏಕರೂಪವಾಗಿರುವ ಹಾಗೂ ಏಕತೆಯ ಭಾವದೊಂದಿಗೆ ಸ್ವಯಂ ಪರಿಪೂರ್ಣ ಬದುಕನ್ನು ಕಟ್ಟಿಕೊಂಡಿರುವ ಚಿಕ್ಕ ಜನ ಸಮೂಹವನ್ನು 'ಪರಿಶಿಷ್ಟ ಪಂಗಡಗಳು' ಎಂದು ಕರೆಯುತ್ತೇವೆ.

ಶೆಡ್ಯೂಲ್ಡ್ ಟ್ರೈಬ್ ಅಥವಾ ಪರಿಶಿಷ್ಟ ಪಂಗಡಗಳು ಎಂಬುದು ಮೂಲಭೂತವಾಗಿ ಆಡಳಿತಾತ್ಮಕ ಅನುಕೂಲತೆಗಾಗಿ ಸೃಷ್ಟಿಸಿದ ಪರಿಕಲ್ಪನೆಯಾಗಿದೆ. ಬ್ರಿಟಿಷರ ಆಡಳಿತದ ಅವಧಿಯಲ್ಲಿ ನಿಯುಕ್ತಿಗೊಂಡಿದ್ದ ಸೈಮನ ಕಮಿಷನ್ ಎಂಬ ಸಮಿತಿಯು ಮೊಟ್ಟ ಮೊದಲ ಬಾರಿಗೆ ಪರಿಚಯಿಸಿದ 'ಶೆಡ್ಯೂಲ್ಡ ಟ್ರೈಬ್' ಎಂಬ ಪದವನ್ನು ಭಾರತ ಸರಕಾರವೂ ಕೂಡ ಒಪ್ಪಿಕೊಂಡು ಬಳಸತೊಡಗಿದೆ. ಸ್ವತಂತ್ರ್ಯ ಭಾರತದ ಸಂವಿಧಾನವು ನೀಡಿರುವ ಕೆಲವು ವಿಶೇಷ ಅವಕಾಶಗಳನ್ನು ಹಾಗೂ ಸೌಲಭ್ಯಗಳನ್ನು ಪಡೆಯಲು ಅರ್ಹವಾದ ಆದಿವಾಸಿಗಳ ಸಮುದಾಯಗಳನ್ನು ಶೆಡ್ಯೂಲ್ಡ್ ಟ್ರೈಬ್ ಎಂದೆನ್ನಬಹುದು.

ಭಾರತದ ಇತರ ರಾಜ್ಯಗಳಂತೆ ಆಂಧ್ರ ಪ್ರದೇಶ ರಾಜ್ಯದಲ್ಲಿಯು ಹೆಚ್ಚಿನ ಸಂಖ್ಯೆಯ ಪರಿಶಿಷ್ಟ ಪಂಗಡಗಳು ಗೋಚರಿಸುತ್ತಿದ್ದು ಒಟ್ಟು ೩೩ ಬುಡಕಟ್ಟುಗಳು ಆಂಧ್ರ ಪ್ರದೇಶ ರಾಜ್ಯದ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿವೆ. ಅವುಗಳೆಂದರೆ "ಅಂಧ, ಭಾಗತ, ಭಿಲ್, ಚಂಚು, ಗಡಾಬ, ಗೊಂಡ ಅಥವಾ ನಾಯ್ಕಪೊಡ, ಗೌಡು, ಹಿಲ್ಲ್ ರೆಡ್ಡಿ, ಜಟಾಪುಸ್, ಕಮ್ಮಾರ, ಕಾಟ್ಟು ನಾಯಕನ, ಕೊಲಾಮ ಅಥವಾ ಮನ್ನೇರವರ್ಲು, ಕೊಂಡ ದೊರಾ, ಕೊಂಡ ಕಾಪು, ಕೊಂಡ ರೆಡ್ಡಿ, ಖೊಂಡಾಸ್, ಕೊಟ್ಯ, ಕೊಯಾ, ಕುಲ್ಯ, ಮಾಳಿ, ಮನ್ನಡೊರಾ, ಮುಖ ದೊರಾ, ನಾಯಕ, ಪರ್ಧಾನ, ಪೊರಿಯಾ ರೆಡ್ಡಿ, ಡೊರಾ, ರೊನಾ, ಸವರಾ, ಲಂಬಾಡಾ, ಥೋಟಿ, ವಾಲ್ಮಿಕಿ, ಯನಾದಿ, ಯರಕುಲಾ" (Basic Statisics on Scheduled tribes of Andra pradesh :೨೦೦೮: ೧೭:೪೬).

ಆಂಧ್ರ ಪ್ರದೇಶದ ಲಂಬಾಣಿಗರು ಸುಗಾಲಿ, ಲಂಬಾಡಾ ಎಂಬ ವಿಶಿಷ್ಟವಾದ ನಾಮಧ್ಯೇಯ ದೊಂದಿಗೆ 'ತಾಂಡಾ' ಎಂಬ ನಿರ್ದಿಷ್ಟವಾದ ಭೌಗೋಳಿಕ ಪ್ರದೇಶದಲ್ಲಿ ಬದುಕುತ್ತಿದ್ದಾರೆ. 'ಗೋರಬೋಲಿ' ಎಂಬ ಭಾಷೆಯನ್ನು ಮಾತನಾಡುತ್ತಾ, ಸಂಸ್ಕೃತಿ, ಸಂಪ್ರದಾಯ ವಿವಾಹ ಮುಂತಾದ ಅಂಶಗಳಿಗೆ ಸಂಬಂಧಿಸಿದಂತೆ ಒಂದೇ ಬಗೆಯ ವಿಧಿ-ನಿಷೇಧಗಳನ್ನು ಹೊಂದಿವೆ. ಒಳಾಡಳಿತ ವ್ಯವಸ್ಥೆಗೆ ಸಂಬಂಧಿಸಿದಂತೆ ಲಂಬಾಣಿ ಸಮುದಾಯವು ತನ್ನದೇ ಆದ ಸಾಂಪ್ರದಾಯಿಕ ಆಡಳಿತ ಕ್ರಮವನ್ನು ಒಳಗೊಂಡಿದೆ. ಆಧುನಿಕ ಅರ್ಥದಲ್ಲಿ ಅಲ್ಲದೇ ಇದ್ದರು ಲಂಬಾಣಿಗರು ತಮ್ಮದೇ ಆದ ವ್ಯವಸ್ಥೆಯಲ್ಲಿ ನಾಯಕ ಕಾರಭಾರಿ, ಡಾವಸಾಣ, ಢಾಲಿಯಾ ಹೀಗೆ ಮುಂತಾದವರನ್ನು ಒಳಗೊಂಡ ಸರ್ಕಾರವನ್ನು ಹೊಂದಿದ್ದಾರೆ. ಹೀಗೆ ಸರಳ ಹಾಗೂ ಸ್ವಯಂ ಪರಿಪೂರ್ಣ ಬದುಕನ್ನು ಕಟ್ಟಿಕೊಂಡಿರುವ ಲಂಬಾಣಿಗರು ಬುಡಕಟ್ಟು ಸಮೂಹದ ಸ್ಪಷ್ಟವಾದ ಲಕ್ಷಣವನ್ನು ಹೊಂದಿರುವುದರಿಂದ ಹಾಗೂ ಹಲವಾರು ಸಮಸ್ಯೆಗಳಲ್ಲಿ ತೊಳಲಾಡುತ್ತಿರುವುದರಿಂದ ಆಂಧ್ರ ಪ್ರದೇಶದ ಘನ ಸರ್ಕಾರವು ಲಂಬಾಣಿಗರನ್ನು ಪರಿಶಿಷ್ಟ ಪಂಗಡದಲ್ಲಿ ಸೇರಿಸಬೇಕು ಎಂಬ ವರದಿಯನ್ನು ತಯಾರಿಸಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಿತು. ಕೇಂದ್ರ ಸರ್ಕಾರವು ಲಂಬಾಣಿಗರನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿ ೨೯ ಅಕ್ಟೋಬರ ೧೯೫೬ರಲ್ಲಿ ಆದೇಶವೊಂದನ್ನು ಹೊರಡಿಸಿದೆ.

**ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿ (ತಿದ್ದುಪಡಿ) ಆದೇಶ ೧೯೫೬**

"ಈ ಆದೇಶದಂತೆ ಹೈದ್ರಾಬಾದ, ಮೆಹಬೂಬ ನಗರ, ಅದಿಲಾಬಾದ, ನಿಜಾಮಾಬಾದ, ಮೇದಕ, ಕರೀಮ್‌ನಗರ, ವಾರಂಗಲ್, ಖಮ್ಮಮ್ ಮತ್ತು ನಲಗೊಂಡ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಸುಗಾಲಿ ಅಥವಾ ಲಂಬಾಣಿಗರನ್ನು ಹೊರತುಪಡಿಸಿ ಆಂಧ್ರ ಪ್ರದೇಶದ ಇತರೆ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಸುಗಾಲಿ ಅಥವಾ ಲಂಬಾಣಿಗರನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಲಾಯಿತು" (Prasad. O S V D :2009:11-12). ಈ ಆದೇಶವು ಆಂಧ್ರ ಪ್ರದೇಶದ ಲಂಬಾಣಿಗರ ಜೀವನದಲ್ಲಿ ಒಂದು ಮೈಲುಗಲ್ಲಾಗಿದ್ದು, ಈ ಭಾಗದ ಜನರು ಪರಿಶಿಷ್ಟ ಪಂಗಡದ ಸೌಲಭ್ಯ ಪಡೆದುಕೊಳ್ಳು ವಂತಾಯಿತು. ಆದರೆ ಹೈದ್ರಾಬಾದ, ಮೆಹಬೂಬ ನಗರ, ಅದಿಲಾಬಾದ, ನಿಜಾಮಾಬಾದ, ಮೇದಕ, ಕರೀಮ್‌ನಗರ, ವಾರಂಗಲ್, ಖಮ್ಮಮ್ ಮತ್ತು ನಲಗೊಂಡ ಜಿಲ್ಲೆಯ ಸುಗಾಲಿ ಅಥವಾ ಲಂಬಾಣಿಗರನ್ನು ವಿಮುಕ್ತ ಬುಡಕಟ್ಟು ಪಟ್ಟಿಯಲ್ಲಿಡಲಾಯಿತು. ಈ ಪ್ರಾಂತೀಯ ನಿರ್ಬಂಧವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿ (ತಿದ್ದುಪಡಿ) ಆದೇಶ ೧೯೭೬ ಕಾಯ್ದೆಯು ಜಾರಿಯಾಗುವವರೆಗೆ ಜಾರಿಯಲ್ಲಿತ್ತು.

**ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿ ತಿದ್ದುಪಡಿ ಆದೇಶ ೧೯೭೬. ನಂ. ೧೦೮ರ ೧೯೭೬:** ೧೮ನೇ ಸಪ್ಟೆಂಬರ್ ೧೯೭೬ರಂದು ಜಾರಿಯಾದ ಈ ಆದೇಶವು ಸುಗಾಲಿ ಅಥವಾ ಲಂಬಾಣಿಗರ ಮೇಲಿದ್ದ ಪ್ರಾಂತೀಯ ನಿರ್ಬಂಧವನ್ನು ತೆಗೆದುಹಾಕಿತು ಹಾಗೂ ಸುಗಾಲಿ ಅಥವಾ ಲಂಬಾಣಿಗರನ್ನು ಆಂಧ್ರ ಪ್ರದೇಶ ರಾಜ್ಯದಾದ್ಯಂತ ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸೇರಿಸಿ ಆದೇಶ

ಹೊರಡಿಸಿತು. ಹೀಗಾಗಿ ಇಂದು ಆಂಧ್ರ ಪ್ರದೇಶ ರಾಜ್ಯದಲ್ಲಿ ವಾಸಿಸುತ್ತಿರುವ ಸುಗಾಲಿ ಅಥವಾ ಲಂಬಾಣಿಗರನ್ನು ಒಳಗೊಂಡು ೩೩ ಪರಿಶಿಷ್ಟ ಪಂಗಡದ ಸಮುದಾಯಗಳು ರಾಜ್ಯ ಸರ್ಕಾರವು ಉದ್ಯೋಗ ಹಾಗೂ ಶಿಕ್ಷಣದಲ್ಲಿ ಕಲ್ಪಿಸಿರುವ ಶೇಕಡಾ ೬ ಮೀಸಲಾತಿ ಹಾಗೂ ಈ ಸಮುದಾಯದವರ ಕಲ್ಯಾಣಕ್ಕಾಗಿ ಜಾರಿಗೆ ತಂದಿರುವ ವಿವಿಧ ಯೋಜನೆಗಳ ಫಲಾನುಭವಿಗಳಾಗಿದ್ದಾರೆ.

**ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ರಂಗಾರೆಡ್ಡಿ ಜಿಲ್ಲೆಯ ತಾಂಡಾಗಳ ವಿವರ**

೧. **ತೆಕುಲಾಬಾದ ತಾಂಡಾ:** ರಂಗಾರೆಡ್ಡಿ ಜಿಲ್ಲೆಯ ವಿಕಾರಾಬಾದ ಮಂಡಲದ ಮದಗುಲಾಚಿಟ್ಟಂಪಾ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಈ ತಾಂಡಾ ವಿಕಾರಾಬಾದ್ ಮಂಡಲದಿಂದ ೧೪ ಕಿ.ಮೀ. ದೂರದಲ್ಲಿರುವ ರಿಮೋಟ್ ತಾಂಡಾವಾಗಿದೆ.

ಗ್ರಾಮ ನಗರಗಳಿಂದ ಬಹುದೂರದಲ್ಲಿರುವ ಈ ತಾಂಡಾಕ್ಕೆ ಉತ್ತಮ ಸಂಪರ್ಕ ವ್ಯವಸ್ಥೆಯಿರದ ಕಾರಣ ತಾಂಡಾದವರ ಪ್ರಧಾನ ಉದ್ಯೋಗ ವ್ಯವಸಾಯ ಮತ್ತು ಕೃಷಿಕೂಲಿಕಾರ್ಮಿಕತೆಯಾಗಿದೆ. ಬಹುತೇಕ ಕುಟುಂಬದವರೆಲ್ಲರೂ ಭೂ ಹಿಡುವಳಿಯನ್ನು ಹೊಂದಿದ್ದು, ಚಿಕ್ಕ ಭೂ ಹಿಡುವಳಿದಾರರು ತಮ್ಮ ಜಮೀನನ್ನು ಗೇಣಿಗೆ ಕೊಟ್ಟು ಕೃಷಿಕೂಲಿ ಕಾರ್ಮಿಕತೆ, ಪಶುಸಂಗೋಪನೆ, ಅರಣ್ಯವಸ್ತುಗಳ ಮಾರಾಟ, ಕೋಳಿ, ಮೇಕೆ ಸಾಕಾಣಿಕೆ, ಕೋರೆ ಕೆಲಸ, ಗಾರೆ ಕೆಲಸಗಳಲ್ಲಿ ತೊಡಗಿ ತಮ್ಮ ಆರ್ಥಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ. ಈ ತಾಂಡಾದಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ನಿರ್ವಹಿಸಲ್ಪಡುವ ಅಂಗನವಾಡಿ ಕೇಂದ್ರ ಸ್ಥಾಪಿತಗೊಂಡಿರೂ ಮೇಲಾಧಿಕಾರಿ ಗಳು ಕೇಂದ್ರದ ತಪಾಸಣೆಗೆ ಭೇಟಿ ನೀಡದಿರುವ ಕಾರಣ ಇವುಗಳು ವ್ಯವಸ್ಥಿತ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿರುವುದು ಕಂಡುಬರುತ್ತಿಲ್ಲ. ಹಾಗೆಯೇ ರಿಮೋಟ್ ತಾಂಡಾವಾಗಿರುವ ಕಾರಣ ಇಲ್ಲಿಯ ಮಕ್ಕಳಿಗೆ ರಾಜ್ಯ ಭಾಷೆ ಬಾರದೇ ಇರುವುದರಿಂದ ತಾಂಡಾಗಳಲ್ಲಿ ನೆಲೆಗೊಂಡಿರುವ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರಿಗೆ ಬೋಧನಾ ಕಾರ್ಯದಲ್ಲಿ ಪರಿಣಾಮಕಾರಿ ಸಂವಹನ ಏರ್ಪಡಿಸಲಾಗುತ್ತಿಲ್ಲ. ಜೊತೆಗೆ ಸಾರಿಗೆ ಸಂಪರ್ಕಗಳ ಸೂಕ್ತ ವ್ಯವಸ್ಥೆ ಇರದ ಕಾರಣ ಮುಂದಿನ ಹಂತದ ಶಿಕ್ಷಣ ಪಡೆಯುವಲ್ಲಿ ತಾಂಡಾದ ಮಕ್ಕಳು ತೊಂದರೆಯನ್ನನುಭವಿಸುತ್ತಿದ್ದಾರೆ.

ಸಾಮಾಜಿಕವಾಗಿ ಸಂಪ್ರದಾಯಬದ್ಧ ಪಿತೃಪ್ರಧಾನ ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿದ್ದಾರೆ. ಮನೆಗಳ ನಿರ್ಮಾಣ ಕೂಡ ಸಾಂಪ್ರದಾಯಿಕ ತಳಹದಿ ಹೊಂದಿವೆ. ಎಲ್ಲಾ ಮನೆ ಬಾಗಿಲುಗಳು ಪೂರ್ವ ಮತ್ತು ಉತ್ತರ ಭಾಗಕ್ಕೆ ಮಾತ್ರವಿದ್ದು, ಮನೆಯ ಪಕ್ಕದಲ್ಲಿ, ದನಕರುಗಳಿಗಾಗಿ ಪ್ರತ್ಯೇಕ ಕೊಟ್ಟಿಗೆಯನ್ನು ನಿರ್ಮಿಸಿಕೊಂಡಿದ್ದಾರೆ. ಈ ತಾಂಡಾದಲ್ಲಿ ಬಹುತೇಕ ಮಾಳಿಗೆ ಮನೆಗಳಿದ್ದು, ಬೆರಳಣಿಕೆಯಷ್ಟು ಮಾತ್ರ ಆರ್.ಸಿ.ಸಿ. ಮನೆಗಳಿವೆ. ಸಮುದಾಯದ ಪ್ರವೃತ್ತಿಯಾದ ಬೇಟೆಗಾರಿಕೆ ಈ ತಾಂಡಾದಲ್ಲಿ ಸಾಂದರ್ಭಿಕವಾಗಿ ಇನ್ನೂ ಆಚರಣೆಯಲ್ಲಿದೆ. ಸಾಮೂಹಿಕ ಮತ್ತು ವೈಯಕ್ತಿಕ ಬೇಟೆಗಳೆರಡೂ ಕಂಡುಬರುತ್ತಿವೆ.

ಲಂಬಾಣಿ ಸಮುದಾಯದ ವೇಷಭೂಷಣಗಳು ಈ ತಾಂಡಾದಲ್ಲಿ ಎಲ್ಲಾ ಹಿರಿಯ ನಾಗರಿಕರಲ್ಲಿ ಹಾಗೆಯೇ ಮಧ್ಯವಯಸ್ಕ ಮಹಿಳೆಯರಲ್ಲೂ ಗೋಚರಿಸುತ್ತಿವೆ. ಮೂಲ ಲಂಬಾಣಿ ಸಂಪ್ರದಾಯಗಳು ಇಂದಿಗೂ ಈ ತಾಂಡಾದಲ್ಲಿ ಆಚರಿಸಲ್ಪಡುತ್ತಿವೆ. ಇಂದಿನ ದಿನಗಳಲ್ಲಿಯೂ ಇಲ್ಲಿ ಒಂದು ವಾರದವರೆಗೆ ವಿವಾಹ ಮಹೋತ್ಸವಗಳು ೨-೩ ದಿನಗಳವರೆಗೆ ಧೂಂಡ್‌ನಂತಹ ಆಚರಣೆಗಳು ಆಚರಿಸಲ್ಪಡುತ್ತಿವೆ.

ಹಚ್ಚೆ ಕಲೆಯೂ ಕೂಡ ಈ ತಾಂಡಾಗಳಲ್ಲಿ ಹಿರಿಯ ಮತ್ತು ಮಧ್ಯವಯಸ್ಕ ಮಹಿಳೆಯರಿಬ್ಬರಲ್ಲಿಯೂ ಕಂಡುಬಂದಿದೆ. ಈ ತಾಂಡಾಗಳಲ್ಲಿ ಗೋರಬೋಲಿ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವ ಬಹಳ ಕಡಿಮೆ ಪ್ರಮಾಣದಲ್ಲಿದ್ದು, ಇವರು ಪಟ್ಟಣಗಳಿಗೆ ಸಂತೆಗೆಂದು ತೆರಳಿದಾಗ ವ್ಯವಹಾರಕ್ಕೆ ಮಾತ್ರ ತೆಲುಗು ಭಾಷೆಯ ಬಳಕೆ ಮಾಡುತ್ತಿರುವುದು ಕಂಡುಬಂದಿದೆ.

**೨. ಪೋಚಮ್ಮಾ ತಾಂಡಾ:** ರಂಗಾರೆಡ್ಡಿ ಜಿಲ್ಲೆಯ ಕಂದಕೂರ ಮಂಡಲದ ಸೈರೆಡ್ಡಿಗೂಡಾ ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಈ ತಾಂಡಾ ಮುಖ್ಯ ರಸ್ತೆ ಮತ್ತು ಗ್ರಾಮಗಳೆರಡರಿಂದಲೂ ದೂರವಿರುವ ರಿಮೋಟ್ ತಾಂಡಾವಾಗಿದೆ.

ತಾಂಡಾ ವಾಸಿಗಳ ಪ್ರಧಾನ ವೃತ್ತಿ ಕೃಷಿಯಾಗಿದ್ದು, ಭತ್ತ ಮತ್ತು ಹತ್ತಿ ಇವರ ಮುಖ್ಯ ಬೆಳೆಗಳಾಗಿವೆ. ಅಲ್ಪ ಭೂ ಹಿಡುವಳಿದಾರರು ಸ್ವಯಂ ಕೃಷಿ ಕಾರ್ಯದಲ್ಲಿ ತೊಡಗದೆ ಕೃಷಿಕರಿಗೆ ಜಮೀನನ್ನು ಗೇಣಿಯಾಗಿ ನೀಡಿ ಕೃಷಿಕೂಲಿ ಕಾರ್ಮಿಕತೆಯಲ್ಲಿ ತೊಡಗಿದ್ದಾರೆ. ಹಾಗೆಯೇ ಇನ್ನೂ ಕೆಲವರು ಕೋರೆ ಮತ್ತು ಗಾರೆಕೆಲಸಗಳಲ್ಲಿ ತೊಡಗಿದ್ದಾರೆ.

ತಾಂಡಾದ ಕೆಲವರು ಪಶುಸಂಗೋಪನೆಯಲ್ಲೂ ತೊಡಗಿಕೊಂಡಿದ್ದಾರೆ. ಜೊತೆಗೆ ಕೋಳಿ ಮತ್ತು ಮೇಕೆ ಸಾಕಾಣಿಕೆ ಕೂಡ ಇವರಲ್ಲಿ ಕಂಡುಬರುತ್ತಿದೆ.

ತಾಂಡಾದಲ್ಲಿ ಅಂಗನವಾಡಿ ಕೇಂದ್ರ ಮತ್ತು ಕಿರಿಯ ಪ್ರಾಥಮಿಕ ಶಾಲೆಯಿದ್ದು, ಪ್ರೌಢ, ಪದವಿಪೂರ್ವ ಮತ್ತು ಪದವಿ ಹಂತದ ಶಿಕ್ಷಣ ಪಡೆದವರ ಸಂಖ್ಯೆಯ ಪ್ರಮಾಣ ಬಹಳ ಕಡಿಮೆಯಿದೆ. ಏಕೆಂದರೆ ಈ ತಾಂಡಾಕ್ಕೆ ಸರ್ಕಾರಿ ಸಾರಿಗೆ ಸೌಲಭ್ಯಗಳ ಕೊರತೆಯಿದೆ.

ಸಾಮಾಜಿಕವಾಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಹೊಂದಿದ, ಇವರ ಮನೆಗಳು ಪೂರ್ವ ಮತ್ತು ಉತ್ತರ ದಿಕ್ಕಿಗೆ ಮುಖ ಮಾಡಿದ್ದು, ಪ್ರತಿ ಮನೆಯ ಪಕ್ಕದಲ್ಲಿ ಎಮ್ಮೆ, ಆಕಳು, ಕೋಳಿ, ಮೇಕೆ ಸಾಕಾಣಿಕೆಗೆ ಪ್ರತ್ಯೇಕ ಕೊಟ್ಟಿಗೆ ವ್ಯವಸ್ಥೆಯಿದೆ. ತಾಂಡಾದ ಹಿರಿಯ ಮತ್ತು ಮಧ್ಯವಯಸ್ಕ ಮಹಿಳೆಯರಲ್ಲಿ ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಕಂಡುಬರುತ್ತಿವೆ. ಹಾಗೆಯೇ ಇವರ ಆಹಾರ ಪದ್ಧತಿಯೂ ಕೂಡ ಹೆಚ್ಚು ಆಧುನೀಕರಣಗೊಂಡಿರುವುದಿಲ್ಲ.

ಪೋಚಮ್ಮಾ ತಾಂಡಾದಲ್ಲಿ ಇಂದಿಗೂ ಸಾಂದರ್ಭಿಕವಾಗಿ ವೈಯಕ್ತಿಕ ಮತ್ತು ಸಾಮೂಹಿಕ ಬೇಟೆಗಾರಿಕೆಗಳೆರಡೂ ಜಾರಿಯಲ್ಲಿವೆ. ಸಾಮೂಹಿಕ ಬೇಟೆಗಾರಿಕೆಯಿಂದ ತಂದ ಮಾಂಸವನ್ನು

ತಾಂಡಾವಾಸಿಗಳೆಲ್ಲರೂ ಹಂಚಿಕೊಂಡು ಉಪಯೋಗಿಸುತ್ತಿರುವುದು ಇವರ ಸಾಮರಸ್ಯಕ್ಕೆ ಸಾಕ್ಷಿಯಾಗಿದೆ. ಇವರು ಪರಂಪರಗತವಾಗಿ ರೂಢಿಯಲ್ಲಿರುವ ಎಲ್ಲಾ ಹಬ್ಬ ಹರಿದಿನಗಳನ್ನು ಆಚರಿಸುತ್ತಿದ್ದಾರೆ. ವಿವಾಹ ಪದ್ಧತಿ ಕೂಡ ಸಂಪ್ರದಾಯಿಕವಾಗಿಯೇ ಏರ್ಪಡಿಸುತ್ತಿದ್ದಾರೆ.

ತಾಂಡಾದ ಹಿರಿಯ ಮತ್ತು ಮಧ್ಯವಯಸ್ಕ ಮಹಿಳೆಯರಲ್ಲಿ ಹಚ್ಚೆ ಕಲೆಯಿದ್ದು, ಯುವ ಪೀಳಿಗೆಯಲ್ಲಿ ಕಂಡುಬರುತ್ತಿಲ್ಲ. ಈ ತಾಂಡಾದಲ್ಲಿ ಗೋರ ಪಂಚಾಯತ ವ್ಯವಸ್ಥೆ ಜಾರಿಯಲ್ಲಿದ್ದು, ಇವರ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವವಾಗಿರುವುದು ಕಂಡುಬರುತ್ತದೆ.

**೩. ರಾಂಪೂರ ತಾಂಡಾ:** ರಂಗಾರೆಡ್ಡಿ ಜಿಲ್ಲೆಯ ತಾಂಡೂರ ಮಂಡಲದ ರಾಂಪೂರ ಗ್ರಾಮಪಂಚಾಯತಿಗೆ ಒಳಪಡುವ ಈ ತಾಂಡಾ ರಾಂಪೂರ ಎಂಬ ಗ್ರಾಮ ಹತ್ತಿರ ಕಂಡುಬರುತ್ತದೆ. ರಾಂಪೂರ ತಾಂಡಾ ತಾಂಡೂರ ಮಂಡಲದಿಂದ ೫ ಕಿ.ಮೀ. ದೂರದಲ್ಲಿದೆ.

ರಾಂಪೂರ ತಾಂಡಾದವರ ಮೂಲ ಉದ್ಯೋಗ ಮೂಲದಲ್ಲಿ ಕೃಷಿಯಾಗಿದ್ದರೂ ಪ್ರಸ್ತುತ ದಿನಗಳಲ್ಲಿ ತಾಂಡಾವಾಸಿಗಳು ಸಂಪೂರ್ಣ ಕೃಷಿಯವಲಂಬಿತರಾಗದೇ ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ.

ರಾಂಪೂರ ತಾಂಡಾಕ್ಕೆ ತಾಂಡೂರ ಮಂಡಲ ಸಮೀಪದಲ್ಲಿದ್ದು, ತಾಂಡೂರ ಸುತ್ತಲೂ ಹೆಚ್ಚಿನ ಪ್ರಮಾಣದಲ್ಲಿ ಕಲ್ಲುಗಣಿಗಳಿದ್ದು, ಕೋರೆ ಕೆಲಸಕ್ಕೆ ತೆರಳುವವರ ಸಂಖ್ಯೆ ಹಾಗೂ ಕರನ್‌ಕೋಟ್ ಸಿಮೆಂಟ್ ಕಂಪನಿ ಹತ್ತಿರದಲ್ಲಿರುವುದರಿಂದ ಕಂಪನಿಯಲ್ಲಿಯೂ ದಿನಗೂಲಿ ಕೆಲಸಕ್ಕೆ ತೆರಳುವವರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತಿದೆ.

ಈ ತಾಂಡಾದಲ್ಲಿ ಕಂಡುಬರುತ್ತಿರುವ ಇನ್ನೊಂದು ವಿಶೇಷತೆಯೆಂದರೆ ಮಿಶ್ರಬೇಸಾಯ ಪದ್ಧತಿ ಈ ಕಾರ್ಯ ಕೂಡ ಇವರ ಆರ್ಥಿಕತೆಯ ಇನ್ನೊಂದು ಮೂಲವಾಗಿದೆ. ಜೊತೆಗೆ ಹತ್ತಿರದ ಗ್ರಾಮದ ವ್ಯವಸಾಯಗಾರರಲ್ಲಿ ಕೃಷಿ ಕೂಲಿ ಕಾರ್ಮಿಕತೆಯಲ್ಲಿ ತೊಡಗಿದ್ದಾರೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿರುವ ಇವರ ಮನೆಗಳು ಪೂರ್ವ ಮತ್ತು ಉತ್ತರಕ್ಕೆ ಮುಖ್ಯದ್ವಾರಗಳನ್ನು ಹೊಂದಿದ್ದು, ಮಾಳಿಗೆ ಮನೆಗಳ ಸಂಖ್ಯೆ ಅಧಿಕವಾಗಿವೆ. ಆರ್‌ಸಿಸಿ ಮನೆಗಳು ಬೆರಳೆಣಿಕೆಯಷ್ಟು ಮಾತ್ರ ಕಂಡುಬರುತ್ತಿವೆ.

ತಾಂಡಾದ ಹಿರಿಯ ಮಹಿಳೆಯರು ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಧರಿಸುತ್ತಿದ್ದಾರೆ. ಮಧ್ಯವಯಸ್ಕ ಮಹಿಳೆಯರು ಹತ್ತಿರದ ಗ್ರಾಮಜನತೆಯ ಉಡುಗೆ ಮಾದರಿಯನ್ನು ಅಳವಡಿಸಿ ಕೊಂಡಿದ್ದಾರೆ.

ಮೂಲತಃ ಮಾಂಸಹಾರಿಗಳಾದ ಇವರು ಪ್ರಸ್ತುತ ದಿನಗಳಲ್ಲಿ ಮಾಂಸದಂಗಡಿಗಳಲ್ಲಿ ಸಿಗುವ ಮಾಂಸಹಾರವನ್ನೇ ಹೆಚ್ಚಾಗಿ ಬಳಸುತ್ತಿದ್ದಾರೆ. ಸಾಂದರ್ಭಿಕವಾಗಿ ಹಿರಿಯ ಸ್ತ್ರೀ ಪುರುಷರೀರ್ವರೂ ಮದ್ಯ ಸೇವನೆ ಮಾಡುತ್ತಿದ್ದಾರೆ.

ಸಾಂಪ್ರದಾಯಿಕ ಹಬ್ಬಾಚರಣೆಗಳೆಲ್ಲವನ್ನು ಆಚರಿಸುತ್ತಾರೆ. ಜೊತೆಗೆ ಗ್ರಾಮದಲ್ಲಿ ಆಚರಿಸುವ ಹಬ್ಬಗಳನ್ನೂ ಆಚರಿಸುತ್ತಾರೆ. ಇಲ್ಲಿ ತಾಂಡಾದ ಹಿರಿಯರಿಂದ ರಚನೆಗೊಂಡ ಗೋರಪಂಚಾಯತ ವ್ಯವಸ್ಥೆ ಜಾರಿಯಲ್ಲಿದ್ದು, ಸಣ್ಣಪುಟ್ಟ ವ್ಯಾಜ್ಯಗಳಿಗೆ ತಾಂಡಾದ ಗೋರಪಂಚಾಯತ ವ್ಯವಸ್ಥೆಯೇ ನ್ಯಾಯವನ್ನೊದಗಿಸುತ್ತದೆ.

ಗ್ರಾಮ ಹತ್ತಿರದ ತಾಂಡಾವಾಗಿರುವ ಕಾರಣ ಇವರ ಗೋರಬೋಲಿ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವವಾಗಿರುವುದು ಕಂಡುಬರುತ್ತದೆ. ಇವರು ಗ್ರಾಮಸ್ಥರೊಂದಿಗೆ ವ್ಯವಹರಿಸಲು ತೆಲುಗು ಭಾಷೆಯನ್ನು ಬಳಸುತ್ತಾರೆ.

**೪. ರಾಕೊಂಡಾ ತಾಂಡಾ:** ರಂಗಾರೆಡ್ಡಿ ಜಿಲ್ಲೆಯ ಡೋಮಾ ಮಂಡಲದ ರಾಕೊಂಡಾ ಗ್ರಾಮಪಂಚಾಯತ ವ್ಯವಸ್ಥೆಯಲ್ಲಿ ಬರುವ ಈ ತಾಂಡಾ ರಾಕೊಂಡಾ ಗ್ರಾಮದ ಹತ್ತಿರವಿದೆ. ರಾಕೊಂಡಾ ತಾಂಡಾದ ಜನರ ಪ್ರಧಾನ ಉದ್ಯೋಗ ವ್ಯವಸಾಯವಾಗಿದ್ದು, ಒಣ ಭೂಮಿ ಹೆಚ್ಚಿನ ಪ್ರಮಾಣದಲ್ಲಿದ್ದು, ನೀರಾವರಿಯು ಕಡಿಮೆ ಪ್ರಮಾಣದಲ್ಲಿದೆ. ಭತ್ತ ಇಲ್ಲಿಯ ಪ್ರಧಾನ ಬೆಳೆಯಾಗಿದೆ. ಚಿಕ್ಕ ಭೂ ಹಿಡುವಳಿಗಳುಳ್ಳ ಕೃಷಿಕರು ತಮ್ಮ ಭೂಮಿಯನ್ನು ಗೇಣಿಗೆ ನೀಡಿ ಕೃಷಿಕೂಲಿ ಕಾರ್ಮಿಕತೆಯಲ್ಲಿ ತೊಡಗಿಕೊಂಡಿದ್ದಾರೆ. ಹತ್ತಿರದ ಗ್ರಾಮದ ಕೃಷಿಕರಲ್ಲಿ ಕೂಲಿ ಕೆಲಸಕ್ಕೆ ತೆರಳುತ್ತಾರೆ. ಕೋಳಿ, ಮೇಕೆ, ಆಕಳು, ಎಮ್ಮೆ, ಹೋತಗಳ ಸಾಕಾಣಿಕೆಯನ್ನು ಮಾಡುತ್ತಿದ್ದಾರೆ.

ತಾಂಡಾದಲ್ಲಿ ಮಾಳಿಗೆ ಮನೆಗಳು ಹೆಚ್ಚಾಗಿದ್ದು ಸಂಪ್ರದಾಯದಂತೆ ಪೂರ್ವ ಮತ್ತು ಉತ್ತರಕ್ಕೆ ಮನೆಯ ಮುಖ್ಯದ್ವಾರಗಳು ನಿರ್ಮಾಣಗೊಂಡಿವೆ. ಆಧುನಿಕತೆಯ ಸ್ಪರ್ಶ ಪಡೆದುಕೊಂಡ ಈ ಮನೆಗಳ ಬಾಗಿಲುಗಳ ಮೇಲೆ ಬಣ್ಣ ಬಣ್ಣದ ಚಿತ್ತಾರಗಳಿದ್ದು, ಬಹುತೇಕ ಮನೆಗಳಲ್ಲಿ ಟಿ.ವಿ., ಟೇಪರೆಕಾರ್ಡರ್ ಮೊಬೈಲಗಳ ಬಳಕೆ ಮಾಡುತ್ತಿದ್ದಾರೆ.

ರಾಕೊಂಡಾ ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥಮಿಕ ಶಾಲೆ ಮತ್ತು ಅಂಗನವಾಡಿ ಕೇಂದ್ರಗಳಿದ್ದು, ತಾಂಡಾದ ವಿದ್ಯಾರ್ಥಿಗಳು ತಮ್ಮ ಪ್ರೌಢ ಶಿಕ್ಷಣವನ್ನು ತಾಂಡಾ ಹತ್ತಿರದ ರಾಕೊಂಡಾ ಗ್ರಾಮದಲ್ಲಿ ಮತ್ತು ಪದವಿಪೂರ್ವ ಹಾಗೂ ಪದವಿ ಶಿಕ್ಷಣವನ್ನು ಡೋಮಾ ಮಂಡಲ ಕೇಂದ್ರದಲ್ಲಿ ಪೂರೈಸುತ್ತಿದ್ದಾರೆ. ಇವರ ಉಡುಗೆ ತೊಡುಗೆಗಳ ಮೇಲೆ ಆಧುನೀಕತೆಯ ಪ್ರಭಾವವಾಗಿದ್ದು, ಹಿರಿಯ ನಾಗರಿಕರಲ್ಲಿ ಮಾತ್ರ ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಗೋಚರಿಸುತ್ತಿದೆ. ಯುವ ಜನಾಂಗ ಗ್ರಾಮನಗರಗಳ ವೇಷಭೂಷಣಗಳನ್ನು ಧರಿಸುತ್ತಿದ್ದಾರೆ.

ಇವರ ಮೂಲ ಪ್ರವೃತ್ತಿಯಾದ ಬೇಟೆಗಾರಿಕೆ ಅಳಿವಿನ ಅಂಚಿನಲ್ಲಿದ್ದು, ಸಾಂದರ್ಭಿಕವಾಗಿ ಮಾತ್ರ ಬೇಟೆಯಾಡುತ್ತಿದ್ದಾರೆ. ಮೂಲತಃ ಮಾಂಸಹಾರಿಗಳಾದ ಇವರು ಪ್ರಸ್ತುತ ದಿನಗಳಲ್ಲಿ ಸಸ್ಯಹಾರ ಬಳಸುತ್ತಿದ್ದರೂ ಮಾಂಸಾಹಾರ ಪ್ರಿಯರಾಗಿದ್ದಾರೆ.

ಇವರ ಮಧ್ಯೆ ಕಂಡುಬರುತ್ತಿರುವ ಸಣ್ಣ ಪುಟ್ಟ ವ್ಯಾಜ್ಯಗಳು ಗೋರ ಪಂಚಾಯತಿಯಲ್ಲಿಯೇ ಬಗೆಹರಿಸಿಕೊಳ್ಳುತ್ತಿದ್ದಾರೆ. ಗ್ರಾಮ ಹತ್ತಿರದ ತಾಂಡಾವಾಗಿರುವ ಕಾರಣ ತಾಂಡಾವಾಸಿಗಳೆಲ್ಲರೂ ದ್ವಿಭಾಷಿಕರಾಗಿದ್ದು, ಗ್ರಾಮಸ್ಥರೊಂದಿಗೆ ಬೇರೆ ಸಮುದಾಯದವರೊಂದಿಗೆ ವ್ಯವಹರಿಸಲು ತೆಲುಗು ಭಾಷೆಯನ್ನು ಬಳಸುತ್ತಿದ್ದಾರೆ.

**೫. ಸುಕ್ರಾನಾಯಕ ತಾಂಡಾ:** ರಂಗಾರೆಡ್ಡಿ ಜಿಲ್ಲೆಯ ಕುಲಕಚೆರ್ಲಾ ಮಂಡಲದ ಅಡವಿ ವೆಂಕಟಪುರ ಗ್ರಾಮಪಂಚಾಯತಿ ವ್ಯಾಪ್ತಿಗೆ ಒಳಪಡುವ ಈ ತಾಂಡಾ ಕುಂಕಚೆರ್ಲಾದಿಂದ ಅಡವಿ ವೆಂಕಟಪುರಕ್ಕೆ ಸಂಪರ್ಕ ಕಲ್ಪಿಸುವ ರಸ್ತೆ ಹತ್ತಿರ ಕಂಡುಬರುತ್ತಿದೆ. ಈ ತಾಂಡಾ ಕುಲಕಚೆರ್ಲಾ ಮಂಡಲದಿಂದ ೧೫ ಕಿ.ಮೀ. ದೂರದಲ್ಲಿದೆ. ಸುಕ್ರಾನಾಯಕ ತಾಂಡಾಕ್ಕೆ ನಗರ, ಪಟ್ಟಣಗಳಿಗೆ ಸಂಪರ್ಕ ಕಲ್ಪಿಸುವ ಉತ್ತಮ ಸಾರಿಗೆ ವ್ಯವಸ್ಥೆಯಿದ್ದು, ತಾಂಡಾದ ಹಲವು ಜನರು ಬೇರೆ ಬೇರೆ ಉದ್ಯೋಗಗಳಿಗಾಗಿ ಪಟ್ಟಣ, ನಗರ ಪ್ರದೇಶಗಳಿಗೆ ತೆರಳುತ್ತಿದ್ದಾರೆ. ಹೀಗಾಗಿ ಕ್ರಮೇಣ ಕೃಷಿಯವಲಂಬಿತರ ಸಂಖ್ಯೆ ಕ್ಷೀಣಿಸುತ್ತಿದೆ. ಜೊತೆಗೆ ಚಿಕ್ಕ ಭೂ ಹಿಡುವಳಿದಾರರು ತಮ್ಮ ಭೂಮಿಯನ್ನು ಗೇಣಿಗೆ ನೀಡಿ ಗಾರೆಕೆಲಸ, ಕೋರೆ ಕೆಲಸ, ಸಿಮೆಂಟ್ ಕೆಲಸ, ರಸ್ತೆ ಡಾಂಬರೀಕರಣ, ಕಟ್ಟಡ ನಿರ್ಮಾಣಗಳಂತಹ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ.

ಈ ತಾಂಡಾದಲ್ಲಿ ಕೇವಲ ಕಿರಿಯ ಪ್ರಾಥಮಿಕ ಶಾಲೆಯಿದ್ದರೂ, ಉತ್ತಮ ಸಾರಿಗೆ ಸಂಪರ್ಕ ವ್ಯವಸ್ಥೆಯಿರುವ ಕಾರಣ ತಾಂಡಾದ ವಿದ್ಯಾರ್ಥಿಗಳು ಮುಂದಿನ ಹಂತದ ಶಿಕ್ಷಣ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಹೀಗಾಗಿ ಇಲ್ಲಿ ಉತ್ತಮ ಶೈಕ್ಷಣಿಕ ಪ್ರಗತಿ ಕಂಡುಬರುತ್ತಿದೆ.

ಸಾಮಾಜಿಕವಾಗಿ ಇವರು ಉತ್ತಮವಾದ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಜೊತೆಗೆ ಇವರಲ್ಲಿ ರಾಜಕೀಯ ಪ್ರಾತಿನಿಧ್ಯತೆ ಕೂಡ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿದೆ.

ಧಾರ್ಮಿಕ ವಿಧಿ ವಿಧಾನಗಳ ಆಚರಣೆಯಲ್ಲಿ ಬದಲಾವಣೆ ಕಂಡುಬರುತ್ತಿದ್ದರೂ ಮೂಲ ಸಂಪ್ರದಾಯಾಚರಣೆಗಳೆಲ್ಲವನ್ನೂ ತಪ್ಪದೇ ಆಚರಿಸುತ್ತಿದ್ದಾರೆ.

ಹಬ್ಬ ಹರಿದಿನಗಳಂದು ಸಿಹಿ ಭೋಜನಕ್ಕೆ ಪ್ರಾಶಸ್ತ್ಯ ನೀಡಿದರೂ ಮರು ದಿವಸ ಮಾಂಸಹಾರ ಸೇವನೆ ಮಾಡಬಯಸುತ್ತಾರೆ. ಧೂಂಡನಂತಹ ಆಚರಣೆಗಳಲ್ಲಿ ಇವರಿಗೆ ಮದ್ಯ ಸೇವನೆ ಸಹ ಪ್ರತಿಷ್ಠೆಯ ವಿಚಾರವಾಗಿದ್ದು, ಹಿರಿಯ ಸ್ತ್ರೀ ಪುರುಷರೀರ್ವರೂ ಪಾಲ್ಗೊಳುತ್ತಾರೆ.

ಬೇಟೆಗಾರಿಕೆ ಮತ್ತು ಗೋರಪಂಚಾಯತ ವ್ಯವಸ್ಥೆ, ಸಾಂಪ್ರದಾಯಿಕ ವೇಷಭೂಷಣಗಳು, ಉಡುಗೆ ತೊಡುಗೆಗಳು, ಹಚ್ಚೆ ಕಲೆಗಳು ಈ ತಾಂಡಾದಲ್ಲಿ ಅಳಿವಿನ ಅಂಚಿನಲ್ಲಿವೆ. ಇದಕ್ಕೆ ಆಧುನೀಕತೆಯ ಗಾಢ ಪ್ರಭಾವವೇ ಕಾರಣವೆನ್ನಬಹುದಾಗಿದೆ.

ಭಾಷಾಭಿಮಾನಿಗಳಾದ ಇವರು ತಮ್ಮವರೊಂದಿಗೆ ವ್ಯವಹರಿಸಲು ಇಂದಿಗೂ ಗೋರಬೋಲಿ ಭಾಷೆಯನ್ನೇ ಬಳಸುತ್ತಿದ್ದು, ಬೇರೆ ಸಮುದಾಯದವರೊಂದಿಗಿನ ವ್ಯವಹಾರಕ್ಕೆ ಹಿಂದಿ ಮತ್ತು ತೆಲುಗು ಭಾಷೆಯನ್ನು ಬಳಸುತ್ತಿದ್ದಾರೆ.

**೬. ಕೊರಮ ತಾಂಡಾ:** ರಂಗಾರೆಡ್ಡಿ ಜಿಲ್ಲೆಯ ಮಂಚಾಲಮ್ ಮಂಡಲದ ವ್ಯಾಪ್ತಿಯಲ್ಲಿ ಬರುವ ಕೊರಮ ತಾಂಡಾ ಮಂಚಾಲಮ್ ಮಂಡಲದಿಂದ ೧೬ ಕಿ.ಮೀ. ದೂರದಲ್ಲಿದೆ. ಮಂಚಾಲಮ್‌ದಿಂದ ಕೊರಮ ಗ್ರಾಮಕ್ಕೆ ಸಂಪರ್ಕ ಕಲ್ಪಿಸುವ ರಸ್ತೆಯ ಬದಿಯಲ್ಲಿ ಈ ತಾಂಡಾ ಕಂಡುಬರುತ್ತದೆ. ಈ ತಾಂಡಾ ಬೋಡಕೊಂಡ ಗ್ರಾಮಪಂಚಾಯತ್ ವ್ಯಾಪ್ತಿಗೆ ಸೇರಿದೆ.

ಈ ತಾಂಡಾದಲ್ಲಿ ಶೈಕ್ಷಣಿಕ ಮಟ್ಟ ಉತ್ತಮವಾಗಿರುವುದು ಕಂಡುಬರುತ್ತದೆ. ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಹೆಚ್ಚಿನ ಪ್ರಮಾಣದಲ್ಲಿ ಪಡೆದಿದ್ದೂ, ಪದವಿ ಪೂರ್ವ, ಪದವಿ ಹಾಗೂ ಡಿಪ್ಲೋಮಾ ಶಿಕ್ಷಣ ಪಡೆದವರ ಪ್ರಮಾಣ ಕಡಿಮೆಯಿರುವುದು ಕಂಡುಬರುತ್ತದೆ. ಕೊರಮ ತಾಂಡಾದಲ್ಲಿ ಅಂಗನವಾಡಿ ಹಾಗೂ ಪ್ರಾಥಮಿಕ ಶಾಲೆಯಿದೆ. ಈ ತಾಂಡಾದಲ್ಲಿ ಚಿಕ್ಕ ಚಿಕ್ಕ ಭೂಹಿಡುವಳಿದಾರರ ಸಂಖ್ಯೆ ಹೆಚ್ಚಾಗಿದ್ದು, ಹೆಚ್ಚಿನ ಪ್ರಮಾಣದ ಭೂಮಿ ಒಣ ಕೃಷಿ ಭೂಮಿಯಾಗಿದೆ. ತಾಂಡಾದ ಅರ್ಧಕ್ಕಿಂತಲೂ ಹೆಚ್ಚಿನ ಕುಟುಂಬಗಳು ಭೂರಹಿತರಾಗಿದ್ದಾರೆ. ಕೃಷಿ ಭೂಮಿಯಿರುವ ಹಲವಾರು ಕುಟುಂಬಗಳು ತಮ್ಮ ಚಿಕ್ಕ ಚಿಕ್ಕ ಭೂಹಿಡುವಳಿಗಳನ್ನು ಗ್ರಾಮದ ಶ್ರೀಮಂತರಿಗೆ ಗೇಣಿಗೆ ನೀಡಿ ಜೀವನೋಪಾಯಕ್ಕಾಗಿ ಕೃಷಿ ಕೂಲಿಯನ್ನು ಅವಲಂಬಿಸಿದ್ದಾರೆ. ಕಲ್ಲು ಗಣಿಗಾರಿಕೆಯಲ್ಲಿ ಕೂರೆ ಕೆಲಸ, ರಸ್ತೆ ಡಾಂಬರೀಕರಣ, ಗಾರೆ ಕೆಲಸವನ್ನು ಮಾಡುತ್ತಾ ಬದುಕನ್ನು ಕಟ್ಟಿಕೊಂಡಿದ್ದಾರೆ. ಕಡಿಮೆ ಪ್ರಮಾಣದಲ್ಲಿ ಸರ್ಕಾರಿ ಉದ್ಯೋಗವನ್ನು ಸಹ ಮಾಡುತ್ತಿದ್ದಾರೆ.

ತಾಂಡಾದ ಹೆಚ್ಚಿನ ಸಂಖ್ಯೆಯ ಮನೆಗಳು ಪೂರ್ವದಿಕ್ಕಿಗೆ ಮುಖ್ಯದ್ವಾರವನ್ನು ಹೊಂದಿದ್ದು, ಮನೆಯನ್ನು ಹೊಂದಿಕೊಂಡು ಸಾಕು ಪ್ರಾಣಿಗಳನ್ನು ಕಟ್ಟುವ ಕೊಟ್ಟಿಗೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಮಾಳಿಗೆ ಮನೆಗಳ ಸಂಖ್ಯೆ ಹೆಚ್ಚಾಗಿದ್ದು, ಆರ್.ಸಿ.ಸಿ. ಹಾಗೂ ಹಾಸುಕಲ್ಲಿನ ಹೆಂಚು ಮನೆಗಳು ಕಂಡುಬರುತ್ತವೆ.

ಕೊರಮ ತಾಂಡಾ ರಸ್ತೆ ಹತ್ತಿರದ ತಾಂಡಾವಾಗಿರುವುದರಿಂದ ಗ್ರಾಮಗಳ ಸಂಪರ್ಕ ಸಹಜವಾಗಿ ದೊರಕುತ್ತದೆ. ಹೀಗಾಗಿ ಇವರಾಡುವ ಗೋರಬೋಲಿ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವವಾಗಿರುವುದು ಕಂಡುಬರುತ್ತದೆ. ಸಾಂಪ್ರದಾಯಿಕ ಉಡುಗೆ ತೊಡುಗೆ ಹಾಗೂ ಹಚ್ಚೆ ಕಲೆ ಹಿರಿಯ ನಾಗರಿಕರಲ್ಲಿ ಹಾಗೂ ಅಲ್ಪ ಪ್ರಮಾಣದಲ್ಲಿ ಮಧ್ಯವಯಸ್ಕರಲ್ಲಿ ಕಂಡುಬರುತ್ತವೆ. ವಿವಾಹ ಹಾಗೂ ಹಬ್ಬಾಚರಣೆಗಳ ಮೇಲೆ ಆಧುನಿಕತೆಯ ಪ್ರಭಾವವಾಗಿರುವುದು ಕಂಡುಬರುತ್ತದೆ. ಮೂಲತಃ ಮಾಂಸಾಹಾರಿಗಳಾದ ಇವರು ಮಾಂಸದಂಗಡಿಯಿಂದ ಮಾಂಸವನ್ನು ತಂದು ಉಪಯೋಗಿಸುತ್ತಾರೆ. ಈ ತಾಂಡಾದಲ್ಲಿ ಬೇಟೆಗಾರಿಕೆ ಕಂಡುಬರುವುದಿಲ್ಲ.

## ಆಧಾರ ಗ್ರಂಥಗಳು

ಅಖಿಲ ಕರ್ನಾಟಕದ ಬಂಜಾರ ವಿದ್ಯಾರ್ಥಿ ವೇದಿಕೆ, ಕರ್ನಾಟಕ ಬಂಜಾರ ಕೈಪಿಡಿ ಬೆಂಗಳೂರು, ೧೯೯೭.

ಅನೀಸ್ ಸಿರಾಜ್ ಎಸ್, ಕರ್ನಾಟಕ ಕೈಪಿಡಿ ೨೦೧೧, ಕರ್ನಾಟದ ಮುಖ್ಯ ಸಂಪಾದಕರ ಕಾರ್ಯಲಯ ಕರ್ನಾಟಕ ಗೆಜೆಟಿಯರ್ ಬೆಂಗಳೂರು, ೨೦೧೧.

ಗವರ್ನಮೆಂಟ ಆಫ್ ಕರ್ನಾಟಕ ಷೆಡ್ಯೂಲ್ಡ ಕ್ಯಾಸ್ಟ ಆಂಡ್ ಶೆಡ್ಯೂಲ್ಡ ಟ್ರೈಬ್ಸ ಆರ್ಡರ್ಸ (ಅಂಡರ ಸೆಕರೆಟರಿ: ಕೆ ಕೇಶವರಾವ್) ಬೆಂಗಳೂರು: ಸೊಷಿಯಲ್ ವೆಲಫೇರ್ ಅಂಡ ಲೇಬರ ಡಿಪಾರ್ಟಮೆಂಟ, ೧೯೭೭.

ಹಾವನೂರು ಎಲ್ ಜಿ., ಕರ್ನಾಟಕ ಬ್ಯಾಕವರ್ಡ ಕ್ಲಾಸ ಕಮಿಷನ ರಿಪೋರ್ಟ, ವ್ಯಾಲ್ಯೂಂ, ೨, ೧೯೭೫.

ಕರ್ನಾಟಕ ಅಂಕಿ ಅಂಶಗಳ ನೋಟ: ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಬೆಂಗಳೂರು ೨೦೦೯–೧೦, ೨೦೧೧.

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಜಾತಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಕುರಿತು ಹೊರಡಿಸಿದ ಪ್ರಮುಖ ಆದೇಶಗಳ ಸಂಗ್ರಹ (೧೯೫೦ ರಿಂದ ಫೆಬ್ರುವರಿ ೨೦೦೯) ಸಮಾಜ ಕಲ್ಯಾಣ ಇಲಾಖೆ ಆಯುಕ್ತರವರ ಕಛೇರಿ ೫ನೇ ಮಹಡಿ ಬಹುಮಹಡಿಗಳ ಕಟ್ಟಡ ಬೆಂಗಳೂರು, ೨೦೦೯.

ಖಂಡೋಬಾ ಪಿ ಕೆ., ಕರ್ನಾಟಕದ ಲಂಬಾಣಿಗರು, ದಿ. ತೇಜ್‌ಸಿಂಗ್ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗಾ, ೧೯೯೧.

ಮಹಾದೇವಿಬಾಯಿ, ಚಾಮರಾಜನಗರ ಸುತ್ತಿನ ಲಂಬಾಣಿ ಸಂಸ್ಕೃತಿ, ಕೀರ್ತಿ ಪ್ರಕಾಶನ, ಚಾಮರಾಜನಗರ, ೨೦೦೭.

ಮಲ್ಲಪ್ಪ ಪಿ., ಕರ್ನಾಟಕದ ಭೂಗೋಳಶಾಸ್ತ್ರ, ಚೇತನ ಬುಕ್ ಹೌಸ್ ಮೈಸೂರು, ೨೦೦೯.

ಮಲ್ಲಿಕಾರ್ಜುನ ಭೀಮರಾಯ, ಕರ್ನಾಟಕ ವಿಮುಕ್ತ ಬುಡಕಟ್ಟುಗಳ ಸಾಮಾಜಿಕ ಅಧ್ಯಯನ, (ಪಿಎಚ್ ಡಿ ಸಂಶೋಧನಾ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

ಮೇತ್ರಿ ಕೆ ಎಂ., ಗುರುಲಿಂಗಯ್ಯ ಎಂ., ಅಲಕ್ಷಿತರ ಸಮಾಜಶಾಸ್ತ್ರ, ದೂರಶಿಕ್ಷಣ ಕೇಂದ್ರ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೦.

ನಾಯಕ ರೂಪ್ಲಾ ವೈ., ರಂಗುರಂಗಿನ ಬಂಜಾರ(ಲಂಬಾಣಿ) ಜನಾಂಗ, ಎಸ್.ಬಿ.ಸಿ.ಲಾ ಪಬ್ಲಿಕೇಶನ್ಸ್, ಬೆಂಗಳೂರು, ೨೦೦೧

ನಾಯ್ಕ ರಾಜು ಎನ್., ಲಂಬಾಣಿಗಳಲ್ಲಿ ರಾಜಕೀಯ ಅರಿವು ಒಂದು ಅಧ್ಯಯನ, ಆತ್ಮಜ್ಯೋತಿ ಪ್ರಕಾಶನ ಜ್ಞಾನ ಜ್ಯೋತಿ ನಗರ ಬೆಂಗಳೂರು, ೨೦೦೬.

ಪಾಟೀಲ ಎಮ್ ಬಿ., ಕರ್ನಾಟಕ ರಾಜ್ಯ ಗೆಜೆಟಿಯರ ಗುಲ್ಬರ್ಗಾ ಜಿಲ್ಲೆ, ಮೆ॥ ಗೀತಾಂಜಲಿ ಪ್ರಿಂಟರ್ಸ ಬೆಂಗಳೂರು, ೧೯೯೭.

ಪವಾರ ರಾಮಕೋಟಿ ವಿ., ಬಂಜಾರಾ ಸಮಾಜ: ಐತಿಹಾಸಿಕ ಪರಿಪ್ರೇಕ್ಷ, ಜವಾಹರ ಪುಸ್ತಕಾಲಯ, ಹಿಂದಿ ಪುಸ್ತಕ ಪ್ರಕಾಶಕ ಎಂವ ವಿತರಕ ಮಯೂರ, ಉತ್ತರ ಪ್ರದೇಶ, ೨೦೧೨.

ಶೇಷಗಿರಿರಾವ್ ಎಲ್ ಎಸ್., ಚೆನ್ನಬಸಪ್ಪ ಗೊ ರು, ಚಂದಶೇಖರ ರಾ ನಂ, ಕನ್ನಡ–ಕನ್ನಡಿಗ–ಕರ್ನಾಟಕ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೬.

ಸುರೇಶ ಕೆ ಎಮ್., ಭಾರತದ ಸಂವಿಧಾನ, ಸ್ಪರ್ಧಾ ವಿಜೇತ ಬೆಂಗಳೂರು, ೨೦೧೦.

Basic statistics on scheduled Tribes of Andhra Pradesh, Tribal cultural Research Training Institute, Tribal Welfare Department Government of Andhra Pradesh Hyderabad, 2008.

Deopujari U P, Maharastra caste scrutiny manual, Nagpur Law House Nagpur, 2012.

Hand book of statistics Rangareddy District 2010, Compiled by Chief planning officer Rangareddy district, 2010.

Maheswar Reddy B, Andhra Pradesh Geography, sri padmavti publication ramakote, Hyderabad, 2010

Prasad O S V D, Girijan samskriti, A special Issue on scheduled Tribe community certificates, Tribal cultural Research and training institute, Tribal welfare Department, Government of Andhra Pradesh Hyderabad, 2009.

Sovenier, National Banjara Professors conference on 14 and 15 July, 2012.

Census of India 2011, CD, Directorate of Census operation, Andhara Pradesh, Hyderabad, 2011.

Census of India 2001, CD, Directorate of Census operation, Karnataka, Koramangala, Bangalore 2001.

Census of India 2011, CD, Directorate of Census operation, Karnataka, Koramangala, Bangalore 2011.

Census of India 2011, CD, Directorate of Census operation, Maharastra, Bombay, 2011

ಅಧ್ಯಾಯ ಮೂರು

# ಲಂಬಾಣಿಗರ ಮೂಲ ಮತ್ತು ಚಾರಿತ್ರಿಕ ಹಿನ್ನೆಲೆ

೩.೧. ಲಂಬಾಣಿಗರ ಮೂಲ

೩.೨. ಲಂಬಾಣಿಗರ ಚಾರಿತ್ರಿಕ ಹಿನ್ನೆಲೆ

ಅಧ್ಯಾಯ - ೩

# ಲಂಬಾಣಿಗರ ಮೂಲ ಮತ್ತು ಚಾರಿತ್ರಿಕ ಹಿನ್ನೆಲೆ

## ೩.೧. ಲಂಬಾಣಿಗರ ಮೂಲ

ವಿಪುಲವಾದ ಜನಸಂಪತ್ತಿನಿಂದ ಕೂಡಿರುವ ಭಾರತದಲ್ಲಿ ಮೂಲನಿವಾಸಿಗಳೆಂದು ಪರಿಗಣಿತ ವಾಗಿರುವ ಬುಡಕಟ್ಟು ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿ ಗೋಚರಿಸುತ್ತವೆ. ಈ ಬುಡಕಟ್ಟು ಸಮುದಾಯಗಳು ಹಲವಾರು ಪಂಗಡಗಳಾಗಿ, ಕುಲಗಳಾಗಿ, ಅಲೆಮಾರಿ ತಂಡಗಳಾಗಿ, ವಿಶಿಷ್ಟವಾದ ನಾಮಧ್ಯೇಯಗಳೊಂದಿಗೆ ವಿಶಿಷ್ಟವಾದ ಭಾಷೆಯನ್ನು ಮಾತನಾಡುತ್ತಾ, ನಾವು ನಮ್ಮವರು ಎಂಬ ಪ್ರಬಲವಾದ ಭಾವನೆಯೊಂದಿಗೆ ಒಂದು ನಿರ್ದಿಷ್ಟವಾದ ಭೂ ಪ್ರದೇಶದಲ್ಲಿ ಸಿರಿವಂತ ಸಂಸ್ಕೃತಿಯೊಂದಿಗೆ ಸ್ವಯಂ ಪರಿಪೂರ್ಣ ಬದುಕನ್ನು ಕಟ್ಟಿಕೊಂಡು ಏಕತಾ ಭಾವನೆಯೊಂದಿಗೆ ಬಾಳುತ್ತಿರುವುದು ಕಂಡುಬರುತ್ತದೆ.

ಇಂತಹ ವಿಶಿಷ್ಟವಾದ ಸಂಸ್ಕೃತಿ ನಾಗರಿಕತೆಯನ್ನು ಸಂಪೋಷಿಸುತ್ತಾ ಜೀವನವನ್ನು ಕಟ್ಟಿ ಕೊಂಡಿರುವ ಸಹಸ್ರಾರು ಬುಡಕಟ್ಟು ಸಮುದಾಯಗಳಲ್ಲಿ ಲಂಬಾಣಿ ಸಮುದಾಯವು ಕೂಡಾ ಒಂದು. ರಂಗು ರಂಗಿನ ವೇಷಭೂಷಣಗಳೊಂದಿಗೆ, ಅನನ್ಯವಾದ ಸಂಸ್ಕೃತಿಯೊಂದಿಗೆ ಗುರುತಿಸಿ ಕೊಳ್ಳುತ್ತಾ, ದೇಶದ ಮೂಲೆ ಮೂಲೆಗಳಲ್ಲಿ ಪಸರಿಸಿದ್ದಾರೆ. ಲಂಬಾಣಿಗರು ಮಾತನಾಡುವ ಮಾತೃಭಾಷೆಯನ್ನು 'ಗೋರಬೋಲಿ' ಎಂದು ಕರೆಯುತ್ತಾರೆ. ಈ ಭಾಷೆಗೆ ಲಿಪಿ ಇಲ್ಲವಾದ್ದರಿಂದ ಹಾಗೂ ಈ ಸಮುದಾಯದ ಪೂರ್ವಿಕರಿಗೆ ಬರವಣಿಗೆಯ ಕಲೆ ಗೊತ್ತಿಲ್ಲದಿರುವುದರಿಂದ ಲಂಬಾಣಿ ಸಮುದಾಯದ ಕುರಿತಾದ ಇತಿಹಾಸವು ವ್ಯವಸ್ಥಿತವಾಗಿ ದಾಖಲಾಗಿಲ್ಲ. ಹೀಗಾಗಿ

ಲಂಬಾಣಿಗರ ಮೂಲ ಚಾರಿತ್ರಿಕ ಹಿನ್ನೆಲೆಯನ್ನು ಅರಿತುಕೊಳ್ಳಲು ಮೌಖಿಕ ಆಧಾರಗಳೇ ಮೂಲ ಮಾಹಿತಿಗಳಾಗಿವೆ.

ಲಂಬಾಣಿಗರ ಜೀವನ ವಿಧಾನ, ಸಂಪ್ರದಾಯ, ಹಬ್ಬಗಳು, ಜನಪದ ಕಥೆಗಳು, ಭಾಷೆ, ಒಗಟುಗಳು, ಜಾನಪದ ಹಾಡುಗಳು, ಉಡುಗೆ ತೊಡುಗೆಗಳು, ಹಿರಿಯರು ವಿವರಿಸುವ ಪ್ರಸಂಗಗಳು ಮುಂತಾದವುಗಳ ಆಧಾರಗಳಿಂದಲೇ ಲಂಬಾಣಿಗರ ಮೂಲ ಹಾಗೂ ಚಾರಿತ್ರಿಕ ಹಿನ್ನೆಲೆಯನ್ನು ತಿಳಿದುಕೊಳ್ಳಬಹುದು. ಪೃಥ್ವಿಯ ಮೇಲೆ ಮಾನವ ಸಮುದಾಯದ ಉದಯ ಹಾಗೂ ಲಂಬಾಣಿಗರ ಮೂಲವನ್ನು ಕುರಿತು ಕಾಲ್ಪನಿಕ ಕಥೆಯನ್ನು ಲಂಬಾಣಿಗರು ತಮ್ಮ ಭಾಷೆಯ ಮೂಲಕ ಹಾಡುತ್ತಾರೆ. ಅದು ಈ ಕೆಳಗಿನಂತಿದೆ.

"ಜಮಿ, ಆಸ್ಮಾನ, ಚಾಂದ, ಸೂರತ್, ಪವನ, ಪಾಣೀ, ಮೇಕ ಮೇಳ ಮನಕ್ಯಾ ಜಲಮ. ಮನಕ್ಯಾ ಜಲಮೇರೋ ಧಜ್. ಧಜೇರೋ ಕವರಧಜ್, ಕವರಧಜೇರೋ ಕವರಪಾಳ, ಕವರಪಾಳೆರೋ ರಾಜಪಾಳ, ರಾಜಪಾಳೇರೋ ಅಭಯಚಂದ, ಅಭಯಚಂದೆರೋ ರಾಜಾ ದಶರಥ, ರಾಜಾ ದಶರಥೇರೋ ರಾಮ ಲಚಮಣ್, ರಾಮೇರೋ ರೀಮ್, ರಿಮೇರೋ ವಗಾದ, ವಗಾದೇರೋ ಜಗಾದ, ಜಗಾದೇರೋ ಸಂದಲ್, ಸಂದಲೇರೋ ಸರಿಸೂರತ್, ಸರಿಸೂರತೇರೋ ಕಾಸಬ್, ಕಾಸಬೇರೋ ಕರಣ್, ಕರಣೇರೋ ತೀಡಾ ಅನ್ ಭೇಡಾ, ತೀಡಾರ್ ನಾತಡ್, ಜೋಗಡ್, ಖೀಮಡ, ಮೊಟಾ ಅನ್ ಮೊಲಾ, ನಾತಡೇರ ವಾಗ್ರೀ, ಜೋಗಡೇರ ಜೋಗಿ, ಖೀಮಡೇರ್ ಲವಾರ್, ಮೋಟಾರ್ ಕೋರ್, ಮೋಲಾರ ಗೋರ್, ಭೇಡಾರ್ ಹಾಬಲ್ ಆನ್ ಕಾಬಲ್, ಹಾಬಲೇರ ಹಿಂದು, ಕಾಬಲೇರ್ ಮಸಮಾನ."

**ಸಾರಾಂಶ:** ಪೃಥ್ವಿ, ಆಕಾಶ, ಚಂದ್ರ, ಸೂರ್ಯ, ಗಾಳಿ, ನೀರು ಇರುವ ಸೃಷ್ಟಿಯ ಮೇಲೆ ಸೃಷ್ಟಿಕರ್ತನು ಮಾನವನಿಗೆ ಜನ್ಮ ನೀಡಿದ. ಭೂಮಿಯ ಮೇಲೆ ಜನಿಸಿದ ಮೊದಲ ಮಾನವ 'ಧಜ್'. ಧಜ್‌ನ ಮಗ ಕವರಧಜ್, ಕವರಧಜ್‌ನ ಮಗ ಕವರಪಾಳ, ಈತನ ಮಗ ರಾಜಪಾಳ, ರಾಜಪಾಳನ ಮಗ ಅಭಯಚಂದ, ಈತನ ಮಗ ರಾಜಾ ದಶರಥ, ರಾಜಾ ದಶರಥರಿಂದ ರಾಮ–ಲಕ್ಷ್ಮಣರು, ರಾಮನ ಮಗ ರೀಮ್, ರೀಮನಿಂದ ವಗಾದ, ಈತನ ಮಗ ಜಗಾದ, ಜಗಾದನಿಂದ ಸಂದಲ್, ಸಂದಲ್‌ನ ಮಗ ಸರಿಸೂರತ, ಈತನಿಂದ ಕಾಸಬ, ಕಾಸಬನ ಮಗ ಕರಣ, ಕರಣನಿಗೆ ತೀಡಾ ಮತ್ತು ಭೇಡಾ ಎಂಬ ಇಬ್ಬರು ಮಕ್ಕಳು. ತೀಡಾನಿಗೆ ನಾತಡ, ಜೋಗಡ, ಖೀಮಡ, ಮೋಟಾ ಮತ್ತು ಮೋಲಾ ಎಂಬ ಮಕ್ಕಳು ಜನಿಸುತ್ತಾರೆ. ನಾತಡನಿಂದ ವಾಗ್ರೀ (ಹರಣ ಶಿಕಾರಿ) ಸಮುದಾಯ, ಜೋಗಡನಿಗೆ ಜೋಗ್ರಿ (ಜೋಗಿಗಳು), ಖೀಮಡನಿಗೆ ಲವಾರ(ಕಮ್ಮಾರರು), ಮೋಟಾನಿಂದ ಕೋರ(ಮಾರವಾಡಿಗಳು) ಹಾಗೂ ಮೋಲಾನಿಂದ ಗೋರ (ಲಂಬಾಣಿ)ಸಮುದಾಯ ಜನ್ಮ ಪಡೆಯಿತು. ಅದರಂತೆಯೇ ಭೇಡಾನಿಗೆ ಹಾಬಲ್ ಮತ್ತು ಕಾಬಲ್ ಎಂಬ ಇಬ್ಬರು ಮಕ್ಕಳ ಜನನವಾಯಿತು. ಹಾಬಲ್‌ನಿಂದ ಹಿಂದೂಗಳು ಹಾಗೂ ಕಾಬಲ್‌ನಿಂದ

ಮುಸ್ಲಿಮ್‌ರು ಹುಟ್ಟಿದರು. ಹೀಗಾಗಿ ಮೊಲಾದಾದಾ ಲಂಬಾಣಿಗರ ಮೂಲ ಪುರುಷ ಎಂಬುದು ಲಂಬಾಣಿ ಹಿರಿಯರಿಂದ ಮೌಖಿಕವಾಗಿ ಹೊರಹೊಮ್ಮುವ ಕಥೆಯ ಸಾರಾಂಶವಾಗಿದೆ. ಈ ಕಥೆಯು ಎಲ್ಲಾ ಸಮುದಾಯಗಳು ಒಂದೇ ಮೂಲದಿಂದ ಬಂದವುಗಳಾಗಿವೆ ಎಂಬ ಏಕತೆಯ ಭಾವವನ್ನು ಸಾರುತ್ತದೆ.

ಲಂಬಾಣಿಗರು 'ಮೋಲಾ' ಎಂಬ ವ್ಯಕ್ತಿಯೇ ತಮ್ಮ ಮೂಲ ಪುರುಷ ಹಾಗೂ ಈತ ನಿಂದಾಗಿಯೇ ತಮ್ಮ ವಂಶ ಬೆಳೆಯಿತು ಎಂದು ನಂಬುತ್ತಾರೆ. ಹೀಗಾಗಿಯೇ ಅವರು ಮೋಲಾನನ್ನು 'ದಾದಾಮೋಲಾ' ಎಂದು ಕರೆಯುತ್ತಾರೆ. ಗೋರಬೋಲಿ ಭಾಷೆಯಲ್ಲಿ ದಾದಾ ಎಂದರೆ ಅಜ್ಜ ಅಥವಾ ಮೂಲ ಪುರುಷ ಎಂಬ ಅರ್ಥ ಧ್ವನಿಸುತ್ತದೆ.

ಲಂಬಾಣಿಗರ ವಂಶ ಬೆಳವಣಿಗೆಯ ಕುರಿತು ಮತ್ತೊಂದು ಐತಿಹ್ಯ ಪ್ರಚಲಿತದಲ್ಲಿದೆ. ಅದೇನೆಂದರೆ "ಒಂದು ದಿನ ಶ್ರೀಕೃಷ್ಣ ಅರಣ್ಯದಲ್ಲಿ ದನಕಾಯುತ್ತಿದ್ದನು, ಆಗ ಮೋಲಾ ಎಂಬ ಬಾಲಕನು ಶ್ರೀಕೃಷ್ಣನಲ್ಲಿಗೆ ಬಂದು, ನಾನೊಬ್ಬ ಅನಾಥ ಬಾಲಕ ನನಗೆ ರಕ್ಷಣೆ ನೀಡಬೇಕೆಂದು ಕೇಳಿಕೊಂಡನು. ಆಗ ಶ್ರೀಕೃಷ್ಣನು ಮೋಲಾನನ್ನು ದನಕಾಯಲು ನೇಮಿಸಿಕೊಂಡನು. ಹಲವಾರು ದಿನಗಳ ನಂತರ ಶ್ರೀಕೃಷ್ಣನು ಸ್ವರ್ಗಕ್ಕೆ ಹೊಗುವ ಪೂರ್ವದಲ್ಲಿ ತನ್ನಲ್ಲಿರುವ ಎಲ್ಲಾ ವಸ್ತುಗಳನ್ನು ಹಾಗೂ ಗೋಪಿಕಾ ಸ್ತ್ರೀಯರನ್ನು ತನ್ನ ಸೇವಕರಿಗೆ ಹಾಗೂ ಸ್ನೇಹಿತರಿಗೆ ದಾನವಾಗಿ ನೀಡಿದನು. ಆ ಸಂದರ್ಭದಲ್ಲಿ ಹಾಜರಿರದ ಮೋಲಾ ತನಗಾಗಿ ಏನೂ ಉಳಿಯಲಿಲ್ಲ ಎಂದು ಕುಪಿತನಾದನು. ಇದನ್ನರಿತ ಭಗವಾನ ಶ್ರೀಕೃಷ್ಣನು ತನ್ನ ರಾಣಿ ರಾಧಾಳನ್ನು ಮೋಲಾನಿಗೆ ದಾನವಾಗಿ ನೀಡಿ, ಯಾವುದೇ ಕಾರಣಕ್ಕೂ ಅವಳೊಂದಿಗೆ ಲೈಂಗಿಕ ಸಂಪರ್ಕ ಹೊಂದಕೂಡದು ಎಂಬ ಷರತ್ತನ್ನು ವಿಧಿಸಿದನು. ಮೋಲಾನು ಕೂಡಾ ರಾಧಾದೇವಿಯನ್ನು ದೈವೀಭಾವದಿಂದ ಕಂಡನು. ಗೀತ ನೃತ್ಯಗಳಲ್ಲಿ ಪ್ರವೀಣರಾದ ಮೋಲಾ ಮತ್ತು ರಾಧಾ ಡೊಂಬರಾಟ ಪ್ರದರ್ಶಿಸುತ್ತಾ ಸಂಚರಿಸುತ್ತಿದ್ದರು. ಆ ಸಂದರ್ಭದಲ್ಲಿ ತನ್ನ ಸಹೋದರರೊಡನೆ ಜಗಳವಾಡಿಕೊಂಡಿದ್ದ ಭವಯ್ಯಾ ಎಂಬ ಮಂತ್ರವಾದಿಯು ಇವರೀರ್ವರೊಂದಿಗೆ ಸೇರಿಕೊಂಡನು. ಮೂರು ಜನ ರಾವುಗಡ ಎಂಬಲ್ಲಿ ಬಂದು ನೃತ್ಯವನ್ನು ಪ್ರದರ್ಶಿಸಿದರು. ಗೀತ ನೃತ್ಯವನ್ನು ಆಸ್ವಾದಿಸಿದ ಅರಸ ನಿಮಗೇನು ಬೇಕು ಎಂದು ಕೇಳಿದನು. ಆಗ ಮೋಲಾ ನನಗೆ ಮಕ್ಕಳಿಲ್ಲ ಹಾಗಾಗಿ ನಿಮ್ಮ ಮಗನನ್ನು ಕೊಡಿ ಎಂದು ಅರಸನಿಗೆ ವಿನಂತಿಸಿ ಕೊಂಡನು. ರಾವುಗಡದ ಅರಸನು ಮೋಲಾನ ವಿನಂತಿಯನ್ನು ಮನ್ನಿಸಿ ಒಬ್ಬ ಬಾಲಕನನ್ನು ಕಾಣಿಕೆಯಾಗಿ ನೀಡಿದನು. ಹಾಗೇಯೇ ಮುಂದುವರೆದು ಚಾವುಗಡ ಹಾಗೂ ಪಾಮಗಡದ ಅರಸರನ್ನು ತಮ್ಮ ನೃತ್ಯಗಳಿಂದ ಸಂತುಷ್ಟಗೊಳಿಸಿ ಅವರಿಂದಲೂ ಒಬ್ಬೊಬ್ಬ ಬಾಲಕರನ್ನು ಕಾಣಿಕೆಯಾಗಿ ಪಡೆದುಕೊಂಡರು. ಮುಂದೆ ಮಚ್ಚರಗಡ ಎಂಬಲ್ಲಿಗೆ ಬಂದು ನೃತ್ಯ ಪ್ರದರ್ಶಿಸಿದರು. ಮಚ್ಚರಗಡದಲ್ಲಿ ಸೊಳ್ಳೆಗಳ ಕಾಟ ವಿಪರಿತವಾಗಿತ್ತು, ಇದನ್ನರಿತ ಭವಯ್ಯಾ ತನ್ನ ಮಂತ್ರ ಶಕ್ತಿಯಿಂದ ಸೊಳ್ಳೆಗಳ ಕಾಟವನ್ನು ಪರಿಪೂರ್ಣವಾಗಿ ನಿವಾರಿಸಿದನು. ಅರಸನು ಭವಯ್ಯಾನ ಮಂತ್ರ ಶಕ್ತಿಗೆ ಬೆರಗಾಗಿ

ಈತನು ಜೀವಂತವಾಗಿದ್ದರೆ ತನ್ನ ಮಂತ್ರ ಶಕ್ತಿಯಿಂದ ಸೊಳ್ಳೆಗಳ ಕಾಟವನ್ನು ಮತ್ತೆ ಪ್ರಾರಂಭಿಸಬಹುದು ಎಂದು ಭವಯ್ಯಾನನ್ನು 'ಭೂರೇರ ಘರ(ಕತ್ತಲ ಕೋಣೆ)ನಲ್ಲಿ ಕರೆದುಕೊಂಡು ಹೋಗಿ ಕೊಲೆಗೈದನು. ಇದನ್ನರಿತ ರಾಧಾ, ಮೋಲಾ ಮತ್ತು ಅವರ ಮೂರು ಜನ ಮಕ್ಕಳು ದುಃಖದಿಂದ ಅರಮನೆಯ ಮುಂದೆ ಅಳತೊಡಗಿದರು. ಆಗ ಅರಸನು ಮೋಲಾನನ್ನು ಕುರಿತು "ಒಬ್ಬ ಭವಯ್ಯಾ ಸತ್ತು ಹೋದರೆ ಏನಾಯ್ತು, ನಿಮಗೆ ಇಬ್ಬರು ಗವಯ್ಯಾ(ಗಾಯಕರು)ಗಳನ್ನು ಕೊಡುತ್ತೇನೆಂದು ಹೇಳಿದನು. ಗಾಜೇನ-ಗಜರಾ(ಢಾಡಿ-ಢಾಲಿಯ) ಎಂಬ ಹೆಸರಿನ ಇಬ್ಬರು ಗವಯ್ಯಾಗಳನ್ನು ಜೊತೆ ಮಾಡಿಕೊಂಡು ಮುಂದೆ ಸಾಗಿದರು"(ಖಂಡೋಬಾ ಪಿ ಕೆ: ೧೯೯೧:೩೪). ಹೀಗೆ ರಾವುಗಡದಿಂದ ತಂದ ಬಾಲಕನನ್ನು ರಾಠೋಡ, ಚಾವುಗಡದ ಬಾಲಕನು ಚವ್ಹಾಣ, ಪಾಮಗಡದಿಂದ ತಂದ ಬಾಲಕನು ಪವಾರ ಹಾಗೂ ಮಚ್ಚರಗಡದಿಂದ ತಂದ ಇಬ್ಬರು ಬಾಲಕರು ಮುಂದೆ ಲಂಬಾಣಿಗರ ಸೇವಕರಾದ ಢಾಡಿ ಮತ್ತು ಢಾಲಿಯಾಗಳಾದರು.

ಕೆಲ ವರ್ಷಗಳ ನಂತರ ಮೋಲಾದಾದಾ ತನ್ನ ಮೂರು ಜನ ಮಕ್ಕಳು ಪ್ರಾಪ್ತ ವಯಸ್ಸಿಗೆ ಬಂದಾಗ ವಿವಾಹ ಮಾಡಬೇಕೆಂದು ಯೋಚಿಸುತ್ತಿದ್ದನು. ಅಂತಹ ಸಂದರ್ಭದಲ್ಲಿ ಒಬ್ಬ ಬ್ರಾಹ್ಮಣನು ಅದೇ ಮಾರ್ಗವಾಗಿ ತನ್ನ ಮೂರು ಜನ ಹೆಣ್ಣು ಮಕ್ಕಳನ್ನು ಕರೆದುಕೊಂಡು ಹೋಗುತ್ತಿದ್ದನು. ಇದನ್ನು ಕಂಡ ಮೋಲಾ ಬ್ರಾಹ್ಮಣನನ್ನು ಕರೆದು ವಿಚಾರಿಸಿದನು. ಆಗ ಬ್ರಾಹ್ಮಣನು ತಮ್ಮ ಸಮುದಾಯದಲ್ಲಿ ಹೆಣ್ಣು ಮಕ್ಕಳು ಋತುಮತಿಯಾಗುವ ಮೊದಲೇ ವಿವಾಹ ಮಾಡಬೇಕು. ಆದರೆ ನಾನು ತೀರ್ಥಯಾತ್ರೆಗೆಂದು ಹೊರಗಡೆ ಹೋದಾಗ ನನ್ನ ಮೂರು ಜನ ಹೆಣ್ಣು ಮಕ್ಕಳು ಋತುಮತಿಯಾಗಿದ್ದಾರೆ. ಈ ವಿಚಾರವು ಸಮುದಾಯಕ್ಕೆ ಗೊತ್ತಾದರೆ, ಸಮುದಾಯದಿಂದ ಬಹಿಷ್ಕಾರ ಹಾಕುತ್ತಾರೆ. ಹೀಗಾಗಿ ಬಹಿಷ್ಕಾರದ ಅವಮಾನಕ್ಕಿಂತ ಸಾಯುವುದೇ ಸರಿಯಾದ ಮಾರ್ಗವೆಂದು ತಿಳಿದು, ನನ್ನ ಮೂರು ಜನ ಹೆಣ್ಣು ಮಕ್ಕಳೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳಲು ಹೊರಟಿದ್ದೇನೆ ಎಂಬ ವೃಂತ್ತಾಂತವನ್ನು ತಿಳಿಸಿದನು. ಆಗ ಮೋಲಾ ಬ್ರಾಹ್ಮಣನನ್ನು ಕುರಿತು ನನಗೂ ಮೂರು ಜನ ವಿವಾಹಯೋಗ್ಯ ಗಂಡುಮಕ್ಕಳಿದ್ದಾರೆ. ನೀನು ನಿನ್ನ ಮೂರು ಜನ ಹೆಣ್ಣು ಮಕ್ಕಳನ್ನು ನನ್ನ ಮಕ್ಕಳಿಗೆ ವಿವಾಹ ಮಾಡಿಕೊಡು ಎಂದು ನಿವೇದಿಸಿಕೊಂಡನು. ಬ್ರಾಹ್ಮಣನು ಮರು ಮಾತನಾಡದೇ ಒಪ್ಪಿಕೊಂಡನು. "ಪವಾರನಿಗೆ ನಾಗರಸೀ, ರಾಠೋಡನಿಗೆ ಕೊಗರಸಿ ಮತ್ತು ಚವ್ಹಾಣನಿಗೆ ಆಶಾವತಿ" (ನಾಯಕ ರೂಪ್ಲಾ ವೈ: ೨೦೦೧:೩೬). ಹೀಗೆ ಮೂರು ಜನರಿಗೆ ಬ್ರಾಹ್ಮಣ ಯುವತಿಯರೊಂದಿಗೆ ವಿವಾಹವಾಗಿ ಲಂಬಾಣಿಗರ ರಾಠೋಡ, ಚವ್ಹಾಣ ಮತ್ತು ಪವಾರರ ವಂಶ ವೃಕ್ಷವು ಬೆಳೆಯಿತು. ಹೀಗಾಗಿ ಲಂಬಾಣಿಗರು ಕ್ಷತ್ರಿಯ ಹಾಗೂ ಬ್ರಾಹ್ಮಣರ ಮಿಶ್ರ ಸಮುದಾಯ ಹಾಗೂ ಲಂಬಾಣಿಗರು ಆರಂಭದಲ್ಲಿ ಜನೋಯಿ(ಜನಿವಾರ)ಯನ್ನು ಧರಿಸುತ್ತಿದ್ದರು ಎಂಬ ವಿಚಾರವು ಲಂಬಾಣಿ ಸಮುದಾಯದ ಹಿರಿಯರಿಂದ ವ್ಯಕ್ತವಾಗುತ್ತದೆ. ಲಂಬಾಣಿಗರು ಮೂಲದಲ್ಲಿ ಡೊಂಬರಾಟವನ್ನು ಮಾಡುತ್ತಿದ್ದರು ಎಂಬುದಕ್ಕೆ ಅವರಲ್ಲಿ ಒಂದು ಹಾಡು ಪ್ರಚಲಿತದಲ್ಲಿದೆ.

ಈತನು ಜೀವಂತವಾಗಿದ್ದರೆ ತನ್ನ ಮಂತ್ರ ಶಕ್ತಿಯಿಂದ ಸೊಳ್ಳೆಗಳ ಕಾಟವನ್ನು ಮತ್ತೆ ಪ್ರಾರಂಭಿಸಬಹುದು ಎಂದು ಭವಯ್ಯಾನನ್ನು 'ಭೂರೇರ ಘರ(ಕತ್ತಲ ಕೋಣೆ)ನಲ್ಲಿ ಕರೆದುಕೊಂಡು ಹೋಗಿ ಕೊಲೆಗೈದನು. ಇದನ್ನರಿತ ರಾಧಾ, ಮೋಲಾ ಮತ್ತು ಅವರ ಮೂರು ಜನ ಮಕ್ಕಳು ದುಃಖದಿಂದ ಅರಮನೆಯ ಮುಂದೆ ಅಳತೊಡಗಿದರು. ಆಗ ಅರಸನು ಮೋಲಾನನ್ನು ಕುರಿತು "ಒಬ್ಬ ಭವಯ್ಯಾ ಸತ್ತು ಹೋದರೆ ಏನಾಯ್ತು, ನಿಮಗೆ ಇಬ್ಬರು ಗವಯ್ಯಾ(ಗಾಯಕರು)ಗಳನ್ನು ಕೊಡುತ್ತೇನೆಂದು ಹೇಳಿದನು. ಗಾಜೀನ-ಗಜರಾ(ಢಾಡಿ-ಢಾಲಿಯ) ಎಂಬ ಹೆಸರಿನ ಇಬ್ಬರು ಗವಯ್ಯಾಗಳನ್ನು ಜೊತೆ ಮಾಡಿಕೊಂಡು ಮುಂದೆ ಸಾಗಿದರು"(ಖಂಡೋಬಾ ಪಿ ಕೆ: ೧೯೯೧:೩೪). ಹೀಗೆ ರಾವುಗಡದಿಂದ ತಂದ ಬಾಲಕನನ್ನು ರಾಠೋಡ, ಚಾವುಗಡದ ಬಾಲಕನು ಚವ್ಹಾಣ, ಪಾಮಗಡದಿಂದ ತಂದ ಬಾಲಕನು ಪವಾರ ಹಾಗೂ ಮಚ್ಚರಗಡದಿಂದ ತಂದ ಇಬ್ಬರು ಬಾಲಕರು ಮುಂದೆ ಲಂಬಾಣಿಗರ ಸೇವಕರಾದ ಢಾಡಿ ಮತ್ತು ಢಾಲಿಯಾಗಳಾದರು.

ಕೆಲ ವರ್ಷಗಳ ನಂತರ ಮೋಲಾದಾದಾ ತನ್ನ ಮೂರು ಜನ ಮಕ್ಕಳು ಪ್ರಾಪ್ತ ವಯಸ್ಸಿಗೆ ಬಂದಾಗ ವಿವಾಹ ಮಾಡಬೇಕೆಂದು ಯೋಚಿಸುತ್ತಿದ್ದನು. ಅಂತಹ ಸಂದರ್ಭದಲ್ಲಿ ಒಬ್ಬ ಬ್ರಾಹ್ಮಣನು ಅದೇ ಮಾರ್ಗವಾಗಿ ತನ್ನ ಮೂರು ಜನ ಹೆಣ್ಣು ಮಕ್ಕಳನ್ನು ಕರೆದುಕೊಂಡು ಹೋಗುತ್ತಿದ್ದನು. ಇದನ್ನು ಕಂಡ ಮೋಲಾ ಬ್ರಾಹ್ಮಣನನ್ನು ಕರೆದು ವಿಚಾರಿಸಿದನು. ಆಗ ಬ್ರಾಹ್ಮಣನು ತಮ್ಮ ಸಮುದಾಯದಲ್ಲಿ ಹೆಣ್ಣು ಮಕ್ಕಳು ಋತುಮತಿಯಾಗುವ ಮೊದಲೇ ವಿವಾಹ ಮಾಡಬೇಕು. ಆದರೆ ನಾನು ತೀರ್ಥಯಾತ್ರೆಗೆಂದು ಹೊರಗಡೆ ಹೋದಾಗ ನನ್ನ ಮೂರು ಜನ ಹೆಣ್ಣು ಮಕ್ಕಳು ಋತುಮತಿಯಾಗಿದ್ದಾರೆ. ಈ ವಿಚಾರವು ಸಮುದಾಯಕ್ಕೆ ಗೊತ್ತಾದರೆ, ಸಮುದಾಯದಿಂದ ಬಹಿಷ್ಕಾರ ಹಾಕುತ್ತಾರೆ. ಹೀಗಾಗಿ ಬಹಿಷ್ಕಾರದ ಅವಮಾನಕ್ಕಿಂತ ಸಾಯುವುದೇ ಸರಿಯಾದ ಮಾರ್ಗವೆಂದು ತಿಳಿದು, ನನ್ನ ಮೂರು ಜನ ಹೆಣ್ಣು ಮಕ್ಕಳೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳಲು ಹೊರಟಿದ್ದೇನೆ ಎಂಬ ವೃತ್ತಾಂತವನ್ನು ತಿಳಿಸಿದನು. ಆಗ ಮೋಲಾ ಬ್ರಾಹ್ಮಣನನ್ನು ಕುರಿತು ನನಗೂ ಮೂರು ಜನ ವಿವಾಹಯೋಗ್ಯ ಗಂಡುಮಕ್ಕಳಿದ್ದಾರೆ. ನೀನು ನಿನ್ನ ಮೂರು ಜನ ಹೆಣ್ಣು ಮಕ್ಕಳನ್ನು ನನ್ನ ಮಕ್ಕಳಿಗೆ ವಿವಾಹ ಮಾಡಿಕೊಡು ಎಂದು ನಿವೇದಿಸಿಕೊಂಡನು. ಬ್ರಾಹ್ಮಣನು ಮರು ಮಾತನಾಡದೇ ಒಪ್ಪಿಕೊಂಡನು. "ಪವಾರನಿಗೆ ನಾಗರಸೀ, ರಾಠೋಡನಿಗೆ ಕೊಗರಸಿ ಮತ್ತು ಚವ್ಹಾಣನಿಗೆ ಆಶಾವತಿ" (ನಾಯಕ ರೂಪ್ಲಾ ವೈ: ೨೦೦೧:೩೬). ಹೀಗೆ ಮೂರು ಜನರಿಗೆ ಬ್ರಾಹ್ಮಣ ಯುವತಿಯರೊಂದಿಗೆ ವಿವಾಹವಾಗಿ ಲಂಬಾಣಿಗರ ರಾಠೋಡ, ಚವ್ಹಾಣ ಮತ್ತು ಪವಾರರ ವಂಶ ವೃಕ್ಷವು ಬೆಳೆಯಿತು. ಹೀಗಾಗಿ ಲಂಬಾಣಿಗರು ಕ್ಷತ್ರಿಯ ಹಾಗೂ ಬ್ರಾಹ್ಮಣರ ಮಿಶ್ರ ಸಮುದಾಯ ಹಾಗೂ ಲಂಬಾಣಿಗರು ಆರಂಭದಲ್ಲಿ ಜನೋಯಿ(ಜನಿವಾರ)ಯನ್ನು ಧರಿಸುತ್ತಿದ್ದರು ಎಂಬ ವಿಚಾರವು ಲಂಬಾಣಿ ಸಮುದಾಯದ ಹಿರಿಯರಿಂದ ವ್ಯಕ್ತವಾಗುತ್ತದೆ. ಲಂಬಾಣಿಗರು ಮೂಲದಲ್ಲಿ ಡೊಂಬರಾಟವನ್ನು ಮಾಡುತ್ತಿದ್ದರು ಎಂಬುದಕ್ಕೆ ಅವರಲ್ಲಿ ಒಂದು ಹಾಡು ಪ್ರಚಲಿತದಲ್ಲಿದೆ.

*"ಮಾಣಕಿರ್ ಖಾವ್, ಗದ್ದಾರಿ ಲದಣಿ*
*ಸೂರೇರಿ ಡಾರ್ ಕೆಂಟೋ ಭರೋ ತಮಾಕು*
*ಗುಣೆಮಾರ್ ಜಾಂಗ್ಯಾ ಬಂಟಸ್ ಭರ್ಚಿ*
*ಸಿಂಗೀಸ್ ಕೊತ್ರಿ, ಸಾಟೇಹಾ ತೇರಿ ಭಾಲೋ*
*ರಂಗೀ ಭಂಗಿರ್ ಡೋಲ್, ಅಂತರ್ ಮಂತರ್ ಲಾಗಾಮಾರತೇ ಆಯೇ"*

*(ಸಣ್ಣರಾಮ:೧೯೯೯:೨೨-೨೩).*

ಅಂದರೆ ಪತಿ-ಪತ್ನಿ ಒಂದೇ ತಾಟಿನಲ್ಲಿ ಊಟ ಮಾಡುವ ಪದ್ಧತಿಯುಳ್ಳವರು. ಕತ್ತೆಯ ಹೇರು, ಹಂದಿಯ ಮಂದೆ, ಎಲೆ ಅಡಿಕೆ ಚೀಲದ ತುಂಬಾ ತಂಬಾಕು, ಸಡಿಲವಾದ ಉದ್ದದ ಚಡ್ಡಿ, ಮಂಡ ಬರ್ಚಿ, ಬಡಕಲು ನಾಯಿ, ಅರವತ್ತು ಮೊಳ ಉದ್ದದ ಬೊಂಬು, ಬಣ್ಣ ಬಣ್ಣದ ಡೋಲು, ಒಳಗೆ ಹೊರಗೆ ಲಾಗಾ(ಪಲ್ಟಿ) ಹೊಡೆಯುತ್ತಾ ಬಂದರು ಲಂಬಾಣಿಗರು ಎಂದರ್ಥ ವಾಗುತ್ತದೆ". ಈ ಮೇಲಿನ ಹಾಡಿನ ಅರ್ಥವನ್ನು ಗಮನಿಸಿದಾಗ ಲಂಬಾಣಿಗರು ಆರಂಭದಲ್ಲಿ ಡೊಂಬರಾಟದ ವೃತ್ತಿಯವರಾಗಿದ್ದರೆಂಬುದು ದೃಢವಾಗುತ್ತದೆ. ಲಂಬಾಣಿ ಹಿರಿಯರು ಕೂಡಾ ಮೂಲ ಪುರುಷ ದಾದಾ ಮೋಲನಿಂದ ಡೊಂಬರಾಟದ ವೃತ್ತಿ ಲಂಬಾಣಿಗರಲ್ಲಿ ಇತ್ತು ಎಂಬುದನ್ನು ಒಪ್ಪಿಕೊಳ್ಳುತ್ತಾರೆ. ಕಾಲಕ್ರಮೇಣ ಲಂಬಾಣಿಗರು ಡೊಂಬರಾಟದ ವೃತ್ತಿಯನ್ನು ತ್ಯಜಿಸಿ ವ್ಯಾಪಾರ ಮಾಡುವ ವೃತ್ತಿಯನ್ನು ಅನುಸರಿಸಿದರು. ಆದರೆ ಡೊಂಬರಾಟದ ವೃತ್ತಿಯನ್ನು ಏಕೆ ತ್ಯಜಿಸಿದರು ಎಂಬುದಕ್ಕೆ ಸೂಕ್ತ ಕಾರಣಗಳು ದೊರಕಿರುವುದಿಲ್ಲ. ಡೊಂಬರಾಟದ ವೃತ್ತಿಯಿಂದ ಬರುವ ಸಂಪಾದನೆ ಜೀವನ ನಡೆಸಲು ಕಷ್ಟಕರವಾಗಿರಬೇಕು, ಹೀಗಾಗಿ ಈ ವೃತ್ತಿಯನ್ನು ಬಿಟ್ಟು ವ್ಯಾಪಾರ ಮಾಡಲು ಪ್ರಾರಂಭಿಸಿದರು.

ಲಂಬಾಣಿಗರ ಮೂಲದ ಬಗ್ಗೆ ಮಗದೊಂದು ಐತಿಹ್ಯ ಹೀಗಿದೆ: ವಾಲಿ ಸುಗ್ರೀವರ ವಂಶದಲ್ಲಿ ಮೋತಾ ಹಾಗೂ ಮೋಲಾ ಎಂಬ ಇಬ್ಬರು ಸಹೋದರರಿದ್ದರು. ಮೋಲಾನಿಗೆ ಮಕ್ಕಳಾಗಿರಲಿಲ್ಲ. ಮೋಲಾನು ತನ್ನ ಪತ್ನಿ ರಾಧಾಳೊಂದಿಗೆ ಉಪಜೀವನಕ್ಕಾಗಿ ಹಾಡು, ನೃತ್ಯಗಳನ್ನು ಮಾಡುತ್ತಾ ಸಂಚರಿಸುತ್ತಿದ್ದನು. ಒಮ್ಮೆ ಮೂರು ಜನ ರಾಜರುಗಳ ಮುಂದೆ ತನ್ನ ಪತ್ನಿ ರಾಧಾಳೊಂದಿಗೆ ಹಾಡು, ನೃತ್ಯಗಳನ್ನು ಪ್ರದರ್ಶಿಸಿದನು. ಆಕರ್ಷಕವಾದ ಕಲಾ ಪ್ರದರ್ಶನದಿಂದ ಸಂತುಷ್ಟರಾದ ಅರಸರು ಮೋಲಾನನ್ನು ಕುರಿತು, ನಿನಗೆ ಏನು ಬೇಕು ಎಂದು ಕೇಳಲಾಗಿ, ಮೋಲಾನು ತನಗೆ ಮಕ್ಕಳಿಲ್ಲದಿರುವ ಸಂಗತಿಯನ್ನು ನಿವೇದಿಸಿ, ಮೂರು ಜನ ಅರಸರು ತಮ್ಮ ಮೂರು ಜನ ಮಕ್ಕಳನ್ನು ನೀಡಬೇಕೆಂದು ಪ್ರಾರ್ಥಿಸಿಕೊಂಡನು. ಪ್ರತಿಸ್ಪಂದಿಸಿದ ಅರಸರು ಮೂರು ಜನ ಮಕ್ಕಳನ್ನು ಮೋಲಾನಿಗೆ ದಾನವಾಗಿ ನೀಡಿದರು. ಸಂತುಷ್ಟರಾದ ಮೋಲಾ ದಂಪತಿಗಳು ಈ ಮಕ್ಕಳಿಗೆ ಭವ್ಯಾ, ಲೋಯಾ ಪಂಚಾರ ಹಾಗೂ ರಾತಡೆ ಎಂದು ಹೆಸರಿಟ್ಟು ಪ್ರೀತಿಯಿಂದ ಸಾಕಿದರು. ವಯಸ್ಸಿಗೆ ಬಂದ ಮೇಲೆ ವಿವಾಹ ಮಾಡಲಾಗಿ ಮುಂದೆ ರಾತಡೆನಿಂದ ರಾಠೋಡ ವಂಶ, ಲೋಯಾ ಪಂಚಾರನಿಂದ ಪವಾರ ವಂಶ ಹಾಗೂ ಭವ್ಯಾನಿಂದ ಚವ್ಹಾಣ ವಂಶ

ಬೆಳೆಯಿತು ಎಂಬ ವಿಚಾರವನ್ನು ಹಿರಿಯರು ವಿವರಿಸುತ್ತಾರೆ. ಹೀಗೆ ಮೌಖಿಕವಾಗಿ ಮೂಡಿಬಂದಿರುವ ಲಂಬಾಣಿಗರ ಮೂಲದ ಬಗೆಗಿನ ವಿಚಾರಗಳಲ್ಲಿನ ಸತ್ಯಾಸತ್ಯತೆಯನ್ನು ಪತ್ತೆಹಚ್ಚುವದು ಕಷ್ಟ ಸಾಧ್ಯವಾದರೂ, ಮೌಖಿಕ ಸಾಹಿತ್ಯವು ಬುಡಕಟ್ಟಿನ ಜನರಾದ ಲಂಬಾಣಿಗರ ಬದುಕಿನ ಜೀವನಾಡಿ ಯಾಗಿರುವದಂತು ಸತ್ಯ. ತಮ್ಮ ಸಮುದಾಯದ ಮೂಲದ ಬಗೆಗಿನ ವೃತ್ತಾಂತಗಳನ್ನು ಅಭೌತ ಸಂಸ್ಕೃತಿಯ ಭಾಗವನ್ನಾಗಿಸಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುತ್ತಾ ಬಂದಿರುವುದು ಇವರ ಸಾಂಸ್ಕೃತಿಕ ಸಿರಿವಂತಿಕೆಯನ್ನು ಎತ್ತಿ ತೋರಿಸುತ್ತದೆ. ಪ್ರತಿಯೊಂದು ಐತಿಹ್ಯ ಗಳಲ್ಲಿಯೂ, ಹಾಡುಗಳಲ್ಲಿಯೂ ಮೋಲಾ ಹಾಗೂ ರಾಧಾದಾದಿಯ ಹೆಸರಿನ ಪ್ರಸ್ತಾಪ ಬರುತ್ತದೆ. ಹೀಗಾಗಿ ಮೋಲಾ ಈ ಸಮುದಾಯದ ಮೂಲ ಪುರುಷನಾಗಿದ್ದಾನೆ.

**ಲಂಬಾಣಿಗರ ಕುಲಗೋತ್ರಗಳು**

ದಾದಾ ಮೋಲಾನನ್ನೆ ಲಂಬಾಣಿಗರು ತಮ್ಮ ಮೂಲ ಪುರುಷ ಎಂದು ನಂಬುತ್ತಾರೆ. ದಾದಾ ಮೋಲಾನು ಬೇರೆ ಬೇರೆ ಅರಸರುಗಳಿಂದ ತಂದ ಬಾಲಕರಾದ ರಾಠೋಡ, ಚವ್ಹಾಣ ಮತ್ತು ಪವಾರರಿಂದ ಲಂಬಾಣಿಗರ ವಂಶವು ಬೆಳೆಯಿತು. ಲಂಬಾಣಿಗರು ತಮ್ಮ ಬಳಿ ಅಥವಾ ಬೆಡಗುಗಳನ್ನು ಪಾಡಾ, ಗೋತ್, ಜಾತ್ ಎಂಬ ಹಲವಾರು ಹೆಸರುಗಳಿಂದ ಕರೆಯುತ್ತಾರೆ. ತಮ್ಮ ಕುಲಗೋತ್ರಗಳನ್ನು 'ಪಾಂಚ ಚೂಲ, ಪಚ್ಚಿಸ ನಾತಾ, ಛಾಯಿಸಮನ್, ಸತ್ತಾಯಿಸ್ ಸುಬೇದಾರ' ಅಂದರೆ ಐದು ತಲೆ, ಇಪ್ಪತ್ತೈದು ಪಂಗಡಗಳು, ಇಪ್ಪತ್ತಾರು ಮಂದಿ ವ್ಯಕ್ತಿಗಳು, ಇಪ್ಪತ್ತೇಳು ಸುಬೇದಾರರು ಎಂಬುದಾಗಿ ತಮ್ಮ ಕುಲಗೋತ್ರಗಳ ಬಗ್ಗೆ ವಿವರಣೆ ನೀಡುತ್ತಾರೆ.




ರಾವುಗಡದ ರಾಠೋಡನಿಗೆ ಆಲಣ, ಬಾಲಣ, ಮೋಹನ, ಮುಚ್ಚಾಳೋ, ಜಾಟೋತ, ಧರಮಸೋತ ಹಾಗೂ ಹೂಂಭೂಕ್ಯಾ ಎಂಬ ಏಳು ಜನ ಮಕ್ಕಳು. ಇವರನ್ನು 'ಸಾತಗೋತ ರಾಠೋಡ' ಎಂದು ಕರೆಯುತ್ತಾರೆ. ಈ ಏಳು ಗೋತ್ರಗಳಲ್ಲದೇ ಭೂಕ್ಯಾ ಪಂಗಡದಲ್ಲಿ ಆಂತರಿಕವಾಗಿ ಎರಡು ಗುಂಪುಗಳಿರುವುದು ಕಂಡುಬರುತ್ತದೆ. ಅವುಗಳನ್ನು ಲಂಬಾಣಿಗರು 'ತೇರನ್ ಚೌದ್ ಸತ್ತಾಯಿಸ್ ಪಾಡಾ ಭಗರಿಡಾಲ್ ಭೂಕ್ಯಾ' ಎಂದು ಕರೆಯುತ್ತಾರೆ. ಎಂದರೆ ಹದಿಮೂರು ಗೋತ್ರಗಳ ಗುಂಪನ್ನು ಜಂಗಿಯ ಗುಂಪು ಎಂದು ಹಾಗೂ ಹದಿನಾಲ್ಕು ಗೋತ್ರಗಳ ಗುಂಪಿಗೆ ಭಂಗಿಯ ಗುಂಪು ಎಂದು ಕರೆಯಲಾಗುತ್ತದೆ.

ಚಿನ್ನಾ ರಾಠೋಡ ಪಂಗಡವು ಭೂಕ್ಯಾ ಪಂಗಡಕ್ಕೆ ಸೇರಿದ ಅವಿವಾಹಿತ ಗಂಡು ಹೆಣ್ಣುಗಳ ಸಂಪರ್ಕದಿಂದ ಹುಟ್ಟಿದ ಮಗುವಿನಿಂದ ಬೆಳೆದ ಪಂಗಡವಾಗಿದೆ. ಹೀಗಾಗಿ ಈ ಪಂಗಡದವರು ಚಿನ್ನಾ ರಾಠೋಡ ಎನಿಸಿಕೊಂಡು, ಜಾತ್ ಗುಂಪಿನಲ್ಲಿ ಗುರುತಿಸಿಕೊಳ್ಳುತ್ತಾರೆ. ಅಲ್ಲದೇ ರಾಠೋಡ, ಪವಾರ, ಚವ್ಹಾಣ ಹಾಗೂ ವಡತಿಯಾ ಗುಂಪಿನೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸುತ್ತಾರೆ.

**ವಡತಿಯಾ ಪಂಗಡದ ಮೂಲ**: ಲಂಬಾಣಿಗರಲ್ಲಿ ಬರುವ ವಡತಿಯಾ ಪಂಗಡವು ಮೂಲತಃವಾಗಿ ದಾದಾ ಮೋಲಾ ಹಾಗೂ ರಾಧಾದಾದಿಯಿಂದ ಬೆಳೆದು ಬಂದ ವಂಶವಾಗಿರದೇ ಕಾಲಾಂತರದಲ್ಲಿ ಲಂಬಾಣಿ ಸಮುದಾಯದಲ್ಲಿ ಉತ್ಪತ್ತಿಯಾದ ವಂಶವಾಗಿದೆ. ಸಮುದಾಯದ ಹಿರಿಯರನ್ನು ಸಂದರ್ಶಿಸಿದಾಗ ತೆರೆದುಕೊಂಡ ಐತಿಹ್ಯ ಹೀಗಿದೆ.

ಲಂಬಾಣಿಗರು ಮೂಲತಃ ವ್ಯಾಪಾರಿಗಳಾಗಿದ್ದು, ತಮ್ಮ ದನ ಕರುಗಳ ಮೇಲೆ ಖಾದ್ಯ ಪದಾರ್ಥಗಳನ್ನು ಹೇರಿಕೊಂಡು ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುತ್ತಾ ವ್ಯಾಪಾರ ಮಾಡುತ್ತಿದ್ದರು. ಆದರೆ ಕಾರಣಾಂತರಗಳಿಂದ ವ್ಯಾಪಾರದಲ್ಲಿ ನಷ್ಟವಾಗಿ ಲಂಬಾಣಿಗರ ಬದುಕು ಬೀದಿಗೆ ಬಿದ್ದು, ಬಡತನದ ಸುಳಿಗೆ ಸಿಕ್ಕು ತೊಳಲಾಡುವಂತಾಯಿತು. ಬದುಕನ್ನು ಪುನರ್ ಸ್ಥಾಪಿಸಿಕೊಳ್ಳಲು ಲಂಬಾಣಿಗರು ದೇಮಾ ಗುರುವಿನ ಹತ್ತಿರ ಬಂದು ದೈನ್ಯತೆಯಿಂದ ಸಾಲವನ್ನು ಕೇಳಿದರು. ಲಂಬಾಣಿಗರಿಗೆ ಸಾಲಕೊಟ್ಟ ಗುರುವನ್ನು ರಂಗಾರೆಡ್ಡಿ ಮತ್ತು ಗುಲಬರ್ಗಾ ಜಿಲ್ಲೆಯಲ್ಲಿ 'ದೇಮಾ ಗುರು' ಎಂದು ಕರೆದರೆ, ಸೋಲಾಪುರದ ಲಂಬಾಣಿಗರು 'ಬಾಲಾಜಿ ಗುರು' ಎಂದು ಕರೆಯುತ್ತಾರೆ.

ಹೀಗೆ ದೇಮಾ ಗುರು ಲಂಬಾಣಿಗರಿಗೆ ೧೪ ಕಚ್ಚರ ಸಾಲವನ್ನು ನೀಡಿದನು. ರಂಗಾರೆಡ್ಡಿಯ ಕೆಲವು ಕಡೆ ೯ ಕಚ್ಚರ ಎಂದು ಹೇಳಲಾಗುತ್ತದೆ. ಸಾಲ ಪಡೆದ ಲಂಬಾಣಿಗರು ಹಲವು ದಿನಗಳಾದರೂ ಸಾಲವನ್ನು ತೀರಿಸಲಿಲ್ಲ. ಸಾಲ ಹಿಂದಿರುಗಿ ಬರದಿರುವುದರಿಂದ ದೇಮಾ ಗುರು ಸಾಲ ವಸೂಲಾತಿಗಾಗಿ ಒಬ್ಬ ಯುವ ಬ್ರಾಹ್ಮಣನನ್ನು ಕಳುಹಿಸಿದನು. ಬ್ರಾಹ್ಮಣನು ಲಂಬಾಣಿಗರನ್ನು ಹುಡುಕುತ್ತ ಅವರಿದ್ದ ಸ್ಥಳಕ್ಕೆ ಬಂದು ತಲುಪಿದನು. ಬ್ರಾಹ್ಮಣನು ಸಾಲ ವಸೂಲಾತಿಗಾಗಿ ಬಂದ ವಿಚಾರವನ್ನು ತಾಂಡಾದ ನಾಯಕ, ಕಾರಭಾರಿ ಹಾಗೂ ಡಾವಸಾಣರು (ಹಿರಿಯರು) ಕುಳಿತು ಚರ್ಚಿಸಲಾಗಿ ತುಂಬಾ ಬಡತನದ ಸ್ಥಿತಿಯಲ್ಲಿರುವ ನಮ್ಮಿಂದ ಸಾಲ ಹಿಂದಿರುಗಿಸಲು ಸಾಧ್ಯವಿಲ್ಲ. ಆದ್ದರಿಂದ ಏನಾದರೂ ಮಾಡಿ ಬ್ರಾಹ್ಮಣನನ್ನು ಉಪಾಯದಿಂದ ಸಾಗಿಹಾಕಬೇಕು ಎಂದು ನಿರ್ಣಯಿಸಿದರು. ತಾಂಡಾದಲ್ಲಿದ್ದ ಗೋರ್ರಾಮ ಪವಾರನು ಬೇರೆಡೆ ವಲಸೆಹೋಗಿದ್ದರಿಂದ ಅವನ ಮಗಳು ಕಸ್ತೂರಬಾಯಿ ಝುರಪಲಾ ಪವಾರನ ಮನೆಯಲ್ಲಿದ್ದಳು. ಇವಳನ್ನು ರಂಗಾರೆಡ್ಡಿ ಜಿಲ್ಲೆಯ ಕೆಲವು ಕಡೆ 'ಹಾಸಕಿ' ಎಂದು ಕರೆಯುತ್ತಾರೆ. ಕಸ್ತೂರಬಾಯಿ ತುಂಬಾ ಸುಂದರ ಹಾಗೂ ಆಕರ್ಷಕವಾಗಿದ್ದಳು. ಇವಳನ್ನು ಬ್ರಾಹ್ಮಣ ಉಳಿದುಕೊಳ್ಳಲು ವ್ಯವಸ್ಥೆ ಮಾಡಿರುವ ಸ್ಥಳಕ್ಕೆ ಊಟ ತೆಗೆದುಕೊಂಡು ಹೋಗಲು ಹೇಳಲಾಗಿತ್ತು. ಅದರಂತೆಯೇ ಕಸ್ತೂರಬಾಯಿ ಊಟವನ್ನು ತೆಗೆದುಕೊಂಡು ಹೋದಾಗ ಬ್ರಾಹ್ಮಣನು ಇವಳ ಸೌಂದರ್ಯಕ್ಕೆ ಮಾರುಹೋಗಿ ಅತ್ಯಾಚಾರವೆಸಗಿದನು. ಇದನ್ನರಿತ ಲಂಬಾಣಿಗರು ಬ್ರಾಹ್ಮಣನನ್ನು ಅತ್ಯಾಚಾರದ ಆರೋಪದ ಮೇರೆಗೆ ಹೊಡೆದೋಡಿಸಿದರು.

ಬ್ರಾಹ್ಮಣನು ದೇಮಾ ಗುರುವಿನ ಬಳಿ ತೆರಳಿ ನಡೆದ ವೃತ್ತಾಂತವನ್ನು ಹೇಳಿದನು. ಕುಪಿತನಾದ ಗುರು ನನ್ನ ಸಾಲ ಹಿಂತಿರುಗಿಸದ ಲಂಬಾಣಿಗರಿಗೆ ಏಳು ತಲೆಮಾರಿನವರೆಗೆ ಬಡತನ ಬಾಧಿಸಲಿ ಎಂದು ಶಾಪ ಕೊಟ್ಟನು. ಶಾಪಗ್ರಸ್ಥರಾದ ಲಂಬಾಣಿಗರು ದೇಮಾ ಗುರುವಿನಲ್ಲಿಗೆ ಬಂದು ಸದ್ಯದ ಸ್ಥಿತಿಯಲ್ಲಿ ನಮಗೆ ಸಾಲ ತೀರಿಸಲು ಶಕ್ತಿಯಿಲ್ಲ. ಆದರೆ ಕಾಲಕ್ರಮೇಣ ಲಂಬಾಣಿಗರ ಪ್ರತಿಯೊಂದು ವಿವಾಹದಲ್ಲಿ ಗುರುವಿನ ಹೆಸರಿನಲ್ಲಿ ಒಂದು ರೂಪಾಯಿಯ ನಾಣ್ಯವನ್ನು ನೀಡುತ್ತಾ ಸಾಲ ತೀರಿಸುತ್ತೇವೆಂದು ಪ್ರಮಾಣ ಮಾಡಿದರು. ಇಂದಿಗೂ ಲಂಬಾಣಿಗರು ಮಾತಿಗೆ ತಪ್ಪದೇ ಪ್ರತಿಯೊಂದು ವಿವಾಹದಲ್ಲಿಯೂ ಗುರು ಕಾಣಿಕೆಯಾಗಿ ಒಂದು ರೂಪಾಯಿಯ ನಾಣ್ಯವನ್ನು ವರನು ಹೊದ್ದು ಕೊಂಡಿರುವ ಶಾಲಿನ ತುದಿಗೆ ಕಟ್ಟುತ್ತಾರೆ. ಈ ನಾಣ್ಯವನ್ನು ರಂಗಾರೆಡ್ಡಿ ಜಿಲ್ಲೆಯಲ್ಲಿ 'ಹೆಲೆರ ರಪಿಯಾ' ಎಂದು, ಗುಲಬರ್ಗಾ ಜಿಲ್ಲೆಯಲ್ಲಿ 'ಸಾಕೆರ ರಪಿಯಾ' ಅಥವಾ 'ಗುರುರ ರಪಿಯಾ' ಹಾಗೂ ಸೋಲಾಪುರ ಜಿಲ್ಲೆಯ ಲಂಬಾಣಿಗರು 'ಗರೂರ ರಪಿಯಾ' ಎಂದು ಕರೆಯುತ್ತಾರೆ.

ಬ್ರಾಹ್ಮಣನಿಂದ ಗರ್ಭವತಿಯಾದ ಕಸ್ತೂರಬಾಯಿ ಗಂಡು ಮಗುವಿಗೆ ಜನ್ಮವಿತ್ತಳು. ಜಾತಿ ಬಾಹಿರವಾಗಿ ಜನಿಸಿದ ಮಗುವನ್ನು ಕೊಂದು ಹಾಕಬೇಕೆಂದು ನಿರ್ಧರಿಸಿ, ಮಗುವನ್ನು ಎತ್ತಿಕೊಂಡು ಹೋಗಿ ವಡೇರ ಝಾಡ್ (ಆಲದ ಮರ) ಕೆಳಗೆ ಗುಂಡಿಯನ್ನು ಮಾಡಿ ಅದರಲ್ಲಿ ಮಗುವನ್ನು ಮಲಗಿಸಿದಾಗ, ಲಕ್ಷಾಂತರ ಸಂಖ್ಯೆಯಲ್ಲಿ ಕರಿ ಇರುವೆ ಬಂದು, ಸೇರಿರುವ ಜನರನ್ನು ಕಚ್ಚಲು ಪ್ರಾರಂಭಿಸಿದವು. ಆದರೆ ಮಗುವಿಗೆ ಒಂದು ಇರುವೆಯೂ ಕೂಡಾ ಕಚ್ಚಲಿಲ್ಲ. ಆಶ್ಚರ್ಯಚಕಿತರಾದ ಜನ ಈ ಮಗು ವಿಶೇಷ ಶಕ್ತಿ ಇರುವ ಮಗು ಎಂದು ತಿಳಿದು ಕೊಲ್ಲುವ ಯೋಚನೆಯನ್ನು ಕೈ ಬಿಟ್ಟರು ಎಂದು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿ ಹಿರಿಯರು ಹೇಳುತ್ತಾರೆ.

ಜಾತಿ ಬಾಹಿರವಾಗಿ ಹುಟ್ಟಿರುವ ಮಗುವಿನ ಕುಲಕ್ಕೆ ಯಾವ ಹೆಸರಿಡಬೇಕು? ಎಂಬ ಕುರಿತಾಗಿ ಸಾಕಷ್ಟು ಚರ್ಚೆಗಳಾದ ನಂತರ ವಡೇರ ಝಾಡ್ (ಆಲದ ಮರ) ಕೆಳಗೆ ಕುಳಿತು ಚರ್ಚಿಸುತ್ತಿರುವುದರಿಂದ ಈ ಮಗುವಿನ ಪಂಗಡಕ್ಕೆ 'ವಡತಿಯಾ' ಎಂದು ಹೆಸರಿಸೋಣ. ಮರದ ಮೇಲೆ ಕುಳಿತು ಕೂಗುತ್ತಿರುವ ಕಾಗೆಯೇ ಇದಕ್ಕೆ ಸಾಕ್ಷಿ ಎಂದು ನಿರ್ಣಯಿಸಲಾಯಿತು. ವಡತಿಯಾ ಪಾಡಾದ ಈ ಮಗುವಿಗೆ 'ಪಚನ ಭಾಜು' ಎಂದು ಹೆಸರಿಡಲಾಯಿತು. ಪಚನ ಭಾಜು ನಾನಾ, ನಾನಿ (ಅಜ್ಜ, ಅಜ್ಜಿ)ಯ ಮನೆಯಲ್ಲಿಯೇ ಬೆಳೆದ. ವಯಸ್ಸಿಗೆ ಬಂದ ನಂತರ ಭೂಕ್ಯಾ ಪಂಗಡದ ಕನ್ಯೆಯೊಂದಿಗೆ ವಿವಾಹ ಮಾಡಲಾಯಿತು. ಇದನ್ನು 'ವಡತಿಯಾ ಘರ ಮಂಡಗೋ' ಎಂದರೆ ವಡತಿಯಾ ಕುಲ ಉದ್ಭವವಾಯಿತು ಎಂದು ಹೇಳುತ್ತಾರೆ.

ಗೋರಬೋಲಿಯಲ್ಲಿ 'ವಡೆಗೋ' ಎಂದರೆ ಅತ್ಯಾಚಾರ ಎಂಬ ಅರ್ಥ ಧ್ವನಿಸುತ್ತದೆ. ಹೀಗಾಗಿ ವಡಗೋ ಎಂಬುದರಿಂದ ವಡತಿಯಾ ಎಂಬ ಪಾಡಾ ಉದ್ಭವವಾಗಿರಬಹುದು ಎಂದೆನಿಸುತ್ತದೆ. ಅಲ್ಲದೇ ಬ್ರಾಹ್ಮಣನಿಂದಾಗಿ ವಡತಿಯಾ ಪಾಡಾವು ಉದ್ಭವವಾಗಿರುವದರಿಂದ 'ಬೋಮ್ಮನ ಪಾಡಾ' ವಡತಿಯಾ ಎಂತಲೂ ಕರೆಯುತ್ತಾರೆ. ವಡತಿಯಾ ಪಾಡಾದಲ್ಲಿ ಹನ್ನೆರಡು ಉಪ ಪಂಗಡಗಳಿವೆ

ಇವುಗಳನ್ನು ಬಾರಾ ಪಾಡಾ ವಡತಿಯಾ ಎಂದು ಕರೆಯುತ್ತಾರೆ. ವಡತಿಯಾ ಪಾಡಾವು ಬ್ರಾಹ್ಮಣನಿಗೆ ಹುಟ್ಟಿಕೊಂಡಿದ್ದರಿಂದ ಇವರು ವಿವಾಹದಲ್ಲಿ ಪುರೋಹಿತರಾಗಿ ಕಾರ್ಯನೆರವೇರಿಸುತ್ತಾರೆ.

ಲಂಬಾಣಿಗರಲ್ಲಿ ಜಾತ್ ಮತ್ತು ಭೂಕ್ಯಾ ಎಂಬ ಎರಡು ಪ್ರಮುಖ ಪಂಗಡಗಳಿದ್ದು, ಚವ್ಹಾಣ, ಪವಾರ, ಚಿನ್ನಾ ರಾಠೋಡ, ವಡತಿಯಾ ಈ ಪಾಡಾಗಳು ಜಾತ್ ಗುಂಪಿಗೆ ಸೇರುತ್ತವೆ. ರಾಠೋಡ ಪಾಡಾ ಭೂಕ್ಯಾ ಗುಂಪಿಗೆ ಸೇರುತ್ತದೆ. ಜಾತ್ ಮತ್ತು ಭೂಕ್ಯಾಗಳಲ್ಲಿ ವೈವಾಹಿಕ ಸಂಬಂಧಗಳು ನಿರಾತಂಕವಾಗಿ ಸಾಗುತ್ತವೆ. ಅದರಂತೆ ಜಾತ್ ಗುಂಪಿನ ಪಾಡಾಗಳಲ್ಲಿ ವೈವಾಹಿಕ ಸಂಬಂಧಗಳು ನಡೆಯುತ್ತವೆ. ಹೀಗಾಗಿ ಇವರನ್ನು "ಬೆಸಗಾರ ಭಾಯಿ ನಾತೇರ ಸಗಾವತ" (ಅಣ್ಣತಮ್ಮಂದಿರು ಹೌದು ಸಂಬಂಧಿಗಳು ಹೌದು) ಎಂದು ಕರೆಯುತ್ತಾರೆ. ಆದರೆ ಜಾತ್ ಗುಂಪಿನ ಚವ್ಹಾಣ ಮತ್ತು ಪವಾರ ಪಾಡಾಗಳಲ್ಲಿ ವೈವಾಹಿಕ ಸಂಬಂಧ ನಿಷಿದ್ಧವಾಗಿದೆ. ಲಂಬಾಣಿಗರಲ್ಲಿ ವೈವಾಹಿಕ ಸಂಬಂಧಗಳಿಗಾಗಿ ಪಾಡಾಗಳು ಮುಖ್ಯವೇ ಹೊರತು ಪಾಡಾದ ಒಳಪಂಗಡಗಳಲ್ಲ. ಹೀಗಾಗಿ ಈ ಸಮುದಾಯದಲ್ಲಿ ಒಳಪಿಂಡ ಎಂದರೆ ಸಗೋತ್ರ ವಿವಾಹವು ನಿಷಿದ್ಧವಾಗಿದೆ.

**ಲಂಬಾಣಿ ಮತ್ತು ಅದರ ಸಮನಾರ್ಥಕ ಪದಗಳ ಮೂಲ ಹಾಗೂ ಉತ್ಪತ್ತಿ**

ಲಂಬಾಣಿಗರು ದೇಶದಾದ್ಯಂತ ಪಸರಿಸಿರುವ ಬುಡಕಟ್ಟು ಸಮುದಾಯವಾಗಿದೆ. ಇವರು ಗ್ರಾಮಗಳಿಂದ ಅನತಿ ದೂರದ ಗುಡ್ಡಗಾಡುಗಳಲ್ಲಿ, ಹರಿಯುವ ನದಿಯ ಪಕ್ಕದಲ್ಲಿ, ಎತ್ತರದ ಭೂ ಪ್ರದೇಶದಲ್ಲಿ ನಾವು ನಮ್ಮವರು ಎಂಬ ಭಾವನೆಯಿಂದ ತಮ್ಮದೇ ಆದ ತಾಂಡಾಗಳನ್ನು ನಿರ್ಮಿಸಿಕೊಂಡು ಬದುಕುತ್ತಿದ್ದಾರೆ. ಬೇರೆ ಬೇರೆ ಪ್ರಾಂತ್ಯಗಳಿಗನುಗುಣವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ಈ ಜನ ಸಮೂಹದ ಹೆಸರಿನ ಮೂಲ ಹಾಗೂ ಉತ್ಪತ್ತಿಯ ಬಗ್ಗೆ ಹಲವಾರು ವಿದ್ವಾಂಸರು ವಿಭಿನ್ನ ರೀತಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಲಂಬಾಣಿಗರು, ಲಂಬಾಣಿ, ಬ್ರಿಂಜಾರಿ, ಅಥವಾ ಬಂಜಾರಿ, ಬೊರ್ಪಾರಿ, ಸುಕಾಲಿ ಅಥವಾ ಸುಗಾಲಿ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಸುಗಾಲಿ ಎಂಬ ಪದ ಸುಪಾರಿ ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಸುಪಾರಿ ಎಂದರೆ ಅಡಿಕೆ ಎಂಬ ಅರ್ಥ ಕೊಡುತ್ತದೆ. ಲಂಬಾಣಿಗರ ಪೂರ್ವಜರು ಅಡಿಕೆಯ ವ್ಯಾಪಾರವನ್ನು ಮಾಡುತ್ತಿದ್ದರು. ಬಂಜಾರರು ವ್ಯಾಪಾರವನ್ನು ಮಾಡುವ ಬುಡಕಟ್ಟು ಜನ ವರ್ಗವಾಗಿದ್ದು, ಭಾರತದ ಪಶ್ಚಿಮ ಹಾಗೂ ದಕ್ಷಿಣ ಭಾಗಗಳಲ್ಲಿ ಹೆಚ್ಚಾಗಿ ಗೋಚರಿಸುತ್ತಾರೆ. ಈ ಬುಡಕಟ್ಟು ಸಮೂಹವು ಲಭಾನಿ ಹಾಗೂ ಬಂಜಾರಾ ಎಂಬ ಹೆಸರುಗಳಿಂದ ಗುರುತಿಸಿಕೊಳ್ಳುತ್ತದೆ. ಬಂಜಾರಿ ಬ್ರಿಂಜಾರಿ, ಸುಕಾಲಿ ಲಭಾನಿ, ಲದಣಿ, ಲಬಾನಾ, ಲಂಬಾಡಿ ಮತ್ತು ಲಂಭಾನಿ ಎಂಬ ಹೆಸರುಗಳಿಂದಲೂ ಈ ಜನವರ್ಗವು ಕರೆಯಿಸಿಕೊಳ್ಳುತ್ತದೆ. (ಎಡ್ಗರ ಥರ್ಸ್ಟನ್: ೧೯೦೯:೨೦೮)

ಬಂಜಾರಾ ಎಂಬ ಶಬ್ದವು ಸಂಸ್ಕೃತದ ವನಿಜ ಎಂಬ ಪದದಿಂದ ಉತ್ಪತ್ತಿಯಾಗಿದೆ. ವನಿಜ ಎಂದರೆ ವ್ಯಾಪಾರ ಎಂಬ ಅರ್ಥವನ್ನು ನೀಡುತ್ತದೆ. ಅದೇ ರೀತಿ ಬನಿಜಾ ಮತ್ತು ಬನಿಜಾರಾ

(ವ್ಯಾಪಾರ) ಎಂಬ ಶಬ್ದಗಳು ಕೂಡಾ 'ವನಿಜ' ಪದದಿಂದಲೇ ಬಂದಿವೆ. ಅಲ್ಲದೇ ಬಂಜಾರಾ ಎಂಬುದು 'ವನಚರ' ದಿಂದ ಹುಟ್ಟಿಕೊಂಡಿದ್ದು ಅರಣ್ಯದಲ್ಲಿ ತಿರುಗುವವನು ಎಂದು ಅರ್ಥವಾಗುತ್ತದೆ. (ಅಯ್ಯರ ಎಲ್ ಕೆ ಎ: ೧೯೩೫:೧೪೦)

ಬಂಜಾರಾ ಬುಡಕಟ್ಟಿನ ಮೂಲ ಉದ್ಯೋಗವು ದವಸ ಧಾನ್ಯಗಳನ್ನು ಸಾಗಿಸುವದು ಹಾಗೂ ಯುದ್ಧ ಭೂಮಿಯಲ್ಲಿ ಸೈನಿಕರಿಗೆ ಆಹಾರ ಪೂರೈಸುವದಾಗಿತ್ತು. ಈ ಬುಡಕಟ್ಟಿನ ಹೆಸರು ಸಂಸ್ಕೃತದ ವನಿಜಾ ಅಥವಾ ವಾಣಿಜ್ಯಕಾರ ಎಂಬ ಶಬ್ದದಿಂದ ಅವಿರ್ಭಾವಗೊಂಡಿದೆ. ವ್ಯಾಪಾರಿ ಎಂಬುದು ಈ ಶಬ್ದದ ಅರ್ಥವಾಗಿದೆ. ಆದ್ದರಿಂದ ಬಂಜಾರಾ ಎಂಬ ಪದ ಬನಿಜ್ಜಕಾರ್ ಎಂಬುದರೊಂದಿಗೆ ಸಂಬಂಧವನ್ನು ಹೊಂದಿದೆ. (ಕ್ರೂಕ್:೧೯೪೦:೧೫೧)

ಸಾಮಾನ್ಯವಾಗಿ ಲಂಬಾಣಿಗರಲ್ಲಿ "ಬಂಜಾರಾ" ಪದ ಪ್ರಯೋಗ ಹೆಚ್ಚು ಹೆಚ್ಚಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಹಾಗೆಯೇ ಲಂಬಾಣಿ ಎಂಬುದು ಇವರ ಜಾತಿಗೆ ಸಾಮಾನ್ಯವಾಗಿ ವಾಡಿಕೆಯಾಗಿರುವ ಹೆಸರು. ಬಂಜಾರ ಅಥವಾ ಬಣಜಾರ ಎಂಬುದು ಇವರು ಮೂಲತ: ವರ್ತಕರಾಗಿದ್ದರೆಂಬುದನ್ನು ಸೂಚಿಸುತ್ತದೆ. ಬಂಜಾರಾ ಸಂಸ್ಕೃತದ 'ವಾಣಿಜ್ಯ' ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಪೂರ್ವದಲ್ಲಿ ಇವರು ವ್ಯಾಪಾರವನ್ನು ಕೈಗೊಂಡು ದೇಶ ವಿದೇಶಗಳಲ್ಲಿ ಸಂಚರಿಸುತ್ತಿದ್ದರಿಂದ ಇವರನ್ನು ಬಂಜಾರ, ಬಣಜಾರಾ ಎಂಬ ಹೆಸರುಗಳಿಂದ ಕರೆದರು. (ಖಂಡೋಬಾ ಪಿ ಕೆ: ೧೯೯೧:೯-೧೦)

ಬಂಜಾರರು ಅಲೆಮಾರಿಗಳಾಗಿದ್ದು, ಕಾಡುಗಳಲ್ಲಿ ವಾಸಿಸುತ್ತಾರೆ. ಇವರು ಪ್ರದೇಶದಿಂದ ಪ್ರದೇಶಕ್ಕೆ ಅಲೆದಾಡುತ್ತಾರೆ ಇದನ್ನು ಸಂಸ್ಕೃತದಲ್ಲಿ 'ವನಚರ' ಎಂದು ಕರೆಯಲಾಗುತ್ತದೆ. ಕಾಲಾಂತರದಲ್ಲಿ ವನಚರ ಅಥವಾ ಬನಚಾರ, ಬಂಜಾರಾ ಆಗಿ ಪರಿವರ್ತನೆ ಹೊಂದಿರಬಹುದು.(ಕಮಲಾ ಮೋಹನ ರಾವ್ ಪಿ: ೧೯೫೦:೧೭)

ಲಮಾಣಿ ಅಥವಾ ಲಂಬಾಣಿ ಎಂಬುದು ಸಂಸ್ಕೃತದ ಲವಣ(ಉಪ್ಪು) ಶಬ್ದದಿಂದ ಬಂದುದಾಗಿದೆ. ಲವಣ ಪದ ಅಪಭ್ರಂಶಗೊಂಡು ಲಮಣ ಇದರ ವಿಶೇಷಣ ಲಮಾಣಿ. ಪೂರ್ವದಲ್ಲಿ ಈ ಜನರು 'ಲವಣ'ದ ವ್ಯಾಪಾರವನ್ನು ಮಾಡುತ್ತಿದ್ದರಿಂದ ಲವಣಗರೆಂದು ಮುಂದೆ ಅಪಭ್ರಂಶಗೊಂಡು ಲಮಾಣಿಗ, ಲಂಬಾಣಿಗ, ಲಂಬಾಡಿಗರು ಎಂದು ನಿಷ್ಪತ್ತಿ ಹೊಂದಿ ಅವೇ ಹೆಸರುಗಳಿಂದ ಕರೆಯಲ್ಪಟ್ಟರು. ಲಂಬಾಣಿ ಅಥವಾ ಲಂಬಾಡಿ ಎಂಬುದು ಲಮಾನೆ ಅಥವಾ ಲಭಾನೆ ಎಂಬ ಪದದ ಇನ್ನೊಂದು ರೂಪ. ಲಭಾನೆ ಎಂಬುದು ಬಣಜಾರೆ ಜಾತಿಯ ಪ್ರಭೇದಗಳಲ್ಲಿ ಒಂದಾಗಿದೆ. ಎಂದು ಅಭಿಪ್ರಾಯಪಟ್ಟಿದ್ದಾರೆ. (ನಂಜುಂಡಯ್ಯ ಎಚ್ ವಿ ಮತ್ತು ಅನಂತಕೃಷ್ಣ ಅಯ್ಯರ್ ಎಲ್ ಕೆ: ೧೯೨೮:೧೩೭)

ಆಂಧ್ರ ಪ್ರದೇಶ, ಮದ್ರಾಸ್, ಹಾಗೂ ಕೇರಳ ಪ್ರದೇಶಗಳಲ್ಲಿ ಲಂಬಾಣಿಗರನ್ನು ಸುಗಾಲಿ, ಸುಕಾಳಿ, ಸುಕಾಲಿ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ದಕ್ಷಿಣ ರಾಜ್ಯಗಳಲ್ಲಿ ಸುಕಾಲಿ

ಎಂಬುದು ದನಗಾಯುವವರಿಗೆ ಅಥವಾ ಸಾಕುವವರಿಗಾಗಿ ಬಳಸುವ ಪದವಾಗಿದೆ. ತೆಲಗು ಭಾಷೆಯಲ್ಲಿ ಸುಗಾಲಿ ಎಂದರೆ ಉತ್ತಮ ಆಕಳುಗಳನ್ನು ಸಾಕುವವನು ಎಂದರ್ಥ. ಈ ಜನರು ಮೊದಲಿನಿಂದಲೂ ಹೆಚ್ಚಾಗಿ ಗೋಪಾಲಕರಾಗಿರುವುದು ಕಂಡುಬರುತ್ತದೆ. (ಖಂಡೋಬಾ ಪಿ ಕೆ: ೨೦೦೦:೭).

ಬಂಜಾರಾ ಎಂಬ ಪದವು ಪರ್ಶಿಯನ್‌ನ 'ಬೇರಿಂಜ್ ಅರಿಂದ' ಎಂಬ ಶಬ್ದಗಳಿಂದ ಅವಿರ್ಭಾವಗೊಂಡಿದ್ದು, ಬೇರಿಂಜ್ ಅರಿಂದ ಎಂದರೆ ಅಕ್ಕಿಯ ವ್ಯಾಪಾರಿಗಳು ಎಂಬ ಅರ್ಥ ನೀಡುತ್ತದೆ. ಬಂಜಾರರ ಮತ್ತೊಂದು ಹೆಸರು ಲಮಾಣಿ, ಈ ಪದವು ಸಂಸ್ಕೃತದ ಲವಣ ಎಂಬ ಪದದಿಂದ ಉತ್ಪತ್ತಿ ಹೊಂದಿದೆ. ಲವಣ ಎಂದರೆ ಉಪ್ಪು ಎಂದರ್ಥವಾಗುತ್ತದೆ. ವಂಜಾರಿ ಎಂಬ ಪದವು ವನ ಎಂಬ ಶಬ್ದದಿಂದ ಬಂದಿದೆ. ವನ ಎಂದರೆ ಕಾಡು ಅಥವಾ ಅರಣ್ಯ ಎಂಬ ಅರ್ಥ ಧ್ವನಿಸುತ್ತದೆ. (ಸೈಯದ ಸಿರಾಜ್ ಉಲ್ ಹಸನ: ೧೯೪೦:೧೭)

'ಬನಜಾರಾ' ಎಂಬ ಪದವು ಸಂಸ್ಕೃತದ ವಾಣಿಜ್ಯ ಶಬ್ದದಿಂದ ಅವಿರ್ಭಾವಗೊಂಡಿದೆ. ಇದರರ್ಥ ವ್ಯಾಪಾರವೆಂದಾಗುತ್ತದೆ. ಹೀಗೆ ವ್ಯಾಪಾರ ಮಾಡುವ ಜನಸಮೂಹವನ್ನು ಬನಜಾರಾ ಎಂದು ಕರೆಯಲಾಗಿದೆ. ಈ ಜನರು ಎತ್ತುಗಳ ಮೇಲೆ ವಸ್ತುಗಳನ್ನು ಹೇರಿಕೊಂಡು ವ್ಯಾಪಾರ ಮಾಡುವುದಕ್ಕೆ 'ಜಬ ಲಾದ ಚಲೇ ಬನಜಾರಾ' ಎಂದು ಕರೆಯುತ್ತಾರೆ. ಇದು ಸಂಸ್ಕೃತದ ವಾಣಿಜ್ಯ ಪದದಿಂದ ಉತ್ಪತ್ತಿ ಹೊಂದಿದೆ. ಈ ಸಮುದಾಯವನ್ನು ಗುರುತಿಸಲು ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಬಳಸುತ್ತಿರುವ ಪದಗಳು ಸಮಾನವಾದ ಅರ್ಥವನ್ನು ನೀಡುತ್ತವೆ. ಉದಾಹರಣೆಗೆ ಗುಜರಾತಿಯಲ್ಲಿ ಬನಜಾರಾ, ರಾಜಸ್ಥಾನಿಯಲ್ಲಿ ಬಣಜಾರಾ, ಮರಾಠಿಯಲ್ಲಿ ಬಂಜಾರಾ ಅಥವಾ ವಂಜಾರಿ (ಪವಾರ ರಾಮಕೋಟಿ ವಿ: ೨೦೧೨:೨೩).

ವ್ಯಾಪಾರದ ವೃತ್ತಿಗೆ ಸಂಸ್ಕೃತದಲ್ಲಿ ವಾಣಿಜ್ಯ, ಬಂಜಾರಿ ಭಾಷೆಯಲ್ಲಿ ವಣಜೆ ಎಂದೂ ಮರಾಠಿ ಭಾಷೆಯಲ್ಲಿ ವಂಜಾರಿ, ಗುಜರಾತಿಯಲ್ಲಿ ವನಚಾರ, ರಾಜಸ್ಥಾನಿಯಲ್ಲಿ ಬಣಜಾರ, ಉರ್ದು ಭಾಷೆಯಲ್ಲಿ ಬಂಜಾರೆ, ಹಿಂದಿಯಲ್ಲಿ ಬಂಜಾರ ಎಂಬ ವೃತ್ತಿ ಸೂಚಕ ಪದಗಳಾಗಿವೆ. ಆಯಾ ಕ್ಷೇತ್ರದ ಭಾಷೆಗಳಿಗೆ ಅನುಗುಣವಾಗಿ ಪರ್ಯಾಯ ಪದಗಳಾಗಿವೆ. ಬಂಜಾರರೆಂಬ ಅನ್ವರ್ಥನಾಮ ಸುಮಾರು ಎರಡು ಸಾವಿರ ವರ್ಷಗಳ ಹಿಂದಿನದಿರಬಹುದೆಂದು ಇತಿಹಾಸ ಪುಟಗಳಿಂದ ತಿಳಿದು ಬರುವುದು. ೧೬ನೇ ಶತಮಾನದ ಉಗಮ, ಬ್ರಿಟಿಷರ ಆಗಮನ, ಬ್ರಿಟಿಷರ ವ್ಯಾಪಾರದಲ್ಲಾದ ಆಂದೋಳನದಿಂದ ಬಂಜಾರರು ವ್ಯಾಪಾರ ಬಿಟ್ಟು ಬೇರೆ ಬೇರೆ ವೃತ್ತಿಗೆ ತೊಡಗಿದರು. ಇದರಿಂದ ವೃತ್ತಿ ಸೂಚಕ ಪದಗಳಿಂದ ಕರೆಯಲ್ಪಟ್ಟು ಪಂಗಡದಲ್ಲಿ ಒಡಕು ಉಂಟಾಯಿತು. (ನಾಯಕ ಬಾಲಾ ಕೆ: ೧೯೯೬:೮).

ಈ ಮೇಲಿನ ಎಲ್ಲಾ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದಾಗ ಲಂಬಾಣಿಗರು ಮೂಲತಃ ವ್ಯಾಪಾರಿಗಳಾಗಿದ್ದರು ಎಂಬುದು ಸ್ಪಷ್ಟವಾಗುತ್ತದೆ. ತಮ್ಮ ಅಸಂಖ್ಯಾತ ರಾಸುಗಳ ಮೇಲೆ ಅಕ್ಕಿ,

ಉಪ್ಪು, ಅಡಿಕೆ ಮುಂತಾದ ವಸ್ತುಗಳನ್ನು ಹೇರಿಕೊಂಡು ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುತ್ತಾ, ವ್ಯಾಪಾರ ಮಾಡುತ್ತಾ, ಜೀವನ ಸಾಗಿಸುತ್ತಿರುವ ಲಂಬಾಣಿಗರನ್ನು ಪ್ರಾಂತೀಯ ಭಾಷೆಗಳ ಪ್ರಭಾವದಿಂದಾಗಿ ಲಂಬಾಡಿ, ಲಂಬಾಣಿ, ಲಮಾನ, ಸುಗಾಲಿ, ಸುಕಾಲಿ ಬಂಜಾರಾ ಹೀಗೆ ಮುಂತಾದ ವೃತ್ತಿ ಅನ್ವರ್ಥಕ ನಾಮಧ್ಯೇಯಗಳಿಂದ ಕರೆಯುತ್ತಾರೆ. ವಿಭಿನ್ನವಾಗಿರುವ ಈ ಎಲ್ಲಾ ಹೆಸರುಗಳು ಸಮಾನವಾದ ಅರ್ಥವನ್ನು ಧ್ವನಿಸುತ್ತವೆ.

ಲಂಬಾಣಿಗರು ದೇಶದ ಮೂಲೆ ಮೂಲೆಗಳಲ್ಲಿ ತಮ್ಮ ಅಪಾರ ಸಂಖ್ಯೆಯ ರಾಸುಗಳ ಮೇಲೆ ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುತ್ತಾ ವ್ಯಾಪಾರ ಮಾಡುತ್ತಿದ್ದರು. ವ್ಯಾಪಾರವೇ ಇವರ ಮೂಲ ಕಸುಬಾಗಿತ್ತು. ಆದರೆ ಭಾರತಕ್ಕೆ ಬಂದ ಬ್ರಿಟಿಷರು ಕಾಲಕ್ರಮೇಣವಾಗಿ ಸಾರಿಗೆ ಸಂಪರ್ಕ ವ್ಯವಸ್ಥೆಯನ್ನು ಜಾರಿಗೆ ತಂದರು. ೧೮೫೮ರಲ್ಲಿ ಪ್ರಾರಂಭವಾದ ರೈಲ್ವೆ ವ್ಯವಸ್ಥೆ ಲಂಬಾಣಿಗರ ವ್ಯಾಪಾರವನ್ನು ಬುಡಮೇಲು ಮಾಡಿತು. ರಾಸುಗಳ ಮೇಲೆ ನಡೆಯುತ್ತಿದ್ದ ಲಂಬಾಣಿಗರ ವ್ಯಾಪಾರ ಬ್ರಿಟಿಷರೊಂದಿಗೆ ಪೈಪೋಟಿಯನ್ನು ಮಾಡಲಾಗದೆ ಕ್ಷೀಣಿಸಲಾರಂಭಿಸಿ ಕ್ರಮೇಣ ನಿಂತು ಹೋಯಿತು. ಇದರಿಂದ ಜೀವನ ದುಸ್ತರವಾಯಿತು. ಹೀಗಾಗಿ ಜೀವನವನ್ನು ಕಟ್ಟಿಕೊಳ್ಳಲು ಹೊಸ ಬಗೆಯ ಉದ್ಯೋಗದತ್ತ ದೃಷ್ಟಿ ಹೊರಳಿಸುವ ಅನಿವಾರ್ಯತೆಯಿಂದ ಕೃಷಿಯತ್ತ ವಾಲಿದರು. ಈ ಸ್ಥಿತಿಯನ್ನು ಲಂಬಾಣಿಗರ ಹಾಡುಗಳಲ್ಲಿ ಕಾಣಬಹುದಾಗಿದೆ.

*"ಆಗಸೇರ ಸೀಳಿ ಬುಂದ್ ಧರತಿ ಝುಲಚ*
*ಆಯಬುರೇ ಆಯಬು ಲದಣಿ ಬುಡಜೋ*
*ಲೋವೇನ ಲಾಕಡೆರೋ ಗಾಂತೋ ಬಾಜಜಾಯ"*

**ಅರ್ಥ:**

ಆಕಾಶದಿಂದ ಬೀಳುವ ಮಳೆ ಹನಿ ಭೂಮಿಯನ್ನು ತಲುಪಿದೆ. ಅಯ್ಯಯ್ಯೋ ವ್ಯಾಪಾರ ಮರೆಯಾಗುತ್ತಿದೆ. ಕಬ್ಬಿಣ ಮತ್ತು ಕಟ್ಟಿಗೆಯ ಸಂಬಂಧ ಬೆಳೆಯುತ್ತಿದೆ ಎಂಬ ಅರ್ಥವನ್ನು ನೀಡುವ ಈ ಹಾಡು ಲಂಬಾಣಿಗರ ಅಂತರಾಳದ ನೋವನ್ನು ಬಿಂಬಿಸುತ್ತದೆ. ಹೀಗೆ ಅನಿವಾರ್ಯವಾಗಿ ವ್ಯಾಪಾರವನ್ನು ಬಿಟ್ಟು ಕೃಷಿಯನ್ನು ಆಯ್ದುಕೊಂಡ ಲಂಬಾಣಿಗರಿಗೆ ಕೃಷಿಯು ಪ್ರಾಚೀನ ಕಾಲದ ಉದ್ಯೋಗವಲ್ಲ. ಏಕೆಂದರೆ ಕೃಷಿಯಲ್ಲಿ ಬಳಸುವ ಬಹುಪಾಲು ಸಾಧನಗಳಿಗೆ ಲಂಬಾಣಿಗರು ತಾವು ವಾಸಿಸುವ ಆಯಾ ಪ್ರಾಂತದ ಶಬ್ದಗಳನ್ನೆ ಬಳಸುತ್ತಾರೆ. ಉದಾಹರಣೆಗೆ ಕರ್ನಾಟಕದ ಲಂಬಾಣಿಗರು ಕನ್ನಡದ ಪದಗಳನ್ನು, ಮಹಾರಾಷ್ಟ್ರದವರು ಮರಾಠಿ ಪದಗಳನ್ನು, ಆಂಧ್ರ ಪ್ರದೇಶದವರು ತೆಲಗು ಪದಗಳನ್ನು ಬಳಸುತ್ತಾರೆ. ಇದರಿಂದಾಗಿ ಕೃಷಿ ಲಂಬಾಣಿಗರ ಮೂಲ ಉದ್ಯೋಗವಲ್ಲ ಎಂಬುದು ಸ್ಪಷ್ಟವಾಗುತ್ತದೆ. ಲಂಬಾಣಿಗರು ಆರಂಭದಲ್ಲಿ ಡೊಂಬರಾಟ ನಂತರ ವ್ಯಾಪಾರ ಆನಂತರ ಕೃಷಿ ಹೀಗೆ ತಮ್ಮ ಉದ್ಯೋಗದಲ್ಲಿ ರೂಪಾಂತರ ಮಾಡಿಕೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

### ೩.೨. ಲಂಬಾಣಿಗರ ಚಾರಿತ್ರಿಕ ಹಿನ್ನೆಲೆ

ಪ್ರಪಂಚದಲ್ಲಿ ವಾಸಿಸುತ್ತಿರುವ ಪ್ರತಿಯೊಂದು ಬುಡಕಟ್ಟಿಗೆ ಅದರದೇ ಆದ ಐತಿಹಾಸಿಕ ಪರಂಪರೆ ಇರುತ್ತದೆ. ಆದರೆ ಪ್ರತಿಯೊಂದು ಬುಡಕಟ್ಟಿನ ಇತಿಹಾಸವನ್ನು ಸಂಗ್ರಹಿಸುವದು ಸುಲಭದ ಕೆಲಸವಲ್ಲ. ಅವುಗಳ ಇತಿಹಾಸವನ್ನು ಅರಿತುಕೊಳ್ಳಬೇಕಾದರೆ ಐತಿಹಾಸಿಕ ಆಧಾರಗಳ ಪರಿಶೀಲನೆ ಅಗತ್ಯ. ಆಧಾರಗಳೇ ಇತಿಹಾಸದ ಜೀವಾಳವಾದ್ದರಿಂದ ಆಧಾರಗಳಿಲ್ಲದೆ ಇತಿಹಾಸವನ್ನು ಕಟ್ಟಿ ಕೊಡಲು ಸಾಧ್ಯವಿಲ್ಲ.

ಭಾರತದಲ್ಲಿ ವಾಸಿಸುತ್ತಿರುವ ಹಲವಾರು ಬುಡಕಟ್ಟು ಸಮುದಾಯಗಳಲ್ಲಿ ಒಂದಾದ ಲಂಬಾಣಿ ಸಮುದಾಯವು ತನ್ನದೇ ಆದ ಇತಿಹಾಸವನ್ನು ಹೊಂದಿರುವದು ಸ್ಪಷ್ಟವಾಗಿದ್ದು, ಅವರಾಡುವ ಗೋರಬೋಲಿ ಭಾಷೆಗೆ ಲಿಪಿಯಿರದ ಕಾರಣ ಲಿಖಿತ ರೂಪದ ಐತಿಹಾಸಿಕ ಆಧಾರಗಳಿಲ್ಲದೆ ಅದು ಕೇವಲ ಮೌಖಿಕವಾಗಿ ಕಂಡುಬರುತ್ತದೆ. ಆದ್ದರಿಂದ ಲಂಬಾಣಿಗರ ಬಗ್ಗೆ ಉಲ್ಲೇಖವಿರುವ ಲಿಖಿತ ದಾಖಲೆಗಳನ್ನು ಬೇರೆ ಬೇರೆ ಭಾಷೆಗಳಲ್ಲಿ ಹುಡುಕುವದು ಅಗತ್ಯವಾಗಿದೆ. ಲಂಬಾಣಿಗರ ಇತಿಹಾಸದ ಕುರಿತಾಗಿ ಲಭ್ಯವಿರುವ ಲಿಖಿತ ಆಧಾರಗಳಲ್ಲಿ ಪ್ರಮುಖವಾದವುಗಳು ಹೀಗಿವೆ.

ಸಿಂಧೂಬಯಲಿನ ನಾಗರಿಕತೆಯ ಹರಪ್ಪ ಮತ್ತು ಮಹೆಂಜೋದಾರೋಗಳಲ್ಲಿ ದೊರೆತ ಅವಶೇಷಗಳ ಆಧಾರದ ಮೇಲೆ ಈ ನಾಗರಿಕತೆಯು ಕ್ರಿಪೂ. ೪೫೦೦ ಕಾಲಾವಧಿಯಲ್ಲಿ ಪ್ರಬುದ್ಧ ನಾಗರಿಕತೆಯಾಗಿತ್ತು ಎಂದು ಹಲವಾರು ಇತಿಹಾಸಕಾರರು ಸಮರ್ಥಿಸಿದ್ದಾರೆ. ಅದರಂತೆ ನಾಯಕ ಬಾಲಾ ಕೆ ಅವರು 'ಬಂಜಾರಾ ಧರ್ಮದ ಸಾಮಾನ್ಯ ಜ್ಞಾನ' ಎಂಬ ಗ್ರಂಥದಲ್ಲಿ "ಹರಪ್ಪ ಪಟ್ಟಣದಲ್ಲಿ ಆಗಿನ ಕಾಲದಲ್ಲಿ ಹೆಣ್ಣು ಮಕ್ಕಳು ಧರಿಸುತ್ತಿದ್ದ ಒಡವೆಗಳನ್ನು ಮಾಡುವ ಕಾರ್ಖಾನೆಯ ಅವಶೇಷಗಳು ಸಿಕ್ಕಿವೆ. ಒಡವೆಗಳ ನಮೂನೆಗಳನ್ನು ಕರಾಚಿಯಲ್ಲಿರುವ ವಸ್ತು ಸಂಗ್ರಹಾಲಯದಲ್ಲಿ ಇಟ್ಟಿದ್ದಾರೆ. ಈ ಒಡವೆಗಳ ನಮೂನೆಗಳನ್ನು ಈಗಲೂ ಹಳ್ಳಿಗಾಡಿನ ಬಂಜಾರ ಹೆಣ್ಣು ಮಕ್ಕಳು ಧರಿಸುತ್ತಾರೆ" (ನಾಯಕ ಬಾಲಾ ಕೆ: ೧೯೯೬:೩). ಎಂದು ಹೇಳುವ ಮೂಲಕ ಲಂಬಾಣಿಗರು ಇಂದು ಧರಿಸುವ ಒಡವೆಗಳು ಸಿಂಧೂ ಬಯಲಿನ ನಾಗರಿತೆಯಲ್ಲಿನ ಹೆಣ್ಣುಮಕ್ಕಳು ಬಳಸುತಿದ್ದರು. ಹೀಗಾಗಿ ಈ ಒಡವೆಗಳು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿವೆ ಹಾಗೂ ಈ ಒಡವೆಗಳನ್ನು ನಿರಂತರವಾಗಿ ಧರಿಸುತ್ತಾ ಬಂದ ಒಂದು ಪಂಗಡದ ಜನರನ್ನೆ ಲಂಬಾಣಿಗರೆಂದು ಕರೆದಿರಬಹುದು.

ಲಂಬಾಣಿಗರು ಮೂಲತಃ ವ್ಯಾಪಾರಿಗಳಾಗಿದ್ದರೆಂಬುದು ಕ್ರಿಪೂ. ನಾಲ್ಕನೇ ಶತಮಾನದ ಇತಿಹಾಸದ ಲಿಖಿತ ಆಧಾರದಿಂದ ತಿಳಿದುಬರುತ್ತದೆ. "ಕ್ರಿಪೂ. ನಾಲ್ಕನೆಯ ಶತಮಾನದಲ್ಲಿ ಅಲೆಗ್ಸಾಂಡರ್ ಇಂಡಿಯಾ ದೇಶದ ಮೇಲೆ ದಂಡೆತ್ತಿ ಬರುತ್ತಾನೆ. ಪುರರವನಿಗೂ ಅಂಬಿಗೂ ಇದ್ದ ದ್ವೇಷದಿಂದ ಅಲೆಗ್ಸಾಂಡರ್ ಪುರರವನನ್ನು ಸೋಲಿಸಿದ ನಂತರ ಅವನ ರಾಜ್ಯವನ್ನು ಅವನಿಗೆ ವಹಿಸಿ ಅಂಬಿಯನ್ನು ಸೆರೆಯಲಿಟ್ಟು ಸೆಲ್ಯೂಕಸ್ ಎಂಬ ರಾಯಭಾರಿಯನ್ನು ತನ್ನ ಪ್ರತಿನಿಧಿಯಾಗಿ ಬಿಟ್ಟು ಹೋಗುತ್ತಾನೆ. ಆನಂತರ ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಮೆಗಸ್ತಾನೀಸ್‌ನನ್ನು ತನ್ನ

ಪ್ರತಿನಿಧಿಯಾಗಿಟ್ಟು ಸೆಲ್ಯೂಕಸ್ ತನ್ನ ರಾಜ್ಯಕ್ಕೆ ಹೋಗುತ್ತಾನೆ. ಮೆಗಸ್ತಾನಿಸ್ ಉತ್ತಮ ಬರಹಗಾರ. ಇವನ ಬರವಣಿಗೆಯಿಂದ ಚಂದ್ರಗುಪ್ತ ಮೌರ್ಯನ ಕಾಲದಲ್ಲಿದ್ದ ಬಂಜಾರರ ವ್ಯಾಪಾರ, ಜನಜೀವನ, ಕಲೆಗಳ ವಿಚಾರದಲ್ಲಿ ಉತ್ತಮ ಮಾಹಿತಿ ಇದೆ. ಪ್ರಮುಖ ಅರಬ್ಬಿ ವರ್ತಕರಾದ ಇಬ್ನೆಬತೂತ ಸುಲೆಮಾನ ಮತ್ತು ಆಲ್ಮ ಸೂದಿ ಇವರುಗಳು ಬಹುಕಾಲದಿಂದಲೂ ಭಾರತದಲ್ಲಿ ಬಂಜಾರ ವ್ಯಾಪಾರದ ಸಮಕಾಲೀನರಾಗಿ ತಮ್ಮ ವ್ಯಾಪಾರವನ್ನು ಸಹ ಭಾರತದಲ್ಲಿ ಹರಡಿದ್ದರು. ಇದರಿಂದ ಬಂಜಾರರ ವ್ಯಾಪಾರದ ಮೇಲೆ ಹೆಚ್ಚಿನ ಬೆಳಕು ಚೆಲ್ಲಿದ್ದಾರೆ. ೫ನೆಯ ಶತಮಾನದಲ್ಲಿ ಬಂದ ಚೀನಿ ಯಾತ್ರಿಕ ಫಾಹಿಯಾನ್ ಬಂಜಾರರ ಕಲೆ, ಜೀವನ, ರೀತಿ ನೀತಿ ವ್ಯಾಪಾರದ ಬಗ್ಗೆ ಏನೂ ಹೇಳಿಲ್ಲ. ೭ನೆಯ ಶತಮಾನದಲ್ಲಿ ಬಂದ ಹೂಯೆನ್‌ತ್ಸಾಂಗ್ ಮತ್ತು ಫ್ರಾನ್ಸ್ ದೇಶದ ಪ್ರವಾಸಿ ಫ್ರಾಂಕೋಯಿಸ್ ಬರ್ನಿಯರ್ ಇಂಡಿಯಾ ದೇಶದಲ್ಲೆಲ್ಲಾ ಸಂಚರಿಸಿ ಆಗಿನ ಕಾಲದ ಬಂಜಾರರ ವ್ಯಾಪಾರದ ವೈಖರಿ ವರ್ಣಿಸುವುದರ ಮೂಲಕ ಬೆಳಕು ಚೆಲ್ಲಿದ್ದಾರೆ" (ಅದೇ: ಪು:೬೨). ಮೌರ್ಯರ ಕಾಲದ ಬಂಜಾರರ ವ್ಯಾಪಾರವನ್ನು ವಿವರಿಸುತ್ತ ಲೇಖಕರು ನಾಲ್ಕರಿಂದ ಏಳನೇ ಶತಮಾನದವರೆಗೆ ಬಂಜಾರರು ವ್ಯಾಪಾರವನ್ನು ಮಾಡುತ್ತಿದ್ದರು ಎಂದು ಅಭಿಪ್ರಾಯಪಡುತ್ತಾರೆ. ಆದ್ದರಿಂದ ಲಂಬಾಣಿಗರು ಕ್ರಿ.ಪೂ. ೪ನೆಯ ಶತಮಾನದಿಂದ ವ್ಯಾಪಾರದಲ್ಲಿ ತೊಡಗಿಕೊಂಡಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ಲಂಬಾಣಿಗರು ಕೇವಲ ದೇಶಿಯ ವ್ಯಾಪಾರಿಗಳಾಗಿರಲಿಲ್ಲ. ಇವರ ವ್ಯಾಪಾರ ವೃತ್ತಿ ಭಾರತದ ಗಡಿಯಾಚೆಗೂ ವಿಸ್ತರಿಸಿತ್ತು ಎಂಬುದಕ್ಕೆ ಮುಂಬೈನ ಮ್ಯೂಸಿಯಂ ಸಾಕ್ಷಿಯಾಗಿದೆ. "ಮುಂಬೈನ ವಾಲೆ ಮ್ಯೂಸಿಯಂನ ನಕಾಶೆಯಲ್ಲಿ ದಾಖಲಾಗಿರುವ 'LAMANMARGA'ನಲ್ಲಿ ಏಷ್ಯಾ ಖಂಡದ ಉದ್ದಗಲಕ್ಕೂ ನದಿ, ಸಮುದ್ರದ ಮೂಲಕ ಕ್ರಿ.ಪೂ. ೬೦೦ರಲ್ಲಿ ವ್ಯಾಪಾರ ಮಾಡುತ್ತಿದ್ದುದನ್ನು ದಾಖಲಿಸಲಾಗಿದೆ" (ಗಂಗಾನಾಯಕ್ ಕೆ ಎಸ್:೨೦೦೭:೧-೨). ಪ್ರಾಚೀನ ಭಾರತದ ಇತಿಹಾಸದಲ್ಲಿ ಸಾಮ್ರಾಟ್ ಎಂದು ಪ್ರಖ್ಯಾತನಾದ ಮೌರ್ಯರ ಪ್ರಸಿದ್ಧ ದೊರೆ ಅಶೋಕನ ಕಾಲದಲ್ಲಿಯೂ ಲಂಬಾಣಿಗರ ಅಸ್ತಿತ್ವ ಕುರಿತು "ಅಶೋಕನ ಆಡಳಿತ ಕಾಲದಲ್ಲಿ ಲಂಬಾಣಿಗರು ಬೌದ್ಧ ಭಿಕ್ಷುಗಳಿಗೆ ಧರ್ಮ ಪ್ರಚಾರದ ಸಂದರ್ಭದಲ್ಲಿ ಸಹಾಯ ಮಾಡುತ್ತಿದ್ದರು" (ಅದೇ: ಪು:೧-೨) ಎಂಬ ದಾಖಲೆಯಿದೆ.

"ಬಂಜಾರರು ಒಂದು ಸಾವಿರ ವರ್ಷಗಳ ಹಿಂದಿನಿಂದಲೂ ಇತಿಹಾಸದಲ್ಲಿ ಗೋಚರಿಸುತ್ತಾರೆ. ೮ನೇ ಶತಮಾನದಿಂದ ೧೧ನೇ ಶತಮಾನದವರೆಗಿನ ಕಾಲಾವಧಿಯನ್ನು 'ರಾಜಪುತ್ರಯುಗ' ಎನ್ನಲಾಗಿದೆ. ಉತ್ತರ ಭಾರತವನ್ನು ಇವರು ಸುಮಾರು ೬೦೦ ವರ್ಷಗಳ ಕಾಲ ಏಕಚಕ್ರಾಧಿಪತ್ಯದಿಂದ ಆಳಿದ್ದಾರೆ. ಅಂದು ಗೂರ್ಜರರು, ಪಾಲಮಾರರು, ಸೋಳಂಕರು, ಬುಂದೇಲರು, ಕಳಚೂರರು ಮೊದಲಾದ ರಾಜ್ಯಗಳೆಲ್ಲ ಬಂಜಾರಾ ರಾಜ್ಯಗಳೇ ಆಗಿದ್ದವು.

ಇವರು ಬಂಜಾರಿಗಳೇ ಎಂದು ತಿಳಿದುಕೊಳ್ಳಲು ಉದಾಹರಣೆಗಳೆಂದರೆ ಈವರೆಗಿನ ಹಲವಾರು ಪುರುಷ, ಸ್ತ್ರೀಯರು ಆ ಹೆಸರುಗಳಿಂದ ಕರೆಯಿಸಿಕೊಳ್ಳುತಿದ್ದಾರೆ. ಅವುಗಳೆಂದರೆ ಬುಂದೇಲರು- ಬುದೇಲಾ, ಪಾಲಮಾರರು-ಪೊಮ್ಮಾ, ಕಳಚೂರರು-ಕಾಳಿಯಾ, ಗೂರ್ಜರರು-ಗುಜರಿ, ಸೋಲಂಕರು-

ಸೊಮ್ಲಾ ಮತ್ತು ಭೂಣಾ, ಹೂನಾ, ದೇವಲಿ, ಚೋಕ್ಲಾ, ಗೋನ್ಯಾ, ಸೋಮ್ಲಿ, ನಾಲಿ, ಪೇಮಣಿ, ಲಾಂವಳಿ ಇತ್ಯಾದಿ" (ನಾಯಕ ಚೀನಿಯಾ ಬಿ: ೧೯೮೮:೮). ರಜಪೂತ ವಂಶೀಯರಾದ ಇವರು ಭಾರತದ ಹಲವಾರು ಕಡೆ ಚಿಕ್ಕ ಪುಟ್ಟ ಸಂಸ್ಥಾನಗಳ ಮೂಲಕ ರಾಜಪ್ರಭುತ್ವ ಮಾಡಿರುವುದು ತಿಳಿದುಬರುತ್ತದೆ. ಇವರು ತಮ್ಮ ಕ್ಷಾತ್ರಬಲ ಪ್ರದರ್ಶಿಸಿರುವುದಕ್ಕೆ ಇತಿಹಾಸದಲ್ಲಿ ಇಂತಹ ನಿದರ್ಶನಗಳು ದೊರೆಯುತ್ತವೆ. ಲಂಬಾಣಿಗರು ಸಮಾಜದಲ್ಲಿ ಶ್ರೀಸಾಮಾನ್ಯನಿಂದ ಅರಸನ ಅಧಿಕಾರದವರೆಗೂ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಇವರು ಅಲೆಮಾರಿಗಳಾಗಿ, ವ್ಯಾಪಾರಿಗಳಾಗಿ, ರಾಜರುಗಳಾಗಿ ಚರಿತ್ರೆಯಲ್ಲಿ ಗುರುತಿಸಿಕೊಂಡಿರುವ ಉಲ್ಲೇಖವಿದೆ.

ಲಂಬಾಣಿಗರ ವ್ಯಾಪಾರ ವೃತ್ತಿ ಕೇವಲ ಲಾಭಗಳಿಕೆಯದ್ದಾಗಿರಲಿಲ್ಲ. ಇವರು ತಮ್ಮ ವ್ಯಾಪಾರ ವೃತ್ತಿಯಲ್ಲಿ ಸಹಾಯ ಮತ್ತು ಸೇವಾ ಮನೋಭಾವನೆಯನ್ನು ಅಳವಡಿಸಿಕೊಂಡಿದ್ದರು. "೧೩೯೬ ರಿಂದ ೧೪೦೭ರ ವರೆಗೆ ಇಂಡಿಯಾ ದೇಶದಲ್ಲಿ ಉಂಟಾದ ಘೋರ ಕ್ಷಾಮ ಕಾಲದಲ್ಲಿ ಬಂಜಾರ (ವಂಜಾರಿ) ಸಮುದಾಯದ ಮಹಾರಾಷ್ಟ್ರ ರಾಜ್ಯದ ಹೆಣ್ಣು ಮಗಳು ತನ್ನಲಿದ್ದ ಒಂದು ಲಕ್ಷ ಎತ್ತುಗಳನ್ನು ಆಹಾರ ಸಾಮಗ್ರಿಗಳನ್ನು ಸಾಗಿಸುವ ವಾಹನಗಳಾಗಿ ಉಪಯೋಗಿಸಿಕೊಂಡು ನೇಪಾಳ, ಬರ್ಮ, ಕಚ್ ಪ್ರದೇಶಗಳಿಂದ ಆಹಾರ ಸಾಮಗ್ರಿಗಳನ್ನು ಇಂಡಿಯಾ ದೇಶಕ್ಕೆ ತಂದು ಕ್ಷಾಮ ಪೀಡಿತ ಪ್ರದೇಶಗಳಿಗೆ ಸರಬರಾಜು ಮಾಡಿ, ಜನರನ್ನು ಸಮಯದ ಕರಾಳ ಪರಿಸ್ಥಿತಿಯಿಂದ, ಕ್ಷಾಮದ ದವಡೆಯಿಂದ ಪಾರು ಮಾಡಿದ ಕೀರ್ತಿ ಆ ಹೆಣ್ಣು ಮಗಳಿಗೆ ಮಾತ್ರವಲ್ಲ ಬಂಜಾರ ಸಮುದಾಯಕ್ಕೆ ಸೇರಿದ್ದು, ಅಜರಾಮರವಾಗಿ ಉಳಿದಿದೆ. ಈ ಕಠಿಣ ಪರಿಸ್ಥಿತಿಯನ್ನು ಎದುರಿಸಲು ಆಗಿನ ರಾಜ ಮಹಾರಾಜರುಗಳು ಮುಂದೆ ಬರಲಿಲ್ಲ. ಇದನ್ನು ದುರ್ಗಾದೇವಿಯ ಕ್ಷಾಮವೆಂದು ಕರೆದರು" (ನಾಯಕ ಬಾಲಾ ಕೆ: ೧೯೯೬:೬೩). ಲಂಬಾಣಿಗರು ವ್ಯಾಪಾರದ ಮೂಲಕ ತಮ್ಮ ಜೀವನದ ಜೊತೆ ಜೊತೆಗೆ ಸಮಾಜ ಮುಖಿಯಾಗಿ ಕಾರ್ಯನಿರ್ವಹಿಸಿ ರಾಷ್ಟ್ರೋದ್ಧಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಈ ವಿಚಾರ ಬಾಂಬೆ ಗೆಜೆಟೀಯರ್‌ನಲ್ಲಿ ಪ್ರಸ್ತಾಪವಾಗಿದೆ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

ಮೂಲತಃ ರಾಜಸ್ಥಾನದವರೆಂದು ಗುರುತಿಸಿಕೊಂಡ ಲಂಬಾಣಿಗರು ತಮ್ಮಲ್ಲಿಯ ಶೂರತೆ, ಧೀರತೆ, ಕಷ್ಟಸಹಿಷ್ಣುತೆಗಳ ಗುಣಗಳಿಂದಾಗಿ ಇಸ್ಲಾಂ ದೊರೆಗಳ ಮೆಚ್ಚುಗೆಗೆ ಪಾತ್ರರಾಗಿ ಅವರಿಂದ ಆಹ್ವಾನಿಸಲ್ಪಟ್ಟು ತಮ್ಮ ವ್ಯಾಪಾರಿ ವೃತ್ತಿಯನ್ನು ದಕ್ಷಿಣ ಭಾರತಕ್ಕೂ ವಿಸ್ತರಿಸಿದರು. "ಬಂಜಾರರು ವಾಯ್ಯವ್ಯ ಭಾರತದ ಮೂಲಕ ಹೈದ್ರಾಬಾದ ಪ್ರಾಂತಕ್ಕೆ ವಲಸಿಗರಾಗಿ ಬಂದಿದ್ದರ ಬಗ್ಗೆ ಫೆರಿಸ್ತಾರವರು ತಮ್ಮ ಗ್ರಂಥದಲ್ಲಿ ದಾಖಲಿಸುತ್ತಾರೆ. ಆದರೆ ಕ್ರೂಕರರು ೧೫೦೪ರಲ್ಲಿ ಧೋಲ್‌ಪುರದ (ಅಂದಿನ ಧವಳಗಿರಿ) ಮೇಲೆ ಸಿಖಂದರನು ಆಕ್ರಮಣ ಮಾಡಿದಾಗ, ಅಸಫಜಾನನು ಚಾರಣ ಬಂಜಾರ ಸಮೂಹವನ್ನು ತನ್ನ ಜೊತೆ ಡೆಕ್ಕನ್ ಭಾರತಕ್ಕೆ ಕರೆದುಕೊಂಡು ಬಂದನು. ಡೆಕ್ಕನ್‌ನಲ್ಲಿ ೨೦ ಪಟ್ಟಣಗಳಿವೆ. ಬಿದರೆ (ಬೀದರ್) ಸಾಗರ, ವಿಜಾಪೂರ (ಬಿಜಾಪೂರ), ಸಿದಡೊರ (ಸೋಲಾಪುರ),

ರಾಚೂಲ್ (ರಾಯಚೂರು), ಕೊಲ್ಗೆರ್ಗ (ಕಲ್ಬುರ್ಗಿ), ಬನ್ನು(ಬದಾಮಿ). ಇಲ್ಲಿಯ ರಾಜನನ್ನು ಸುಲ್ತಾನ ಮಹಮದ ಷಾ ಎಂದು ಕರೆಯುತ್ತಾರೆ" (ರಾಠೋಡ ಪಂಡಿತ:೨೦೧೨:೩). ಲಂಬಾಣಿಗರ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸಿದ ಇಸ್ಲಾಂ ದೊರೆಗಳು ಇವರನ್ನು ಯುದ್ಧದಲ್ಲಿ ಸಹಾಯಕರಾಗಿ, ಆಹಾರ ಪೂರೈಸುವ ಕಾರ್ಯಕ್ಕಾಗಿ ನಿಯೋಜಿಸಿಕೊಂಡರು.

ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಲಂಬಾಣಿಗರು ದಕ್ಷಿಣ ಭಾರತದಲ್ಲಿ ಕೈಗೊಂಡ ವ್ಯಾಪಾರ ವೃತ್ತಿಯ ವಿವರಣೆ ಲಭ್ಯವಿದೆ. "ಕುಂಬ್ರಲೇಜ್‌ರವರು ತಮ್ಮ ಗ್ರಂಥದಲ್ಲಿ ಭಂಗಿ-ಜಂಗಿ ಎಂಬ ಇಬ್ಬರು ಲಂಬಾಣಿ ನಾಯಕರು ಅಸಫಜಾನ್ ಮತ್ತು ಅವನ ವಜೀರನಾದ ಷಹಾಜಾಹನ ಎಂಬುವವರೊಂದಿಗೆ ಕ್ರಿ.ಶ. ೧೬೩೦ರಲ್ಲಿ ಮಾಡಿಕೊಂಡ ಒಪ್ಪಂದದ ಒಂದು ತಾಮ್ರ ಪತ್ರವನ್ನು ಉಲ್ಲೇಖಿಸಿದ್ದಾರೆ. ಅದನ್ನು ಹೈದರಾಬಾದ್ ಕೋರ್ಟಿನ ಪ್ರವೇಶ ದ್ವಾರದಲ್ಲಿ ಈಗಲೂ ಕಾಣಬಹುದೆಂದಿದ್ದಾರೆ. ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಗೆ ಯುದ್ಧ ಮಾಡ ಹೊರಟ ತನ್ನ ಸೈನಿಕರನ್ನು ಹಿಂಬಾಲಿಸಲು ೧,೮೦,೦೦೦ ಜಾನುವಾರುಗಳ ಹೇರುಳ್ಳ ಭಂಗಿ-ಜಂಗಿ ಹೆಸರಿನ ಬಂಜಾರಾ ನಾಯಕರಿಗೂ, ೫೨,೦೦೦ ಜಾನುವಾರುಗಳ ಹೇರುಳ್ಳ ಭಗವಾನ್‌ದಾಸ್ ವಡತ್ಯಾನಿಗೂ ಅಸಫ್‌ಜಾನ್ ಆದೇಶಿಸುತ್ತಾನೆ. ಸರಕು ಸಾಗಾಣಿಕೆಯಿಂದ ಆಗಬಹುದಾದ ತೊಂದರೆಯನ್ನು ಮನಗಂಡು ಅಸಫಜಾನ್ ಭಂಗಿ-ಜಂಗಿ ನಾಯಕರುಗಳಿಗೆ ಬಂಗಾರದ ಬರಹವಿರುವ ತಾಮ್ರ ಶಾಸನದ ಮೂಲಕ ನಿರೂಪವೊಂದನ್ನು ಹೊರಡಿಸುತ್ತಾನೆ.

ರಂಜನ ಕಾ ಪಾನಿ

ಛಪ್ಪರ್ ಕಾ ಘಾಸ್

ದಿನ ಕಾ ತೀನ್ ಖೂನ್ ಮಾಫ್

ಔರ ಜಹಾ ಅಸಫ್‌ಜಾನ್ ಕೆ ಘೋರೆ

ವಹಾ ಭಂಗಿ ಜಂಗಿ ಕಾ ಬೈಲ್" (ಸಣ್ಣರಾಮ:೧೯೯೯:೨೬). ಭಂಗಿ ಜಂಗಿ ನಾಯಕರೆ ನಿಮಗೆ ನೀರಿನ ಕೊರತೆಯಾದಲ್ಲಿ ಸರದಾರರ ಮನೆಯಲ್ಲಿಯ ರಂಜಣಗಿಗಳಲ್ಲಿ ತುಂಬಿರುವ ನೀರನ್ನು ಉಪಯೋಗಿಸಿಕೊಳ್ಳಿ, ಜಾನುವಾರುಗಳಿಗೆ ಮೇವಿನ ತೊಂದರೆಯಾದಲ್ಲಿ ಗುಡಿಸಲುಗಳ ಮೇಲೆ ಹೊದಿಸಿರುವ ಹುಲ್ಲನ್ನು ಪಡೆದುಕೊಳ್ಳಿ, ಸೈನ್ಯಕ್ಕೆ ಆಹಾರ ಸರಬರಾಜು ಮಾಡುವಾಗ ಏನಾದರೂ ಅಡೆತಡೆಗಳುಂಟಾದರೆ ಅದನ್ನು ಪರಿಹರಿಸುವಾಗ ದಿನಕ್ಕೆ ಮೂರು ಕೊಲೆ ಮಾಡಿದರೂ ಕ್ಷಮೆ ಇದೆ. ಎಲ್ಲೆಲ್ಲಿ ಅಸಫಜಾನ್‌ನ್ ಕುದುರೆಗಳಿರುತ್ತವೆಯೋ ಅಲ್ಲಲ್ಲಿ ಭಂಗಿ-ಜಂಗಿಯ ಎತ್ತುಗಳಿರಬೇಕು. ಈ ರಾಜ ಮುದ್ರೆಯು ಅಸಫಖಾನನ ಸೈನ್ಯಕ್ಕೆ ಆಹಾರ ಸಾಮಗ್ರಿಗಳನ್ನು, ಇತರೆ ಬೇಕು ಬೇಡಗಳನ್ನು ಪೂರೈಸುವಲ್ಲಿ ಲಂಬಾಣಿಗರು ವಹಿಸುತ್ತಿದ್ದ ಪಾತ್ರ ಹಾಗೂ ನವಾಬನು ಅವರ ಬಗೆಗೆ ಹೊಂದಿರುವ ಪ್ರೀತಿ ವಿಶ್ವಾಸವನ್ನು ತೋರ್ಪಡಿಸುತ್ತದೆ. ಲಂಬಾಣಿಗರು ಮೊಗಲ ಸಾಮ್ರಾಜ್ಯಕ್ಕೆ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡುತ್ತಿದ್ದಂತೆಯೇ ತಮ್ಮ ಮೂಲ ಉದ್ಯೋಗವಾದ ವ್ಯಾಪಾರವನ್ನು ಬಿಟ್ಟಿರಲಿಲ್ಲ.

ಸಮುದ್ರ ತೀರ ಪ್ರದೇಶಗಳಲ್ಲಿಯೂ ಇವರ ವ್ಯಾಪಾರ ವಿಸ್ತಾರಗೊಂಡಿತ್ತು. ವಿದೇಶಗಳಿಂದ ಜಲಮಾರ್ಗವಾಗಿ ಭಾರತಕ್ಕೆ ಬಂದ ಸರಕುಗಳನ್ನು ದೇಶದ ನಾನಾ ಭಾಗಗಳಿಗೆ ಪೂರೈಸುತ್ತಿದ್ದರು. ೧೭ನೇ ಶತಮಾನದಲ್ಲಿ ಪ್ರಾಬಲ್ಯಕ್ಕೆ ಬಂದ ಮರಾಠರ ಕಾಲದಲ್ಲಿ ಬಂಜಾರರ ವ್ಯಾಪಾರವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. "ಮಹಾರಾಷ್ಟ್ರದ ಪೇಶ್ವೆಗಳು ತಮ್ಮ ಆಳ್ವಿಕೆಯಲ್ಲಿ ಸಕ್ಕರೆ, ಸಾಂಬಾರು ಪದಾರ್ಥಗಳು ಮತ್ತು ಒಣ ಹಣ್ಣು ಹಂಪಲುಗಳನ್ನು ಚೈನಾ, ಅಫಘಾನಿಸ್ತಾನ್, ಪರ್ಷಿಯಾ, ಅಂಬೋನಿಯಾ ಮುಂತಾದ ದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು. ಚೌಲ, ದಬೋಲ್, ರಾಜಪುರ ಮೊದಲಾದ ದೊಡ್ಡ ದೊಡ್ಡ ಬಂದರುಗಳು, ಕೊಂಕಣ ಕರಾವಳಿಯ ನಾಗೋತಾನ್, ಮಹಾದ್, ಬಾಲಸರ್, ಪೆನವೆಲ್ ಕೋಲಂಬಿ ಮೊದಲಾದ ಚಿಕ್ಕ ಚಿಕ್ಕ ಬಂದರುಗಳು ಆ ಕಾಲದಲ್ಲಿ ಹೆಚ್ಚು ಕ್ರಿಯಾಶೀಲವಾಗಿದ್ದವು. ಹೀಗೆ ಬೇರೆ ಬೇರೆ ದೇಶಗಳಿಂದ ಭಾರತದ ಬಂದರುಗಳಿಗೆ ಬಂದ ವಸ್ತುಗಳನ್ನು ದೇಶದ ಮೂಲೆ ಮೂಲೆಗೂ ತಲುಪಿಸುವ ಜವಾಬ್ದಾರಿಯನ್ನು ಲಂಬಾಣಿ ವ್ಯಾಪಾರಿಗಳು ನಿಭಾಯಿಸುತ್ತಿದ್ದರು" (ಸಣ್ಣರಾಮ:೧೯೯೯:೩೭).

ಲಂಬಾಣಿಗರು ಭಾರತದಲ್ಲಿ ಬ್ರಿಟಿಷರೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದರು. ಕೊಟ್ಟ ಮಾತನ್ನು ತಪ್ಪದಿರುವ ಇವರ ಪ್ರಮಾಣಿಕತೆಗೆ ಸಾಕ್ಷಿಯಾದ ನಿದರ್ಶನವೊಂದು ಇತಿಹಾಸದಲ್ಲಿ ದಾಖಲಾಗಿದೆ "ಕ್ರಿ.ಶ. ೧೭೯೨ರಲ್ಲಿ ಬ್ರಿಟಿಷ ಸರ್ಕಾರವು ಮೈಸೂರಿನ ಟಿಪ್ಪು ಸುಲ್ತಾನನ ಮೇಲೆ ಯುದ್ಧ ಸಾರುತ್ತದೆ. ಬ್ರಿಟಿಷರು ಮಹಾರಾಷ್ಟ್ರದಲ್ಲಿ ಭಿಮಾನಾಯಕನೆಂಬ ಬಂಜಾರ ವ್ಯಾಪಾರಿಗೆ ೨೫,೦೦೦ ಎತ್ತುಗಳ ಹೇರುಗಳಷ್ಟು ಧಾನ್ಯವನ್ನು ಶ್ರೀರಂಗಪಟ್ಟಣಕ್ಕೆ ತಂದು ಕೊಡಲು ಒಪ್ಪಂದ ಮಾಡಿಕೊಂಡು ೧,೫೦,೦೦೦ ರೂಪಾಯಿಗಳನ್ನು ಮುಂಗಡವಾಗಿ ಕೊಡುತ್ತಾರೆ. ಬ್ರಿಟಿಷ ಸೈನಿಕರು ಭಿಮಾನಾಯಕನಿಗೆ ಪಶ್ಚಿಮ ಘಟ್ಟ ದಾಟುವುದಕ್ಕೆ ಕೊಡಬೇಕಾದ ಸಹಕಾರವನ್ನು ಕೊಡಲಿಲ್ಲ. ಹೀಗಾಗಿ ಭೀಮನಾಯಕನು ನಿಗದಿತ ಸಮಯಕ್ಕೆ ಶ್ರೀರಂಗಪಟ್ಟಣವನ್ನು ತಲುಪಲಾಗಲಿಲ್ಲ. ಇವರು ಶ್ರೀರಂಗಪಟ್ಟಣಕ್ಕೆ ಬರುವುದರಲ್ಲಿ ಯುದ್ಧ ಮುಗಿದು ಹೋಗಿತ್ತು. ಭೀಮಾನಾಯಕ ಅಪಾರ ದವಸ-ಧಾನ್ಯವನ್ನು ಕಡಿಮೆ ದರಕ್ಕೆ ಮಾರಿ ಬ್ರಿಟಿಷರಿಂದ ಪಡೆದ ಮುಂಗಡವನ್ನು ಹಿಂದಿರುಗಿಸುತ್ತಾನೆ. ನಾಯಕನ ಪ್ರಾಮಾಣಿಕತೆಗೆ ಮೆಚ್ಚಿದ ಬ್ರಿಟಿಷರು ಉಡುಪು, ಕತ್ತಿಯನ್ನು ಮತ್ತು ಒಂದು ಆನೆಯನ್ನು ಕೊಟ್ಟು ಸನ್ಮಾನಿಸುತ್ತಾರೆ" (ಅದೇ: ಪು:೪).

ಮುಂದೆ ಆಧುನಿಕ ಭಾರತದಲ್ಲಿ ಬ್ರಿಟಿಷ ಸರ್ಕಾರ ಹೊರಡಿಸಿದ ಸುತ್ತೋಲೆಗಳು, ಬಹುಪಾಲು ವ್ಯಾಪಾರಿಗಳಾಗಿದ್ದ ಲಂಬಾಣಿಗರು ಬಹುಪಾಲು ಕೃಷಿಕರಾಗಿ ಮಾರ್ಪಾಡಾಗಿರುವುದರ ಇತಿಹಾಸದ ಆಧಾರವೊಂದು ಹೀಗಿದೆ. "೧೯೦೧ರಲ್ಲಿ ಆಗಿನ ಸರ್ಕಾರ ಒಂದು ಸುತ್ತೋಲೆಯನ್ನು ಹೊರಡಿಸಿ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಯಾರು ಎಷ್ಟು ಬೇಕಾದರೂ ಆಬಾದು ಮಾಡಿಕೊಂಡು ಅದರ ಉತ್ಪತ್ತಿಯಲ್ಲಿ ಸರ್ಕಾರದ ಬೊಕ್ಕಸಕ್ಕೆ ೧/೫ ಭಾಗ ಕಡ್ಡಾಯವಾಗಿ ಕೊಡುವುದಾಗಿ ಸುತ್ತೋಲೆಯಲ್ಲಿ ಆಜ್ಞೆ ಮಾಡಿತು. ಕಾರಣ ಉತ್ಪಾದನೆಗಿಂತ ಆಹಾರ ಧಾನ್ಯಗಳ ಬೇಡಿಕೆ ರಾಷ್ಟ್ರದಲ್ಲಿ

ಹೆಚ್ಚಾಗಿತ್ತು. ಜನಸಂಖ್ಯೆ ೨೫ ವರ್ಷಕ್ಕೊಮ್ಮೆ ದ್ವಿಗುಣವಾಗುತ್ತಿತ್ತು. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯಲ್ಲಿ ೧/೩ ಭಾಗ ಮಾತ್ರ ಉಳುಮೆಗೆ ತರಲಾಗಿತ್ತು. ಇದರಿಂದ ಬಂಜಾರ ಸಮುದಾಯ ಸಾಮಾನ್ಯವಾಗಿ ಇಂತಹ ಪ್ರದೇಶಗಳಲ್ಲೆಲ್ಲ ತಾತ್ಕಾಲಿಕ 'ಖೇಡೋ' ನಿರ್ಮಿಸಿಕೊಂಡಿದ್ದರು. ಈ ಸುತ್ತೋಲೆಯಿಂದ ಶಕ್ತಿ ಮತ್ತು ಜನಬಲ ಇದ್ದವರು ತಮಗೆ ಬೇಕಾದಷ್ಟು ಭೂಮಿಯನ್ನು ಉಳುಮೆಗೆ ಹದ ಮಾಡಿಕೊಂಡು ಫಸಲು ಬೆಳೆಯಲು ಪ್ರಾರಂಭಿಸಿದರು. ಕಾಡು, ಮೇಡು, ಸೇಂದಿವನ, ನದಿಯ ಜಲಾನಯನ ಭೂಮಿ, ಪರ್ವತ ಪ್ರದೇಶಗಳ ಬಯಲು ಭೂಮಿಗಳೆಲ್ಲಾ ವ್ಯವಸಾಯದ ಕ್ಷೇತ್ರಗಳಾದವು. ತಾಂಡಾ ಎಂಬ ಹೆಸರಿನಿಂದ ಸ್ಥಾನಿಕ ನೆಲೆಯನ್ನು ನಿರ್ಮಿಸಿಕೊಂಡರು" (ನಾಯಕ ಬಾಲಾ ಕೆ: ೧೯೯೬:೬೭-೬೮). ವ್ಯಾಪಾರ ನಿಂತುಹೋಗಿದ್ದರಿಂದ, ಬಂಜಾರರು ಸಹ ಭೂಮಿಯನ್ನು ಉಳುಮೆಗೆ ಹದ ಮಾಡಿಕೊಂಡು ಫಸಲು ಬೆಳೆಯಲು ಪ್ರಾರಂಭಿಸಿದರು. ವ್ಯವಸಾಯ ಹೊಸ ವೃತ್ತಿಯಾದರೂ ಕಷ್ಟಸಹಿಷ್ಣುಗಳಾದ ಲಂಬಾಣಿಗರು ಕಾಲಕ್ರಮೇಣ ಹೊಸ ಉದ್ಯೋಗಕ್ಕೆ ಹೊಂದಿಕೊಂಡು ಜೀವನ ಕಟ್ಟಿಕೊಂಡರು. ಈ ಅವಕಾಶವನ್ನು ಉಪಯೋಗಿಸಿಕೊಳ್ಳದ ಹಲವಾರು ಜನ ಬಂಜಾರರು ಭೂಮಿ ಹೊಂದಿದ ಜಮೀನ್ದಾರರಲ್ಲಿ ವ್ಯವಸಾಯದ ಆಳುಗಳಾದರು, ಕೃಷಿ ಕಾರ್ಮಿಕರಾದರು.

ವ್ಯಾಪಾರವನ್ನು ಕಳೆದುಕೊಂಡು ಕಾಲಕ್ರಮೇಣ ಕೃಷಿಯನ್ನು ಅವಲಂಬಿಸಿ ತಮ್ಮದೇ ಆದ ಬದುಕನ್ನು ರೂಪಿಸಿಕೊಳ್ಳುತ್ತ ಸಾಗುತಿದ್ದ ಲಂಬಾಣಿಗರನ್ನು ಬ್ರಿಟಿಷ ಸರ್ಕಾರವು ಅಪರಾಧಿ ಬುಡಕಟ್ಟು ಕಾಯ್ದೆಗೊಳಪಡಿಸಿ ಅವರ ಬದುಕನ್ನು ಬರ್ಬರಗೊಳಿಸಿತು. "೧೮೭೧ ರಿಂದ ೧೯೪೭ರವರೆಗೆ ಮೇಲಿಂದ ಮೇಲೆ ಬ್ರಿಟಿಷ ಭಾರತದಲ್ಲಿ ಅಪರಾಧಿ ಬುಡಕಟ್ಟು ಅಧಿನಿಯಮವನ್ನು ಪರಿಷ್ಕರಿಸುತ್ತ, ವಿಸ್ತರಿಸುತ್ತ, ಜಾರಿಗೊಳಿಸಲಾಯಿತು. ವ್ಯಕ್ತಿಗತ ಮಾಡುವ ತಪ್ಪುಗಳನ್ನು ಅಥವಾ ಅಪರಾಧಗಳನ್ನು ಸಮುದಾಯಕ್ಕೆ ಸಮೀಕರಿಸುವುದು ತಪ್ಪೆಂದು ೧೯೪೭ರಲ್ಲಿ ಮದ್ರಾಸ್ ಮತ್ತು ೧೯೪೯ರಲ್ಲಿ ಮುಂಬೈ ಅಧಿಪತ್ಯಗಳಲ್ಲಿಯ ಅಪರಾಧಿ ಬುಡಕಟ್ಟು ಅಧಿನಿಯಮವನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು. ಮುಂದೆ ಭಾರತೀಯ ಅಪರಾಧಿ ಬುಡಕಟ್ಟುಗಳ ತನಿಖಾ ಸಮಿತಿಯ ಮೌಲ್ಯಮಾಪನದ ವರದಿಯ ಮೇರೆಗೆ ೧೯೫೨ರಲ್ಲಿ ಅಪರಾಧಿ ಬುಡಕಟ್ಟುಗಳನ್ನು ವಿಮುಕ್ತಗೊಳಿಸಲು ಈ ಸಂಬಂಧದ ಅಧಿನಿಯಮ ವನ್ನು ರದ್ದು ಪಡಿಸಲಾಯಿತು. ಅಂದಿನಿಂದ ಈ ಗುಂಪುಗಳನ್ನು ವಿಮುಕ್ತ ಬುಡಕಟ್ಟುಗಳು ಇಲ್ಲವೇ ಡಿ ನೋಡಿಫೈಡ್ ಟ್ರೈಬ್ಸ್ (DNT) ಎಂದು ಕರೆಯಲಾಯಿತು" (ಮೇತ್ರಿ ಕೆ ಎಂ. ಗುರುಲಿಂಗಯ್ಯಾ ಎಂ: ೨೦೧೦:೨೩). ಹೀಗೆ ವಿಮುಕ್ತ ಬುಡಕಟ್ಟುಗಳ ಪಟ್ಟಿಯಲ್ಲಿದ್ದ ಲಂಬಾಣಿಗರು ಆಯಾ ರಾಜ್ಯದ ಆಶಯದ ಮೇರೆಗೆ ಸಂವಿಧಾನಾತ್ಮಕವಾಗಿ ಬೇರೆ ಬೇರೆ ಪಟ್ಟಿಗಳಿಗೆ ಸೇರಲ್ಪಟ್ಟರು. ಅದರಂತೆ ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ, ಆಂಧ್ರ ಪ್ರದೇಶದಲ್ಲಿ ಪರಿಶಿಷ್ಟ ಪಂಗಡ, ಮಹಾರಾಷ್ಟ್ರದಲ್ಲಿ ವಿಮುಕ್ತ ಜಾತಿಯ ಪಟ್ಟಿಯಲ್ಲಿ ಸೇರ್ಪಡೆಯಾಗಿರುವುದು ಕಂಡುಬರುತ್ತದೆ.

**ಆಧಾರ ಗ್ರಂಥಗಳು**

ಗಂಗಾನಾಯಕ ಕೆ ಎನ್, ಲಂಬಾಣಿ ಇತಿಹಾಸ ಮತ್ತು ಸಂಸ್ಕೃತಿ, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು, ೨೦೦೭.

ಖಂಡೋಬಾ ಪಿ ಕೆ, ಕರ್ನಾಟಕದ ಬುಡಕಟ್ಟಿನ ಲಂಬಾಣಿಗಳು, ಶ್ರೀ ಸಿದ್ದಲಿಂಗೇಶ್ವರ ಬುಕ್ ಡೀಪೋ ಮೇನ ರೋಡ ಗುಲ್ಬರ್ಗಾ, ೨೦೦೦.

"ಕರ್ನಾಟಕ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ದಿ ತೇಜಸಿಂಗ ರಾಠೋಡ ಮೆಮೋರಿಯಲ್ ಟ್ರಸ್ಟ್ ಗುಲ್ಬರ್ಗಾ, ೧೯೯೧.

ಮೇತ್ರಿ ಕೆ ಎಂ, ಗುರುಲಿಂಗಯ್ಯ ಎಂ, ಅಲಕ್ಷಿತರ ಸಮಾಜಶಾಸ್ತ್ರ, ದೂರಶಿಕ್ಷಣ ಕೇಂದ್ರ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೦.

ನಾಯಕ ಬಾಲಾ ಕೆ, ಬಂಜಾರಾ ಧರ್ಮದ ಸಾಮಾನ್ಯ ಜ್ಞಾನ, ಶ್ಯಾಮಲಾ ಪ್ರಕಾಶನ, ಬೆಂಗಳೂರು, ೧೯೯೬.

ನಾಯಕ ಚೇನಿಯಾ ಬಿ, ಬಂಜಾರ ಚರಿತ್ರ (ಸಂಸ್ಕೃತಿ ಪ್ರಗತಿ), ಶ್ರೀಮತಿ ಬಿ ಲಕ್ಷ್ಮೀಬಾಯಿ ಶ್ರೀ ಹಾಥಿರಾಂ ಬಾವಾಜೀ ಪಬ್ಲಿಕೇಶನ್ಸ್ ಅನಂತಪುರಂ, ೧೯೯೦.

ನಾಯಕ ರೂಪ್ಲಾ ವೈ, ರಂಗುರಂಗಿನ ಬಂಜಾರ(ಲಂಬಾಣಿ) ಜನಾಂಗ, ಎಸ್‌ಬಿಸಿ, ಲಾ ಪಬ್ಲಿಕೇಶನ್ಸ್, ಬೆಂಗಳೂರು, ೨೦೦೧.

ಪವಾರ ರಾಮಕೋಟಿ ವಿ, ಬಂಜಾರ ಸಮಾಜ ಐತಿಹಾಸಿಕ ಪರಿಪ್ರೇಕ್ಷ, ಜವಾಹರ ಪುಸ್ತಕಾಲಯ ಹಿಂದಿ ಪುಸ್ತಕ ಪ್ರಕಾಶನ ಏವ್ ವಿತರಕ ಮಯೂರಾ (ಉ.ಪ್ರ), ೨೦೧೨.

ಸಣ್ಣರಾಮ, ಲಂಬಾಣಿ ಸಂಸ್ಕೃತಿ, ಡಾ. ಸಣ್ಣರಾಮ ರೀಡರ್, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೧೯೯೯.

Crooke, The Tribes and Castes of the North-Western India, Asia publishing house New Delhi, 1940.

Edgar Thurston, Caste and Tribe of southern India, vol-4, Cosmo publication Delhi, 1909.

Iyer L K A, The Mysore Tribes and Castes vol-2, Mysore university press, 1935.

Kamala Manohar rao P, The Mythological origin and clan system of the Banjaras of Hyderabad, January – March, 1950.

Nanjundayya H V and Ananthakrishna Iyyar, The Mysore Tribes and Castes, Mysore Govt Press, 1928.

Sovenier, National Banjara Professors conference on 14 and 15 July, 2012.

Syed siraj ul Hassan, Castes and Tribes of the Nizams Dominations vol 1, vipin jain for vintage books, Gurgaon (Hariyana), 1920.

## ಅಧ್ಯಾಯ ನಾಲ್ಕು

# ಲಂಬಾಣಿಗರ ಸಾಮಾಜಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು


೪.೧. ಲಂಬಾಣಿಗರ ಪಾಡಾಗಳು

೪.೨. ಲಂಬಾಣಿಗರು ಆಚರಿಸುವ ಸಂಸ್ಕಾರಗಳು

೪.೩. ಲಂಬಾಣಿಗರ ಆಹಾರ ಪದ್ಧತಿಗಳು

೪.೪. ಲಂಬಾಣಿಗರ ಉಡುಗೆ-ತೊಡುಗೆಗಳು

೪.೫. ಹಬ್ಬಗಳು

೪.೬. ಹಚ್ಚೆ ಕಲೆ

೪.೭. ಗೋರಬೋಲಿ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಗಳ ಪ್ರಭಾವ

೪.೮. ಲಂಬಾಣಿಗರ ರಾಜಕೀಯ ಸ್ಥಿತಿಗತಿ

ಅಧ್ಯಾಯ – ೪

# ಲಂಬಾಣಿಗರ ಸಾಮಾಜಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು

ಪ್ರಪಂಚದ ಇತರೆಲ್ಲಾ ಪ್ರಾಣಿವರ್ಗಗಳಲ್ಲಿ ಮಾನವ ಶ್ರೇಷ್ಠ ಪ್ರಾಣಿ ಎಂದು ಕರೆಯಿಸಿಕೊಂಡಿದ್ದಾನೆ. ಇದಕ್ಕೆ ಕಾರಣ ಆತ ಹೊಂದಿರುವ ಬುದ್ಧಿಶಕ್ತಿ ಮತ್ತು ಭಾಷಿಕ ಸಾಮರ್ಥ್ಯ. ಪ್ರಾರಂಭದಲ್ಲಿ ಮಾನವನೂ ಕೂಡಾ ಪ್ರಾಣಿಗಳಂತೆ ಅಲೆಮಾರಿಯಾಗಿದ್ದು, ನಂತರದ ದಿನಗಳಲ್ಲಿ ಆತ ಒಂದೆಡೆ ನೆಲೆನಿಂತು ಜೀವಿಸಲಾರಂಭಿಸಿದ. ಈ ರೀತಿಯ ಜೀವನವೇ ಸಮಾಜ, ಸಮುದಾಯಗಳ ಹುಟ್ಟಿಗೆ ಕಾರಣವಾಗಿ ಸಮಾಜ ಜೀವಿಯಾಗಿ ಮಾರ್ಪಾಡುಗೊಂಡ ಮಾನವನಿಗೆ ಒಂಟಿ ಜೀವನ ಅಸಾಧ್ಯ ವಾಯಿತು. ಪರಸ್ಪರಾವಲಂಬನೆ, ವಿಚಾರ ವಿನಿಮಯ, ಸಹಜೀವನ ಮತ್ತು ಸಂಘಜೀವನದಿಂದ ಮಾನವ ಶ್ರೇಷ್ಠಜೀವಿ ಎನಿಸಿಕೊಳ್ಳಲು, ಸಮಾಜ ಜೀವಿಯಾಗಲು ಕಾರಣವಾಯಿತು.

'ಸಮಾಜ' ಎಂಬ ಕನ್ನಡ ಪದಕ್ಕೆ ಇಂಗ್ಲೀಷಿನ ಸರಿಸಮಾನ ಪದವಾದ 'ಸೊಸೈಟಿ' ಎಂಬುದು 'ಸೋಶಿಯಸ್' ಎಂಬ ಲ್ಯಾಟಿನ್ ಶಬ್ದದಿಂದ ಉತ್ಪತ್ತಿ ಹೊಂದಿದೆ. 'ಸೋಶಿಯಸ್' ಎಂದರೆ ಒಡನಾಡಿತನ(Fellowship of companionship) ಎಂದರ್ಥ. ಒಡನಾಡಿಗಳ ಒಡನಾಟದಿಂದ ಒಟ್ಟುಗೂಡಿರುವ ವ್ಯವಸ್ಥೆಯೇ ಸಮಾಜ. 'ಸಮಾಜ' ಎಂಬ ಮೂಲಕಲ್ಪನೆಯ ಬಗ್ಗೆ ಸಮಾಜಶಾಸ್ತ್ರಜ್ಞರಲ್ಲಿ ಪೂರ್ಣ ಒಮ್ಮತವಿಲ್ಲ, ಅದನ್ನು ಹಲವರು ಹಲವು ಬಗೆಗಳಲ್ಲಿ ವ್ಯಾಖ್ಯಾನಿಸಿದ್ದಾರೆ. ಪ್ರಮುಖವಾದವುಗಳು ಈ ಕೆಳಗಿನಂತಿವೆ.

ಮೆಕೈವರ್ ಮತ್ತು ಪೇಜ್‌ರವರು ಹೇಳುವಂತೆ "ಸಮಾಜವೆಂಬುದು ಹಲವಾರು ಆಚರಣೆಗಳ ಮತ್ತು ಕ್ರಮವಿಧಾನಗಳ, ಅಧಿಕಾರ ಮತ್ತು ಪರಸ್ಪರ ಸಹಾಯಗಳ, ಹಲವಾರು ಸಮೂಹಗಳ

ಮತ್ತು ವಿಂಗಡಣೆಗಳ, ಮಾನವ ವರ್ತನೆಯ ಬಗೆಗಿನ ನಿಯಂತ್ರಣಗಳ ಹಾಗೂ ಸ್ವಾತಂತ್ರ್ಯಗಳನ್ನೊಳಗೊಂಡ ಒಂದು ವ್ಯವಸ್ಥೆಯಾಗಿದೆ. ಸದಾ ಪರಿವರ್ತನೀಯವಾದ ಈ ಸಂಕೀರ್ಣ ವ್ಯವಸ್ಥೆಯನ್ನು ನಾವು 'ಸಮಾಜ' ಎಂದು ಕರೆಯುತ್ತೇವೆ."

ಐಯನ್ ರಾಬರ್ಟಸನ್ ಹೇಳುವಂತೆ "ಒಂದು ಸಾಮಾನ್ಯ ಸಂಸ್ಕೃತಿಯಲ್ಲಿ ಸಹಭಾಗಿಗಳಾಗಿ ಒಂದು ಭೂಭಾಗವನ್ನು ಹಂಚಿಕೊಂಡು ವಾಸಿಸುತ್ತಾ, ಪರಸ್ಪರ ಒಡನಾಟದಲ್ಲಿರುವ ಜನ ಸಮೂಹವನ್ನು 'ಸಮಾಜ' ಎನ್ನಬಹುದು." ಸಾಮಾಜಿಕ ಸಂಬಂಧಗಳ ಒಂದು ಬಲೆಯಂತಿರುವ ಸಮಾಜವು ಸಮೂಹಗಳ ಸಮೂಹವಾಗಿದ್ದು, ಪರಸ್ಪರ ಅರಿವಿನಿಂದಾಗಿ ವ್ಯಕ್ತಿ-ವ್ಯಕ್ತಿಗಳ ಮಧ್ಯೆ ಸಂಬಂಧಗಳು ಏರ್ಪಟ್ಟು ಏಕತೆಯ ಭಾವನೆಗಳು ಬೆಳೆಯುತ್ತವೆ. ಸಾಮಾನ್ಯ ಕಾರ್ಯವೊಂದನ್ನು ಜನರು ತಮ್ಮ ಆಸಕ್ತಿ-ಅಭಿರುಚಿ, ಕ್ಷಮತೆ-ಸಾಮರ್ಥ್ಯ ವಯೋಮಾನ ಹಾಗೂ ಲಿಂಗಭೇದ ಇವುಗಳ ಆಧಾರದ ಮೇಲೆ ಸಹಕಾರದಿಂದ ತಮ್ಮ ತಮ್ಮೊಳಗೆ ಕಾರ್ಯವನ್ನು ಹಂಚಿಕೊಂಡು ಜೀವಿಸುತ್ತಾರೆ. ಈ ರೀತಿಯ ಕಾರ್ಯನಿರ್ವಹಣೆಯಲ್ಲಿ ಪರಸ್ಪರಾವಲಂಬನೆಗಳು ಕಂಡುಬರುತ್ತವೆ.

ಸಮಾಜವು ಗತಿಶೀಲವಾದುದು ಅಂದರೆ ಇಲ್ಲಿ ಸದಾ ಬದಲಾವಣೆಗಳು ಉಂಟಾಗುತ್ತಿರುತ್ತವೆ. ಪ್ರತಿಯೊಂದು ಸಮಾಜವೂ ತನ್ನದೇ ಆದ ರೀತಿ ನೀತಿಗಳನ್ನು, ಕ್ರಮ-ವಿಧಾನಗಳನ್ನು ಬೆಳೆಸಿಕೊಂಡಿದ್ದು ಅವುಗಳ ಮೂಲಕ ಜನರ ವರ್ತನೆಯನ್ನು ನಿಯಂತ್ರಿಸುತ್ತಿರುತ್ತದೆ. ಹಾಗೆಯೇ ಪ್ರತಿಯೊಂದು ಸಮಾಜವೂ ತನ್ನದೇ ಆದ ಅಸ್ತಿತ್ವವನ್ನು ಹೊಂದಿದ್ದು, ಮಾನವ ಮಧ್ಯದ ಪರಸ್ಪರಾವಲಂಬನೆಯಿಂದಾಗಿ ನಿರಂತರತೆಯನ್ನು ಕಾಪಾಡಿಕೊಂಡಿರುತ್ತದೆ.

ಭಾರತ ಪ್ರಾಕೃತಿಕ ವೈವಿಧ್ಯತೆಯನ್ನು ಹೊಂದಿದ್ದು, ಇಲ್ಲಿ ಹಲವಾರು ಬುಡಕಟ್ಟು ಸಮುದಾಯಗಳು ಕಂಡುಬರುತ್ತವೆ. ಈ ಸಮಾಜಗಳು ತಮ್ಮದೇ ಆದ ವಿಶಿಷ್ಟ ಲಕ್ಷಣಗಳನ್ನು ಹೊಂದಿವೆ. ಬುಡಕಟ್ಟು ಸಮುದಾಯಗಳ ಕುರಿತು ವಿದ್ವಾಂಸರಲ್ಲಿ ಹಲವಾರು ಗೊಂದಲಗಳಿವೆ. ಹೀಗಾಗಿ ಯಾವುದೋ ಬುಡಕಟ್ಟು ಸಮುದಾಯವನ್ನು ಇನ್ನಾವುದೋ ಸಮುದಾಯಕ್ಕೆ ಸಮೀಕರಿಸಿ ಹೇಳುವ ಸಾಧ್ಯತೆಗಳಿರುತ್ತವೆ. ಬಹುತೇಕ ಬುಡಕಟ್ಟುಗಳು ಮೇಲ್ನೋಟಕ್ಕೆ ಒಂದೆಂಬಂತೆ ಗೋಚರಿಸಿದರೂ ಅವುಗಳ ಅಂತರಾಳಕ್ಕೆ ಇಳಿದು ನೋಡಿದಾಗ ಪ್ರತಿಯೊಂದು ಬುಡಕಟ್ಟು ಅದರದೇ ಆದ ವಿಶಿಷ್ಟ ಸಮಾಜ, ಸಂಸ್ಕೃತಿ, ಪರಂಪರೆ, ಸಂಪ್ರದಾಯಾಚರಣೆಗಳನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಈ ರೀತಿಯ ವಿಶಿಷ್ಟ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿ ಭಾರತದಾದ್ಯಂತ ಗೋಚರಿಸುತ್ತಿರುವ ಬುಡಕಟ್ಟು ಸಮುದಾಯವಾದ ಲಂಬಾಣಿಗರು ತಮ್ಮ ಸಂಸ್ಕೃತಿ ಮತ್ತು ಜೀವನಶೈಲಿಗಳನ್ನು ಕುರಿತು ಗಾಢವಾದ ಅಭಿಮಾನದಿಂದ ಬಾಳಿದವರು. ಈ ಬುಡಕಟ್ಟಿನಲ್ಲಿಯೂ ಒಳಪಂಗಡ ಪದ್ಧತಿ ಇದ್ದು, ಸಗೋತ್ರದವರಲ್ಲಿ ವಿವಾಹ ಸಂಬಂಧಗಳು ಏರ್ಪಡುವುದಿಲ್ಲ. ಇವರ ಪ್ರಮುಖ ಗೋತ್ರಗಳೆಂದರೆ ರಾಠೋಡ್, ಜಾಧವ, ಪವಾರ, ಚವ್ಹಾಣ್. ಈ ಗೊತ್ರಗಳಲ್ಲಿ ಮತ್ತೆ ಹಲವಾರು ಒಳಗೋತ್ರಗಳು ಕಂಡುಬಂದರೂ ಇಂದಿನ ನವ ಪೀಳಿಗೆಗೆ ಒಳಗೋತ್ರಗಳ ಸ್ಪಷ್ಟ ತಿಳುವಳಿಕೆ ಇಲ್ಲದಿರುವುದು ಕಂಡುಬರುತ್ತದೆ.

ಲಂಬಾಣಿಗರು ಮುಖ್ಯ ಗೋತ್ರಗಳ ಆಧಾರದ ಮೇಲೆಯೇ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುತ್ತಾರೆ. ಬಡತನದ ಬೇಗೆ ತಿರಿಸಿಕೊಳ್ಳಲು ತಾಂಡಾಗಳ ಜನರು ಊರು, ನಗರ, ಪಟ್ಟಣ ಗಳಿಗೆ ಉದ್ಯೋಗವನ್ನರಸಿ ತೆರಳುತ್ತಿರುವುದರಿಂದ ಇವರ ಉಡುಗೆ ತೊಡುಗೆಗಳಲ್ಲಿ ಬದಲಾವಣೆಗಳು ಗೋಚರಿಸುತ್ತಿವೆ. ಬದಲಾದ ಸನ್ನಿವೇಶದಲ್ಲಿ, ಆಧುನಿಕತೆಯ ನೆಪದಲ್ಲಿ ಈ ಜನರಲ್ಲಿ ಬೆಳೆದು ಬಂದ ಕಸೂತಿ ಕಲೆ ನಶಿಸುವ ಹಂತದಲ್ಲಿದೆ.

"ತಮ್ಮ ಅಲೆಮಾರಿ ಜೀವನದಲ್ಲಿ ಸಾಂಸ್ಕೃತಿಕ ಚಟುವಟಿಕೆಯಾಗಿ ತಮ್ಮದೇ ಆದ ವಿಶಿಷ್ಟ ನೃತ್ಯ ಶೈಲಿ ಹೊಂದಿದ್ದು, ಲಂಬಾಣಿ ಸಮುದಾಯದ ಜನ ಈತ್ತಿಚಿನ ದಿನಗಳಲ್ಲಿ ಮಾಧ್ಯಮಗಳ ಪ್ರೇರಣೆ ಪ್ರಭಾವಗಳಿಂದ ವಿವಿಧ ರೀತಿಗಳಲ್ಲಿ ಬೇರೆ ನೃತ್ಯ ಪ್ರಕಾರ ಹೊಂದಿಸಿಕೊಂಡು ನರ್ತಿಸುವುದನ್ನು ಕಲಿತಿದ್ದಾರೆ" (ಶ್ರೀನಿವಾಸ ಎಲ್:೨೦೧೦:೯೧). ಹೀಗೆ ಕಾಲಕಾಲಕ್ಕೆ ಮನೋರಂಜನೆಯ ವಿಚಾರಗಳಲ್ಲಿ ಲಂಬಾಣಿಗರು ಬದಲಾವಣೆಗಳನ್ನು ಒಪ್ಪಿಕೊಂಡು ಅನುಕರಿಸುತ್ತಿದ್ದಾರೆ. ಈಗಿನ ಹೊಸ ಹಾಡುಗಾರಲ್ಲಿ ದೂರದರ್ಶನ, ರೇಡಿಯೋ, ಸಿನಿಮಾ ಹಾಡುಗಳ ಪ್ರಭಾವ ಹೆಚ್ಚಾಗಿ ಕಂಡುಬರುತ್ತಿದ್ದರೂ ಗ್ರಾಮೀಣ ಪ್ರದೇಶಗಳಲ್ಲಿ ದೇವರ ಭಜನೆಗಳಿಗೆ ಇಂದಿಗೂ ಕೂಡ ಇವರು ಕಂಚಿನ ಗಂಗಾಳ, ನಗಾರಿ ಮುಂತಾದ ಸಾಂಪ್ರದಾಯಿಕ ಮೇಳಗಳ ಜನಪ್ರಿಯತೆಯನ್ನು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

ಲಂಬಾಣಿಗರ ವಸತಿ ವ್ಯವಸ್ಥೆಯಲ್ಲಿಯೂ ಕೂಡ ಆಧುನಿಕತೆಯ ಸ್ಪರ್ಶವಾಗಿರುವುದು ರಸ್ತೆ ಬದಿಯ ತಾಂಡಾಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಹುಲ್ಲಿನಿಂದ ಕೂಡಿದ ಗುಡಿಸಲುಗಳು, ಮಾಳಿಗೆ ಮನೆಗಳು ಇಂದು ಆರ್.ಸಿ.ಸಿ ಮನೆಗಳಾಗಿ ಮಾರ್ಪಾಡುಗೊಂಡಿವೆ. ಲಂಬಾಣಿಗರ ಆಹಾರ ಪದ್ಧತಿಯಲ್ಲಿಯೂ ಕೂಡ ಹಲವಾರು ಬದಲಾವಣೆಗಳಾಗಿರುವುದು ಕಂಡುಬರುತ್ತದೆ. ಮೂಲದಿಂದಲೂ ಮಾಂಸಹಾರ ಪ್ರಿಯರಾಗಿದ್ದ ಇವರು ಇಂದಿಗೂ ಮಾಂಸಹಾರವನ್ನು ಪ್ರಧಾನವಾಗಿ ಬಳಸುತಿದ್ದು, ಹಲವಾರು ಬಗೆಯ ಆಧುನಿಕ ಆಹಾರಗಳಾದ ಇಡ್ಲಿ, ದೋಸೆ, ಉತ್ತಪ್ಪ ಮುಂತಾದವುಗಳನ್ನು ಸೇವಿಸುತ್ತಿದ್ದಾರೆ.

ಲಂಬಾಣಿಗರು ತಮ್ಮ ಭಾಷೆಯ ವಿಚಾರದಲ್ಲಿಯೂ ಕಟ್ಟಾಭಿಮಾನಿಗಳಾಗಿದ್ದಾರೆ. ಸಾಮಾನ್ಯನಿಂದ ಉನ್ನತ ಹುದ್ದೆಯಲ್ಲಿರುವ ಎಲ್ಲಾ ವ್ಯಕ್ತಿಗಳು ತಮ್ಮ ಸಮುದಾಯದವರೊಂದಿಗೆ ವಿಚಾರ ವಿನಿಮಯಕ್ಕೆ ಬೇರೆ ಭಾಷೆಯ ಬಳಕೆ ಮಾಡುವುದು ತುಂಬಾ ಅಪರೂಪ. ಹೀಗಾಗಿಯೇ ಇಂದಿಗೂ ಗೋರಬೋಲಿ ಭಾಷೆ ದೇಶದಾದ್ಯಂತ ತನ್ನ ಆಸ್ತಿತ್ವವನ್ನು ಉಳಿಸಿಕೊಂಡಿದೆ. ಲಂಬಾಣಿಗರು ಬೇರೆ-ಬೇರೆ ರಾಜ್ಯಗಳಲ್ಲಿ ವಾಸಿಸುತ್ತಿರುವುದರಿಂದ ತಮ್ಮ ನಿತ್ಯ ವ್ಯವಹಾರಕ್ಕೆ ಅಲ್ಲಿಯ ಪ್ರಾಂತೀಯ ಭಾಷೆಯನ್ನು ಬಳಕೆ ಮಾಡಿಕೊಳ್ಳುತ್ತಾರೆ. ಗೋರಬೋಲಿ ಭಾಷೆಯ ಮೇಲೆ ಪ್ರಾಂತೀಯ ಭಾಷೆಗಳ ಪ್ರಭಾವಗಳುಂಟಾಗಿ ಹಲವಾರು ಪ್ರಾಂತೀಯ ಪದಗಳು ಲಂಬಾಣಿ ಭಾಷೆಯಲ್ಲಿ ಸೇರ್ಪಡೆಗೊಂಡಿವೆ. ಗುಲಬರ್ಗಾ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ಕನ್ನಡ ಭಾಷೆಯ ಪ್ರಭಾವ, ಸೋಲಾಪುರದ ಗೋರಬೋಲಿ ಭಾಷೆಯ ಮೇಲೆ ಮರಾಠಿ ಭಾಷೆಯ ಪ್ರಭಾವ ಹಾಗೆಯೇ ರಂಗಾರೆಡ್ಡಿ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವವಾಗಿರುವುದು ಕಂಡುಬರುತ್ತದೆ.

ಸಾಮಾಜಿಕ ಜೀವನದ ಅವಿಭಾಜ್ಯ ಅಂಗಗಳಾಗಿರುವ ಹಬ್ಬಗಳು ಮತ್ತು ಸಂಸ್ಕಾರಗಳು ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಆಧುನಿಕತೆಯ ಪ್ರಭಾವದ ಪರಿಣಾಮವಾಗಿ ಸಂಕ್ಷಿಪ್ತಗೊಂಡರೂ ತಮ್ಮ ಮೂಲ ಅಸ್ತಿತ್ವವನ್ನು ಕಳೆದುಕೊಂಡಿರುವುದಿಲ್ಲ. ಈ ಮೂರು ಜಿಲ್ಲೆಯ ಲಂಬಾಣಿಗರ ಆಚರಣೆಯ ವಿಧಿವಿಧಾನಗಳಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಲಂಬಾಣಿಗರ ಸಾಮಾಜಿಕ ಜೀವನದ ಆಳ ಅಗಲಗಳನ್ನು ಪರಿಶೋಧಿಸಿದಾಗ ಕಂಡುಬಂದ ಸಾಮಾಜಿಕ ವೈಶಿಷ್ಟ್ಯಗಳ ವಿವರ ಹೀಗಿವೆ.

**೪.೧. ಲಂಬಾಣಿಗರ ಪಾಡಾಗಳು**

ಪ್ರತಿಯೊಂದು ಸಮಾಜದ ಸಂರಚನೆಯಲ್ಲಿ ಕುಲ, ಬಳಿ, ಗೋತ್ರಗಳು ಪ್ರಧಾನವಾದ ಪಾತ್ರ ವಹಿಸುತ್ತವೆ. "ಬರಿ, ಬಳಿ, ಕುಲ, ಗೋತ್ರ ಮುಂತಾದ ಪದಗಳು ವಂಶದ ಅರ್ಥವನ್ನು ಸೂಚಿಸುವ ಪದಗಳು. ರೂಢಿಯಲ್ಲಿ ಬ್ರಾಹ್ಮಣರು 'ಗೋತ್ರ' ಎನ್ನುತ್ತಾರೆ. ಬ್ರಾಹ್ಮಣರಲ್ಲದವರು ವಂಶ, ಕುಲ, ಬಳಿ, ಬರಿ ಎಂದು ಹೇಳುತ್ತಾರೆ. ಋಷಿ ಮೂಲದಿಂದ ಬಂದ ವಂಶವನ್ನು ಗೋತ್ರ ಎಂದು ಕರೆಯುವುದು ಸಂಪ್ರದಾಯ ಆದರೂ ಗೋತ್ರ, ವಂಶ, ಕುಲ, ಬಳಿ, ಬರಿ ಮುಂತಾದ ಎಲ್ಲಾ ಪದಗಳ ಅರ್ಥ ಒಂದೇ ಆಗುತ್ತದೆ" (ಕೋರನ ಸರಸ್ವತಿ ಪ್ರಕಾಶ:೨೦೧೦:೧೨೭). ಆರಂಭದಲ್ಲಿ ಬ್ರಾಹ್ಮಣರಲ್ಲಿ ಗೋತ್ರಗಳ ಪರಿಕಲ್ಪನೆ ಹುಟ್ಟಿಕೊಂಡಿತು. ನಂತರ ಕ್ರಮೇಣವಾಗಿ ಬುಡಕಟ್ಟು ಸಮುದಾಯ ಗಳಲ್ಲಿ ಪ್ರಸರಣವಾಯಿತೆಂಬುದು ಮಾನವಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. "ಸ್ಪಷ್ಟವಾಗಿ ಗೋತ್ರಗಳ ನಾಮನಿವೇದಕ ಸೂಚಿಸುವಂತೆ ಗೋತ್ರಗಳು ಬ್ರಾಹ್ಮಣ ಪದ್ಧತಿಯಿಂದ ಎರವಲು ಪಡೆದವುಗಳಾಗಿವೆ ಮತ್ತು ಭಿನ್ನ ಗೋತ್ರಗಳಲ್ಲಿ ಮದುವೆಯಾಗುವುದರ ಮೂಲಕ ಬಂದವುಗಳಲ್ಲ"(ಹಟ್ಟನ ಜೆ.ಹೆಚ್: ೧೯೪೬:೫೫). ಹೀಗೆ ಆರಂಭದಲ್ಲಿ ಬ್ರಾಹ್ಮಣರಲ್ಲಿದ್ದ ಗೋತ್ರಗಳು ಕ್ರಮೇಣ ಬುಡಕಟ್ಟುಗಳ ವಂಶೀಯತೆ, ವಿವಾಹಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತಿವೆ. ಗೋತ್ರಗಳ ಉತ್ಪತ್ತಿಯು ಪೂರ್ವಜರಿಂದ, ಕಾಲ್ಪನಿಕ ವ್ಯಕ್ತಿಯಿಂದ, ಮರ ಗಿಡ ಬಳ್ಳಿಗಳಿಂದ, ಸೂರ್ಯ, ಚಂದ್ರ, ವೃತ್ತಿ ಮುಂತಾದ ವ್ಯಕ್ತಿ, ವಸ್ತುಗಳೊಂದಿಗೆ ಸಂಬಂಧ ಹೊಂದಿರುತ್ತವೆ. ಬುಡಕಟ್ಟಿನ ಸಮುದಾಯವಾದ ಲಂಬಾಣಿಗರಲ್ಲಿ ಬಳಿ, ಗೋತ್ರ ಅಥವಾ ಬೆಡಗುಗಳನ್ನು ಪಾಡಾ, ಗೋತ, ಜಾತ್ ಎಂಬುದಾಗಿ ಕರೆಯುತ್ತಾರೆ. ಲಂಬಾಣಿಗರ ಮೂಲ ಪುರುಷನಾದ ದಾದಾ ಮೋಲಾ ಮತ್ತು ರಾಧಾ ದಾದಿಯ ವಂಶಸ್ಥರಾದ ರಾಠೋಡನಿಂದಾಗಿ 'ಭೂಕ್ಯಾ' ಪಾಡಾ ಹಾಗೂ ಪವಾರ, ಚವ್ಹಾಣರಿಂದ 'ಜಾತ್' ಪಾಡಾದ ಉಗಮವಾಯಿತು. ಲಂಬಾಣಿಗರಲ್ಲಿ ಪಾಡಾಗಳ ಆಧಾರದ ಮೇಲೆ ಮೇಲುಕೀಳು ಎಂಬ ಸಾಮಾಜಿಕ ಸ್ತರೀಕರಣ ಕಂಡುಬರುವುದಿಲ್ಲ. ಎಲ್ಲಾ ಪಾಡಾಗಳು ಸಮಾನವಾದ ಸ್ಥಾನಮಾನ ಗಳನ್ನು ಹೊಂದಿರುತ್ತವೆ. ಭೂಕ್ಯಾ ಪಾಡಾದಲ್ಲಿ 'ತೇರನಚೌದ ಸತ್ತಾಯಿಸ' ಪಾಡಾ ಎಂದರೆ ಹದಿಮೂರು ಮತ್ತು ಹದಿನಾಲ್ಕು ಒಟ್ಟು ೨೭ ಪಾಡಾಗಳು ಕಂಡುಬರುತ್ತವೆ. ಪವಾರ ಪಾಡಾವನ್ನು 'ಬಾರಗೋತ'(ಹನ್ನೆರಡು ಪಾಡಾ) ಪವಾರ ಹಾಗೂ ಚವ್ಹಾಣ ಪಾಡಾವನ್ನು 'ಛೋ ಗೋತ'(ಆರು ಪಾಡಾ) ಚವ್ಹಾಣ

ಎಂದು ಕರೆಯುತ್ತಾರೆ. ಕಾಲಾಂತರದಲ್ಲಿ ವಡತಿಯಾ ಹಾಗೂ ಚೀನಿರಾಠೋಡ ಎಂಬ ಪಂಗಡಗಳು ಉಗಮವಾದವು. ವಡತಿಯಾದಲ್ಲಿ ಹನ್ನೆರಡು ಪಾಡಾಗಳು ಹಾಗೂ ಚೀನಿರಾಠೋಡ ಪಂಗಡದಲ್ಲಿ ಮೂರು ಪಾಡಾಗಳು ಕಂಡುಬರುತ್ತವೆ. ಇವು ಕೂಡಾ ಜಾತ್ ಪಂಗಡವನ್ನು ಸೇರುತ್ತವೆ. ವಡತಿ ಯಾದವರನ್ನು ಜಾಧವ ಎಂದು ಕರೆಯುತ್ತಾರೆ. ಲಂಬಾಣಿಗರಲ್ಲಿ ವಿವಾಹಗಳು ಪಾಡಾಗಳ ಆಧಾರದ ಮೇಲೆ ಏರ್ಪಡುತ್ತವೆ. ಭೂಕ್ಯಾ ಪಾಡಾದವರು ಅದೇ ಪಾಡಾದವರೊಂದಿಗೆ ವಿವಾಹ ಸಂಬಂಧಗಳನ್ನು ಏರ್ಪಡಿಸುವುದಿಲ್ಲ. ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶ ಹೀಗೆ ಯಾವುದೇ ಭಾಗದಲ್ಲಿ ವಾಸಿಸುತ್ತಿದ್ದರೂ ಅವರು ಪರಸ್ಪರ ಸಹೋದರ ಸಹೋದರಿಯರಾಗುತ್ತಾರೆ. ಭೂಕ್ಯಾ ಪಂಗಡದವರು ಜಾತ್ ಪಂಗಡದ ಪವಾರ, ಚವ್ಹಾಣ, ಚೀನಿರಾಠೋಡ ಹಾಗೂ ವಡತಿಯಾ ಪಾಡಾದವರೊಂದಿಗೆ ವಿವಾಹವಾಗುತ್ತಾರೆ. ಜಾತ್ ಪಂಗಡದೊಳಗೆ ಬರುವ ಚೀನಿರಾಠೋಡ ಹಾಗೂ ವಡತಿಯಾ ಪಾಡಾಗಳು ಭೂಕ್ಯಾ ಹಾಗೂ ಅದೇ ಪಂಗಡದ ಪವಾರ ಚವ್ಹಾಣರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತವೆ. ಆದರೆ ಜಾತ್ ಪಂಗಡದ ಪವಾರ ಮತ್ತು ಚವ್ಹಾಣರ ಮಧ್ಯ ವಿವಾಹ ಸಂಬಂಧಗಳು ಏರ್ಪಡುವದಿಲ್ಲ. ಅವರು ಭೂಕ್ಯಾ, ಚೀನಿರಾಠೋಡ ಹಾಗೂ ವಡತಿಯಾ ಪಾಡಾದವರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾರೆ. ವೈವಾಹಿಕ ಸಂಬಂಧ ಬೆಳೆಸುವ ಪದ್ಧತಿಯಲ್ಲಿ ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಹಾಗೂ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಯಾವುದೇ ಭಿನ್ನತೆಯಿಲ್ಲದಿರುವದು ಸ್ಪಷ್ಟವಾಗಿ ಕಂಡುಬರುತ್ತದೆ. ಈ ಮೂರು ಜಿಲ್ಲೆಯ ಲಂಬಾಣಿಗರಲ್ಲಿ ವೈವಾಹಿಕ ಸಂಬಂಧ ನಿರಾತಂಕವಾಗಿ ನಡೆಯುತ್ತಿರುವದು ಕಂಡುಬರುತ್ತದೆ.

**ಗುಲಬರ್ಗಾ ಜಿಲ್ಲೆಯ ಚವ್ಹಾಣ್ ಪಾಡಾದ ಉಪ ಪಾಡಾಗಳು**

೧.ಮೂಡ ೨.ಲಾವಡ್ಯಾ ೩.ಕೊರ್ರಾ ೪.ಸಬಾವಟ ೫.ಪಾಲತ್ಯಾ ೬.ಕೇಳೂತ

**ಸೋಲಾಪುರ ಜಿಲ್ಲೆಯ ಚವ್ಹಾಣ್ ಪಾಡಾದ ಉಪ ಪಾಡಾಗಳು**

೧.ಮೂಡ ೨.ಲಾವಡಿಯಾ ೩.ಕರ್ರಾ ೪.ಸಪಾವಟ ೫.ಪಾಲ್ತ್ಯಾ ೬.ಕೇಳೂತ

**ರಂಗಾರೆಡ್ಡಿ ಜಿಲ್ಲೆಯ ಚವ್ಹಾಣ್ ಪಾಡಾದ ಉಪ ಪಾಡಾಗಳು**

೧.ಮೂಡ ೨.ಲಾವುಡ್ಯಾ ೩.ಕೊರ್ರಾ ೪.ಸಪಾವಟ ೫.ಪಾಲ್ತ್ಯಾ ೬.ಕೆಳಾವತ್

**ಗುಲಬರ್ಗಾ ಜಿಲ್ಲೆಯ ಪವಾರ ಪಾಡಾದ ಉಪ ಪಾಡಾಗಳು**

೧.ಆಯೋತ ೨.ಭಯೋತ ೩.ಬಾಣ್ಣೆ ೪.ತರಬಾಣ್ಣೆ ೫.ಲೋಕಾವತ ೬.ವಾಂಕಡೋತ ೭.ವಿಸಳಾವತ ೮.ಗೋರಾಮ ೯.ಆಮಗೋತ ೧೦.ವಿಂಜರಾವತ ೧೧.ಝುರಪಲಾ ೧೨.ಲುಣಸಾವತ

**ಸೋಲಾಪುರ ಜಿಲ್ಲೆಯ ಪವಾರ ಪಾಡಾದ ಉಪ ಪಾಡಾಗಳು**

೧.ಆಯೋತ ೨.ಭಯೋತ ೩.ಬಾಣ್ಣೆ ೪.ತರಬಾಣ್ಣೆ ೫.ಲೋಕಾವತ ೬.ಭಾಂಕಡೋತ ೭.ವಿಶಳಾವತ ೮.ಗೋಹಾಮ್ ೯.ಆಮಗೋತ ೧೦.ಭಿಂಜರಾವತ ೧೧.ಝುರಪಲಾ ೧೨.ಲುಣಾವತ

**ರಂಗಾರೆಡ್ಡಿ ಜಿಲ್ಲೆಯ ಪವಾರ ಪಾಡಾದ ಉಪ ಪಾಡಾಗಳು**

೧.ಏತಾ ಪವಾರ ೨.ಚೇತಾ ಪವಾರ ೩.ಬಾಣ್ಣೆ ಪವಾರ ೪.ತರಬಾಣ್ಣೆ ಪವಾರ ೫.ಲೋಕಾ ಪವಾರ ೬.ವಾಂಕಡೋತ ಪವಾರ ೭.ಇಸಲಾವತ ಪವಾರ ೮.ಗೋರ್‍ರಾಮ್ ಪವಾರ ೯.ಆಮಗೋತ ಪವಾರ ೧೦.ಇಂದ್ರಾವತ ಪವಾರ ೧೧.ಝುರಪ್ಲಾ ಪವಾರ ೧೨.ನುಣ್ಸಾವತ ಪವಾರ

**ಗುಲಬರ್ಗಾ ಜಿಲ್ಲೆಯ ರಾಠೋಡ ಪಾಡಾದ ಉಪ ಪಾಡಾಗಳು**

ತೇರೆವಾಳೋ ರಾಠೋಡ (ಹದಿಮೂರು ಪಂಗಡದ ರಾಠೋಡ)

೧.ಕೊಡಾವತ ೨.ರಾಮಾವತ ೩.ಹರಾವತ ೪.ನೇಣಾವತ ೫.ದೇವಸೋತ ೬.ಪಾತಳೋತ ೭.ಮೇಘಾವತ ೮.ಖೇತಾವತ ೯.ಉಡಾವತ ೧೦.ಕರಮತೋಟ ೧೧.ಡುಂಗಾವತ ೧೨.ಧಾನಾವತ ೧೩.ಸಂಗಾವತ

ಚೌದೇವಾಳೋ ರಾಠೋಡ (ಹದಿನಾಲ್ಕು ಪಂಗಡದ ರಾಠೋಡ)

೧.ಖೋಲಾ ೨.ರಾತಲಾ ೩.ಖಾಟರೋತ ೪.ಮದ್ರೇಚಾ ೫.ರಣಸೋತ ೬.ದುದಾವತ ೭.ಇಸ್ರಿವಾಳ ೮.ಹಿಬಾವತ ೯.ಚಾಪಾವತ ೧೦.ಢಾಲೇವಾಳ ೧೧.ಪೇಲಾ ೧೨.ದಾದು ೧೩.ಚಾಪಾವತ ೧೪.ಮೇಪಲೋತ

**ಸೋಲಾಪುರ ಜಿಲ್ಲೆಯ ರಾಠೋಡ ಪಾಡಾದ ಉಪ ಪಾಡಾಗಳು**

ತೇರೆವಾಳೋ ರಾಠೋಡ

೧.ಕಡಾವತ ೨.ರಾಮಾವತ ೩.ಹರಾವತ ೪.ನೇಣಾವತ ೫.ದೇವಸೋತ ೬.ಪಾತಳೋತ ೭.ಘೇಗಾವತ ೮.ಖೇತಾವತ ೯.ಉದಾವತ ೧೦.ಕರಮಟೋಟ ೧೧.ಡುಂಗಾವತ ೧೨.ಧಾನಾವತ ೧೩.ಸಂಗಾವತ

ಚೌದೇವಾಳೋ ರಾಠೋಡ

೧.ಖೋಲಾ ೨.ರಾತಳಾ ೩.ಖಟರೋತ ೪.ಮೋದ್ರೆಚ ೫.ರಣಸೋತ ೬.ದೇವರಂತ ೭.ಕಳಸೌತ ೮.ರಿಗಾವತ ೯.ಜಿಂದಾವತ ೧೦.ದಾಲವಾಣ ೧೧.ಸದಾರತ ೧೨.ದಾಮಣೀಯ ೧೩.ಅನಾವತ ೧೪.ಮಾಳಗೋತ

**ರಂಗಾರೆಡ್ಡಿ ಜಿಲ್ಲೆಯ ರಾಠೋಡ ಪಾಡಾದ ಉಪ ಪಾಡಾಗಳು**

ತೇರೆವಾಳೋ ರಾಠೋಡ

೧.ಕೊಡಾವತ ೨.ರಾಮಾವತ ೩.ಹರಾವತ ೪.ನೇಣಾವತ ೫.ದೇವಸೋತ ೬.ಪಾತಳೋತ ೭.ಮೇಗಾವತ ೮.ಖೇತಾವತ ೯.ಉದಾವತ ೧೦.ಕರಮತೋಟ ೧೧.ಡುಂಗಾವತ ೧೨.ದೇಗಲೋತ ೧೩.ಸಂಗಾವತ

**ಚೌದೇವಾಳೋ ರಾಠೋಡ**

೧.ಖೊಲಾ ೨.ರಾತಳಾ ೩.ಖಾಟರೋತ ೪.ಮೊದ್ರೆಚಾ ೫.ರಣಸೋತ ೬.ಗೀದಾವತ ೭.ಮೇರಾಜೋತ ೮.ರಾಜಾವತ ೯.ಪೀಪಾವತ ೧೦.ಖೋಕರೇಚ ೧೧.ಪಿರೋಯಾ ೧೨.ಖಂಡಕ್ಯಾ ೧೩.ಖೀಮಾವತ ೧೪.ಮೇರಾವತ

**ಗುಲಬರ್ಗಾ ಜಿಲ್ಲೆಯ ವಡತಿಯಾ ಪಾಡಾದ ಉಪ ಪಾಡಾಗಳು**

೧.ಲಾಕಾವತ ೨.ನುಣಾವತ ೩.ಬಾದಾವತ ೪.ಧಾರಾವತ ೫.ಗುಗಲೋತ ೬.ಹಾಲಾವತ ೭.ತೇಜಾವತ ೮.ಮಾಳೋತ ೯.ಬೋಡಾವತ ೧೦.ಕುಣಸಾತ ೧೧.ಜೇಟೋದ ೧೨.ಅಜಮೇರಾ

**ಸೋಲಾಪುರ ಜಿಲ್ಲೆಯ ವಡತಿಯಾ ಪಾಡಾದ ಉಪ ಪಾಡಾಗಳು**

೧.ಲಾಖಾವತ ೨.ನುಣಾವತ ೩.ಬಾದಾವತ ೪.ಧಾರಾವತ ೫.ಗುಗಲೋತ ೬.ಹಾಲಾವತ ೭.ತೇಜಾವತ ೮.ಮಾಳೋತ ೯.ಬೋಡಾವತ ೧೦.ಕುಣಸಾದ ೧೧.ಜೇತೋದ ೧೨.ಅಜಮೋರಾ

**ರಂಗಾರೆಡ್ಡಿ ಜಿಲ್ಲೆಯ ವಡತಿಯಾ ಪಾಡಾದ ಉಪ ಪಾಡಾಗಳು**

೧.ಲಾಕಾವತ ೨.ನೂಣಾವತ ೩.ಬಾದಾವತ ೪.ಧಾರಾವತ ೫.ಘುಗಲೋತ ೬.ಹಾಲಾವತ ೭.ತೇಜಾವತ ೮.ಮಾಳೋತ ೯.ಬೋಡ ೧೦.ಕುಣಾಸೋತ ೧೧.ಭರೋತ ೧೨.ಅಜಮೇರಾ ೧೩.ಉಂದಾವತ್ ೧೪.ಬರ್ಮಾವತ ೧೫.ಪಾಡ್ಯ

ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳಲ್ಲಿ ವಡತಿಯಾ ವಂಶದಲ್ಲಿ ಬಾರಾಪಾಡಾ ವಡತಿಯಾ (ಹನ್ನೆರಡು ಪಾಡಾಗಳು) ಕಂಡುಬರುತ್ತದೆ. ಆದರೆ ರಂಗಾರೆಡ್ಡಿ ಜಿಲ್ಲೆಯಲ್ಲಿ ಪಂದ್ರಾ ಪಾಡಾ ವಡತಿಯಾ (ಹದಿನೈದು) ಪಾಡಾಗಳು ಕಂಡುಬರುತ್ತದೆ. ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳಿಗಿಂತ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ವಡತಿಯಾ ವಂಶದಲ್ಲಿ ಉಂದಾವತ್, ಬರ್ಮಾವತ ಮತ್ತು ಪಾಡ್ಯ ಎಂಬ ಮೂರು ಹೆಚ್ಚಿನ ಪಾಡಾಗಳು ಕಂಡುಬರುತ್ತವೆ.

**ಗುಲಬರ್ಗಾ ಜಿಲ್ಲೆಯ ಚೀನಿರಾಠೋಡ ಪಾಡಾದ ಉಪ ಪಾಡಾಗಳು**

೧.ಜಾಟೋತ

೨.ಆಲೋತ

೩.ಬಾಣ್ಣೋತ

ಬಾಣ್ಣೋತ ಪಾಡಾದ ಉಪ ಪಾಡಾಗಳು

೧.ಕಾನಾವತ ೨.ಪಾನಾವತ ೩.ಧೋನಾವತ ೪.ವಧಾಸೋತ ೫.ಕುಥಾವತ ೬.ಮದನ ೭.ಮುಚಾಳ ೮.ಆಲೋತ ೯.ಬಾಡೋಕ ೧೦.ಧರಮಸೋತ ೧೧.ಧೀರಾವತ ೧೨.ಲಾವರಿ ೧೩.ಆಡೋತ

**ಸೋಲಾಪುರ ಜಿಲ್ಲೆಯ ಚೀನಿರಾಠೋಡ ಪಾಡಾದ ಉಪ ಪಾಡಾಗಳು**

೧.ಜಾಟೂತ

೨.ಆಲೋತ

೩.ಬಾಣ್ಣೋತ

ಬಾಣ್ಣೋತ ಪಾಡಾದ ಉಪ ಪಾಡಾಗಳು

೧.ಕೋನಾವತ ೨.ಪುನಾವತ ೩.ಧೋನಾವತ ೪.ವಧಸೋತ ೫.ಕುತ್ತಾವತ ೬.ಮೋದನ ೭.ಮುಚ್ಛಾ ೮.ಆಲೋತ ೯.ಬಾಡುಕ ೧೦.ಧರಮಸೂತ ೧೧.ಧೀರಾವತ ೧೨.ಲೋವರಿ ೧೩.ಆಡೋದ

**ರಂಗಾರೆಡ್ಡಿ ಜಿಲ್ಲೆಯ ಚೀನಿರಾಠೋಡ ಪಾಡಾದ ಉಪ ಪಾಡಾಗಳು**

೧. ಜಾಠೋತ್

೨. ಆಲೂಟ

೩. ಬಾಣೋತ

ಬಾಣೋತ ಪಾಡಾದ ಉಪ ಪಾಡಾಗಳು

೧.ಕಾನಾವತ ೨.ಪಾನಾವತ ೩.ಧಾನಾವತ ೪.ಸಬ್ದಾಸೋತ ೫.ಕುಂತಾವತ ೬.ಮಾಣೋತ ೭.ಭೋಜಾವತ ೮.ರೂಪಾವತ ೯.ಬಾಂಡಾವತ ೧೦.ಧರ್ಮಸೋತ ೧೧.ಧೀರಾವತ ೧೨.ಲಾಹೋರಿ ೧೩.ಆಡೋತ

ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರು ಜಾಟೋತ, ಆಲೋತ ಮತ್ತು ಬಾಣ್ಣೋತ ಪಾಡಾಗಳಿಗೆ ಚೀನಿರಾಠೋಡ ಎಂದು ಕರೆದರೆ, ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಈ ಮೂರು ಪಾಡಾಗಳಿಗೆ ಬಾಣ್ಣೋತ ಎಂದು ಕರೆಯುತ್ತಾರೆ. ಲಂಬಾಣಿಗರು ರಾಠೋಡ, ಪವಾರ, ಚವ್ಹಾಣ, ಜಾಧವ ಮತ್ತು ಚೀನಿರಾಠೋಡ ಎಂಬ ಐದು ಪಾಡಾಗಳ ಆಧಾರದ ಮೇಲೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾರೆ. ವೈವಾಹಿಕ ಸಂಬಂಧಗಳಲ್ಲಿ ಉಪ ಪಾಡಾಗಳು ಅಥವಾ ಉಪಪಾಡಾಗಳಿಗೆ ಪ್ರಾಮುಖ್ಯತೆ ಇಲ್ಲದಿರುವದು ಸ್ಪಷ್ಟವಾಗಿ ಕಂಡುಬರುತ್ತದೆ.

ಇಂದಿನ ಲಂಬಾಣಿ ಯುವಕರಿಗೆ ಭೂಕ್ಯಾ ಪಂಗಡದ ರಾಠೋಡ, ಜಾತ್ ಪಂಗಡದ ಪವಾರ, ಚವ್ಹಾಣ, ಜಾಧವ ಮತ್ತು ಚೀನಿರಾಠೋಡ ಈ ಮೂಲ ಪಾಡಾಗಳ ತಿಳುವಳಿಕೆ ಇದೆಯೇ ಹೊರತು ಉಪಪಾಡಾಗಳ ಅರಿವಿಲ್ಲದಿರುವದು ಹೆಚ್ಚಾಗಿ ಗೋಚರಿಸುತ್ತಿದೆ. ಕರ್ನಾಟಕದ ಗುಲಬರ್ಗಾ ಹಾಗೂ ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಗಳ ಲಂಬಾಣಿಗರು ತಮ್ಮ ಮೂಲ ಪಾಡಾದ ಹೆಸರು ಹಾಗೂ ನಾಯಕ ಎಂಬ ನಾಮಧ್ಯೇಯಗಳನ್ನು ಅಡ್ಡ ಹೆಸರುಗಳನ್ನಾಗಿ ಇಟ್ಟುಕೊಳ್ಳುತ್ತಾರೆ. ಆದರೆ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಮೂಲ ಪಾಡಾದಲ್ಲಿ ಬರುವ ಉಪ ಪಾಡಾಗಳ ಹೆಸರು ಹಾಗೂ ನಾಯಕ ಎಂಬ ನಾಮಧ್ಯೇಯಗಳನ್ನು ತಮ್ಮ ಅಡ್ಡ ಹೆಸರುಗಳನ್ನಾಗಿ ಇಟ್ಟುಕೊಳ್ಳುತ್ತಿರುವದು ಸ್ಪಷ್ಟವಾಗಿ ಕಂಡುಬರುತ್ತದೆ.

## ೪.೨. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರು ಆಚರಿಸುವ ಸಂಸ್ಕಾರಗಳು

ಮೂಲತಃ ಭಾರತೀಯ ಸಮಾಜವನ್ನು ಧರ್ಮ ಪ್ರಧಾನವಾದ ಸಮಾಜವೆಂದು ಕರೆಯಲಾಗುತ್ತದೆ. ಪ್ರಾಚೀನ ಕಾಲದಿಂದಲೂ ನಮ್ಮಲ್ಲಿ ಆಧ್ಯಾತ್ಮಿಕತೆಗೆ ಪ್ರಾಶಸ್ತ್ಯವಿರುವುದನ್ನು ಗಮನಿಸುತ್ತೇವೆ. ಭಾರತ ವನ್ನಾಳಿದ ಅನೇಕ ರಾಜ ಮಹಾರಾಜರು ಗುರು ಹಾಗೂ ಋಷಿಮುನಿಗಳಿಗೆ ರಾಜಾಶ್ರಯವನ್ನು ನೀಡಿ ಅವರ ಪರಂಪರೆಗೆ ಹೆಚ್ಚಿನ ಮಾನ್ಯತೆಯನ್ನು ದೊರಕಿಸಿ ಅದರ ನಿರಂತರತೆಗೆ ಕಾರಣೀಕರ್ತ ರಾದರು. ಹಲವಾರು ರಾಜಕೀಯ ಏರಿಳಿತ, ಆಕ್ರಮಣಗಳನ್ನು ಎದುರಿಸಿದರೂ ಕೂಡಾ ಅವುಗಳನ್ನೆಲ್ಲಾ ಜೀರ್ಣಿಸಿಕೊಂಡ ಭಾರತೀಯ ಪರಂಪರೆಯು ಮತ್ತಷ್ಟು ಶಕ್ತಿಯುತವಾಗಿ ಹೊರಹೊಮ್ಮಿರುವುದನ್ನು ಕಾಣುತ್ತೇವೆ. ಭಾರತೀಯ ಸಂಸ್ಕೃತಿಯು ಪ್ರಾಚೀನ ಕಾಲದಿಂದ ಇಂದಿನವರೆಗೂ ಜೀವಂತವಾಗಿ ನಿರಂತರವಾಗಿ ಬೆಳೆದು ಬಂದು ವಿಶ್ವವ್ಯಾಪಿ ಮನ್ನಣೆ ಪಡೆಯಲು ಅದರ ಬುನಾದಿಯಾಗಿರುವ ಆಧ್ಯಾತ್ಮಿಕ ದೃಷ್ಟಿಯೇ ಕಾರಣವಾಗಿದೆ. ಭಾರತೀಯ ಆಹಾರ, ವಿಹಾರ, ತತ್ವ, ವಿವೇಚನೆ, ಸತ್ಯಾನ್ವೇಷಣೆ, ಸೌಂದರ್ಯೋಪಾಸನೆ ಮುಂತಾದ ಅಂಶಗಳೆಲ್ಲದರಲ್ಲಿಯೂ ಧಾರ್ಮಿಕ ಸಮನ್ವಯತೆಯನ್ನು ಕಾಣುತ್ತೇವೆ.

ಸ್ವಾಮಿ ವಿವೇಕಾನಂದರು "ಭಾರತೀಯ ಸಂಸ್ಕೃತಿಯ ಹಿರಿಮೆಯನ್ನು ವರ್ಣಿಸುತ್ತ ಪ್ರಪಂಚದಲ್ಲಿ ಯಾವುದಾದರೂ ಪುಣ್ಯ ಭೂಮಿಯೆಂದು ಕರೆಯಿಸಿಕೊಳ್ಳಲು ಅರ್ಹವಾಗಿದ್ದರೆ, ಜೀವಿಗಳು ತಮ್ಮ ಜೀವನದ ಕೊನೆಯ ಕರ್ಮವನ್ನು ಸವೆಸಲು ಬರಬೇಕಾದ ಸ್ಥಳ ಹೊಂದಿದ್ದರೆ, ಯಾವುದಾದರೂ ದೇಶದಲ್ಲಿ ಮಾನವ ಕೋಟಿಯ ಮಾಧುರ್ಯ, ಔದಾರ್ಯ, ಪವಿತ್ರಶಾಂತಿ ಎಲ್ಲಕ್ಕೂ ಮಿಗಿಲಾಗಿ ಧ್ಯಾನ ಮತ್ತು ಆಧ್ಯಾತ್ಮಿಕ ಬದುಕಿನಲ್ಲಿ ತನ್ನ ಪರಾಕಾಷ್ಠತೆಯನ್ನು ಮುಟ್ಟಿದ್ದರೆ ಅದು ಈ ಭಾರತ ದೇಶವಾಗಿರುತ್ತದೆ" ಎಂದು ಹೇಳಿದ್ದಾರೆ.

ತಾಯಿಯ ಗರ್ಭದಿಂದ ಭೂಮಿಗೆ ಬರುವ ಮಗುವಿನ ಅಂತರಂಗ ಮತ್ತು ಬಹಿರಂಗಗಳೆರಡು ಬಿಳಿಯ ಹಾಳೆಯಂತಿರುತ್ತವೆ. ಇಂಥಹ ವ್ಯಕ್ತಿಗೆ ಯೋಗ್ಯ ರೀತಿಯ ಸಂಸ್ಕಾರವನ್ನು ಕೊಟ್ಟು ಸಾಮಾಜೀಕರಣಗೊಳಿಸುವದು ಅತೀ ಅವಶ್ಯವಾಗಿರುತ್ತದೆ. "ಸಾಮಾನ್ಯ ಅರ್ಥದಲ್ಲಿ ಸಂಸ್ಕಾರವೆಂದರೆ ಶುದ್ಧೀಕರಣಗೊಳಿಸುವುದು, ಪವಿತ್ರಗೊಳಿಸುವದು ಹಾಗೂ ಶುಚಿಯಾಗಿರಿಸುವದು ಎಂದರ್ಥ ವಾಗುತ್ತದೆ"(ಹಿರೇಮಠ ಎಸ್ ಜಿ:೨೦೦೭:೩೫). ಧರ್ಮಗ್ರಂಥಗಳಲ್ಲಿ ಸಂಸ್ಕಾರಗಳಿಗೆ ವೈಶಿಷ್ಟ್ಯಪೂರ್ಣವಾದ ಅರ್ಥವಿವರಣೆಯನ್ನು ಕೊಡಲಾಗಿದೆ. ಯಾವುದನ್ನು ಯೋಗ್ಯವಾಗಿ, ನಿಶ್ಚಿತ ವಿಧಿವಿಧಾನಗಳಿಂದ ಸುಂದರವಾಗಿ, ಕ್ರಿಯಾಬದ್ಧವಾಗಿ ಆಚರಿಸುವೆವೋ ಅದೇ ಸಂಸ್ಕಾರವೆಂದು ದಾರ್ಶನಿಕರು ಅಭಿಪ್ರಾಯ ಪಟ್ಟಿರುತ್ತಾರೆ. ವ್ಯಕ್ತಿಯಲ್ಲಿ ಸುಂದರವಾದ ವ್ಯಕ್ತಿತ್ವವನ್ನು ನಿರ್ಮಿಸಲು, ಸರ್ವಾಂಗೀಣ ವ್ಯಕ್ತಿತ್ವದ ಬೆಳವಣಿಗೆಗೆ, "ಅವನ ಪಿಂಡೋತ್ಪತ್ತಿಯಿಂದ ಮರಣ ಪರ್ಯಂತವೂ ವಿವಿಧ ಪ್ರಕಾರದ ಸಂಸ್ಕಾರಗಳನ್ನು ನೆರವೇರಿಸಬೇಕಾಗುವದು.

ನಿಶ್ಚಿತ ಕ್ರಮ ಹಾಗೂ ವಿಧಿ-ವಿಧಾನಗಳಿಂದ ವ್ಯಕ್ತಿಯ ಶಾರೀರಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಲು ಸಂಸ್ಕಾರಗಳು ಸಹಾಯಕವಾಗುತ್ತವೆ. ಸಂಸ್ಕಾರಗಳಲ್ಲಿ ಪೂರ್ವ ಸಂಸ್ಕಾರಗಳು ಹಾಗೂ ಉತ್ತರ ಸಂಸ್ಕಾರಗಳೆಂಬ ಎರಡು ಪ್ರಭೇದಗಳನ್ನು ಮಾಡಲಾಗಿದೆ. ಜೀವಿಯ ಗರ್ಭೋತ್ಪತ್ತಿಯಿಂದ ಮರಣದವರೆಗೂ ನೆರವೇರಿಸುವ ಸಂಸ್ಕಾರಗಳನ್ನು ಪೂರ್ವಸಂಸ್ಕಾರಗಳೆಂದು, ಮರಣಾನಂತರ ಆಚರಿಸಲ್ಪಡುವ ಸಂಸ್ಕಾರಗಳನ್ನು ಉತ್ತರಸಂಸ್ಕಾರ ಅಥವಾ ಮರಣೋತ್ತರ ಸಂಸ್ಕಾರಗಳೆಂದು ಕರೆಯಲಾಗುತ್ತದೆ.

"ಹಿಂದೂ ಧರ್ಮಸೂತ್ರದ ಪ್ರಕಾರ ಹುಟ್ಟಿನಿಂದ ಮಸಣದವರೆಗೂ ಒಬ್ಬ ವ್ಯಕ್ತಿಯು ಅನೇಕ ವಿಧವಾದ ಸಂಸ್ಕಾರಗಳನ್ನು ಪಡೆಯಬೇಕಾಗುತ್ತದೆ. ಶಾಸ್ತ್ರ ಗ್ರಂಥಗಳಲ್ಲಿ ಸಂಸ್ಕಾರಗಳ ಸಂಖ್ಯೆಯನ್ನು ಹತ್ತರಿಂದ ಐವತ್ತೆರಡರವರೆಗೆಂದು ವಿವರಿಸಲಾಗಿದೆ. ವೇದ ಹಾಗೂ ಉಪನಿಷತ್ತುಗಳಲ್ಲಿ ಕಟ್ಟಾ ಬ್ರಾಹ್ಮಣನು ತನ್ನ ಜೀವನದಲ್ಲಿ ೧೨೦ ಸಂಸ್ಕಾರಗಳನ್ನು ನೆರವೇರಿಸಬೇಕಾಗುವದೆಂದು ಉಲ್ಲೇಖಿಸಲಾಗಿದೆ. ಗೃಹಸೂತ್ರದಲ್ಲಿ ೪೦ ವಿವಿಧ ಸಂಸ್ಕಾರಗಳ ವರ್ಣನೆಯು ಕಂಡುಬಂದರೆ, ಗೌತಮ ಧರ್ಮಸೂತ್ರದಲ್ಲಿ ಅವುಗಳ ಸಂಖ್ಯೆಯನ್ನು ೪೮ ಕ್ಕೆ ಏರಿಸಲಾಗಿದೆ. ಹಿಂದುಗಳಿಗೆ ಅತೀ ಪ್ರಮುಖವಾದ ಸಂಸ್ಕಾರಗಳ ಸಂಖ್ಯೆಯೂ ೧೬ ಆಗಿರುವದರಿಂದ ಅವುಗಳನ್ನು 'ಷೋಡಶ ಸಂಸ್ಕಾರ'ಗಳು ಎಂದು ಕರೆಯಲಾಗಿದೆ. ಷೋಡಶ ಸಂಸ್ಕಾರಗಳು ಈ ರೀತಿಯಾಗಿವೆ. ಗರ್ಭದಾನ, ಪುಂಶವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಕರ್ಮ, ಕರ್ಣವೇದ, ವಿದ್ಯಾರಂಭ, ಉಪನಯನ, ವೇದಾರಂಭ, ಕೇಶಾಂತ, ಸಮಾವರ್ತನ, ವಿವಾಹ, ಅಂತ್ಯೇಷ್ಠಿ"(ಅದೇ ಪು ೩೫). ಭಾರತೀಯ ಸಮಾಜದಲ್ಲಿ ವೈವಿಧ್ಯಮಯ ಸಮುದಾಯಗಳು ಗೋಚರಿಸುತ್ತವೆ. ಒಂದು ಸಮುದಾಯದಲ್ಲಿಯ ಸಂಪ್ರದಾಯಗಳು, ನಂಬಿಕೆಗಳು, ಲೋಕಾಚಾರ, ಪದ್ಧತಿ, ಸಂಸ್ಕಾರಗಳು ಮತ್ತೊಂದು ಸಮುದಾಯದಿಂದ ಪರಿಪೂರ್ಣ ಅಥವಾ ಭಾಗಶಃ ಭಿನ್ನವಾಗಿರುತ್ತವೆ. ಅದರಂತೆ ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಮತ್ತು ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳಲ್ಲಿ ವಾಸಿಸುವ ಲಂಬಾಣಿಗರಲ್ಲಿ ಭಾರತೀಯ ಹಿಂದೂ ಸಮಾಜದಲ್ಲಿ ಗೋಚರಿಸುವ ಷೋಡಶ ಸಂಸ್ಕಾರಗಳೆಲ್ಲವು ಆಚರಣೆಯಲಿಲ್ಲ ಆದರೆ ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಹಲವಾರು ಸಂಸ್ಕಾರಗಳನ್ನು ಇಂದಿಗೂ ಆಚರಿಸುತ್ತಾರೆ.

**ಜನನ ಸಂಸ್ಕಾರ ಅಥವಾ ಜಾತ ಕರ್ಮ:** ಜನನಿಯ ಗರ್ಭದಿಂದ ವಿಶೇಷವಾದ ಹರ್ಷ ಹಾಗೂ ಸಂತಸಗಳಿಂದ ಮಗುವನ್ನು ಭೂಮಿಗೆ ಸ್ವಾಗತಿಸುವದೇ ಈ ಸಂಸ್ಕಾರದ ವೈಶಿಷ್ಟ್ಯವಾಗಿದೆ. ಮೂಲತಃ ಅಲೆಮಾರಿಗಳಾದ ಲಂಬಾಣಿಗರು ವ್ಯಾಪಾರಕ್ಕಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಾ ಜೀವನವನ್ನು ಸಾಗಿಸುತ್ತಿದ್ದರು. ಸಂಸ್ಕೃತಿ ಮತ್ತು ಸಂಸ್ಕಾರಗಳನ್ನು ಮರೆಯದೇ ಅವುಗಳ ಹರಿಕಾರರಾಗಿ ಸಾಂಸ್ಕೃತಿಕ ಸಿರಿವಂತಿಕೆಯನ್ನು ಮೆರೆದಿದ್ದಾರೆ. ಮಗು ಜನಿಸಿದ ತಕ್ಷಣ ಮನೆಯಲ್ಲಿ ಹರ್ಷದ ವಾತಾವರಣ ನೆಲೆಗೊಳ್ಳುತ್ತದೆ. ಸಾಮಾನ್ಯವಾಗಿ 'ನ ಪುತ್ರಸ್ಯ ಗತಿರ್ನಾಸ್ತಿ'

ಎನ್ನುವಂತೆ ಲಂಬಾಣಿಗರಲ್ಲಿಯೂ ಗಂಡು ಸಂತಾನದ ವ್ಯಾಮೋಹ ಕಂಡುಬರುತ್ತದೆ. ಗಂಡು ಮಗು ಜನಿಸಿದರೆ ಹೆಚ್ಚು ಸಂತೋಷಭರಿತರಾಗಿ ತಾಂಡಾದ ಹಿರಿಯರಿಗೆ, ಸ್ನೇಹಿತರಿಗೆ ಸಿಂಧಿ, ಸಾರಾಯಿ ಕುಡಿಸುವ ಮೂಲಕ ಜನನವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ.

ಲಂಬಾಣಿಗರಲ್ಲಿ ವಿವಾಹವಾದ ಒಂದೆರಡು ವರ್ಷಗಳಲ್ಲಿ ಹೆಣ್ಣು ಗರ್ಭವತಿಯಾದರೆ ಅವರ ಸಂಬಂಧಿಕರೆಲ್ಲರೂ ಸುದ್ದಿಯನ್ನು ತಿಳಿದು ಸಂತೋಷಪಡುತ್ತಾರೆ. ಗರ್ಭವತಿಯಾದ ಸಂದರ್ಭವನ್ನು ಲಂಬಾಣಿಗರು 'ಖಾಯೇ ಪಿಯೋನ ಕರ್ರಿಚ', 'ಆಸಾತಿ ಛ' ಎಂದು ಕರೆಯುತ್ತಾರೆ. ಖಾಯೇ ಪಿಯೇನ ಎಂದರೆ ತಿನ್ನುವದು, ಕುಡಿಯುವದು ಎಂದರ್ಥ. ಗರ್ಭಿಣಿಯಾದ ಮಹಿಳೆಯು ತಿನಿಸು ಗಳಿಗಾಗಿ ಆಸೆಪಡುವದನ್ನು ಸೂಚ್ಯವಾಗಿ ಹೀಗೆ ಕರೆಯುತ್ತಾರೆ. 'ಆಸಾತಿ ಛ' ಎಂದರೆ 'ಬಯಕೆ' ಎಂಬರ್ಥ ನೀಡುತ್ತದೆ.

ಲಂಬಾಣಿಗರು ಗರ್ಭಿಣಿಯಾಗಿರುವ ಮಹಿಳೆಯ ಆಸೆ ಆಕಾಂಕ್ಷೆಗಳನ್ನು ಪೂರೈಸುತ್ತಾರೆ. ಗರ್ಭಿಣಿಯಾಗಿರುವ ಸ್ತ್ರಿಯರ ಮೇಲೆ ಹಾಗೂ ಮಗುವಿನ ಬೆಳವಣಿಗೆಯನ್ನು ಕುರಿತು ಲಂಬಾಣಿಗರು ಅರ್ಥಗರ್ಭಿತವಾದ ಹಲವಾರು ಹಾಡುಗಳನ್ನು ಹಾಡುತ್ತಾರೆ. ಹೆರಿಗೆಯ ದಿನಗಳು ಸಮೀಪಿಸುತ್ತಲೇ ಬಾಣಂತಿಗೆ ಹಾಗೂ ಮಗುವಿಗೆ ಬೇಕಾಗುವ ವಸ್ತುಗಳನ್ನು ಸಿದ್ಧಪಡಿಸುತ್ತಾರೆ. ಹೆರಿಗೆಯ ನೋವು ಕಾಣಿಸಿಕೊಂಡ ತಕ್ಷಣ ತಾಂಡಾದಲ್ಲಿಯ ಹಿರಿಯ ಅನುಭವಿ ಹೆಣ್ಣುಮಗಳನ್ನು ಕರೆಯುತ್ತಾರೆ. ಅವಳ ಸಹಾಯಕ್ಕೆ ಇನ್ನಿತರ ಹೆಣ್ಣುಮಕ್ಕಳ ಉಪಸ್ಥಿತಿಯಲ್ಲಿ ಸುಗಮವಾಗಿ ಹೆರಿಗೆಯನ್ನು ಮಾಡಿಸಿ, ಹೊಕ್ಕಳು ಬಳ್ಳಿಯನ್ನು ಕತ್ತರಿಸಿ ತಾಯಿ ಮಗುವನ್ನು ಬೇರ್ಪಡಿಸುತ್ತಾರೆ. ಮನೆಯ ಬಾಗಿಲ ಬಳಿ ಗುಂಡಿ ತೆಗೆದು ಹೊಕ್ಕಳು ಬಳ್ಳಿಯ ಮಾಸಿನೊಂದಿಗೆ ಒಂದು ರೂಪಾಯಿಯ ನಾಣ್ಯ, ಗೇರುಕಾಯಿ ಹಾಗೂ ಹಿಟ್ಟನ್ನು ಹಾಕಿ ಗುಂಡಿಯನ್ನು ಭದ್ರವಾಗಿ ಮುಚ್ಚಿ ಅದರ ಮೇಲೆ ಒಂದು ಕಲ್ಲನ್ನು ಇಡುತ್ತಾರೆ. ಏಕೆಂದರೆ ಈ ಹೊಕ್ಕಳು ಬಳ್ಳಿಯ ಮಾಸನ್ನು ಪ್ರಾಣಿಪಕ್ಷಿಗಳು ತಿಂದರೆ ತಾಯಿಯ ಹಾಲು ಬತ್ತಿಹೋಗುತ್ತದೆ ಎಂಬ ನಂಬಿಕೆ ಇಂದಿಗೂ ಲಂಬಾಣಿಗರಲ್ಲಿ ಕಂಡುಬರುತ್ತದೆ.

ಲಂಬಾಣಿಗರು ಮಡಿ ಮೈಲಿಗೆಯ ಭಾವನೆಯಿಂದಾಗಿ ಬಾಣಂತಿ ಹಾಗೂ ತಾಯಿಯನ್ನು ಸುಮಾರು ಒಂದು ತಿಂಗಳುಗಳ ಕಾಲ ಮನೆಯ ಪಕ್ಕದಲ್ಲಿ ಒಂದು ಗುಡಿಸಲನ್ನು ನಿರ್ಮಿಸಿ, ಅದರಲ್ಲಿ ಇರಿಸುತ್ತಾರೆ. ಅಲ್ಲದೇ ಬಾಣಂತಿಯನ್ನು ಎಲ್ಲರೂ ಸ್ನಾನ ಮಾಡುವ ಸ್ಥಳದಲ್ಲಿ ಸ್ನಾನ ಮಾಡಿಸದೇ ಅವಳಿಗಾಗಿಯೆ ಬೇರೊಂದು ವ್ಯವಸ್ಥೆ ಮಾಡಲಾಗಿರುತ್ತದೆ. ಪ್ರತಿದಿನ ಮುಂಜಾನೆ ಮತ್ತು ಸಾಯಂಕಾಲದಂತೆ ಎರಡು ಸಲ ಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಮಗುವಿಗೆ ಜನ್ಮ ನೀಡಿದ ನಂತರ ಮೂರು ದಿನಗಳವರೆಗೆ ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳಲ್ಲಿ ಗೋಧಿಯ ರವೆ ಮತ್ತು ಬೆಲ್ಲದಿಂದ ತಯಾರಿಸಿದ ಲಾಪಸಿಯಲ್ಲಿ ತುಪ್ಪವನ್ನು ಹಾಕಿ ಬಾಣಂತಿಗೆ ತಿನ್ನಲು ಕೊಡುತ್ತಾರೆ. ಆದರೆ ರಂಗಾರೆಡ್ಡಿ ಜಿಲ್ಲೆಯಲ್ಲಿ ಅಕ್ಕಿಯಲ್ಲಿ ಬೆಲ್ಲವನ್ನು ಹಾಕಿ ಮೃದುವಾಗುವಂತೆ ಬೇಯಿಸಿ ತುಪ್ಪದೊಂದಿಗೆ ಕೊಡುತ್ತಾರೆ. ಮೂರು ದಿನದ ನಂತರ ತಿನ್ನಲು ಶಾವಿಗೆ, ತುಪ್ಪ,

ಕೊಬ್ಬರಿ, ಬೆಲ್ಲ, ತತ್ತಿ, ಮಾಂಸ ಹೀಗೆ ಮುಂತಾದ ಪೌಷ್ಟಿಕ ಆಹಾರವನ್ನು ಕೊಡುತ್ತಾರೆ. ಬಾಣಂತಿಯ ಹಾಸಿಗೆಯ ಕಾಲು ಚಾಚುವ ಭಾಗದ ಕಡೆಗೆ ಕುಡುಗೋಲು, ಕೊಡಲಿ ಅಥವಾ ಕಬ್ಬಿಣದ ವಸ್ತುಗಳನ್ನು ಇಡುತ್ತಾರೆ. ಬಹಿರ್ದೆಸೆಗಾಗಿ ಹೋಗುವಾಗ ಕೈಯಲ್ಲಿ ಕುಡುಗೊಲು ಹಿಡಿದು ಕೊಂಡೆ ಹೋಗುತ್ತಾರೆ. ಹೀಗೆ ಮಾಡುವುದರಿಂದ ದೆವ್ವ, ಪಿಶಾಚಿಗಳಂತಹ ದುಷ್ಟ ಶಕ್ತಿಗಳಿಂದ ರಕ್ಷಣೆ ಸಿಗುತ್ತದೆ ಎಂಬ ಭಾವನೆ ಲಂಬಾಣಿಗರಲ್ಲಿದೆ. ಈ ರೀತಿಯಾಗಿ ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಜನನ ಸಂಸ್ಕಾರ ಆಚರಿಸುವ ಕ್ರಮದಲ್ಲಿ ಸಾಮ್ಯತೆ ಕಂಡುಬರುತ್ತದೆ.

**ನಗಾರಿ ಬಾರಿಸುವದು:** ಗಂಡು ಮಗು ಜನಿಸಿದರೆ ದೇವಸ್ಥಾನದಲ್ಲಿಯ ನಗಾರಿ ಬಾರಿಸುವ ವಿಶಿಷ್ಟ ಕ್ರಮ ಲಂಬಾಣಿಗರಲ್ಲಿ ಗೋಚರಿಸುತ್ತದೆ. ಗಂಡು ಮಗು ಜನಿಸುವದನ್ನು ಪ್ರತಿಷ್ಠೆಯದ್ಯೋತಕ ಎಂದು ಭಾವಿಸುವ ಲಂಬಾಣಿಗರು ತಾಂಡಾದ ಪ್ರತಿಯೊಬ್ಬರಿಗೂ ತಮಗೆ ಗಂಡು ಮಗು ಜನಿಸಿದೆ ಎಂಬ ಸುದ್ದಿಯನ್ನು ನಗಾರಿ ಬಾರಿಸುವುದರ ಮೂಲಕ ತಿಳಿಯಪಡಿಸುವ ಕ್ರಮ ಗುಲಬರ್ಗಾ ಹಾಗೂ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಗೋಚರಿಸುತ್ತದೆ. ಸೋಲಾಪುರ ಜಿಲ್ಲೆಯ ಲಂಬಾಣಿಗರು ಗರ್ಭಿಣಿಗೆ ಹೆರಿಗೆ ನೋವು ಕಾಣಿಸಿಕೊಂಡ ತಕ್ಷಣ ದೇವಾಲಯದ ಮೇಲಿರುವ ಬಿಳಿಯ ಧ್ವಜವನ್ನು ಇಳಿಸಿ ಹೆರಿಗೆಯಾದ ನಂತರ ಧ್ವಜವನ್ನು ಮತ್ತೆ ಏರಿಸುತ್ತಾರೆ. ಗಂಡು ಮಗು ಜನಿಸಿದರೆ ಹೆಣ್ಣು ಮಕ್ಕಳು ತಾಟನ್ನು ಬಾರಿಸುವುದರ ಮೂಲಕ ಸಮುದಾಯದವರಿಗೆ ವಿಷಯ ತಿಳಿಸುತ್ತಾರೆ. ಹೆಣ್ಣು ಮಗು ಜನಿಸಿದರೆ ನಗಾರಿಯನ್ನಾಗಲಿ, ತಾಟನ್ನಾಗಲಿ ಬಾರಿಸುವ ಕ್ರಮ ಲಂಬಾಣಿಗರಲ್ಲಿ ಗೋಚರಿಸುವದಿಲ್ಲ. ಇದು ಇವರ ಪುತ್ರ ವ್ಯಾಮೋಹ ಭಾವನೆಯನ್ನು ತಿಳಿಯಪಡಿಸುತ್ತದೆ. ಅಲ್ಲದೇ ಹೆಚ್ಚು ಜನ ಗಂಡು ಮಕ್ಕಳು ಜನಿಸುವದನ್ನು ಪ್ರತಿಷ್ಠೆಯಿಂದ ಹಾಡಿ ಹೊಗಳುವ ಹಲವಾರು ಹಾಡುಗಳು ಲಂಬಾಣಿಗರಲ್ಲಿ ಪ್ರಚಲಿತದಲ್ಲಿವೆ.

**ಏಕಳ ಪೆಯೇರೊ:** ಗಂಡು ಮಗು ಜನಿಸಿದಾಗ ವಿಜೃಂಭಣೆಯಿಂದ ಆಚರಿಸುವ ಈ ಸಂಸ್ಕಾರ ವನ್ನು 'ಏಕಳ ಪೆಯೆರೋ' ಎಂದು ಕರೆಯುತ್ತಾರೆ. ಗಂಡು ಮಗುವಿನ ಜನನವನ್ನು ತುಂಬಾ ಪ್ರತಿಷ್ಠೆಯಿಂದ ಮತ್ತು ಸಂತೋಷದಿಂದ ಸ್ವೀಕರಿಸುವ ಲಂಬಾಣಿಗರು ಗೋಮಯದಿಂದ ಮನೆಯ ನೆಲವನ್ನು ಸಾರಿಸುತ್ತಾರೆ. ದೇವರಿಗೆ ಕಾಯಿ ಕರ್ಪೂರ ಮತ್ತು ನೈವೇದ್ಯವನ್ನು ಸಲ್ಲಿಸುತ್ತಾರೆ. ತಾಂಡಾದ ಹಿರಿಯ ಹೆಣ್ಣು ಮಕ್ಕಳು ಮನೆಯ ಮುಂದೆ ನಿಂತು "ಕೋಟಾರ ಕೋಟ ದಿವೋ ಬಳರೆ ಮೇಲ. ಖೀರಾರ(ಅಜ್ಜನ ಹೆಸರು) ದಿವೋ ಬಳರೆ ಮೇಲ" ಎಂದು ಅಜ್ಜನ ಹೆಸರನ್ನು ತೆಗೆದುಕೊಂಡು ಅವನ ವಂಶ ಬೆಳಗಲಿ ಎಂದು ಹಾಡುತ್ತಾ ಹಾರೈಸುತ್ತಾರೆ. ಹಾಡುತ್ತಾ, ಕುಣಿಯುತ್ತಾ ಕೊಬ್ಬರಿಯ ಬಟ್ಟಲನ್ನು ಚಿಕ್ಕ ಚಿಕ್ಕ ತುಂಡುಗಳನ್ನಾಗಿ ಮಾಡಿ ಅದರಲ್ಲಿ ಬೆಲ್ಲವನ್ನು ಬೆರೆಸುತ್ತಾರೆ. ಮೊದಲು ಬೆಲ್ಲದೊಂದಿಗೆ ಕೊಬ್ಬರಿಯ ಐದು ತುಂಡುಗಳನ್ನು ಬಾಣಂತಿಯ ಉಡಿಯಲ್ಲಿ ಹಾಕುತ್ತಾರೆ ನಂತರ ಉಳಿದವರೆಲ್ಲರಿಗೂ ಬೆಲ್ಲ ಹಾಗೂ ಕೊಬ್ಬರಿಯ ತುಂಡುಗಳನ್ನು ಹಂಚಲಾಗುತ್ತದೆ. ಈ

ಸಂಸ್ಕಾರವನ್ನು ಮಗು ಜನಿಸಿದ ದಿನದಂದೇ ಮಾಡಲಾಗುತ್ತದೆ. ಸಂತೋಷಭರಿತರಾಗಿರುವ ಮಗುವಿನ ತಂದೆ ಅಥವಾ ಅಜ್ಜ ಹಿರಿಯರಿಗೆ ಸೇವಿಸಲು ಮದ್ಯವನ್ನು ಧಾರಾಳವಾಗಿ ಪೂರೈಕೆ ಮಾಡುತ್ತಾರೆ. ಈ ಸಂಸ್ಕಾರವು ಗಂಡು ಮಗುವಿಗೆ ಮಾತ್ರ ಸೀಮಿತವಾಗಿದ್ದು, ಹೆಣ್ಣು ಮಗು ಜನಿಸಿದರೆ ಈ ಸಂಸ್ಕಾರವನ್ನು ಮಾಡುವದಿಲ್ಲ. ಈ ರೀತಿಯ 'ಏಕಳ ಪೆಯೇರೋ' ಸಂಸ್ಕಾರವು ಮೂರು ಜಿಲ್ಲೆಗಳ ಲಂಬಾಣಿಗರಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ.

**ದಳವಾ ಧೊಕಾಯೇರೋ:** ಮಗು ಜನಿಸಿದ ಐದು ಅಥವಾ ಏಳು ದಿನಗಳ ನಂತರ ಈ ಸಂಸ್ಕಾರವನ್ನು ನೆರವೇರಿಸಲಾಗುತ್ತದೆ. ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರು ಗಂಡು ಮಗು ಜನಿಸಿದರೆ ಮಾತ್ರ 'ದಳವಾ ಧೊಕಾಯೇರೋ' ಸಂಸ್ಕಾರವನ್ನು ನೆರವೇರಿಸುತ್ತಾರೆ ಆದರೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಹೆಣ್ಣು ಮಗು ಜನಿಸಿದ ಮೂರನೇ ದಿನ ಹಾಗೂ ಗಂಡು ಮಗು ಜನಿಸಿದ ಐದನೇ ದಿನ ಈ ಸಂಸ್ಕಾರವನ್ನು ಹಮ್ಮಿಕೊಳ್ಳುತ್ತಾರೆ. ಅಂದು ಬೆಳಿಗ್ಗೆ ಬಾಣಂತಿ ಹಾಗೂ ಮಗುವಿಗೆ ಸ್ನಾನ ಮಾಡಿಸಿ, ಬಾಣಂತಿಯು ಹೊಸ ಬಟ್ಟೆಯನ್ನು ತೊಟ್ಟು ಸಿಂಗರಿಸಿಕೊಳ್ಳುತ್ತಾಳೆ. ಮನೆಯಲ್ಲಿರುವ ಎರಡು ತಂಬಿಗೆಯನ್ನು ತೆಗೆದುಕೊಂಡು ಒಂದರಲ್ಲಿ ನೀರು ತುಂಬಿಸಿ ಇನ್ನೊಂದನ್ನು ಖಾಲಿ ಇರಿಸಿ ಒಂದರ ಮೇಲೊಂದು ಇಟ್ಟು ಹಗ್ಗದಿಂದ ಎರಡು ತಂಬಿಗೆಗಳನ್ನು ಜೋಡು ಕಳಸದಂತೆ ಕಟ್ಟುತ್ತಾರೆ. ಹಾಗೇ ಕಟ್ಟಿದ ತಂಬಿಗೆಗಳನ್ನು ಮೂರು ಜನ ಅಪ್ರಾಪ್ತ ಬಾಲಕರು ಹಾಗೂ ಇಬ್ಬರು ಅಪ್ರಾಪ್ತ ಬಾಲಕಿಯರು ಮನೆಯಲ್ಲಿ ಬಾಣಂತಿಯನ್ನು ಪೂರ್ವದಿಕ್ಕಿಗೆ ಮುಖ ಮಾಡಿ ನಿಲ್ಲಿಸಿ, ತಲೆಯ ಮೇಲೆ ಕಸೂತಿಯಿಂದ ಸಿಂಗರಿಸಿದ ಸಿಂಬಿಯನ್ನು ಇಟ್ಟು ಅದರ ಮೇಲೆ ಜೋಡು ಕಳಸವನ್ನು ಇಡುತ್ತಾರೆ. ಮಗುವಿಗಾಗಿ ಸಿದ್ದಪಡಿಸಿದ ದುಪ್ಪಟ್ಟಿಯ ಎರಡು ಕೊನೆಗಳಿಗೆ ಅರಿಶಿಣವನ್ನು ಹಚ್ಚಿ ಅದರೊಂದಿಗೆ ಜೋಳ ಅಥವಾ ಅಕ್ಕಿಯ ಕಾಳುಗಳನ್ನು ಬಾಣಂತಿಯ ಉಡಿಯಲ್ಲಿ ಹಾಕಲಾಗುತ್ತದೆ. ಬಾಣಂತಿಯು ಮನೆಯಿಂದ ಪೂರ್ವದಿಕ್ಕಿಗೆ ಜೋಳದ ಕಾಳುಗಳನ್ನು ಎಸೆಯುತ್ತಾ ಮನೆಯ ಮುಂದೆ ಸಾಗುತ್ತಾಳೆ. ಮನೆಯ ಮುಂದೆ ಒಂದು ಗುಂಡಿಯನ್ನು ತೊಡಿ ಅದರ ಪೂರ್ವ ಭಾಗವನ್ನು ಗೋಮಯಗೊಳಿಸಿ ಅಂದರೆ ಸಗಣಿಯನ್ನು ಇಟ್ಟು ಅದರ ಮೇಲೆ ಒಂದು ರೂಪಾಯಿಯ ನಾಣ್ಯ ಹಾಗೂ ಏಳು ಹುಲ್ಲು ಕಡ್ಡಿಗಳನ್ನು ಇಡಲಾಗುತ್ತದೆ. ಹಿಟ್ಟಿನ ನಾಲ್ಕು ದೀಪದ ಹಣತೆಗಳನ್ನು ತಯಾರಿಸಿ ಅದರಲ್ಲಿ ದೀಪಗಳನ್ನು ಹಚ್ಚುತ್ತಾರೆ. ಅಲ್ಲಿ ಬಾಣಂತಿಯು ಹೊತ್ತು ತಂದ ಜೋಡು ಕಳಸವನ್ನು ಐದು ಜನ ಅಪ್ರಾಪ್ತ ಬಾಲಕ ಬಾಲಕಿಯರು ಗುಂಡಿಯ ಪೂರ್ವ ಭಾಗಕ್ಕೆ ಇಳಿಸಿಕೊಳ್ಳುತ್ತಾರೆ. ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳಲ್ಲಿ ಅಪ್ರಾಪ್ತ ಬಾಲಕ ಬಾಲಕಿಯರು ನೇರವೇರಿಸುವ ಕಾರ್ಯವನ್ನು ರಂಗಾರೆಡ್ಡಿ ಜಿಲ್ಲೆಯಲ್ಲಿ ಮಹಿಳೆಯರು ನೆರವೇರಿಸುತ್ತಾರೆ. ಗೋಧಿ ಹಿಟ್ಟು ಹಾಗೂ ಬೆಲ್ಲದಿಂದ ತಯಾರಿಸಿದ 'ಕುಲ್ಲರ' ಎಂಬ ನೈವೇದ್ಯವನ್ನು ಬಾಣಂತಿಯು ಗುಂಡಿಯ ಸುತ್ತ ಹಾಕುತ್ತಾಳೆ ಹಾಗೂ ಅಲ್ಲಿ ಸೇರಿರುವವರೆಲ್ಲರಿಗೂ 'ಕುಲ್ಲರ' ಪ್ರಸಾದ ಹಂಚಲಾಗುತ್ತದೆ. ಜೋಡು ಕಳಸದಲ್ಲಿ ತಂದ ನೀರನ್ನು ಗುಂಡಿ ತುಂಬುವವರೆಗೆ ಹಾಕಿ ಬಾಣಂತಿಯು ಏಳು ಸಲ ತನ್ನ ಎಡಗಾಲಿನ ಹೆಬ್ಬೆರಳನ್ನು ಗುಂಡಿಯ ನೀರಿಗೆ ತಾಗಿಸುತ್ತಾ

ಗುಂಡಿಯನ್ನು ನಮಸ್ಕರಿಸುತ್ತಾಳೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಬಾಣಂತಿಯು ಗುಂಡಿಯಲ್ಲಿಯ ನೀರಿಗೆ ಎಡಗಾಲಿನ ಹೆಬ್ಬೆರಳನ್ನು ನಾಲ್ಕು ಬಾರಿ ಹಾಗೂ ಬಲಗಾಲಿನ ಹೆಬ್ಬೆರಳನ್ನು ಮೂರು ಬಾರಿ ತಾಗಿಸುವ ಪದ್ಧತಿ ಜಾರಿಯಲ್ಲಿದೆ. ಈ ಕಾರ್ಯದಲ್ಲಿ ತಾಂಡಾದ ಹಿರಿಯ ಹೆಣ್ಣು ಮಕ್ಕಳು ಜನ್ಮದಾತೆಯೇ ಈ ಮಗುವಿಗೆ ರಕ್ಷಣೆ ಕೊಡು, ದೀರ್ಘಾಯಷ್ಯ ಕೊಡು ಎಂಬ ಅರ್ಥದ ಹಾಡುಗಳನ್ನು ಹಾಡಿ ದೇವತೆಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ನಂತರ ಮತ್ತೆ ಜೋಡು ಕಳಸವನ್ನು ತಲೆಯ ಮೇಲೆ ಹೊತ್ತ ಬಾಣಂತಿಯು ಮನೆಯ ಬಾಗಿಲಿಗೆ ಬರುವವರೆಗೆ ಜೋಳದ ಕಾಳುಗಳನ್ನು ಎಸೆಯುತ್ತಾ ಬರುತ್ತಾಳೆ. ಮನೆಗೆ ಬಂದ ನಂತರ ಜೋಡು ಕಳಸವನ್ನು ಇಳಿಸಿ ಅಪ್ರಾಪ್ತ ಬಾಲಕ ಬಾಲಕಿಯರನ್ನು ಸಾಲಿನಲ್ಲಿ ಕೂರಿಸಿ ಬಾಣಂತಿಯು ಅವರ ಪಾದಗಳಿಗೆ ತುಂಬಿದ ತಂಬಿಗೆಯ ನೀರನ್ನು ಸಂಪ್ರೋಕ್ಷಣೆ ಮಾಡಿ ನಮಸ್ಕರಿಸುತ್ತಾಳೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಬಾಣಂತಿಯು ಬಾಲಕ ಬಾಲಕಿಯರ ಪಾದಗಳಿಗೆ ನಮಿಸುವ ಪದ್ಧತಿ ಇರುವದಿಲ್ಲ. ಹಿರಿಯ ಮಹಿಳೆಯರಿಗೆ ನಮಿಸಿ ಆಶೀರ್ವಾದ ಪಡೆಯುತ್ತಾಳೆ. ಮನೆಯಲ್ಲಿ ಗೋಧಿ ಹಿಟ್ಟು ಹಾಗೂ ಬೆಲ್ಲದಿಂದ ತಯಾರಿಸಿದ ಛಟೀರ ಲಾಪಸಿ(ಪಾಯಸ)ಯನ್ನು ಮೊದಲು ಐದು ಜನ ಬಾಲಕ ಬಾಲಕಿಯರಿಗೆ ತಿನ್ನಿಸಿ ನಂತರ ಬಂದಂತಹ ಎಲ್ಲಾ ಹೆಣ್ಣು ಮಕ್ಕಳಿಗೆ ಹಂಚಿ ಕೊನೆಯಲ್ಲಿ ಬಾಣಂತಿಯು ಛಟೀರ ಲಾಪಸಿಯನ್ನು ಸೇವಿಸುತ್ತಾಳೆ. ಈ ಆಹಾರ ಸೇವನೆಯಿಂದ ಬಾಣಂತಿಯ ಮೊಲೆಹಾಲು ಹೆಚ್ಚುತ್ತದೆ ಎಂಬ ನಂಬಿಕೆ ಇದೆ. ಈ ರೀತಿಯಾಗಿ ಲಂಬಾಣಿಗರು 'ದಳವಾ ಧೋಕಾಯೇರೋ' ಸಂಸ್ಕಾರವನ್ನು ನೆರವೇರಿಸುತ್ತಾರೆ.

**ಕಾನ ಫೋಡಾಯೆರೋ:** ಮಗುವಿನ ಕಿವಿ ಚುಚ್ಚುವ ಕರ್ಣವೇಧ ಸಂಸ್ಕಾರಕ್ಕೆ ಲಂಬಾಣಿಗರು 'ಕಾನ ಫೋಡಾಯೆರೋ' ಎಂದು ಕರೆಯುತ್ತಾರೆ. ಕರ್ಣವೇಧ ಸಂಸ್ಕಾರವನ್ನು ನೆರವೇರಿಸಲು ಒಂದು ಒಳ್ಳೆಯ ದಿನವನ್ನು ನಿರ್ಧರಿಸಿಕೊಳ್ಳುತ್ತಾರೆ. ಅಂದು ಮನೆಯನ್ನು ಗೊಮಯಗೊಳಿಸಿ, ಮಗುವಿನಗೆ ಸ್ನಾನ ಮಾಡಿಸಿ, ಹೊಸ ಬಟ್ಟೆ ತೊಡಿಸಿ, ಕುಲದೇವರ ಪೂಜೆ ಮಾಡಲಾಗುತ್ತದೆ. ನಂತರ ಕೊಬ್ಬರಿ ಬಟ್ಟಲು ಹಾಗೂ ಬಂಗಾರದ ಆಭರಣವನ್ನು ತೆಗೆದುಕೊಂಡು ಅಕ್ಕಸಾಲಿಗನ ಹತ್ತಿರ ಹೋಗುತ್ತಾರೆ. ಅಕ್ಕಸಾಲಿಗನು ಬಂಗಾರದ ಆಭರಣದ ಚುಚ್ಚುವ ಭಾಗವನ್ನು ಕೊಬ್ಬರಿ ಬಟಲಿಗೆ ಚುಚ್ಚಿ ನಂತರ ಮಗುವಿನ ಕಿವಿಗೆ ಚುಚ್ಚಿ ಆಭರಣವನ್ನು ಹಾಕುತ್ತಾನೆ. ಈ ಬಂಗಾರದ ಆಭರಣದ ಎಲ್ಲಾ ಖರ್ಚು ತವರು ಮನೆಯವರದ್ದಾಗಿರುತ್ತದೆ. ಲಂಬಾಣಿಗರು ಅಕ್ಕಸಾಲಿಗನನ್ನು ಸನಾರ ಎಂದು ಕರೆಯುತ್ತಾರೆ. ಕಿವಿ ಚುಚ್ಚುವ ಸಂಸ್ಕಾರವು ಭಾರತದ ವಿವಿಧ ಸಮುದಾಯಗಳಲ್ಲಿ ಕಂಡುಬರುವಂತೆ ಲಂಬಾಣಿಗರಲ್ಲಿಯು ಕಂಡು ಬರುತ್ತದೆ. ಕಿವಿ ಚುಚ್ಚುವದರಿಂದ ಮಗುವಿಗೆ ಯಾವುದೇ ರೋಗಗಳು ಬಾಧಿಸುವದಿಲ್ಲ. ಮಗುವು ಆರೋಗ್ಯಪೂರ್ಣವಾಗಿರುತ್ತದೆ. ಇದು ರೋಗ ನಿರೋಧಕವಾಗಿಯೂ ಕೆಲಸ ಮಾಡುತ್ತದೆ. ಅಲ್ಲದೇ ಕಿವಿ ಚುಚ್ಚುವುದರಿಂದ ಮಗುವಿನ ಸೌಂದರ್ಯವು ಹೆಚ್ಚುತ್ತದೆ ಎಂಬ ನಂಬಿಕೆಯು ಮೂರು ಜಿಲ್ಲೆಗಳ ಲಂಬಾಣಿಗರಲ್ಲಿ ಗೋಚರಿಸುತ್ತದೆ.

**ನಾಮ ಮೇಲೆರೋ/ಪಾಲಣೋ ಘಾಲೇರೋ:** ಮಗುವಿಗೆ ಹೆಸರಿಡುವ ನಾಮಕರಣ ಸಂಸ್ಕಾರಕ್ಕೆ 'ನಾಮ ಮೇಲೆರೋ ಅಥವಾ ಪಾಲಣೋ ಘಾಲೇರೋ' ಎಂದು ಕರೆಯುತ್ತಾರೆ. ಮಗುವಿಗೆ ಹೆಸರಿಡುವ ಮಹತ್ವವನ್ನು ಲಂಬಾಣಿಗರು ಬಹುಕಾಲದಿಂದಲೇ ಅರಿತಿದ್ದಾರೆ. ಸಾಮಾನ್ಯವಾಗಿ ಮಗುವಿಗೆ ದೇವರ ಹೆಸರು, ಗುರುವಿನ ಹೆಸರು ಇಲ್ಲವೇ ಹಿರಿಯರ ಹೆಸರುಗಳನ್ನು ಇಡುತ್ತಾರೆ. ಮಗು ಜನಿಸಿದ ಎರಡು ಅಥವಾ ಮೂರು ತಿಂಗಳುಗಳ ಅವಧಿಯಲ್ಲಿ ಒಂದು ಶುಭ ಮೂಹೂರ್ತವನ್ನು ನೋಡಿ ನಾಮಕರಣ ಕಾರ್ಯಕ್ರಮದ ದಿನವನ್ನು ನಿಶ್ಚಯಿಸುತ್ತಾರೆ. ತಾಂಡಾದ ಪೂಜಾರಿ ಇಲ್ಲವೆ ಬ್ರಾಹ್ಮಣನಲ್ಲಿ ಮಗುವಿನ ಹೆಸರನ್ನು ಕೇಳಿಕೊಳ್ಳುತ್ತಾರೆ. ನಾಮಕರಣ ಕಾರ್ಯಕ್ರಮದಂದು ಮನೆಯನ್ನು ಗೋಮಯದಿಂದ ಸಾರಿಸಿ, ಮಗು ಹಾಗೂ ತಾಯಿಗೆ ಸ್ನಾನ ಮಾಡಿಸಿ, ಹೊಸ ಬಟ್ಟೆಯನ್ನು ತೊಡಿಸುತ್ತಾರೆ. ನಂತರ ಕುಲದೇವತೆಯ ಪೂಜೆ ಮಾಡಿ ತಾಯಿ ಮಗುವಿನೊಂದಿಗೆ ಕುಲದೇವತೆಗೆ ನಮಸ್ಕರಿಸುತ್ತಾಳೆ. ನಂತರ ತೊಟ್ಟಿಲನ್ನು ಸಿಂಗರಿಸಿ ಪೂಜೆ ಮಾಡುತ್ತಾರೆ. ಈ ತೊಟ್ಟಿಲಿನಲ್ಲಿ ಐದು ಇರುವೆಗಳನ್ನು ಬಿಡುತ್ತಾರೆ. ಹೀಗೆ ಇರುವೆಗಳನ್ನು ಬಿಡುವದರಿಂದ ಮಕ್ಕಳು ಹಠ ಮಾಡುವದಿಲ್ಲ ಹಾಗೂ ಸದೃಡವಾಗಿ ಬೆಳೆಯುತ್ತಾರೆ ಎಂಬ ನಂಬಿಕೆ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಲ್ಲಿದೆ. ಆದರೆ ರಂಗಾರೆಡ್ಡಿ ಹಾಗೂ ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ತೊಟ್ಟಿಲಿನಲ್ಲಿ ಇರುವೆ ಬಿಡುವ ಕ್ರಮ ಜಾರಿಯಲ್ಲಿಲ್ಲ. ನಾಮಕರಣ ಕಾರ್ಯಕ್ರಮದಲ್ಲಿ ಮಗುವಿನ ಅತ್ತೆಗೆ ಪ್ರಮುಖ ಸ್ಥಾನವಿರುತ್ತದೆ. ಅವಳು ಈ ಕಾರ್ಯಕ್ರಮಕ್ಕೆ ಇರಲೇಬೇಕು, ಒಂದು ವೇಳೆ ಅತ್ತೆ ಇರದಿದ್ದರೆ ಸಮೀಪದ ಬಂಧುಗಳಲ್ಲಿ ಮಗುವಿಗೆ ಅತ್ತೆಯ ಸಂಬಂಧ ಹೊಂದಿದವರನ್ನು ಕರೆತರುತ್ತಾರೆ. ಅತ್ತೆಯು ಮೊದಲು ಮಗುವಿಗೆ ಹೆಸರನ್ನು ಇಟ್ಟು ಕಿವಿಯಲ್ಲಿ ಐದು ಸಲ ಕೂಗುತ್ತಾಳೆ ನಂತರ ಎಲ್ಲರೂ ಮಗುವಿನ ಹೆಸರನ್ನು ಕೂಗಿ ತೊಟ್ಟಿಲನ್ನು ತೂಗುತ್ತಾರೆ. ನಾಮಕರಣ ಕಾರ್ಯಕ್ರಮಕ್ಕೆ ಬಂದ ಎಲ್ಲರಿಗೂ ಐದು ಪ್ರಕಾರದ ಧಾನ್ಯಗಳನ್ನು ಸೇರಿಸಿ ಬೇಯಿಸಿದ ಗುಗ್ಗರಿಯನ್ನು ಹಂಚಿ ನಂತರ ಸಿಹಿ ಊಟ ಮಾಡಿಸುತ್ತಾರೆ ರಂಗಾರೆಡ್ಡಿ ಹಾಗೂ ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ಗುಗ್ಗರಿಯನ್ನು ಹಂಚುವ ಕ್ರಮ ಕಂಡುಬರುವುದಿಲ್ಲ. ಈ ರೀತಿಯಾಗಿ ಲಂಬಾಣಿಗರು ನಾಮಕರಣದ ಕಾರ್ಯಕ್ರಮವನ್ನು ನೇರವೇರಿಸುತ್ತಾರೆ.

**ಧೂಂಡ್(ಹುಟ್ಟು ಹಬ್ಬ) :** ಹೋಳಿ ಹಬ್ಬದಂದು ಆ ವರ್ಷದಲ್ಲಿ ಹುಟ್ಟಿದ ಮಗುವಿಗೆ ಹುಟ್ಟು ಹಬ್ಬದ ರೀತಿಯಲ್ಲಿ ಆಚರಿಸುವ ಸಂಸ್ಕಾರವನ್ನು 'ಧೂಂಡ' ಎಂದು ಕರೆಯುತ್ತಾರೆ. ಧೂಂಡ ಸಂಸ್ಕಾರವನ್ನು ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಭೂಕ್ಯಾ ಪಂಗಡದವರು ಮಾತ್ರ ಆಚರಿಸುತ್ತಾರೆ. ಆದರೆ ಸೋಲಾಪುರ ಜಿಲ್ಲೆಯಲ್ಲಿ ಜಾತ್ ಮತ್ತು ಭೂಕ್ಯಾ ಎರಡೂ ಪಂಗಡಗಳಲ್ಲಿಯೂ ಈ ಸಂಸ್ಕಾರವನ್ನು ಆಚರಿಸುತ್ತಾರೆ. ಕಾಮದಹನದ ಮುನ್ನಾದಿನ ಸಾಯಂಕಾಲ ನಾಯಕ, ಕಾರಭಾರಿ ಮತ್ತು ಡಾವಸಾಣಾರು(ಹಿರಿಯರು) ಒಂದೆಡೆ ಕುಳಿತು ಆ ವರ್ಷದಲ್ಲಿ ಹುಟ್ಟಿದ ಮೊದಲನೇ ಮಗು ಯಾರು ಎಂಬುದನ್ನು ನಿರ್ಧರಿಸಿ ಆ ಮಗು ಆ ವರ್ಷದಲ್ಲಿ ಹುಟ್ಟಿದ ಹಿರಿಯ ಮಗು ಎಂದು ಭಾವಿಸಿ ಮೊದಲು ಹಿರಿಯ ಮಗುವಿನ ಮನೆಗೆ ಹೋಗುತ್ತಾರೆ. ಮನೆಯವರು

ಮನೆಗೆ ಬಂದಿರುವ ನಾಯಕ ಕಾರಭಾರಿ ಢಾವಸಾಣರನ್ನು ಬರಮಾಡಿಕೊಳ್ಳುತ್ತಾರೆ. ಮನೆಯ ಬಾಗಿಲಿನ ನೇರಕ್ಕೆ ನೊಗವನ್ನು ನೆಟ್ಟು ಅದಕ್ಕೆ ಉದ್ದದ ಕೋಲನ್ನು ಕಟ್ಟಿ ಅದರ ಮೇಲೆ ಹೊಲಿದಿರುವ ಎರಡು ಕಂಬಳಿಗಳನ್ನು ಹಾಕಿ ಕಟ್ಟುತ್ತಾರೆ. ಇದನ್ನು 'ಪಾಲ ಭಾಂದೇರೋ' ಎಂದು ಕರೆಯುತ್ತಾರೆ. ಪಾಲ ಕಟ್ಟಿದ ನಂತರ ಧೂಂಡಗೆ ನಿಶ್ಚಯಿಸಿದಷ್ಟು ಹಣವನ್ನು ಮನೆಯವರಿಂದ ಪಡೆದು, ಮನೆಯವರು ಸಂತೋಷದಿಂದ ಕೊಟ್ಟ ಸಾರಾಯಿಯನ್ನು ಕುಡಿದು ಧೂಂಡ ಇರುವ ಮುಂದಿನ ಮನೆಗೆ ಸಾಗುತ್ತಾರೆ. ಈ ಪ್ರಕ್ರಿಯೆ ಧೂಂಡ ಇರುವ ಎಲ್ಲಾ ಮನೆಗಳಲ್ಲಿ ನಡೆಯುತ್ತದೆ.

ಧೂಂಡ ಇರುವ ಮನೆಗಳಲ್ಲಿ ರಾತ್ರಿಯೆಲ್ಲ ಹಾಡುತ್ತಾ, ಕುಣಿಯುತ್ತಾ ಸುವಾಳಿ(ಪುರಿ) ಹಾಗೂ ಹುಗ್ಗಿ ಅಥವಾ ಸಜ್ಜಕವನ್ನು ತಯಾರಿಸುತ್ತಾರೆ. ಅಲ್ಲದೇ ಕೋಲಿನಲ್ಲಿ ಸಿಕ್ಕಿಸಿಕೊಂಡು ಆಡಲು ಗೋಧಿ ಹಿಟ್ಟಿನಿಂದ ತಯಾರಿಸಿದ ಗೋಲಿಯಾಕಾರದ ಹಿಟ್ಟಿನ ತುಂಡಗಳನ್ನು ಎಣ್ಣೆಯಲ್ಲಿ ಕರಿಯುತ್ತಾರೆ. ಇವುಗಳನ್ನು 'ಸಪರಾ' ಎಂದು ಕರೆಯುತ್ತಾರೆ. ಕಾಮ ದಹನದ ಸಾಯಂಕಾಲ ಆ ವರ್ಷದಲ್ಲಿ ಮೊದಲು ಜನಿಸಿದ ಮಗುವಿನಿಂದ ಧೂಂಡ ಕಾರ್ಯಕ್ರಮ ಪ್ರಾರಂಭವಾಗುತ್ತದೆ. ಜಾತ್ ಮತ್ತು ಭೂಕ್ಯಾ ಪಂಗಡಕ್ಕೆ ಸೇರಿದ ಇಬ್ಬರು ಗೇರಿಯಾಗಳು, ಅವರ ಸಂಗಡಿಗರು, ನಾಯಕ ಕಾರಭಾರಿ ಮತ್ತು ಢಾವಸಾಣರೆಲ್ಲರೂ ಸೇರುತ್ತಾರೆ. ರಾತ್ರಿ ಕಟ್ಟಿದ ಪಾಲ ಕೆಳಗಡೆ ಮಗುವಿನ ತಲೆಗೆ ಕೆಂಪು ಬಣ್ಣದ ಬಟ್ಟೆಯನ್ನು ಕಟ್ಟುತ್ತಾರೆ. ಇದನ್ನು 'ಭಾಟಿಯಾ' ಎಂದು ಕರೆಯುತ್ತಾರೆ. ಪಾಲ ಕೆಳಗಡೆ ಬಾಗಿಲಿನ ನೇರಕ್ಕೆ ಪೂರ್ವಾಭಿಮುಖವಾಗಿ ಮಗುವನ್ನು ಕೂರಿಸಿ ತಾಯಿ ಅಥವಾ ಅಜ್ಜಿ ಮಗುವನ್ನು ಹಿಡಿದುಕೊಂಡಿರುತ್ತಾರೆ. ಪಕ್ಕದಲ್ಲಿ ನಾಯಕ ಅಥವಾ ಕಾರಭಾರಿ ಮಗುವಿನ ಸೋದರತ್ತೆ ಇತರರು ಕುಳಿತುಕೊಳ್ಳುತ್ತಾರೆ. ಆದರೆ ಸೋಲಾಪುರದಲ್ಲಿ ಮಗುವಿನೊಂದಿಗೆ ತಾಯಿ ಅಥವಾ ಅಜ್ಜಿಯ ಜೊತೆಗೆ ನಾಯಕನ ಪತ್ನಿ ನಾಯಕಣ ಅಥವಾ ಕಾರಭಾರಿಯ ಪತ್ನಿ ಕಾರಭಾರಣಿ ಕುಳಿತುಕೊಳ್ಳುತ್ತಾರೆ.

ಮಗುವಿನ ಮುಂದೆ ರಾತ್ರಿ ತಯಾರಿಸಿದ ಐದೈದು ಸುವಾಳಿಗಳ ನಾಲ್ಕು ಗುಂಪುಗಳನ್ನಿಡುತ್ತಾರೆ. ಇದನ್ನು 'ಖಂಡ' ಎನ್ನುತ್ತಾರೆ. ಆಮೇಲೆ ಗೇರಿಯಾಗಳಿಬ್ಬರು ಉದ್ದನೆಯ ಕೋಲನ್ನು ಮಗುವಿನ ನೇರಕ್ಕೆ ಆ ಕಡೆ ಈ ಕಡೆ ಹಿಡಿದುಕೊಂಡಿರುತ್ತಾರೆ. ಆ ಕೋಲಿಗೆ ಡಾವಸಾಣರು, ಯುವಕರು ತಮ್ಮ ಕೊಲುಗಳಿಂದ ಬಡಿಯುತ್ತಾ 'ಚರಿಕ ಚರಿಯಾ ಚಂಪಾಡೋಲ್ ಜು ಜು ಜು ಚಂಪ ಲೇರಾಲ' ಎಂಬ ಹಾಡನ್ನು ಏಳು ಸಲ ಹಾಡುತ್ತಾರೆ. ಇದನ್ನು ಲಂಬಾಣಿಗರು 'ವಾಂಜಣಾ ದೇರೋ' ಎಂದು ಕರೆಯುತ್ತಾರೆ. ನಂತರ ಮಗುವಿನ ಮುಂದೆ ಸಜ್ಜಕದೊಂದಿಗೆ ಇಟ್ಟಿರುವ ಸುವಾಳಿ ಗುಂಪುಗಳಲ್ಲಿ ಒಂದನ್ನು ನಾಯಕನಿಗೆ ಉಳಿದವುಗಳನ್ನು ಇತರ ಹಿರಿಯರಿಗೆ ಹಾಗೂ ಒಂದು ಗುಂಪನ್ನು ಮಗುವಿನ ತಾಯಿಗೆ ನೀಡಲಾಗುತ್ತದೆ. ಅಂದು ಮಗುವಿನ ತಾಯಿ ಧೂಂಡನ ನಂತರ ಕೊಟ್ಟ ಸುವಾಳಿಗಳನ್ನು ತಿಂದು ನೀರು ಕುಡಿಯಬೇಕು.

ಗುಲಬರ್ಗಾ ಮತ್ತು ಸೋಲಾಪುರದ ಲಂಬಾಣಿಗರು ಕಾಮದಹನದ ನಂತರ ಸಾಯಂಕಾಲ ಧೂಂಡ ಕಾರ್ಯಕ್ರಮ ಆಚರಿಸಿಕೊಂಡರೆ, ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಕಾಮದಹನದ

ಮುನ್ನಾದಿನ ಸಾಯಂಕಾಲ ಧೂಂಡ ಕಾರ್ಯಕ್ರಮವನ್ನು ಆಚರಿಸುತ್ತಾರೆ. ಅಲ್ಲದೇ ಗುಲಬರ್ಗಾ ಮತ್ತು ಸೋಲಾಪುರದಲ್ಲಿ ಧೂಂಡ ಕಾರ್ಯಕ್ರಮ ಆಯಾ ಮನೆಗಳ ಮುಂದೆ ಜರುಗುತ್ತದೆ. ಆದರೆ ರಂಗಾರೆಡ್ಡಿಯ ಲಂಬಾಣಿಗರು ಧೂಂಡ ಕಾರ್ಯಕ್ರಮವನ್ನು ಒಂದೊಂದು ವಂಶಸ್ಥರು ಒಂದೊಂದು ಕಡೆ ಒಟ್ಟಿಗೆ ಸೇರಿ ಈ ಕಾರ್ಯಕ್ರಮಕ್ಕೆ ಅರ್ಹರಿರುವ ಎಲ್ಲ ಮಕ್ಕಳನ್ನು ಸಾಲಿನಲ್ಲಿ ಕೂರಿಸಿ ಸಾಮೂಹಿಕವಾಗಿ ಧೂಂಡ ಕಾರ್ಯಕ್ರಮವನ್ನು ಆಚರಿಸುತ್ತಾರೆ.

**ಹೋಳಿ ಧೋಕಾಯೇರೊ:** ಕಾಮದಹನದ ದಿನ ರಾತ್ರಿ ಹೆಣ್ಣು ಮಕ್ಕಳ ಹೋಳಿ ಎಂದರೆ ಕಾಮದಹನವಿರುತ್ತದೆ. ತಾಂಡಾದ ಎಲ್ಲಾ ಹೆಣ್ಣು ಮಕ್ಕಳು ಹೊಸ ಬಟ್ಟೆಯನ್ನು ತೊಟ್ಟು ಶೃಂಗರಿಸಿ ಕೊಂಡು ಉಡಿಯಲ್ಲಿ ಜೋಳ ಅಥವಾ ಅಕ್ಕಿಯ ಕಾಳುಗಳನ್ನು ಹಾಕಿಕೊಳ್ಳುತ್ತಾರೆ. ಧೂಂಡ ಕಾರ್ಯಕ್ರಮ ಆಚರಿಸಿಕೊಂಡ ಮಕ್ಕಳ ಹಣೆಗೆ ಕೆಂಪು ಬಣ್ಣದ ಬಟ್ಟೆ ಎಂದರೆ 'ಛಾಂಟಿಯಾ' ಕಟ್ಟಿಕೊಂಡು ಮಗುವಿನ ತಾಯಿ ಉಡಿಯಲ್ಲಿ ಎರಡು ಕೊಬ್ಬರಿ ಬಟ್ಟಲು, ಉತ್ತುತ್ತಿ, ಜೋಳ ಅಥವಾ ಅಕ್ಕಿಯ ಕಾಳುಗಳನ್ನು ಹಾಕಿಕೊಳ್ಳುತ್ತಾಳೆ. ಆ ವರ್ಷದಲ್ಲಿ ಹುಟ್ಟಿದ ಜಾತ್ ಮತ್ತು ಭೂಕ್ಯಾ ಪಂಗಡದ ಎಲ್ಲ ಮಕ್ಕಳಿಗೂ ಹೋಳಿ ಧೋಕಾಯೇರೋ ಕಾರ್ಯಕ್ರಮವಿರುತ್ತದೆ. ಹೀಗೆ ಮಕ್ಕಳೊಂದಿಗೆ ತಾಂಡಾದ ಎಲ್ಲಾ ಹೆಣ್ಣು ಮಕ್ಕಳು ಹಾಡುತ್ತಾ, ಕುಣಿಯುತ್ತಾ ಕಾಮದಹನದ ಸ್ಥಳಕ್ಕೆ ತೆರಳುತ್ತಾರೆ. ಕಾಮದಹನ ಪ್ರಾರಂಭವಾಗುತ್ತಲೇ ಆ ವರ್ಷದಲ್ಲಿ ಜನಿಸಿದ ಮಕ್ಕಳ ತಾಯಂದಿರು ತಾವು ತಂದಿರುವ ಕೊಬ್ಬರಿ ಬಟ್ಟಲು ಹಾಗೂ ಉತ್ತತ್ತಿಯನ್ನು ಗೇರಿಯಾಗಳಿಗೆ ಕೊಟ್ಟು ತಾಯಿ ಮಗುವಿನೊಂದಿಗೆ ಹೋಳಿ ಮಾತೆಗೆ ನಮಿಸುತ್ತಾರೆ. ನಂತರ ತಾಂಡಾದ ಎಲ್ಲಾ ಹೆಣ್ಣು ಮಕ್ಕಳು ದಹಿಸುತ್ತಿರುವ ಬೆಂಕಿಯಲ್ಲಿ ತಾವು ತಂದಿರುವ ಕಾಳುಗಳನ್ನು ಎಸೆಯುತ್ತಾ ಹೋಳಿಯ ಸುತ್ತಲೂ ಹಾಡುತ್ತಾ, ಕುಣಿಯುತ್ತಾ, ಓಡುತ್ತಾ ಹೋಳಿಯ ಸುತ್ತ ಏಳು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ನಂತರ ಎಲ್ಲರೂ ಮನೆಗೆ ಹಿಂತಿರುಗುವ ಮಾರ್ಗ ಮಧ್ಯದಲ್ಲಿ ಗೇರಿಯಾ ಹಾಗೂ ಅವರ ಸಂಗಡಿಗರು ಪ್ರತಿಯೊಬ್ಬ ಹೆಣ್ಣು ಮಗಳನ್ನು ತಡೆದು ಅವಳ ಗಂಡನ ಹೆಸರನ್ನು ಕೇಳುತ್ತಾರೆ. ನಾಚಿಕೆ, ಮುಜುಗರ, ಸಂತೋಷದಿಂದ ಗಂಡನ ಹಸರನ್ನು ಹೇಳಿ ಮನೆಯ ಕಡೆ ತೆರಳುತ್ತಾರೆ. ಹೀಗೆ ಮಕ್ಕಳೊಂದಿಗೆ ತಾಂಡಾದ ಎಲ್ಲಾ ಹೆಣ್ಣು ಮಕ್ಕಳು ಹೋಳಿ ಮಾತೆಗೆ ಸಲ್ಲಿಸುವ ಪೂಜೆಯನ್ನು 'ಹೋಳಿ ಧೊಕಾಯೇರೊ' ಎಂದು ಕರೆಯುತ್ತಾರೆ.

**ಬಾಳಲಟ್ಟಾ ಕಡಾಯೇರೋ:** ಜನನದ ನಂತರ ಪ್ರಥಮ ಬಾರಿಗೆ ಮಗುವಿನ ಕೂದಲುಗಳನ್ನು ಕತ್ತರಿಸಲು ಆಚರಿಸುವ ಸಂಸ್ಕಾರವೇ 'ಚೂಡಾಕರ್ಮ' ಸಂಸ್ಕಾರವಾಗಿದೆ. ಈ ಜವುಳ ತೆಗೆಯಿಸುವ ಸಂಸ್ಕಾರವು ಲಂಬಾಣಿಗರಲ್ಲಿ ಪ್ರಮುಖವಾದ ಸಂಸ್ಕಾರವಾಗಿದ್ದು ಇದನ್ನು 'ಬಾಳಲಟ್ಟಾ ಕಡಾಯೇರೋ' ಎಂದು ಕರೆಯುತ್ತಾರೆ. ಲಂಬಾಣಿಗರಲ್ಲಿ ಕೆಲವು ಮನೆತನದವರು ಬಾಲಾಜಿ ದೇವರ ಹೆಸರಲ್ಲಿ ಇನ್ನು ಕೆಲವರು ದುರ್ಗಮ್ಮ, ಆಯಿ ದೇವತೆಯ ಹೆಸರಿನಲ್ಲಿ ಮತ್ತೆ ಕೆಲವರು ತುಳಜಾ ಭವಾನಿ ದೇವತೆಯ ಹೆಸರಿನಲ್ಲಿ ಹೀಗೆ ಬೇರೆ ಬೇರೆ ದೇವತೆಗಳ ಹೆಸರಿನಲ್ಲಿ ಜವುಳ ತೆಗೆಯಿಸುತ್ತಾರೆ.

ಸಸ್ಯಹಾರದ ನೈವೇದ್ಯ ತೆಗೆದುಕೊಳ್ಳುವ ದೇವತೆಗಳಿಗೆ ಸಿಹಿ ಅಡುಗೆ ಮಾಡುವದರ ಮೂಲಕ ಹಾಗೂ ಮಾಂಸಾಹಾರದ ನೈವೇದ್ಯ ತೆಗೆದುಕೊಳ್ಳುವ ದೇವತೆಗಳಿಗೆ ಕುರಿಯನ್ನು ಬಲಿಕೊಡುವದರ ಮೂಲಕ ಜವುಳ ತೆಗೆಯಿಸುವ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಆದರೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಗಂಡು ಮಗು ಜನಿಸಿದರೆ ಕಡ್ಡಾಯವಾಗಿ ಹೋತವನ್ನು ಬಲಿಕೊಟ್ಟು ಜವುಳ ಕಾರ್ಯಕ್ರಮವನ್ನು ತುಂಬಾ ವಿಜೃಂಭಣೆಯಿಂದ ಆಚರಿಸುತ್ತಾರೆ. ಹೆಣ್ಣು ಮಗು ಜನಿಸಿದರೆ ಹೋತ ವನ್ನು ಬಲಿಕೊಡದೆ ತುಂಬಾ ಸರಳವಾಗಿ ಈ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ.

ಸಾಮಾನ್ಯವಾಗಿ ಮಗುವಿಗೆ ಹಲ್ಲು ಮೂಡಿದ ಬಳಿಕ ಜವುಳ ಕಾರ್ಯಕ್ರಮದ ದಿನವನ್ನು ಗೊತ್ತುಪಡಿಸಿಕೊಂಡು, ಅಂದು ಮನೆಯನ್ನು ಗೊಮಯದಿಂದ ಸಾರಿಸುತ್ತಾರೆ. ಮನೆಯ ಬಾಗಿಲುಗಳಿಗೆ ಮಾವಿನ ಎಲೆಯ ತೋರಣ ಕಟ್ಟುತ್ತಾರೆ. ಮಗುವಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ತೊಡಿಸಿ ಕುಲದೇವರಿಗೆ ನಮಿಸುತ್ತಾರೆ. ಮನೆಯ ಬಾಗಿಲ ಹತ್ತಿರ ಅಥವಾ ಮನೆಯೊಳಗಡೆ ಒಂದು ಕಡೆ ಸ್ವಲ್ಪ ಭಾಗವನ್ನು ಗೋಮಯಗೊಳಿಸಿ ಹಿಟ್ಟಿನಿಂದ ರಂಗೋಲಿಯನ್ನು ಬಿಡಿಸುತ್ತಾರೆ. ರಂಗೋಲಿಯ ಮೇಲ್ಭಾಗಕ್ಕೆ ಗೋಣಿ ಚೀಲವನ್ನು ಮಡಿಚಿ ಇಡಲಾಗುತ್ತದೆ ಅದರ ಎರಡು ಕಡೆಗಳಲ್ಲಿ ಬೇವಿನ ಎಲೆ ಹಾಗೂ ರಂಗೋಲಿಯ ಮಧ್ಯ ತುಂಬಿದ ತಂಬಿಗೆಯನ್ನು ಇಟ್ಟು ದೇವರಿಗೆ ದೀಪ ಹಚ್ಚುತ್ತಾರೆ. ಈ ಪೂಜಾ ಸ್ಥಳದ ಪಕ್ಕದಲ್ಲಿ ತಾಯಿಯು ಮಗುವನ್ನು ಎತ್ತಿಕೊಂಡು ಕೂಡುತ್ತಾಳೆ. ಈ ಶುಭಕಾರ್ಯದಲ್ಲಿ ಮಗುವಿನ ಸೋದರ ಮಾವನ ಪಾತ್ರ ಪ್ರಮುಖವಾಗಿದ್ದು, ಅವನು ಕೈಯಲ್ಲಿ ಕತ್ತರಿಯನ್ನು ಹಿಡಿದು ಮಗುವಿನ ಕೂದಲನ್ನು ಕತ್ತರಿಸುತ್ತಾನೆ. ಜವುಳ ತೆಗೆದ ಸೋದರ ಮಾವನಿಗೆ ಒಂದು ಸೇರು ಜೋಳ ಅಥವಾ ಗೋಧಿಯ ಜೊತೆಗೆ ಎಲೆ, ಅಡಿಕೆ, ಹಣ ಹಾಗೂ ಬಟ್ಟೆಬರೆಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ಆದರೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಸೋದರ ಮಾವನೇ ಜವುಳ ತೆಗೆಯಬೇಕೆಂಬ ನಿಯಮವಿಲ್ಲ. ಅವರು ನಾವಿ(ಕ್ಷೌರಿಕ)ಯ ಮನೆಯಿಂದ ಕತ್ತರಿಯನ್ನು ತಂದು, ಹಿರಿಯ ವ್ಯಕ್ತಿ ಮಗುವಿನ ಕೂದಲನ್ನು ಐದು ಸಲ ಕತ್ತರಿಸಿ ಮಗುವಿನ ತಾಯಿಯ ಉಡಿಯಲ್ಲಿ ಹಾಕುತ್ತಾನೆ. ನಂತರ ಕೆಂಪು ಬಣ್ಣದ ಹೊಸ ಬಟ್ಟೆಯಲ್ಲಿ ಕತ್ತರಿಸಿದ ಕೂದಲನ್ನು ಕಟ್ಟಿ ದೇವರ ಜಗಲಿಯ ಹತ್ತಿರ ಇಡುತ್ತಾರೆ. ಈ ಸಂಧರ್ಭದಲ್ಲಿ ತಾಂಡಾದ ಹಿರಿಯ ಹೆಣ್ಣು ಮಕ್ಕಳು ಮಗುವನ್ನು ರಕ್ಷಿಸು ತಾಯೇ ಎಂಬ ಪ್ರಾರ್ಥನೆಯ ರೂಪದ ಹಾಡುಗಳನ್ನು ಹಾಡುತ್ತಾರೆ. ಒಂದು ವೇಳೆ ಮಗುವಿಗೆ ಹಲ್ಲು ಮೂಡಿದ ಮೇಲೆ ಜವುಳ ಕಾರ್ಯಕ್ರಮವನ್ನು ಮಾಡಲು ಸಾಧ್ಯವಾಗದಿದ್ದಾಗ ಅಥವಾ ಆರ್ಥಿಕ ಪರಿಸ್ಥಿತಿ ಚನ್ನಾಗಿಲ್ಲದಿದ್ದರೆ ಮಗುವಿನ ಆರೋಗ್ಯದ ದೃಷ್ಟಿಯಿಂದ ಎಲ್ಲಾ ಕೂದಲನ್ನು ಕತ್ತರಿಸಿ ತಲೆಯ ಮೇಲ್ಭಾಗದಲ್ಲಿ ಶಿರಸಂಧಿಯನ್ನು ಅಥವಾ ಶಿಖೆಯನ್ನು ಬಿಡುತ್ತಾರೆ. ಇದನ್ನು ಲಂಬಾಣಿಗರು 'ಚೋಟಿ ಭೋಡೆರೊ' ಎಂದು ಕರೆಯುತ್ತಾರೆ. ಮುಂದೆ ಅನುಕೂಲವಾದಾಗ ಜವುಳ ತೆಗೆಯಿಸುವ ಸಂಸ್ಕಾರವನ್ನು ನೆರವೇರಿಸಿ ಚೋಟಿಯನ್ನು ಕತ್ತರಿಸುತ್ತಾರೆ.

**ವಾಯಾ ಕರೇರೋ (ವಿವಾಹ)**

ವಿವಾಹ ಮಾಡುವ ಸಂಸ್ಕಾರವನ್ನು ಲಂಬಾಣಿಗರು 'ವಾಯಾ ಕರೇರೋ' ಎನ್ನುತ್ತಾರೆ. ವಿವಾಹವು ಸಾಮಾಜಿಕವಾಗಿ ಬಹಳ ಪ್ರಾಮುಖ್ಯವನ್ನು ಪಡೆದಿರುವ ಸಂಸ್ಕಾರವಾಗಿದೆ. ಮಾನವನ ಲೈಂಗಿಕ ಸ್ವೇಚ್ಛೆಯನ್ನು ನಿಯಂತ್ರಣ ಮಾಡಿ ಆತನ ಲೈಂಗಿಕ ಬಯಕೆಯ ಪೂರೈಕೆಗೆ ಕ್ರಮಬದ್ಧವಾದ ವ್ಯವಸ್ಥೆಯೊಂದನ್ನು ನಿರ್ಮಿಸುವ ಸಲುವಾಗಿ ವಿವಾಹ ಎಂಬ ಸಂಸ್ಥೆಯು ಹುಟ್ಟಿಕೊಂಡಿತು ಎನ್ನಬಹುದು. ವಿವಾಹವು ಸಂತಾನಾಪೇಕ್ಷೆಯುಳ್ಳ ಗಂಡು ಹೆಣ್ಣುಗಳ ನಡುವೆ ಏರ್ಪಟ್ಟ ನಂಟು. ವಿವಾಹವು ಲೈಂಗಿಕ ಜೀವನ ನಡೆಸಲು ಮಾನವನಿಗೆ ನೀಡಲಾಗಿರುವ ಪರವಾನಿಗೆ. ವಿವಾಹದ ಬಗ್ಗೆ ಆಧ್ಯಾತ್ಮಿಕ ದೃಷ್ಟಿಯನ್ನು ಹೊಂದಿರುವ ಲಂಬಾಣಿಗರು ಅದನ್ನು ಒಂದು ಪವಿತ್ರವಾದ ಧಾರ್ಮಿಕ ವಿಧಿ ಎಂದೇ ಪರಿಗಣಿಸುತ್ತಾರೆ.

ವೈವಾಹಿಕ ದೃಷ್ಟಿಯಿಂದ ನೋಡುವದಾದರೆ ಲಂಬಾಣಿಗರಲ್ಲಿ ಪ್ರಮುಖವಾಗಿ ಎರಡು ಪಾಡಾಗಳು ಗೋಚರಿಸುತ್ತವೆ. ಒಂದು 'ಜಾತ್' ಪಂಗಡ ಇನ್ನೊಂದು 'ಭೂಕ್ಯಾ'ಪಂಗಡ. ಈ ಎರಡು ಪಂಗಡಗಳ ಮಧ್ಯ ವೈವಾಹಿಕವಾಗಿ ಕೊಡುಕೊಳ್ಳುವಿಕೆಯ ಸಂಬಂಧಗಳು ಆಚರಣೆಯಲ್ಲಿವೆ. ರಾಠೋಡ ಬಣದವರೆಲ್ಲ 'ಭೂಕ್ಯಾ' ಪಾಡಾದವರು ಎನಿಸಿಕೊಂಡರೆ, ಚವ್ಹಾಣ, ಪವಾರ ವಡತಿಯಾ ಹಾಗೂ ಚೀನಿ ರಾಠೋಡ ಪಾಡಾದವರು 'ಜಾತ್' ಎನಿಸಿಕೊಳ್ಳುತ್ತಾರೆ. ಜಾತ್ ಪಂಗಡದಲ್ಲಿ ಬರುವ ವಡತಿಯಾ ಬಣದವರು ರಾಠೋಡ, ಚವ್ಹಾಣ, ಪವಾರ ಮತ್ತು ಚೀನಿ ರಾಠೋಡ ಬಣದವರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸುತ್ತಾರೆ. ಅದೇ ರೀತಿ ಚೀನಿ ರಾಠೋಡ ಬಣದವರು ಕೂಡಾ ರಾಠೋಡ, ಚವ್ಹಾಣ, ಪವಾರ ಮತ್ತು ವಡತಿಯಾ ಬಣದವರೊಂದಿಗೆ ಕೊಡು ತೆಗೆದುಕೊಳ್ಳುವ ಸಂಬಂಧವನ್ನು ಮಾಡುತ್ತಾರೆ. ಆದರೆ ಚವ್ಹಾಣ ಮತ್ತು ಪವಾರ ಬಣದವರ ಮಧ್ಯ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಅವರು ಪರಸ್ಪರ ಸಹೋದರರಾಗುತ್ತಾರೆ. ರಾಠೋಡ ಎಂದರೆ ಭೂಕ್ಯಾ ಪಂಗಡದವರು ಜಾತ್ ಪಂಗಡದಲ್ಲಿ ಗುರುತಿಸಿಕೊಳ್ಳುವ ಚವ್ಹಾಣ, ಪವಾರ, ವಡತಿಯಾ ಹಾಗೂ ಚೀನಿ ರಾಠೋಡ ಹೀಗೆ ಈ ನಾಲ್ಕು ಬಣದವರೊಂದಿಗೆ ನಿರಾತಂಕವಾಗಿ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾರೆ. ಯಾವುದೇ ಸಂದರ್ಭದಲ್ಲಿಯೂ ಕೂಡಾ ಲಂಬಾಣಿಗರಲ್ಲಿ ಸಪಾಡಾ ವಿವಾಹಕ್ಕೆ ಆಸ್ಪದವಿಲ್ಲ. ಸಪಾಡಾದವರೆಲ್ಲ ಸಹೋದರ ಸಂಬಂಧಿಗಳು ಎಂಬ ಭಾವನೆ ಲಂಬಾಣಿಗರಲ್ಲಿ ಜಾರಿಯಲ್ಲಿದೆ.

ವಿವಾಹದ ವಿಚಾರವಾಗಿ ಲಂಬಾಣಿಗರ ಗಂಡು ಹೆಣ್ಣುಗಳಿಗೆ ತಮ್ಮ ಜೀವನ ಸಂಗಾತಿಯನ್ನು ಆಯ್ಕೆಮಾಡಿಕೊಳ್ಳುವ ಸ್ವಾತಂತ್ರ್ಯವಿರುವುದಿಲ್ಲ. ಹೆಣ್ಣಿನ ಆಯ್ಕೆ, ವಿವಾಹ ಮುಂತಾದ ಎಲ್ಲಾ ಕೆಲಸ ಕಾರ್ಯಗಳು ತಂದೆ ತಾಯಿ ಹಾಗೂ ಗುರು ಹಿರಿಯರ ಅಣತಿಯಂತೆ ಸಾಗುತ್ತವೆ. ಆದರೆ ಇಂದಿನ ಆಧುನಿಕ ಯುಗದಲ್ಲಿ ಹಳೆಯ ಸಂಪ್ರದಾಯಗಳು, ನಿಯಮ, ಪದ್ಧತಿ, ಕಟ್ಟಳೆಗಳು ಕ್ರಮೇಣ ತಮ್ಮ ಹಿಡಿತವನ್ನು ಸಡಿಲಿಸುತ್ತಿದ್ದು, ಗಂಡು ಹೆಣ್ಣುಗಳು ತಮ್ಮ ಜೀವನ ಸಂಗಾತಿಯನ್ನು

ಆಯ್ಕೆ ಮಾಡಿಕೊಳ್ಳುವ, ವಿವಾಹ ಮಾಡಿಕೊಳ್ಳುವ, ಹೀಗೆ ಮುಂತಾದ ವಿಚಾರದಲ್ಲಿ ಸ್ವತಂತ್ರ್ಯವಾಗಿ ವ್ಯವಹರಿಸುತ್ತಿರುವುದು ಗೋಚರಿಸುತ್ತದೆ.

**ಜೀವನ ಸಂಗಾತಿಯ ಆಯ್ಕೆ:** ಸಾಮಾನ್ಯವಾಗಿ ಲಂಬಾಣಿಗರು ವಯಸ್ಸಿಗೆ ಬಂದ ತಮ್ಮ ಮಕ್ಕಳಿಗೆ ವಿವಾಹ ಮಾಡುವ ಸದುದ್ದೇಶದಿಂದ ಜೀವನ ಸಂಗಾತಿಯ ಆಯ್ಕೆಯ ವಿಚಾರವನ್ನು ಸಂಬಂಧಿಕರ ಹಾಗೂ ಗುರುಹಿರಿಯರ ಮೂಲಕ ಹರಿಬಿಡುತ್ತಾರೆ. ತಮ್ಮ ಮನೆಗೆ ಸರಿಹೊಂದುವ ಮನೆತನದವರು ಲಭ್ಯವಾದಾಗ ಗಂಡಿನ ಮನೆಯವರು ಹೆಣ್ಣಿನ ಹಾಗೂ ಅವಳ ಮನೆತನದ ಪೂರ್ವಾಪರವನ್ನು ತಿಳಿದುಕೊಂಡು ಬ್ರಾಹ್ಮಣನ ಹತ್ತಿರ ಜಾತಕವನ್ನು ಕೇಳುತ್ತಾರೆ. ಆದರೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಜೋಳ ಅಥವಾ ಅಕ್ಕಿಯನ್ನು ಒಂದು ತಟ್ಟೆಯಲ್ಲಿ ಹಾಕಿ ಬಲಗೈಯಿಂದ ಮನಸ್ಸಿಗೆ ಬಂದಷ್ಟು ಕಾಳುಗಳನ್ನು ತೆಗೆದುಕೊಳ್ಳುತ್ತಾರೆ. ನಂತರ ಬಲಗೈಯಲ್ಲಿ ಬಂದಷ್ಟು ಕಾಳುಗಳನ್ನು ಎಣಿಸುತ್ತಾರೆ. ಸಮ ಸಂಖ್ಯೆಯ ಕಾಳುಗಳು ಬಂದರೆ ಗಣಕೂಟ ಕೂಡಿ ಬಂದಿತೆಂದು, ಬೆಸ ಸಂಖ್ಯೆಯ ಕಾಳುಗಳು ಬಂದರೆ ಗಣಕೂಟ ಕೂಡಿ ಬರಲಿಲ್ಲ ಎಂದು ಭಾವಿಸುತ್ತಾರೆ. ಗಣಕೂಟ ಕೂಡಿ ಬಂದ ಮೇಲೆ ಮಾತುಕತೆಗಾಗಿ ಹೆಣ್ಣಿನವರ ಮನೆಗೆ ಹೋಗಲು ಒಳ್ಳೆಯ ದಿನವನ್ನು ನಿಶ್ಚಯಿಸಿಕೊಳ್ಳುತ್ತಾರೆ. ಒಂದು ವೇಳೆ ಗಣಕೂಟ ಕೂಡಿ ಬರದೇ ಇದ್ದರೆ ಹೆಣ್ಣಿನ ಹೆಸರನ್ನು ಬದಲಾಯಿಸಿ ಗಣಕೂಟವನ್ನು ಕೂಡಿಸುತ್ತಾರೆ. ಒಟ್ಟಾರೆ ಹೆಣ್ಣಿನ ಮನೆತನ ಮನಸ್ಸಿಗೆ ಬಂದರೆ ಎಲ್ಲವು ಸರಿ ಹೊಂದುತ್ತದೆ.

ಮೊದಲೇ ನಿಶ್ಚಿಯಿಸಿಕೊಂಡ ದಿನವನ್ನು ಹೆಣ್ಣಿನ ಮನೆಯವರಿಗೆ ತಿಳಿಸಿ ತಾಂಡಾದ ಹಿರಿಯರು ಹಾಗೂ ಸಂಬಂಧಿಕರೊಂದಿಗೆ ಹೆಣ್ಣಿನ ಮನೆಗೆ ಹೋಗುತ್ತಾರೆ. ಗಂಡಿನ ಮನೆಯವರು ಬರುವ ಸುದ್ದಿಯನ್ನು ಮೊದಲೇ ತಿಳಿದ ಹೆಣ್ಣಿನ ಮನೆಯವರು ತಾಂಡಾದ ನಾಯಕ, ಕಾರಭಾರಿ, ಡಾವಸಾಣ ಹೀಗೆ ಎಲ್ಲರನ್ನು ಸೇರಿಸುತ್ತಾರೆ. ಹೀಗೆ ಒಂದೆಡೆ ಸೇರಿದ ಎರಡು ಕಡೆಯವರು ಕ್ಷೇಮ ಸಮಾಚಾರವನ್ನು ಮಾತನಾಡಿ ಎರಡು ಮನೆಯವರ ಮನೋಭಾವನೆಗಳನ್ನು ಅರಿತುಕೊಳ್ಳುತ್ತಾರೆ. ಹೆಣ್ಣು ಗಂಡಿನವರ ಮನಸ್ಸಿಗೆ ಬಂದರೆ ಕೊಡುತೆಗೆದುಕೊಳ್ಳುವ ಮಾತುಕತೆ ನಡೆಯುತ್ತದೆ. ಇಲ್ಲಿಗೆ ವಿವಾಹ ನಿಶ್ಚಿತಾರ್ಥ ಕಾರ್ಯ ಮುಗಿದಂತಾಗುತ್ತದೆ. ಈ ವಿವಾಹ ನಿಶ್ಚಿತಾರ್ಥವನ್ನು ಲಂಬಾಣಿಗರು 'ಕಾನಸಳೋಯಿ', 'ಕಾನಸಾಮಳಿ' ಎಂದು ಕರೆಯುತ್ತಾರೆ. ಈ ಕಾರ್ಯವನ್ನು ದೃಢೀಕರಿಸಲು ಗಂಡಿನ ಕಡೆಯವರು ಹೆಣ್ಣಿನ ತಾಂಡಾದ ನಾಯಕನಿಗೆ ಒಂದು ರೂಪಾಯಿಯ ನಾಣ್ಯವನ್ನು ನೀಡುತ್ತಾರೆ. ಇದನ್ನು ಲಂಬಾಣಿಗರು 'ಸಾಕ್' ಎಂದು ಕರೆಯುತ್ತಾರೆ. 'ಸಾಕ್'ದ ಒಂದು ರೂಪಾಯಿ ಸ್ವೀಕರಿಸಿದ ನಂತರ ಯಾವುದೇ ಕಾರಣಕ್ಕೂ ಸಂಬಂಧವನ್ನು ಮುರಿದುಕೊಳ್ಳುವಂತಿಲ್ಲ. ಒಂದು ವೇಳೆ ಅನಿವಾರ್ಯವಾಗಿ ಅಂತಹ ಸಂದರ್ಭ ಎದುರಾದರೆ ಮತ್ತೆ ಎರಡು ತಾಂಡಾಗಳ ನಾಯಕ, ಕಾರಭಾರಿ ಹಾಗೂ ಡಾವಸಾಣರು ಮತ್ತೊಮ್ಮೆ ಸಭೆ ಸೇರಿ ಸಂಬಂಧ ಮುರಿದುಕೊಳ್ಳಲು ಕಾರಣವನ್ನು ಕೇಳುತ್ತಾರೆ. ಕಾರಣವು ಅರ್ಥಯಕ್ತವಾಗಿದ್ದರೆ, ಹೆಣ್ಣಿನ ತಾಂಡಾದ ನಾಯಕನಿಗೆ

ಕೊಟ್ಟಿರುವ ಸಾಕ್ ನ ಒಂದು ರೂಪಾಯಿಯನ್ನು ಗಂಡಿನವರು ಹಿಂಪಡೆಯುವ ಮೂಲಕ ಸಂಬಂಧವನ್ನು ಮುರಿದುಕೊಳ್ಳಬಹುದು ಸಾಕ್ ನ ಒಂದು ರೂಪಾಯಿಯ ನಾಣ್ಯವನ್ನು ಹಿಂಪಡೆಯದ ಹೊರತು ಯಾವುದೇ ಕಾರಣಕ್ಕೂ ಮತ್ತೊಂದು ಕಡೆ ಸಂಬಂಧ ಬೆಳೆಸಲು ಸಾಧ್ಯವಿಲ್ಲ.

**ಸಪಾರಿ ಘೋಡೇರೋ:** 'ಸಪಾರಿ ಘೋಡೇರೋ' ಎಂಬ ಕಾರ್ಯಕ್ರಮವು ಸೋಲಾಪುರ ಜಿಲ್ಲೆಯ ಲಂಬಾಣಿಗರು ಆಚರಿಸುವ ಒಂದು ವಿಶೇಷ ಕಾರ್ಯಕ್ರಮವಾಗಿದೆ. ಒಂದು ಗೊತ್ತುಪಡಿಸಿದ ದಿನ ಗಂಡಿನ ಕಡೆಯ ಹತ್ತಾರು ಜನರು ವರನೊಂದಿಗೆ ವಧುವಿನ ಮನೆಗೆ ಹಾಡುತ್ತಾ ಬರುತ್ತಾರೆ. ಮನೆಯ ಮುಂದೆ ವಧು ಮತ್ತು ವರನ ಕಡೆಯವರು ಎದುರುಬದುರಾಗಿ ಸಾಲಿನಲ್ಲಿ ಕುಳಿತುಕೊಳ್ಳುತ್ತಾರೆ. ವರನ ಕಡೆಯವರಿಗೆ ತುಂಬುಗೌರವದಿಂದ ಮನೆಗೆ ಬರಮಾಡಿಕೊಂಡು ಕುಡಿಯಲು ನೀರು ಕೊಡುತ್ತಾರೆ. ಹೀಗೆ ಎದುರುಬದುರಾಗಿ ಕುಳಿತ ಎರಡು ಮನೆತನದವರು ಯೋಗಕ್ಷೇಮವನ್ನು ವಿಚಾರಿಸಿದ ನಂತರ ಕೊಡುತೆಗೆದುಕೊಳ್ಳುವ ಮಾತುಕತೆ ನಡೆಯುತ್ತದೆ. ಮಾತುಕತೆ ಅಂತಿಮಗೊಂಡ ನಂತರ ಎರಡು ಸಾಲಿನ ಮಧ್ಯದಲ್ಲಿ ಎಲೆ, ಅಡಿಕೆ, ತೆಂಗಿನಕಾಯಿ, ಸೋಪು ಮುಂತಾದ ವಸ್ತುಗಳನ್ನು ಹಾಕಿರುವ ತಟ್ಟೆ ಇಡುತ್ತಾರೆ. ಅದರ ಪಕ್ಕದಲ್ಲಿ ನೀರು ತುಂಬಿದ ತಂಬಿಗೆಯನ್ನು ಇಟ್ಟಿರುತ್ತಾರೆ. ಆಗ ಗುಂಪಿನಲ್ಲಿಯ ಒಬ್ಬ ಹಿರಿಯ ವ್ಯಕ್ತಿಯು ಗಂಡು ಮತ್ತು ಹೆಣ್ಣಿನವರನ್ನು ಕುರಿತು ಸಂಬಂಧ ನಿಶ್ಚಿಯವಾಯಿತೆ? ಇನ್ನು ಅಡಿಕೆಯನ್ನು ಒಡೆಯಬಹುದೇ ಎಂದು ಕೇಳುತ್ತಾನೆ. ಎರಡು ಕಡೆಯವರು ಸಮ್ಮತಿಸಿದ ಮೇಲೆ ಗಂಡಿನ ಕಡೆಯವರು ಒಂದು ರೂಪಾಯಿಯ ನಾಣ್ಯವನ್ನು ಕೊಡುತ್ತಾರೆ. ಆ ನಾಣ್ಯವನ್ನು ನೆಲದ ಮೇಲಿಟ್ಟು ಅದರ ಮೇಲೆ ಮೂರು ಅಡಿಕೆಯನ್ನು ಒಂದರಮೇಲೊಂದರಂತೆ ಜೋಡಿಸುತ್ತಾರೆ. ಗುಂಪಿನಲ್ಲಿಯ ಒಬ್ಬ ಗಟ್ಟಿಮುಟ್ಟಾದ ವ್ಯಕ್ತಿ ಅಡಿಕೆ ಒಡೆಯೋಣವೇ? ಎಂದು ಮತ್ತೊಮ್ಮೆ ಹಿರಿಯರನ್ನು ಕೇಳುತ್ತಾನೆ. ಸರ್ವರೂ ಸಮ್ಮತಿಸಿದ ನಂತರ ಬಲಗೈಯನ್ನು ಮುಷ್ಟಿಗೊಳಿಸಿ ಒಂದೇ ಹೊಡೆತಕ್ಕೆ ಅಡಿಕೆಯನ್ನು ಚೂರು ಚೂರುಗೊಳಿಸುತ್ತಾನೆ. ನಂತರ ಎದುರುಬಿದುರಿನಲ್ಲಿ ಕುಳಿತ ಎರಡು ಮನೆಯ ತಲಾ ಹನ್ನೊಂದು ಜನರಿಗೆ ಕುಂಕುಮ ಹಚ್ಚಿ, ಟೋಪಿ ತೊಡಿಸಿ, ಟಾವೆಲ ಹೊದಿಸಿ, ಬ್ಲೋಜ ಪೀಸಿನಲ್ಲಿ ಅಕ್ಕಿಯನ್ನು ಹಾಕಿ ಪ್ರತಿಯೊಬ್ಬರಿಗೂ ಕೊಟ್ಟು ಗೌರವಿಸುತ್ತಾರೆ. ಇದೇ ಸಂದರ್ಭದಲ್ಲಿ ಕರಾರ (ಕನ್ಯಾಶುಲ್ಕ) ಗೋಟೆರ ಖರ್ಚು ಹಾಗೂ ಪಂಚರ ಖರ್ಚು ಎಂದು ಇಂತಿಷ್ಟು ಹಣವನ್ನು ಕೊಡಬೇಕೆಂದು ಹೇಳುತ್ತಾರೆ. ಇದೇ ಸಂದರ್ಭದಲ್ಲಿ ಮದುಮಗನನ್ನು ಕೂರಿಸಿ, ಕುಂಕುಮ ಹಚ್ಚಿ, ಟೋಪಿ ತೊಡಿಸಿ, ಟಾವೆಲ ಹೊದಿಸಿ ಉಡಿಯಲ್ಲಿ ಐದು ಬಗೆಯ ಹಣ್ಣು ಹಾಗೂ ಮದುಮಗನಿಗಾಗಿ ತಂದಿರುವ ಹೊಸ ಬಟ್ಟೆಗಳನ್ನು ಹಾಕಿ ಉಡಿ ತುಂಬುವರು. ಪ್ರತಿಯಾಗಿ ವರನು ಸಂಬಂಧ ನಿಶ್ಚಿಯವಾಗಿ ಅಡಿಕೆ ಒಡೆದಿದ್ದಕ್ಕಾಗಿ ಸಂತೋಷದಿಂದ ೧೦೧ ರೂಪಾಯಿ ಕಾಣಿಕೆಯನ್ನು ತಟ್ಟೆಯಲ್ಲಿಟ್ಟು ಕುಳಿತಿರುವ ಎಲ್ಲ ಹಿರಿಯರಿಗೂ ನಮಸ್ಕರಿಸುವನು. ಪಂಚರು 'ಕಾನಸಳೋಯಿ'ಯ ಖರ್ಚನ್ನು ನಿರ್ಧರಿಸಿ ವರನ ಕಡೆಯವರಿಂದ ಎರಡು ಪಟ್ಟು ಹಾಗೂ ವಧುವಿನ ಕಡೆಯವರಿಂದ ಒಂದು ಪಟ್ಟು ಹಣವನ್ನು ತೆಗೆದುಕೊಳ್ಳುತ್ತಾರೆ. ಹೀಗೆ

ತೆಗೆದುಕೊಂಡ ಪಂಚರ ಖರ್ಚಿನಲ್ಲಿ ಸಿಂದಿ, ಸಾರಾಯಿಯನ್ನು ತರಿಸಿ ಎಲ್ಲ ಹಿರಿಯರು ಹಂಚಿಕೊಂಡು ಕುಡಿಯುತ್ತಾರೆ. ಮನೆಯಲ್ಲಿ ಆಗಲೇ ತಯಾರಿಸಿರುವ ಮಾಂಸದೂಟವನ್ನು ಮಾಡುತ್ತಾರೆ.

ಅಡಿಕೆ ಒಡೆಯುವ ಸಂದರ್ಭದಲ್ಲಿ ಮನೆಯಲ್ಲಿ ಎರಡು ಕಡೆಯ ಹೆಣ್ಣು ಮಕ್ಕಳು ಹಾಡುತ್ತಾ, ಕುಣಿಯುತ್ತಾ ವಧುವನ್ನು ಕೂರಿಸಿ ಕುಂಕುಮ ಹಚ್ಚಿ ಅವಳ ಉಡಿಯಲ್ಲಿ ಐದು ತರಹದ ಹಣ್ಣುಗಳನ್ನು ಹಾಗೂ ವಧುವಿಗಾಗಿ ತಂದಿರುವ ಹೊಸ ಬಟ್ಟೆಗಳನ್ನು ಹಾಕಿ ಉಡಿ ತುಂಬುತ್ತಾರೆ. ವಧುವು ನೆರದ ಎಲ್ಲಾ ಹಿರಿಯ ಹೆಣ್ಣು ಮಕ್ಕಳ ಪಾದ ಮುಟ್ಟಿ ನಮಸ್ಕರಿಸುತ್ತಾಳೆ. ನಂತರ ಎಲ್ಲಾ ಹೆಣ್ಣು ಮಕ್ಕಳು ಒಂದೆಡೆ ಸೇರಿ ಮನೆಯಲ್ಲಿ ತಯಾರಿಸಿರುವ ಮಾಂಸದೂಟವನ್ನು ಮಾಡುತ್ತಾರೆ. ಕೊನೆಗೆ ಎಲ್ಲರೂ ಹಾಡುತ್ತಾ ಕುಣಿಯುತ್ತಾ ಗಂಡಿನ ಕಡೆಯವರನ್ನು ಬಿಳ್ಕೊಡುತ್ತಾರೆ. ಈ ಸಂಸ್ಕಾರವನ್ನು ಸೋಲಾಪುರ ಜಿಲ್ಲೆಯ ಲಂಬಾಣಿಗರು 'ಸಪಾರಿ ಫೋಡೇರೋ' ಎಂದು ಕರೆಯುತ್ತಾರೆ. ಈ ಸಂಸ್ಕಾರವು ರಂಗಾರೆಡ್ಡಿ ಹಾಗೂ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಲ್ಲಿ ಗೋಚರಿಸುವುದಿಲ್ಲ.

**ಗೋಳ ಖಾಯೇರೊ (ಬೆಲ್ಲದ ಕಾರ್ಯ):** 'ಗೋಳ ಖಾಯೇರೊ' ಸಂಸ್ಕಾರವು ವಧುವಿನ ಮನೆಯಲ್ಲಿ ನಡೆಯುತ್ತದೆ. ಈ ಕಾರ್ಯಕ್ರಮವನ್ನು ಮಾಡಲು ಒಂದು ಒಳ್ಳೆಯ ದಿನ ನಿಶ್ಚಯಿಸಿಕೊಂಡು ವಧುವಿನ ಮನೆಯವರಿಗೆ ತಿಳಿಸಲಾಗಿರುತ್ತದೆ. ಮೊದಲೇ ಗುರುತಿಸಿಕೊಂಡ ದಿನದಂದು ವರನ ತಂದೆ ತಾಯಿ ನಾಯಕ ಡಾವಸಾಣ ಎಲ್ಲರೂ ವಧುವಿನ ಮನೆಗೆ ಬರುತ್ತಾರೆ. ಬಂದ ತಕ್ಷಣ ಪರಸ್ಪರರು 'ರಾಮ ರಾಮ' ಎಂದು ಹೇಳಿ ಪರಸ್ಪರ ಗೌರವವನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ವಧುವಿನ ಮನೆಯವರು ವರನ ಮನೆಯವರಿಗೆ ಅತಿಥಿ ಸತ್ಕಾರದ ಸಂಕೇತವಾಗಿ ನೀರನ್ನು ನೀಡಿದಾಗ ವರನ ಕಡೆಯವರು ನೀರಿನ 'ಕಸಳಾತ' (ನುಡಿಗಟ್ಟು) ಹೇಳಿ ನೀರನ್ನು ಸ್ವೀಕರಿಸುತ್ತಾರೆ. ನಂತರ ಎರಡು ತಾಂಡಾದ ನಾಯಕರು, ಡಾವಸಾಣರು ಹಾಗೂ ಹಿರಿಯರೆಲ್ಲ ಸೇರಿ ಪರಸ್ಪರ ಸಮಾಲೋಚನೆ ನಡೆಸುತ್ತಾ, ವಧುವರರ ಗಣಕೂಟ ಹಾಗೂ ಕೊಡು ತೆಗೆದುಕೊಳ್ಳುವ ವ್ಯವಹಾರದ ಕುರಿತು ಚರ್ಚಿಸುತ್ತಾರೆ. ಎರಡು ಕಡೆಯವರಿಂದ ಬೆಲ್ಲ ಹಾಗೂ ಕೊಬ್ಬರಿಯ ಖರ್ಚನ್ನು ಪಡೆದು, ಬೆಲ್ಲ ಮತ್ತು ಕೊಬ್ಬರಿಯನ್ನು ಕೊಂಡು ತರುತ್ತಾರೆ. ನಂತರ ದೇವಸ್ಥಾನದ ಎದುರುಗಡೆ ಅಥವಾ ವಿಶಾಲ ಮರದ ಕೆಳಗಡೆ ಕುಳಿತು ಮಾತುಕತೆಗಳನ್ನು ನಡೆಸುತ್ತಾರೆ. ಚಿಕ್ಕ ಚೀಲದಂತಿರುವ ಕೊತಳಿಯಲ್ಲಿ ತಂದಿರುವ ಬೆಲ್ಲ ಹಾಗೂ ಕೊಬ್ಬರಿಯನ್ನು ಹಾಕಿ ಒಬ್ಬ ವ್ಯಕ್ತಿಯು ಕುಳಿತಿರುವ ಗುಂಪಿನ ಸುತ್ತಲು ಪ್ರದಕ್ಷಿಣೆ ಹಾಕುತ್ತಾ 'ಲೋ ಕೊತಳಿ ಲೋ ಕೊತಳಿ' (ಕೊತಳಿ ತೆಗೆದುಕೊಳ್ಳಿ) ಎಂದು ಹೇಳುತ್ತಾನೆ. ಗುಂಪಿನಲ್ಲಿರುವ ಜನ 'ದ ಆಂಗ ದ ಆಂಗ'(ಮುಂದೆ ಕೊಡು) ಎಂದು ಹೇಳುತ್ತಾರೆ. ಕೊನೆಯಲ್ಲಿ ಗುಂಪಿನಲ್ಲಿಯ ಒಬ್ಬ ವ್ಯಕ್ತಿ ಕೊತಳಿಯನ್ನು ತೆಗೆದುಕೊಳ್ಳುತ್ತಾನೆ. ಆಂಧ್ರ ಪ್ರದೇಶದ ಲಂಬಾಣಿಗರು ಕೊತಳಿಯಲ್ಲಿ ಗುರುವಿನ ಎರಡು ಕೊಬ್ಬರಿ, ಬೆಲ್ಲ ಹಾಗೂ ಕರಾರಿನ ಹಣವನ್ನು ಹಾಕಿರುತ್ತಾರೆ. 'ಜಾತ್' ಪಂಗಡದ ವಧುವಾಗಿದ್ದರೆ ೪೫ ರೂಪಾಯಿಗಳು, 'ಭೂಕ್ಯಾ' ಪಂಗಡದ ವಧುವಾಗಿದ್ದರೆ ೪೦ ರೂಪಾಯಿಗಳನ್ನು ಕೊತಳಿಯಲ್ಲಿ ಹಾಕಲಾಗಿರುತ್ತದೆ. ಇಬ್ಬರು

ವ್ಯಕ್ತಿಗಳು ಕುಳಿತಿರುವ ಜನರ ಗುಂಪನ್ನು ಪ್ರದಕ್ಷಿಣೆ ಹಾಕುತ್ತಾ ಲೋ ನಾರಳ ಲೋ ನಾರಳ(ತೆಂಗು ತೆಗೆದುಕೊಳ್ಳಿ) ಎಂದು ಹೇಳುತ್ತಾರೆ. ಆಗ ನಾಯಕನು ಕೊತಳಿಯನ್ನು ತೆಗೆದುಕೊಂಡು ಇದರಲ್ಲಿ ಕರಾರಿನ ಹಣವಿದೆ ಎಂದು ಹೇಳುತ್ತಾನೆ.

ಸೋಲಾಪುರ ಜಿಲ್ಲೆಯ ಲಂಬಾಣಿಗರು ಕೊತಳಿಯಲ್ಲಿ 'ಸವಾರಪೀಯಾ' (ಒಂದುಕಾಲು ರೂಪಾಯಿ) ಕೊಬ್ಬರಿ ಹಾಗೂ ಬೆಲ್ಲವನ್ನು ಹಾಕಿರುತ್ತಾರೆ. ಆದರೆ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಂತೆ 'ಲೋ ಕೊತಳಿ ಲೋ ಕೊತಳಿ' ಎಂದಾಗಲಿ ರಂಗಾರೆಡ್ಡಿ ಜಿಲ್ಲೆಯವರಂತೆ 'ಲೋ ನಾರಳ ಲೋ ನಾರಳ' ಎಂದಾಗಲಿ ಹೇಳುವುದಿಲ್ಲ. ಈ ಪ್ರಕ್ರಿಯೆ ಆದ ಮೇಲೆ ಮೂರು ಜಿಲ್ಲೆಯ ಲಂಬಾಣಿಗರು ಗಂಡಿನ ಕಡೆಯವರ ಮೇಲೆ ಬಣ್ಣ ಎರಚುತ್ತಾರೆ. ನಂತರ ಸೇರಿದ ಎಲ್ಲ ಜನರಿಗೂ ಬೆಲ್ಲವನ್ನು ಹಂಚುತ್ತಾರೆ. ಅದರಂತೆ ವರನ ಕಡೆಯವರಿಗೆ ಅವರ ತಾಂಡಾದಲ್ಲಿ ಹೋಗಿ ಹಂಚುವ ಸಲುವಾಗಿ ಬೆಲ್ಲವನ್ನು ಕೊಟ್ಟು ಕಳಿಸುತ್ತಾರೆ. ಕೊನೆಗೆ ಎರಡು ಕಡೆಯವರು ಕೊಟ್ಟಿರುವ ಪಂಚರ ಖರ್ಚಿನಲ್ಲಿ ಸಿಂಧಿ, ಸಾರಾಯಿಯನ್ನು ತಂದು, ಎರಡು ಕಡೆಯ ಹಿರಿಯರು ಕುಡಿಯುತ್ತಾರೆ. ಹೀಗೆ 'ಗೋಳ ಖಾಯೇರೋ' ಎಂಬ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಈ ಕಾರ್ಯಕ್ರಮವನ್ನು ಸಗಾಯಿ ಎಂದರೆ ನಿಶ್ಚಿತಾರ್ಥ ಎಂದು ಕರೆಯುತ್ತಾರೆ. ಸಗಾಯಾದರೆ ಅರ್ಧ ವಿವಾಹವಾದಂತೆ. ಹೀಗಾಗಿ ಈ ಕಾರ್ಯಕ್ರಮದ ನಂತರ ವಧುವು ತನ್ನ ಓಡನಿಯಿಂದ ಮುಖ ಮುಚ್ಚಿಕೊಳ್ಳಲು ಪ್ರಾರಂಭಿಸುತ್ತಾಳೆ. ತಾಂಡಾದಲ್ಲಿ ಯಾವುದೇ ಕಾರ್ಯಕ್ರಮಗಳಾಗಲಿ ಇಡಿ ತಾಂಡಾದ ಜನರು ತಾವೆಲ್ಲ ಒಂದೇ ಮನೆಯ ಸದಸ್ಯರೆಂಬಂತೆ ಭಾಗಿಗಳಾಗುತ್ತಾರೆ. ಒಬ್ಬನ ಸಂತೋಷ ಇಡೀ ತಾಂಡಾದ ಸಂತೋಷವಾಗಿರುತ್ತದೆ. ಒಬ್ಬನ ದುಃಖ ಇಡೀ ತಾಂಡಾದ ದುಃಖವಾಗಿರುತ್ತದೆ. ಒಬ್ಬನು ಎಲ್ಲರಿಗಾಗಿ, ಎಲ್ಲರೂ ಒಬ್ಬನಿಗಾಗಿ ನಾವು ನಮ್ಮವರು ಎಂಬ ಭಾವನೆಯೊಂದಿಗೆ ಕೂಡಿ ಬಾಳುವ ಕಲೆ ಇಂದಿಗೂ ಲಂಬಾಣಿಗರಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

**ಕರಾರ (ವಧು ದಕ್ಷಿಣೆ):** ವಿವಾಹದ ಸಂದರ್ಭದಲ್ಲಿ ಹೆಣ್ಣಿನ ಮನೆಯವರಿಗೆ ಗಂಡಿನ ಮನೆಯವರು ವಧು ದಕ್ಷಿಣೆಯನ್ನು ನೀಡುವ ಪದ್ಧತಿಗೆ ಲಂಬಾಣಿಗರು 'ಕರಾರ', 'ಮಾಮ್ಲೋ' ಎಂದು ಕರೆಯುತ್ತಾರೆ. ಕನ್ಯಾಶುಲ್ಕವನ್ನು ವಧುವಿನ ತಂದೆ ತಾಯಿಗೆ ನೀಡಲಾರದೇ ಲಂಬಾಣಿಗರಲ್ಲಿ ವಿವಾಹವಾಗುವದಿಲ್ಲ. ಆರಂಭದಲ್ಲಿ ಲಂಬಾಣಿಗರಲ್ಲಿ ಗೋವುಗಳ ರೂಪದಲ್ಲಿ ಕನ್ಯಾಶುಲ್ಕವನ್ನು ನೀಡುವ ಪದ್ಧತಿ ಜಾರಿಯಲ್ಲಿತ್ತು. ಮೊದಲು ವಧುವಿನ ಮನೆಯವರಿಗೆ ವರನ ಕಡೆಯವರು ನಾಲ್ಕು ಗೋವುಗಳನ್ನು ನೀಡುತಿದ್ದರು. ಆಗ ವಧುವಿನ ಮನೆಯವರು ಒಂದು ಆಕಳನ್ನು ತಮ್ಮ ಮಗಳಿಗೆ ಕಾಣಿಕೆಯಾಗಿ ಕೊಡುತಿದ್ದರು. ಹೀಗೆ ಒಂದು ಆಕಳನ್ನು ಕಾಣಿಕೆಯಾಗಿ ಕೊಡುವ ಪದ್ಧತಿ ಯನ್ನು ಲಂಬಾಣಿಗರು 'ದೇಜು' ಎಂದು ಕರೆಯುತ್ತಿದ್ದರು. ಒಂದು ಆಕಳನ್ನು ತಮ್ಮ ಮಗಳಿಗೆ ದೇಜು ಕೊಟ್ಟು ಮೂರು ಗೋವುಗಳನ್ನು ತಮ್ಮ ಮನೆಗೆ ಕೊಂಡೊಯ್ಯುತ್ತಿದ್ದರು. ಸೋಲಾಪುರ ಜಿಲ್ಲೆಯ ಲಂಬಾಣಿಗರು ಎರಡು ಎತ್ತುಗಳನ್ನು ಕರಾರಾಗಿ ಪಡೆಯುತಿದ್ದರು. ಅದರಂತೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ತಲಾ ಒಂದೊಂದು

ಆಕಳು ಹಾಗೂ ಎತ್ತನ್ನು ಕರಾರಾಗಿ ಪಡೆಯುವ ಪದ್ಧತಿ ಜಾರಿಯಲ್ಲಿತ್ತು. ಕಾಲಕ್ರಮೇಣ ಗೋವುಗಳ ರೂಪದಲಿದ್ದ ಕರಾರು ಹಣದ ರೂಪಕ್ಕೆ ರೂಪಾಂತರಗೊಂಡಿತು. ಆರಂಭದಲ್ಲಿ ಜಾತ್ ಮತ್ತು ಭೂಕ್ಯಾ ಪಂಗಡಗಳ ಹೆಣ್ಣು ಮಕ್ಕಳಿಗೆ ಸಮಾನ ರೀತಿಯಲ್ಲಿ ಕರಾರು ಜಾರಿಯಲ್ಲಿತ್ತು. ಆದರೆ ಒಂದು ದಿನ ಗೋವುಗಳನ್ನು ಮೇಯಿಸುತಿದ್ದ ಜಾತ್ ಮತ್ತು ಭೂಕ್ಯಾ ಪಂಗಡದ ದನಗಾಹಿಗಳಿಗೆ ದೊಡ್ಡ ಪ್ರಮಾಣದ ಜಗಳವಾಗಿ ಎರಡು ಪಂಗಡದವರು ಬೇರೆ ಬೇರೆಯಾಗಿ ನೆಲೆಸಲು ಪ್ರಾರಂಭಿಸಿದರು. ಜಾತ್ ಪಂಗಡದಲ್ಲಿರುವ ಪವಾರ, ಚವ್ಹಾಣ, ಚೇನಿ ರಾಠೋಡ ಹಾಗೂ ವಡತಿಯಾ ಉಪಪಂಗಡಗಳಲ್ಲಿ ವಿವಾಹ ಸಂಬಂಧಗಳು ಜಾರಿಯಲ್ಲಿರುವ ಪ್ರಯುಕ್ತ ಅವರು ಭೂಕ್ಯಾ ಪಂಗಡದವರೊಂದಿಗೆ ವಿವಾಹ ಸಂಬಂಧಗಳನ್ನು ಬೆಳೆಸಬಾರದು ಎಂಬ ನಿರ್ಧಾರಕ್ಕೆ ಬಂದರು. ಹೀಗಾಗಿ ಜಾತ್ ಪಂಗಡದಲ್ಲಿ ಯಥಾವತ್ತಾಗಿ ವಿವಾಹ ಸಂಬಂಧಗಳು ಜರುಗುತಿದ್ದು ಸರ್ವೇಸಾಮಾನ್ಯ ಜೀವನ ನಡೆಸುವಂತಾಯಿತು. ಇದರಿಂದಾಗಿ ಭೂಕ್ಯಾ ಪಂಗಡವರಿಗೆ ದೊಡ್ಡ ಪೆಟ್ಟು ತಗುಲಿತು. ಏಕೆಂದರೆ ಈ ಪಂಗಡದವರು ತಮ್ಮ ತಮ್ಮೊಳಗೆ ವಿವಾಹ ಸಂಬಂಧಗಳನ್ನು ಬೆಳೆಸುವಂತಿರಲಿಲ್ಲ. ಅವರು ಪರಸ್ಪರ ಸಹೋದರರಾಗುತ್ತಾರೆ. ಹೀಗಾಗಿ ಭೂಕ್ಯಾ ಪಂಗಡದ ಹೆಣ್ಣು ಮತ್ತು ಗಂಡು ಮಕ್ಕಳಿಗೆ ಜೀವನ ಸಂಗಾತಿ ದೊರೆಯದೇ ಸಂಕಷ್ಟವನ್ನು ಎದುರಿಸಬೇಕಾಯಿತು. ಆಗ ಅನಿವಾರ್ಯವಾಗಿ ಭೂಕ್ಯಾ ಪಂಗಡದ ಡಾವಸಾಣರು (ಹಿರಿಯರು) ಜಾತ್ ಪಂಗಡದ ಡಾವಸಾಣರ ಜೊತೆ ಕುಳಿತು ಒಪ್ಪಂದವನ್ನು ಮಾಡಿಕೊಂಡರು. ಈ ಒಪ್ಪಂದದಲ್ಲಿ ವಡತಿಯಾ ಪಂಗಡದ ಡಾವೋ (ಹಿರಿಯ ವ್ಯಕ್ತಿ) ಜಾತ್ ಪಂಗಡದ ವಧುವಿಗೆ ೪೧ ರೂಪಾಯಿ ಕರಾರು ನೀಡಬೇಕು. ಪ್ರತಿಯಾಗಿ ಭೂಕ್ಯಾ ಪಂಗಡದ ವಧುವಿಗೆ ೩೧ ರೂಪಾಯಿ ಕರಾರು ನೀಡುತ್ತೇವೆ. ಈ ಒಪ್ಪಂದಕ್ಕೆ ಒಪ್ಪಿಕೊಂಡರೆ ಮುಂದೆ ನಾವೆಲ್ಲರೂ ಒಂದಾಗೋಣ ಮತ್ತು ವೈವಾಹಿಕ ಸಂಬಂಧಗಳನ್ನು ಬೆಳೆಸೋಣ ಎಂದು ಹೇಳಿದನು. ಭೂಕ್ಯಾ ಪಂಗಡದವರು ಬೇರೆ ದಾರಿ ಇಲ್ಲದೇ ಈ ಒಪ್ಪಂದಕ್ಕೆ ಒಪ್ಪಿಕೊಂಡರು. ಹೀಗಾಗಿ ಇಂದಿನವರೆಗೆ ಜಾತ್ ಪಂಗಡದ ವಧುವಿಗೆ ಹೆಚ್ಚಿನ ಕರಾರು ಹಾಗೂ ಭೂಕ್ಯಾ ಪಂಗಡದ ವಧುವಿಗೆ ಕಡಿಮೆ ಕರಾರು ನೀಡುವ ಪದ್ಧತಿ ಎಲ್ಲೆಡೆ ಗೋಚರಿಸುತ್ತದೆ.

**ಸಾಡಿ ತಾಣೇರೋ:** ಲಂಬಾಣಿಗರು ಒಂದು ಶುಭ ಮೂಹರ್ತದಲ್ಲಿ ವರನು ವಧುವಿನ ಮನೆಗೆ ಹೋಗುವ ಮುಂಚೆ ವರನ ಮನೆಯಲ್ಲಿ ನೆರವೇರಿಸುವ ಕಾರ್ಯಕ್ರಮವನ್ನು 'ಸಾಡಿ ತಾಣೇರೋ' ಎಂದು ಕರೆಯುತ್ತಾರೆ. ವರನು ತಾಂಡಾದ ಪ್ರತಿಯೊಬ್ಬರ ಮನೆಗೆ ಹೋಗಿ ಆಶೀರ್ವಾದ ಪಡೆದು 'ಸಾಡಿ ತಾಣೇರೋ' ಕಾರ್ಯಕ್ರಮಕ್ಕೆ ಬರುವಂತೆ ಆಮಂತ್ರಣ ನೀಡುತ್ತಾನೆ. ಅಂದು ಸಾಯಂಕಾಲ ತಾಂಡಾದ ನಾಯಕ, ಕಾರಭಾರಿ, ಹಿರಿಯರು ಹಾಗೂ ಹೆಣ್ಣು ಮಕ್ಕಳೆಲ್ಲ ವರನ ಮನೆಯ ಮುಂದೆ ಸೇರುತ್ತಾರೆ.

ವರನ ಮನೆಯ ಮುಂದೆ ನಗವನ್ನು (ನೊಗ) ನೆಟ್ಟು, ಸುತ್ತಲೂ ಕಂಬಳಿಯ ಚಪ್ಪರ ನಿರ್ಮಾಣ ಮಾಡುತ್ತಾರೆ. ನಗದ ಮೇಲೆ ಅಲಂಕೃತಗೊಂಡ ಕಳಸವನ್ನು ಇಡುತ್ತಾರೆ. ಇದನ್ನು

'ಮಂಡೇಡೋ' ಎಂದು ಕರೆಯುತ್ತಾರೆ. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಈ ಮಂಡೇಡೋ ಕೆಳಗಡೆ ರಂಗೋಲಿಯನ್ನು ಬಿಡಿಸಿ ಅದರ ಮಧ್ಯದಲ್ಲಿ ನೀರು ತುಂಬಿದ ಲೋಟವನ್ನು ಇಡುತ್ತಾರೆ. ಈ ಲೋಟಕ್ಕೆ ಶುಂಠಿ, ಮೆಣಸು, ಗಸಗಸೆ ಹಾಗೂ ಬೆಲ್ಲವನ್ನು ಸರಿಯಾಗಿ ಅರೆದು ಪುಡಿಮಾಡಿ ಬೆರೆಸುತ್ತಾರೆ. ಇದನ್ನು 'ಘೋಟಾ' ಎಂದು ಕರೆಯುತ್ತಾರೆ. ತಾಂಡಾದ ನಾಯಕ ಮತ್ತು ಕಾರಭಾರಿ ಎದ್ದು ಮಂಡೇಡೋಗೆ ನಮಿಸಿ ಈ ಘೋಟಾದಲ್ಲಿ ಒಂದು ರೂಪಾಯಿಯ ನಾಣ್ಯವನ್ನು ಹಾಕುತ್ತಾರೆ. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಒಂದು ರೂಪಾಯಿ, ಸೋಲಾಪುರ ಜಿಲ್ಲೆಯ ಲಂಬಾಣಿಗರು ಒಂದು ಕಾಲು ರೂಪಾಯಿಯನ್ನು ಹಾಕುತ್ತಾರೆ. ಈ ಹಣವನ್ನು ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರು 'ಗರೂರ ರಪಿಯಾ' ಎಂದು ಕರೆದರೆ ರಂಗಾರೆಡ್ಡಿ ಜಿಲ್ಲೆಯಲ್ಲಿ 'ಹೆಲೆರ ರಪಿಯಾ' ಎಂದು ಕರೆಯುತ್ತಾರೆ. ಸಾಡಿ ತಾಣೇರೋ ಕಾರ್ಯಕ್ರಮಕ್ಕೆ ಬಂದ ಎಲ್ಲ ಹಿರಿಯರಿಗೆ ಕುಡಿಯಲು ಸಿಂಧಿ, ಸಾರಾಯಿ ಕೊಡುತ್ತಾರೆ. ರಾತ್ರಿಯೆಲ್ಲ ಹೆಣ್ಣು ಮಕ್ಕಳು ಹಾಡುತ್ತಾ ಕುಣಿಯುತ್ತಾರೆ.

**ವದಾಯಿ:** ಸಾಡಿ ತಾಣೇರೋ ಕಾರ್ಯಕ್ರಮದ ನಂತರ ವರನಿಗೆ ನೀಡುವ ಧರ್ಮದೀಕ್ಷೆಯನ್ನು 'ವದಾಯಿ' ಎಂದು ಕರೆಯುತ್ತಾರೆ. ಮನೆಯ ಮುಂದೆ ಒಂದು ಕಡೆ ನೆಲಸಾರಿಸಿ ರಂಗೋಲಿಯನ್ನು ಬಿಡಿಸಿ ಅದರ ಮಧ್ಯ ನೀರು ತುಂಬಿದ ಕಳಸವನ್ನಿಟ್ಟು ದೀಪವನ್ನು ಹಚ್ಚಿ ರಂಗೋಲಿಯ ಎರಡು ಬದಿಗೆ ಗೋಧಿ ಚಪಾತಿ ಹಾಗೂ ಬೆಲ್ಲದಿಂದ ತಯಾರಿಸಿದ ಚುರಮೊದ ಉಂಡಿಗಳನ್ನು ಇಡುತ್ತಾರೆ. ಇದರ ಪಕ್ಕದಲ್ಲಿ ವರನನ್ನು ಹಾಗೂ ಅವನ ತಮ್ಮನನ್ನು ಕೂರಿಸುತ್ತಾರೆ. ತಾಂಡಾದ ನಾಯಕನು ಒಂದು ಗೇಣು ಜೋಳದ ದಂಟಿಗೆ ಸೂಜಿಯನ್ನು ನೆಟ್ಟು ಬೆಳಗುತ್ತಿರುವ ದೀಪದಲ್ಲಿ ಸೂಜಿಯನ್ನು ಚನ್ನಾಗಿ ಕಾಯಿಸಿ ಗುರುವಿನ ಮಂತ್ರವನ್ನು ಉಚ್ಚರಿಸುತ್ತಾ ವರ ಹಾಗೂ ಅವನ ತಮ್ಮನ ಎಡ ಭುಜಗಳ ಮೇಲೆ ಬರೆಯನ್ನು ಎಳೆಯುತ್ತಾನೆ. ಇದನ್ನು ರಂಗಾರೆಡ್ಡಿ ಜಿಲ್ಲೆಯಲ್ಲಿ 'ಗೊಸಾಯಿರ ದಾಗ' ಎಂದು ಕರೆದರೆ, ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯಗಳಲ್ಲಿ 'ವದಾಯಿರ ದಾಗ', 'ಗುರುರ ದಾಗ' ಎಂದು ಕರೆಯುತ್ತಾರೆ. ಹೀಗೆ ಈ ಸಂಸ್ಕಾರವಾದ ಬಳಿಕವೇ ವರನು ವಿವಾಹವಾಗಲು ಯೋಗ್ಯನಾಗುತ್ತಾನೆ. ಈ ಸಂಸ್ಕಾರವನ್ನು ಜೀವನದಲ್ಲಿ ಒಮ್ಮೆ ಮಾತ್ರ ಮಾಡಲಾಗುತ್ತದೆ. ವರನ ಜೊತೆ ಅವನ ತಮ್ಮನಿಗೂ ಗುರುರ ದಾಗ ಸಂಸ್ಕಾರವಾಗಿರುವದರಿಂದ ಮುಂದೆ ಅವನ ಮದುವೆಯಲ್ಲಿ ಮತ್ತೊಮ್ಮೆ ವದಾಯಿ ಮಾಡುವದಿಲ್ಲ. ಗುಲಬರ್ಗಾ ಹಾಗೂ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಭೂಕ್ಯಾ ಪಂಗಡದವರು ಮಾತ್ರ ಹೋತ ಬಲಿ ಕೊಡುತ್ತಾರೆ. ಜಾತ್ ಪಂಗಡದಲ್ಲಿ ಬೆಲ್ಲ ಹಾಗೂ ಚಪಾತಿಯಿಂದ ತಯಾರಿಸಿದ 'ಚೂರ್ಮೊ' ಮೂಲಕ ವದಾಯಿ ಸಂಸ್ಕಾರ ನೆರವೇರಿಸುತ್ತಾರೆ. ಸೋಲಾಪುರ ಜಿಲ್ಲೆಯಲ್ಲಿ ಭೂಕ್ಯಾ ಮತ್ತು ಜಾತ್ ಎರಡು ಪಂಗಡದವರು ಜೋಡಿ ಹೋತಗಳನ್ನು ಬಲಿ ಕೊಡುತ್ತಾರೆ. ನಂತರ ಸಿಂಧಿ ಸಾರಾಯಿ ಕುಡಿದು ಆಗಲೇ ವದಾಯಿ ಕಾರ್ಯಕ್ಕಾಗಿ ಹೋತವನ್ನು ಬಲಿಕೊಟ್ಟಿರುವದರಿಂದ ಮಾಂಸದೂಟವನ್ನು ಉಂಡು ರಾತ್ರಿಯೆಲ್ಲ ಸಂತೋಷಭರಿತರಾಗಿ ಹಾಡಿ ಕುಣಿಯುತ್ತಾರೆ.

**ವೇತಡೂನ ವಳಾಯೇರೋ:** ವರನ ಮನೆಯಿಂದ ವರನನ್ನು ವಧುವಿನ ಮನೆಗೆ ವಿವಾಹ ಮಾಡಿಕೊಂಡು ಬರುವ ಉದ್ದೇಶದಿಂದ ಬಿಳ್ಕೋಡುವ ಈ ಕಾರ್ಯಕ್ರಮವನ್ನು 'ವೇತಡೂನ ವಳಾಯೇರೋ' ಎಂದು ಕರೆಯುತ್ತಾರೆ. ವರನನ್ನು ಯುದ್ದಕ್ಕೆ ಹೋಗುವ ವೀರನಂತೆ ಸಿದ್ದಗೊಳಿಸಿ ಕೈಯಲ್ಲಿ ಕತ್ತಿ ಕೊಡುತ್ತಾರೆ. ರಾತ್ರಿ ಘೋಟಾದಲ್ಲಿ ಹಾಕಿದ್ದ ಗರೂರ ರಪಿಯಾ ಅಥವಾ ಹೆಲೆರ ರಪಿಯಾ ಎಂಬ ಒಂದು ರೂಪಾಯಿಯ ನಾಣ್ಯವನ್ನು ವರನು ಹೊದ್ದುಕೊಂಡಿರುವ ಶಾಲಿನ ತುದಿಗೆ ಕಟ್ಟುತ್ತಾರೆ. ಅಂದು ವರನು ತಾಂಡಾದ ಎಲ್ಲಾ ಹಿರಿಯರಿಗೆ ನಮಸ್ಕರಿಸಿ ಎಲ್ಲರ ಆಶೀರ್ವಾದ ಪಡೆಯುತ್ತಾನೆ. ಆಗ ತಾಂಡಾದ ಪ್ರತಿಯೊಬ್ಬರು ತಮಗೆ ತೋಚಿದಷ್ಟು ಕಾಣಿಕೆಯನ್ನು ವರನಿಗೆ ನೀಡುತ್ತಾರೆ. ವರನ ಜೊತೆಗೆ ಕುಶಾಗ್ರಮತಿವುಳ್ಳ, ಚಾಣಾಕ್ಷತನದ ವಾಕ್ ಚಾತುರ್ಯವುಳ್ಳ ವ್ಯಕ್ತಿಯನ್ನು 'ಲೇರಿಯಾ' 'ಲಾರಿಯಾ' ಎಂದು ನೇಮಕ ಮಾಡುತ್ತಾರೆ. ಸಾಮಾನ್ಯವಾಗಿ ವರನ ಚಿಕ್ಕಪ್ಪ, ಮಾವ ಮುಂತಾದವರು ಲೇರಿಯಾನ ಪಾತ್ರ ನಿರ್ವಹಿಸುತ್ತಾರೆ. ಹೀಗೆ ಸಿದ್ಧತೆಯನ್ನು ಮಾಡಿಕೊಂಡು ವರ ಹಾಗೂ ಲೇರಿಯಾ ವರನ ತಾಂಡಾದಿಂದ ವಧುವಿನ ತಾಂಡಾಕ್ಕೆ ಬರುತ್ತಾರೆ. ಹೀಗೆ ಬಂದ ನಂತರ ತಾಂಡಾದ ಮುಂದೆ ವರನನ್ನು ಕೂಡಿಸಿ, ಲೇರಿಯಾ ವಧುವಿನ ತಾಂಡಾದ ನಾಯಕನ ಹತ್ತಿರ ಹೋಗಿ ತಾವು ಬಂದಿರುವ ಸುದ್ದಿಯನ್ನು ತಿಳಿಸುತ್ತಾನೆ. ತಾಂಡಾದ ನಾಯಕನು ವರ ಮತ್ತು ಲೇರಿಯಾ ಬಂದಿರುವ ವಿಷಯವನ್ನು ವಧುವಿನ ಮನೆಗೆ ಮುಟ್ಟಿಸುತ್ತಾನೆ. ಈ ಸುದ್ದಿ ಮುಟ್ಟಿದ ಕೂಡಲೇ ವಧು ತನ್ನ ಮನೆಯನ್ನು ಬಿಟ್ಟು ತನ್ನ ಚಿಕ್ಕಪ್ಪನ ಮನೆಗೆ ಹೋಗುತ್ತಾಳೆ. ಆಗ ತಾಂಡಾದ ಹಿರಿಯ ಹೆಣ್ಣುಮಕ್ಕಳು ತಾಂಡಾದ ಇತರರೊಂದಿಗೆ ಹಾಡುತ್ತಾ ತಾಂಡಾದ ಮುಂದೆ ಬಂದು, ತುಂಬಾ ಗೌರವಯುತವಾಗಿ ವರ ಹಾಗೂ ಲೇರಿಯಾನನ್ನು ಮನೆಗೆ ಕರೆದುಕೊಂಡು ಹೋಗುತ್ತಾರೆ. ವರ ಹಾಗೂ ಲೇರಿಯಾ ಮನೆಗೆ ಹೋದ ನಂತರ ವರನು ವಧುವಿನ ತಂದೆಗೆ 'ಪತಾರಿಯ' ಎರಡು ರೂಪಾಯಿಯನ್ನು ಕೊಟ್ಟು ನಮಸ್ಕರಿಸುತ್ತಾನೆ. ವರ ಬಂದ ತಕ್ಷಣ ತನ್ನ ಚಿಕ್ಕಪನ ಮನೆಗೆ ಹೋಗಿದ್ದ ವಧು ಮುಂಜಾನೆ ತನ್ನ ಮನೆಗೆ ಹಿಂತಿರುಗುತ್ತಾಳೆ. ವರನು ಮಧುವಿನ ಮನೆಯಲ್ಲಿ ಸುಮಾರು ೧೫ ದಿನ, ತಿಂಗಳುಗಳವರೆಗೆ ಇರುತ್ತಾನೆ. ಈ ಸಂದರ್ಭದಲ್ಲಿ ವರನಿಗೆ ಹಾಗೂ ಲೇರಿಯಾನಿಗೆ ತುಂಬಾ ಗೌರವಯುತವಾಗಿ ನೋಡಿಕೊಳ್ಳಲಾಗುತ್ತದೆ. ವರನಿಗೆ ದಿನಾಲು ಸ್ನಾನ ಮಾಡಿಸಿ ಕೊಬ್ಬರಿ, ಬೆಲ್ಲ, ತುಪ್ಪ, ಗೋಧಿಯ ಆಹಾರ ಹೀಗೆ ಪೌಷ್ಟಿಕವಾದ ಆಹಾರವನ್ನು ನೀಡುತ್ತಾರೆ. ಆದರೆ ಇಂದಿನ ಆಧುನಿಕ ಯುಗದಲ್ಲಿ ಈ ಎಲ್ಲ ಪ್ರಕ್ರಿಯೆಗಳು ಒಂದೆರಡು ದಿನಗಳಲ್ಲಿ ಮುಗಿಯುತ್ತಿರುವದು ಗೋಚರಿಸುತ್ತಿದೆ.

**ಟಿಕೋ ಲಗಾಡೇರೋ:** ವಧುವಿನ ಸಹೋದರ ತನ್ನ ಸಹೋದರಿಯಾದ ವಧುವಿಗೆ ತಿಲಕವನಿಟ್ಟು ವರನ ವಶಕ್ಕೆ ನೀಡುವ ಈ ಪದ್ಧತಿಯನ್ನು ಲಂಬಾಣಿಗರು 'ಟಿಕೋ ಲಗಾಡೆರೋ' ಎಂದು ಕರೆಯುತ್ತಾರೆ. ಒಂದು ತಟ್ಟೆಯಲ್ಲಿ ಅರಿಶಿಣ, ಕುಂಕುಮ, ಅಕ್ಕಿ ಹಾಗೂ ಹೊಸ ಬಟ್ಟೆಗಳನಿಟ್ಟು, ಅದನ್ನು ಎಲ್ಲರಿಗೆ ತೋರಿಸಿ ಸಹೋದರನು ತನ್ನ ಸಹೋದರಿಯಾದ ಮದುಮಗಳ ಹತ್ತಿರ ಹೋಗಿ ತಲೆಯ ಮೇಲೆ ಹೊದ್ದುಕೊಂಡಿರುವ ಮುಸುಕನ್ನು ತೆಗೆದು ಹಣೆಗೆ ತಿಲಕವನ್ನಿಡುವನು.

ಈ ಸಂದರ್ಭದಲ್ಲಿ ಮದುಮಗಳು ತನ್ನ ಹಣೆಗೆ ತಿಲಕವನಿಟ್ಟು ಪರವಶಕ್ಕೆ ನೀಡಿಬೇಡಿ ಎಂದು ಕೊರಳು ತಬ್ಬಿ ಧಾರಾಕಾರವಾಗಿ ಕಣ್ಣಿರು ಸುರಿಸುತ್ತಾಳೆ. ತಿಲಕವನಿಟ್ಟ ನಂತರ ವಧುವು ಅಲ್ಲಿ ನೆರೆದಿರುವ ಹಿರಿಯ ಹೆಣ್ಣುಮಕ್ಕಳ, ತಂದೆ ತಾಯಿಯ ಕೊರಳು ತಬ್ಬಿ ನನ್ನನ್ನು ಪರರ ಮನೆಗೆ ಕಳುಹಿಸಬೇಡಿ ಎಂದು ಅಳುತ್ತಾಳೆ. ಲಂಬಾಣಿ ಸಮುದಾಯದಲ್ಲಿ ವಧುವು ವಿವಾಹದ ಆರಂಭದಿಂದ ಕೊನೆಯವರೆಗೆ ದುಃಖದಿಂದ ಕಣ್ಣೀರು ಸುರಿಸುವದು ಸರ್ವೇಸಾಮಾನ್ಯವಾಗಿ ಗೋಚರಿಸುತ್ತದೆ.

**ಘೋಟಾ ಘೋಳೆರೋ:** ಘೋಟಾ ಘೋಳೆರೋ ಕಾರ್ಯಕ್ರಮ ನಿಶ್ಚಯಿಸಿದ ದಿನ ಮದುಮಗಳ ಮನೆಯಲ್ಲಿ ಸಾಯಂಕಾಲ ಒಂದು ಮಡಿಕೆಯಲ್ಲಿ ಬೆಲ್ಲ, ಗಸಗಸೆಯನ್ನು ಪುಡಿ ಮಾಡಿ ಅದಕ್ಕೆ ನೀರು ಬೆರೆಸಿ ಒಂದು ಪಾನೀಯವನ್ನು ಸಿದ್ಧಪಡಿಸುತ್ತಾರೆ. ಈ ಪಾನೀಯವನ್ನು 'ಘೋಟಾ' ಎಂದು ಕರೆಯುತ್ತಾರೆ. ಘೋಟಾದ ಮೇಲೆ ವರನು ಘೋಟಾದ ಹದಿನೈದು ರೂಪಾಯಿಯನ್ನು ವಧುವಿನ ತಂದೆಗೆ ಕೊಡುತ್ತಾನೆ. ನಂತರ ತಾಂಡಾದ ಹಿರಿಯ ಹೆಣ್ಣು ಮಕ್ಕಳೊಂದಿಗೆ ವರನು ಪ್ರತಿಯೊಂದು ಮನೆಗೆ ತೆರಳಿ ಘೋಟಾ ಇದೆ ಬನ್ನಿ ಎಂದು ಆಮಂತ್ರಿಸುತ್ತಾನೆ. ಇದನ್ನು 'ಘೋಟಾರ ವಾಚಾ' ಎಂದು ಕರೆಯುತ್ತಾರೆ. ವರನ ಹಿಂದೆ ಹಿರಿಯ ಹೆಣ್ಣು ಮಕ್ಕಳು "ಸುತಿಕೆ ಜಾಗೀಯೇ ನಾಯಕಣ ವೇತಡೂಯೇ ಆಯೋ. ಕಾಗದಿಯಾ ಭೇಜಿಯೇ ನಾಯಕಣ ವೇತಡೂಯೇ ಆಯೋ" ಎಂದು ಹಾಡುತ್ತಾ ತಿರುಗುತ್ತಾರೆ. ಅಂದು ರಾತ್ರಿಯೆಲ್ಲಾ ತಾಂಡಾದ ಜನರು ಹಾಡುತ್ತಾ ಕುಣಿಯುತ್ತಾ ಸಂತೋಷಮಯವಾಗಿ ರಾತ್ರಿಯನ್ನು ಕಳೆಯುತ್ತಾರೆ. ಮರುದಿವಸ ಬೆಳಿಗ್ಗೆ ತಾಂಡಾದ ಎಲ್ಲಾ ಜನರು ವಧುವಿನ ಮನೆಗೆ ಬರುವರು. ವರನು ಬಂದಂತಹ ಎಲ್ಲರಿಗೂ ರಾತ್ರಿ ತಯಾರಿಸಿದ ಘೋಟಾ ಕೊಟ್ಟು ನಮಸ್ಕರಿಸುತ್ತಾನೆ.

**ಗರತಣಿ ತೋಡೇರೋ:** ವಧುವು ಕಾಲಲ್ಲಿ ತೊಟ್ಟಿರುವ ಕನ್ಯೆಯ ಸಂಕೇತವಾಗಿರುವ ನೀಲಿ ಮಣಿಸರವನ್ನು ಹರಿಯುವ ಪದ್ಧತಿಗೆ 'ಗರತಣಿ ತೋಡೇರೋ' ಎಂದು ಕರೆಯುತ್ತಾರೆ. ವಧುವಿನ ತಾಯಿಯು ತಾನೇ ಕೈಯಾರೆ ಒಂದು ದಾರದಲ್ಲಿ ಹಸಿರು ಅಥವಾ ನೀಲಿ ಮಣಿಗಳನ್ನು ಪೋಣಿಸಿ ವಧುವಿನ ಕಾಲುಗಳಿಗೆ ತೊಡಿಸಿರುತ್ತಾಳೆ. ಈ ಗರತಣಿಯು ಕನ್ಯೆಯ ಸಂಕೇತವಾಗಿರುತ್ತದೆ. ವಿವಾಹದ ಮುಂಚೆ ವಧುವಿನ ಗೆಳತಿಯರು ವಧುವು ತಾನು ತೊಟ್ಟಿರುವ ಗರತಣಿಯನ್ನು ಹರಿಯುತ್ತಾರೆ. ಈ ಸಂದರ್ಭದಲ್ಲಿ ವಧುವು ತನ್ನ ತಂದೆ ತಾಯಿ ತೊಡಿಸಿರುವ ವಸ್ತುಗಳು ತನ್ನಿಂದ ದೂರವಾಗುತ್ತಿವೆ, ಕನ್ಯೆಯ ಸಂಕೇತವಾಗಿರುವ ಗರತಣಿಯನ್ನು ಹರಿಯಬೇಡಿ ಎಂದು ಹೇಳುತ್ತಾ ದುಃಖದಿಂದ ರೋಧಿಸುತ್ತಾಳೆ. ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಯಲ್ಲಿ ಲಂಬಾಣಿಗರು ಈ ಗರತಣಿ ತೋಡೆರೋ ಸಂಸ್ಕಾರವನ್ನು ವಿವಾಹ ಸ್ನಾನದ ಮುಂಚೆ ನೆರವೇರಿಸಿದರೆ, ಸೋಲಾಪುರದ ಲಂಬಾಣಿಗರು ವಿವಾಹ ನಂತರ 'ತಾಂಗಡಿ ಖೋಳೇರೋ'(ತವರು ಮನೆಯ ಉಡುಗೊರೆ) ಕಾರ್ಯಕ್ರಮ ಮಾಡುತ್ತಿರುವಾಗ ಗರತಣಿತೋಡೇರೊ ಸಂಸ್ಕಾರವನ್ನು ಮಾಡುತ್ತಾರೆ.

**ವಾಯಾ ಭಾಂದೇರೋ:** ವಿವಾಹದ ಸಿದ್ಧತೆ ಹಾಗೂ ವಿವಾಹ ಮಾಡುವ ಕ್ರಮವನ್ನು ಲಂಬಾಣಿಗರು 'ವಾಯಾ ಭಾಂದೇರೋ' ಎಂದು ಕರೆಯುತ್ತಾರೆ. ವಿವಾಹದ ಮುಂಚೆಯ ದಿನ ಸಾಯಂಕಾಲ ವಧುವಿನ ಗೆಳತಿಯರು ವಧುವಿನ ಮನೆಗೆ ಬಂದು ವಧುವರರೀರ್ವರಿಗೂ ಮೆಹಂದಿ ಹಚ್ಚುತ್ತಾರೆ. ಅವರ ಜೊತೆಗೆ ತಾವು ಕೂಡಾ ಮೆಹಂದಿಯನ್ನು ಹಚ್ಚಿಕೊಳ್ಳುತ್ತಾರೆ. ಅಂದು ವರನು ವಧುವಿನ ತಂದೆಗೆ ವಿವಾಹದ ಏಳು ರೂಪಾಯಿ ಐವತ್ತು ಪೈಸೆಯನ್ನು ಕೊಡುತ್ತಾನೆ.

ವಿವಾಹದ ದಿನ ರಾತ್ರಿ ಮನೆಯ ಬಾಗಿಲ ಮುಂದೆ ನೇರವಾಗಿ ಸ್ವಲ್ಪ ಅಂತರದಲ್ಲಿ ಎರಡು ಮೂಸಳೋ(ಒನಕೆ)ಗಳ ಕೆಳಗೆ ಎಲೆ ಅಡಿಕೆಯನ್ನು ಹಾಕಿ ನೆಡುತ್ತಾರೆ. ಮೂಸಳೋದ ಮೇಲ್ಭಾಗಕ್ಕೆ ಅರಿಶಿಣದ ಕೊಂಬು, ಕವಡೆ ಹಾಗೂ ಕೇರನ್ನು ಒಂದು ದಾರದಲ್ಲಿ ಪೋಣಿಸಿ ಕಟ್ಟಿರುತ್ತಾರೆ. ನಾಲ್ಕು ಕಡೆ ಕುಂಬಾರನ ಮನೆಯಿಂದ ತಂದ ಹೊಸ ಮಡಿಕೆಗಳನ್ನು ಇಟ್ಟು ಅವುಗಳ ಕೆಳಗಡೆ ಎಲೆ ಅಡಿಕೆಗಳನ್ನು ಹಾಕುತ್ತಾರೆ. ಈ ಮಡಕೆಗಳನ್ನು ಕಳಸದಂತೆ ಶೃಂಗರಿಸಿ ಮಡಿಕೆ ಕಾಣದಂತೆ ಎಕ್ಕಿ ಗಿಡಗಳಿಂದ ಸುತ್ತುವರೆದು ಬಿಗಿಯಾಗಿ ಕಟ್ಟಿ ನಾಲ್ಕು ಚಿಕ್ಕ ಚಿಕ್ಕ ಗುಡಿಸಲುಗಳ ತರಹ ತಯಾರಿಸುತ್ತಾರೆ. ನಂತರ ಮೂಸಳೋದ ಸಮೀಪದಲ್ಲಿ ಒಂದು ಕಾಟೋಟಿಯನ್ನು (ಮರದ ಸಾಧನ) ಇಟ್ಟು ಅದರ ಸುತ್ತ ನೀರು ತುಂಬಿದ ನಾಲ್ಕು ಚಿಕ್ಕ ಚಿಕ್ಕ ಮಡಕೆಗಳನ್ನಿಡುತ್ತಾರೆ. ಮೊದಲು ಮದುಮಗಳನ್ನು ಕರೆತಂದ ಮುತ್ತೈದೆಯರು ಅವಳನ್ನು ಕಾಟೋಟಿಯ ಮೇಲೆ ಕೂರಿಸಿ ಎಣ್ಣೆ ಬೆರೆಸಿದ ಅರಿಶಿಣವನ್ನು ಅವಳ ಮೈಗೆ ಹಚ್ಚುತ್ತಾರೆ. ಆಗಲೇ ಇಟ್ಟಿರುವ ನೀರು ತುಂಬಿದ ನಾಲ್ಕು ಚಿಕ್ಕ ಚಿಕ್ಕ ಮಡಕೆಗಳ ಕಂಠಕ್ಕೆ ಏಳು ಸುತ್ತು ದಾರದಿಂದ ಸುರುಗಿಯನ್ನು ಸುತ್ತಿ, ವಧುವಿಗೆ ಸ್ನಾನ ಮಾಡಿಸಿ, ಸುರಿಗೆ ಸುತ್ತಿದ ದಾರವನ್ನು ತೆಗೆದು ಅದಕ್ಕೆ ಏಳು ಗಂಟುಗಳನ್ನು ಹಾಕಿ ಅರಿಶಿಣದಲ್ಲಿ ಅದ್ದಿ ವಧುವಿನ ಕೊರಳಿಗೆ ತೊಡಿಸುತ್ತಾರೆ. ಹೀಗೆ ಸುರಗಿ ಸುತ್ತುವುದಕ್ಕೆ 'ಡೋರಣ ಪುರೇರೋ' ಎಂದು ಕರೆದರೆ, ಏಳು ಗಂಟು ಹಾಕಿ ವಧುವರರ ಕೊರಳಿಗೆ ಹಾಕುವ ದಾರವನ್ನು 'ಡೋರಣ ಭಾಂದೇರೋ' ಎಂದು ಕರೆಯುತ್ತಾರೆ. ವಧುವಿನ ಸ್ನಾನವಾದ ಬಳಿಕ ಅವಳನ್ನು ಕರೆತಂದು ಸೆಣಬಿನ ಚೀಲದ ಮೇಲೆ ಕೂರಿಸುತ್ತಾರೆ. ನಂತರ ವರನನ್ನು ಕರೆತಂದು ಕಾಟೋಟಿಯ ಮೇಲೆ ಕೂರಿಸಿ ಅವನನ್ನು ಬೀಳಿಸಲು ಪ್ರಯತ್ನಿಸುತ್ತಾರೆ. ಎಷ್ಟೇ ಜಗ್ಗಾಡಿದರೂ ವರನು ಬೀಳದಂತೆ ಗಟ್ಟಿಯಾಗಿ ಕೂಡುತ್ತಾನೆ. ಇದು ಒಂದು ರೀತಿ ಮದುಮಗನ ಶಕ್ತಿ ಪರೀಕ್ಷೆಯಾಗಿರುತ್ತದೆ. ಮದುಮಗನ ದೇಹಕ್ಕೂ ಕೂಡಾ ಎಣ್ಣೆ ಮಿಶ್ರಿತ ಅರಿಶಿಣವನ್ನು ಹಚ್ಚುತ್ತಾರೆ. ಈ ಹಂತದಲ್ಲಿ ಮದುಮಗಳ ತಾಯಿ ಮದುಮಗನ ತಲೆಗೆ ಎಣ್ಣೆಯನ್ನು ಹಚ್ಚಿ ತಲೆಯ ಮೇಲೆ ನೀರನ್ನು ಹಾಕಿ ಆ ನೀರನ್ನು ಬಾಚಣಿಕೆಯಿಂದ ಬಾಚಿ ತನ್ನ ಬೊಗಸೆಯಲ್ಲಿ ಹಿಡಿದು ಕುಡಿಯುತ್ತಾಳೆ. ಇದನ್ನು 'ಚೋಟಿರ ಪಾಣಿ ಪಿಯೇರೋ' ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ತಾಂಡಾದ ಹೆಣ್ಣು ಮಕ್ಕಳು ಪರಸ್ಪರರನ್ನು ಹಾಡುಗಳಿಂದ ಬೈದುಕೊಳ್ಳುವ ಹಾಗೂ ವಧು ವರರನ್ನು ಹೊಗಳುವ, ಮದುಮಗನನ್ನು ಕಾಡಿಸುವ ಸನ್ನಿವೇಶ ತುಂಬಾ ರಮಣೀಯವಾಗಿ ಗೋಚರಿಸುತ್ತದೆ. ಮದುಮಗನ ಸ್ನಾನವಾದ ನಂತರ ಅವನ ಸುತ್ತಲು ಏಳು ಸುತ್ತು ಸುತ್ತಿದ ಸುರಿಗೆಯನ್ನು ಅರಿಶಿಣದಲ್ಲಿ ಅದ್ದಿ ಅದಕ್ಕೆ ಏಳು

ಗಂಟುಗಳನ್ನು ಹಾಕಿ ಮದುಮಗನ ಕೊರಳಿಗೆ ತೊಡಿಸಿ ಸೆಣಬಿನ ಚೀಲದ ಮೇಲೆ ಕೂರಿಸುತ್ತಾರೆ. ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಡೋರಣನ್ನು ಕೊರಳಿಗೆ ತೊಡಿಸುತ್ತಾರೆ. ಸೋಲಾಪುರ ಜಿಲ್ಲೆಯ ಲಂಬಾಣಿಗರು ಬಲಗೈಗೆ ಕಟ್ಟುತ್ತಾರೆ. ಮದುಮಗನು ಧರಿಸಿರುವ 'ಗಟ್ಟ ಛೇಡಾರ ಧೋತಿ'ಯನ್ನು ಮದುಮಗಳ ಛಾಟಿಯಾ(ಮೆಲ್ಮುಸುಕು)ದೊಂದಿಗೆ ಗಂಟು ಹಾಕಿ ಮನೆಯ ಮುಂದೆ ನೆಟ್ಟಿರುವ ಮೊದಲನೇ ಮೂಸಲೋಗೆ ಮೂರು ಸಲ ಹಾಗೂ ಎರಡನೆಯ ಮೂಸಲೋಗೆ ನಾಲ್ಕು ಸಲ, ಒಟ್ಟು ಏಳು ಸಲ ಪ್ರದಕ್ಷಿಣೆಯನ್ನು ಹಾಕಿಸುತ್ತಾರೆ. ಹೀಗೆ ಪ್ರದಕ್ಷಿಣೆ ಹಾಕುವುದನ್ನು ಲಂಬಾಣಿಗರು 'ಫೇರಾ ಫರೇರೋ' ಎಂದು ಕರೆಯುತ್ತಾರೆ.

ವಿವಾಹದ ಮೊದಲನೆಯ ಸ್ನಾನದ ನಂತರ ನಾಲ್ಕು ಕಡೆಗಳಲ್ಲಿ ಇಟ್ಟಿದ್ದ ಮಡಿಕೆ ಹಾಗೂ ಅದಕ್ಕೆ ಗುಡಿಸಲಿನಂತೆ ಕಟ್ಟಿದ್ದ ಎಕ್ಕಿ ಗಿಡಗಳನ್ನು ಹಾಗೂ ನೆಟ್ಟಿರುವ ಎರಡನೇ ಮೂಸಲೋ ತೆಗೆದುಬಿಡುತ್ತಾರೆ. ಮನೆಯ ಬಾಗಿಲಿನ ಎದುರು ಮೊದಲನೆಯ ಮೂಸಲೋ ಮಾತ್ರ ಇರುತ್ತದೆ. ಅಂದು ಸಾಯಂಕಾಲ ಮೊದಲನೇ ಮೂಸಲೋ ಹತ್ತಿರ ವಧುವಿಗೆ ಸ್ನಾನ ಮಾಡಿಸುತ್ತಾರೆ. ವಧುವು ಅಳುತ್ತಲೇ ಸ್ನಾನ ಮಾಡುತ್ತಾಳೆ. ನಂತರ ಅವಳನ್ನು ಸೆಣಬಿನ ಚೀಲದ ಮೇಲೆ ತಂದು ಕೂಡಿಸುತ್ತಾರೆ. ಆಮೇಲೆ ವರನಿಗೆ ಮೈತುಂಬ ಎಣ್ಣೆ ಹಚ್ಚಿ ಬೋರಲು ಹಾಕಿರುವ ಕಾಟೋಟಿಯ ಮೇಲೆ ಕೂಡಿಸುತ್ತಾರೆ. ಸ್ನಾನ ಮಾಡಿಸುವಾಗ ಗಟ್ಟಿಮುಟ್ಟಾದ ಮುತ್ತೈದೆಯರು ಮದುಮಗನನ್ನ ನೆಲಕ್ಕೆ ಬೀಳಿಸಬೇಕೆಂದು ಅತ್ತಿಂದಿತ್ತ ಎಳೆದಾಡುತ್ತಾರೆ. ಮದುಮಗನು ಕಾಟೋಟಿಯಿಂದ ಕೆಳಗೆ ಬೀಳದಂತೆ ಎಚ್ಚರವಹಿಸುತ್ತಾನೆ. ಅಲ್ಲದೇ 'ಲೇರಿಯಾ'ನ ಕಾಲನ್ನು ಗಟ್ಟಿಯಾಗಿ ಹಿಡಿದು ಕಾಟೋಟಿ ಯಿಂದ ಕೆಳಗೆ ಬೀಳದೇ ತನ್ನ ಶಕ್ತಿ ಪ್ರದರ್ಶಿಸುತ್ತಾನೆ. ಒಂದು ವೇಳೆ ನೆಲಕ್ಕೆ ಬಿದ್ದರೆ ಮದುಮಗನಿಗೆ ಅವಮಾನವಾದಂತೆ. ಹೀಗಾಗಿ ಮದುಮಗನು 'ಲೇರಿಯಾ'ನ ಸಹಾಯ ಪಡೆದು ಹೆಣ್ಣುಮಕ್ಕಳ ಎಳೆದಾಟಕ್ಕೆ ಮಣಿಯದೇ ಕಾಟೋಟಿಯ ಮೇಲೆ ಗಟ್ಟಿಯಾಗಿ ಕೂರುತ್ತಾನೆ. ಹೀಗೆ ಎಳೆದಾಟದಲ್ಲಿಯೇ ಮದುಮಗನ ಸ್ನಾನ ಮುಗಿಯುತ್ತದೆ. ನಂತರ ತನ್ನ ಬಟ್ಟೆಬರೆಗಳನ್ನು ಧರಿಸಿಕೊಂಡು ಮದುಮಗ ಕಾಟೋಟಿಯ ಮೇಲೆ ನಿಲ್ಲುತ್ತಾನೆ. ಆಗ ಮದುಮಗಳ ತಂಗಿಯು ಮಣ್ಣಿನ ಚಿಪ್ಪನ್ನು ಕೈಯಲ್ಲಿ ಹಿಡಿದು ಮದುಮಗನ ಕಾಲಬಳಿ ವೇಗವಾಗಿ ಹಿಂದು ಮುಂದಾಗಿ ಆಡಿಸುತ್ತಾಳೆ. ಚಲನೆಯನ್ನು ಗಮನಿಸುವ ಮದುಮಗ ಕಾಲು ನೆಲಕ್ಕೆ ತಾಗದಂತೆ ಒಂದೇ ಸಲಕ್ಕೆ ಅದನ್ನು ಒಡೆದು ಹಾಕಬೇಕು. ಈ ಪದ್ಧತಿಯನ್ನು ಲಂಬಾಣಿಗರು 'ಢೊಸಕ್ಯಾ ಫೋಡೇರೋ' ಎಂದು ಕರೆಯುತ್ತಾರೆ. ಈ ಕಾರ್ಯ ಗಂಡಿನ ಶಕ್ತಿ, ಸಾಮರ್ಥ್ಯ, ಚತುರತೆ ಹಾಗೂ ಆತನ ಕುಶಾಗ್ರಮತಿಯನ್ನು ಒರೆಗೆ ಹಚ್ಚಿ ನೋಡುವ ಪದ್ಧತಿಯಾಗಿದೆ. ಮದುಮಗನ ಸ್ನಾನದ ನಂತರ ವಧುವರರಿರ್ವರನ್ನು ಸೆಣಬಿನ ಚೀಲದ ಮೇಲೆ ಕೂರಿಸಿ, ವರನು ಮೊದಲು ವಧುವಿನ ಕೊರಳಿಗೆ ಕಟ್ಟಿದ ಡೋರಣದ ಏಳು ಗಂಟುಗಳನ್ನು ತುಂಬಾ ಎಚ್ಚರವಹಿಸಿ ಬಿಚ್ಚುವನು. ಅದೇ ರೀತಿ ಮದುಮಗಳು ಕೂಡಾ ಮದುಮಗನ ಕೊರಳಿಗೆ ಕಟ್ಟಿದ್ದ ಡೋರಣದ ಏಳು ಗಂಟುಗಳನ್ನು ಬಿಚ್ಚುವಳು. ಹಾಗೇ ಪರಸ್ಪರರು ಡೋರಣದ

ಗಂಟನ್ನು ಬಿಚ್ಚುವಾಗ ದಾರದ ಯಾವುದೇ ಎಳೆಯು ಕಿತ್ತು ಹೋಗದ ಹಾಗೇ ಎಚ್ಚರವಹಿಸಿ ಬಿಚ್ಚಬೇಕಾಗುತ್ತದೆ. ಒಂದು ವೇಳೆ ದಾರದ ಎಳೆಯು ಹರಿದು ಹೋದರೆ ಅದನ್ನು ಅಪಶಕುನವೆಂದು ಭಾವಿಸುತ್ತಾರೆ.

**ಮಾಂಡ ರಮೇರೊ:** ಕಾಟೋಟಿ (ಮರದ ಸಾಧನ)ಯಲ್ಲಿ ಅಕ್ಕಿಯ ಗಂಜಿಯನ್ನು ಹಾಕಿ ಅದರಲ್ಲಿ ಮೂರು ಕವಡೆ, ಒಂದು ಅಡಿಕೆ ಹಾಗೂ ಒಂದು ರೂಪಾಯಿಯ ನಾಣ್ಯವನ್ನು ಹಾಕಿ ವಧುವರರಿರ್ವರನ್ನು ಕಾಟೋಟಿಯ ಎರಡು ಬದಿಗಳಲ್ಲಿ ಅಭಿಮುಖವಾಗಿ ಕೂಡಿಸಿ ಆಡಿಸುವ ಆಟಕ್ಕೆ ಲಂಬಾಣಿಗರು 'ಮಾಂಡ ರಮೇರೊ' ಎಂದು ಕರೆಯುತ್ತಾರೆ. ಡೋರಣದ ಗಂಟುಗಳನ್ನು ವಧುವರರಿರ್ವರು ಪರಸ್ಪರ ಬಿಚ್ಚದ ನಂತರ ಮರದ ಕಾಟೋಟಿಯಲ್ಲಿ ಅಕ್ಕಿಯ ಗಂಜಿಯನ್ನು ಹಾಕಿ ಅದರಲ್ಲಿ ಮೂರು ಕವಡೆ ಒಂದು ಅಡಿಕೆ ಹಾಗೂ ಒಂದು ರೂಪಾಯಿಯ ನಾಣ್ಯವನ್ನು ಹಾಕಿ ಕಾಟೋಟಿಯ ಎರಡು ಬದಿಯಲ್ಲಿ ವಧುವರರನ್ನು ಪರಸ್ಪರ ಅಭಿಮುಖವಾಗಿ ಕೂರಿಸಿ ಗಂಜಿಯಲ್ಲಿಯ ಒಂದು ರೂಪಾಯಿಯ ನಾಣ್ಯವನ್ನು ಹಿಡಿಯಲು ವಧುವರರಿರ್ವರು ಪ್ರಯತ್ನಿಸಬೇಕು. ಈ ಆಟದಲ್ಲಿ ವಧುವು ತನ್ನೆರಡು ಕೈಗಳನ್ನು ಬಳಸಿದರೆ ವರನು ಒಂದು ಕೈಯನ್ನು ಮಾತ್ರ ಬಳಸಬೇಕು ಎಂಬ ನಿಯಮವಿರುತ್ತದೆ. ಹೀಗೆ ವಧುವರರಿರ್ವರು ಪರಸ್ಪರ ಸಲುಗೆ ಬೆಳೆಸಿಕೊಳ್ಳಲು, ಪರಸ್ಪರ ಅರ್ಥೈಸಿಕೊಳ್ಳಲು ವೇದಿಕೆಯನ್ನು ಕಲ್ಪಿಸುವ ಆಟಕ್ಕೆ ಲಂಬಾಣಿಗರು ಮಾಂಡ ರಮೇರೋ ಎಂದು ಕರೆಯುತ್ತಾರೆ. ಈ ಆಟವನ್ನು ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳ ಲಂಬಾಣಿಗರು ವಿವಾಹದ ಎರಡನೆಯ ಸ್ನಾನದ ನಂತರ ಹಮ್ಮಿಕೊಳ್ಳುತ್ತಾರೆ. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ವಿವಾಹದ ಒಂದೇ ಸ್ನಾನ ಜಾರಿಯಲ್ಲಿದ್ದು, ಸ್ನಾನದ ಮುಂಚೆ ಮಾಂಡರಮೇರೋ ಆಟವನ್ನು ಆಡಿಸುತ್ತಾರೆ.

ಆಟದ ನಂತರ ವಧುವಿನ ಅತ್ತಿಗೆಯು ವಧುವರರಿರ್ವರನ್ನು ಮನೆಯಲ್ಲಿ ಕರೆದುಕೊಂಡು ಹೋಗಿ ಗೋಧಿಯ ಹಿಟ್ಟು ಹಾಗೂ ಬೆಲ್ಲದಿಂದ ತಯಾರಿಸಿದ ಪಾಯಸ ತಿನ್ನಿಸುವಳು. ಇದನ್ನು 'ಕೊಳಿಯಾ ಖರಾಯೇರೊ' ಎನ್ನುವರು.

**ಗೋಟ ಸಂಪ್ರದಾಯ:** ಮದುಮಗನ ಕಡೆಯವರು ಒಂದು ಹೋತವನ್ನು ಬಲಿಕೊಟ್ಟು ಸಂಬಂಧಿಕರಿಗೆಲ್ಲ ಮಾಂಸದೂಟವನ್ನು ಹಾಕಿಸುವ ಪದ್ಧತಿಗೆ 'ಗೋಟ' ಎಂದು ಕರೆಯುತ್ತಾರೆ. ವಿವಾಹದ ವಿಧಿವಿಧಾನಗಳೆಲ್ಲವೂ ಮುಗಿದ ನಂತರ ಮದುಮಗನ ಮನೆಗೆ ಹೋಗುವ ಮೊದಲಿನ ದಿನ ರಾತ್ರಿ ಮದುಮಗನ ಕಡೆಯವರು ಮದುಮಗಳ ಮನೆಯ ಮುಂದೆ ಪೂಜೆ ಮಾಡುವ ಭಾಗದಲ್ಲಿ ಗೋಮಯದಿಂದ ಸಾರಿಸಿ ರಂಗೋಲಿಯನ್ನು ಬಿಡಿಸಿ,ವ್ಯವಸ್ಥಿತವಾಗಿ ಮಡಚಿದ ಗೋಣಿ ಚೀಲವನ್ನು ಇಟ್ಟು,ಅದರ ಮೇಲೆ ನೀರು ತುಂಬಿದ ತಂಬಿಗೆ, ಎಲೆ, ಅಡಿಕೆ, ಬೆಳಗುವ ಹಣತೆ ಇಟ್ಟು ಬೇವಿನ ಸೊಪ್ಪಿನಿಂದ ಶೃಂಗರಿಸಿ ಇದನ್ನೆ 'ಗೋಟ ದೇವತೆ' ಎಂದು ಕರೆಯುತ್ತಾರೆ. ಗೋಟ ದೇವತೆಯ ಮುಂದೆ ಹೋತವನ್ನು ಬಲಿಕೊಟ್ಟು. ನಾಯಕ, ಕಾರಬಾರಿ, ಡಾವಸಾಣರಿಗೆ ಹಾಗೂ

ಹಿರಿಯರಿಗೆ ಕುಡಿಯಲು ಸಿಂಧಿ ಹಾಗೂ ಸಾರಾಯಿಯನ್ನು ಕೊಡುತ್ತಾರೆ. ಬಲಿಕೊಟ್ಟ ಹೋತದ ರಕ್ತದಲ್ಲಿ ಜೋಳದ ಹಿಟ್ಟನ್ನು ಕದಡಿ, ಅದರಲ್ಲಿ ಕರುಳು, ಶ್ವಾಸಕೋಶ ಮುಂತಾದ ಭಾಗಗಳನ್ನು ಹಾಕಿ ರುಚಿಗೆ ತಕ್ಕಷ್ಟು ಉಪ್ಪು ಖಾರವನ್ನು ಬೆರೆಸಿ ಚನ್ನಾಗಿ ಬೇಯಿಸಿ ತಯಾರಿಸಿದ ಪದಾರ್ಥಕ್ಕೆ 'ಸಳೋಯಿ' ಎಂದು ಕರೆಯುತ್ತಾರೆ. ಗೋಟ ದೇವತೆಯ ಮುಂದೆ ಎರಡು, ಮೂರು ರೊಟ್ಟಿಯಂತೆ ಐದು ರೊಟ್ಟಿಗಳನ್ನು ಎರಡು ಭಾಗಗಳನ್ನಾಗಿಸಿ ಅದರ ಮೇಲೆ ಸಳೋಯಿ ಹಾಗೂ ಹಡಕಾ(ಎಲಬು) ಗಳನ್ನು ಇಟ್ಟು ಪೂಜೆ ಮಾಡುವರು. ನಂತರ ಎಲ್ಲರಿಗೂ ರೊಟ್ಟಿಯನ್ನು ಹಂಚಿ, ಮೊದಲಿಗೆ ಮದುಮಗನ ರೊಟ್ಟಿಯ ಮೇಲೆ ಸಳೋಯಿ ಹಾಗೂ ಹಡಕಾ ನೀಡುವರು. ಸೇರಿದವರೆಲ್ಲರಿಗೂ ಸಳೋಯಿಯನ್ನು ಹಂಚಿ, ಎಲ್ಲರಿಗೂ ಊಟ ಮಾಡಿಸುವರು. ಇದನ್ನು 'ಗೋಟ ಕರೇರೋ' ಎಂದು ಕರೆಯುತ್ತಾರೆ. ಈ ರೀತಿ ಗೋಟ ಮಾಡುವ ಪದ್ಧತಿ ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳ ಲಂಬಾಣಿಗರಲ್ಲಿ ಗೋಚರಿಸುತ್ತದೆ. ಆದರೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಬಲಿಕೊಟ್ಟ ಹೋತದ ಎಲ್ಲಾ ಮಾಂಸವನ್ನು ಹಲವಾರು ಭಾಗಗಳನ್ನಾಗಿ ವಿಂಗಡಿಸುತ್ತಾರೆ. ಅದರಲ್ಲಿ ನಾಯಕ ಹಾಗೂ ಕಾರಭಾರಿಗೆ ತಲಾ ಎರಡು ಭಾಗ. ಮದುಮಗನಿಗೆ ಐದು ಭಾಗ. ತಾಂಡಾದ ಪ್ರತಿಯೊಂದು ಮನೆಗಳಿಗೂ ಒಂದೊಂದು ಭಾಗಗಳನ್ನು ಹಂಚಬೇಕು. ಹೋತದ ರಕ್ತದಲ್ಲಿ ತಯಾರಿಸಿದ ಸಳೋಯಿಯನ್ನು ಕೂಡಾ ಹೀಗೆಯೇ ಹಂಚುತ್ತಾರೆ. ಈ ಗೋಟದ ಎಲ್ಲಾ ಖರ್ಚು ಮದುಮಗನ ದಾಗಿರುತ್ತದೆ. ಈ ರೀತಿಯಾಗಿ ಗೋಟ ದೇವತೆಯನ್ನು ಆರಾಧಿಸುವ ಕ್ರಮವು ಜಾರಿಯಲ್ಲಿದೆ.

**ಘುಗರಿ ಘಾಲೇರೋ:** ಗೋಟನ ಊಟವಾದ ಬಳಿಕ ತಾಂಡಾದ ಎಲ್ಲಾ ಹಿರಿಯ ಹೆಣ್ಣು ಮಕ್ಕಳು ಸೇರಿ, ತವರಿನ ಬಟ್ಟೆಯನ್ನು ತೆಗೆದು ಮದುಮಗನ ಕಡೆಯವರ ಮಂಗಲಸೂತ್ರದ ಸಂಕೇತವಾದ ಘುಗರಿಯನ್ನು ಹಾಕಿ, ವಿವಾಹಿತ ಮಹಿಳೆಗೆ ಹಾಕುವ ಎಲ್ಲಾ ವಸ್ತುಗಳು ಎಂದರೆ ಕಾಚಳಿ, ಕಾಟಲಿ, ಘುಂಗಟೋ, ಕಸೋಟಿಯಾ ಮುಂತಾದ ವಸ್ತುಗಳನ್ನು ತೊಡಿಸುತ್ತಾರೆ. ಮದುಮಗನು ಮದುಮಗಳ ಎರಡು ಕೈಗಳಿಗೆ ಚೂಡೋ(ದಂತದ ಬಳೆ) ಹಾಕುತ್ತಾನೆ. ಇಲ್ಲಿಗೆ ಅವರಿರ್ವರು ದಂಪತಿಗಳಾಗುತ್ತಾರೆ. ಇತರೆ ಸಮುದಾಯದಲ್ಲಿ ಹಾಕುವ ಮಂಗಲಸೂತ್ರ ಲಂಬಾಣಿ ಸಮುದಾಯದಲ್ಲಿ ಹಾಕದೇ ಮಂಗಲಸೂತ್ರದ ಸಂಕೇತವಾಗಿರುವ ಘುಗರಿ ಹಾಗೂ ಚೂಡೋ ತೊಡಿಸುತ್ತಾರೆ. ನಂತರ ತಾಂಡಾದ ಹಿರಿಯ ಹೆಣ್ಣು ಮಕ್ಕಳು ಮದುಮಗಳನ್ನು ಹಾಡಿನೊಂದಿಗೆ ಅಳುವದನ್ನು ಕಲಿಸುತ್ತಾರೆ. ಇದನ್ನು 'ಢಾವಲೊ ಸಿಕಾಯೇರೋ' ಎನ್ನುತ್ತಾರೆ. ತಡರಾತ್ರಿಯವರೆಗೆ ಢಾವಲೋ ಕಲಿತ ಮದುಮಗಳು ರಾತ್ರಿ ತನ್ನ ತಾಯಿಯ ಮಡಿಲಲ್ಲಿ ಮಲಗುತ್ತಾಳೆ.

ನಸುಕಿನ ಜಾವ ಮದುಮಗಳ ತಾಯಿ ಮದುಮಗಳಿಗೆ ಸ್ನಾನ ಮಾಡಿಸಿ ದೇವರ ದೀಪವನ್ನು ಹಚ್ಚಿ ರಾತ್ರಿಯಂತೆ ಮತ್ತೆ ಅಳುವದನ್ನು ಕಲಿಸುತ್ತಾಳೆ. ಇದನ್ನು 'ಹವೇಲಿ ಕರೇರೋ' ಎನ್ನುವರು. ನಂತರ ಮದುಮಗಳು ತಾಂಡಾದ ಪ್ರತಿಯೊಂದು ಮನಗೆ ತೆರಳಿ ಪ್ರತಿಯೊಬ್ಬರ ದೇವರ ಜಗಲಿಯನ್ನು ಹಿಡಿದು ಹವೇಲಿ ಮಾಡುತ್ತಾಳೆ.

**ಭಾರಕಾಡೇರೊ:** ತಾಂಡಾದ ಎಲ್ಲರ ಮನೆಯಲ್ಲಿ ಹವೇಲಿ ಮುಗಿದಮೇಲೆ ಮದುಮಗಳು ತನ್ನ ಮನೆಗೆ ಬರುತ್ತಾಳೆ. ಮೊದಲು ತಾಂಡಾದ ಹಿರಿಯ ಹೆಣ್ಣು ಮಕ್ಕಳು ಮದುಮಗನನ್ನು ಹಾಡುತ್ತಾ ಮನೆಯಿಂದ ಹೊರಗೆ ಕರೆ ತಂದು ಮನೆಯ ಮುಂದೆ ಚಾಪೆಯನ್ನು ಹಾಕಿ ಮನೆಯ ಬಾಗಿಲಿಗೆ ಎದುರಾಗಿ ಎಂದರೆ ಮನೆಯ ಬಾಗಿಲು ಪೂರ್ವಕ್ಕೆ ಮುಖಮಾಡಿದ್ದರೆ ಮದುಮಗನನ್ನು ಪಶ್ಚಿಮಕ್ಕೆ ಮುಖ ಮಾಡಿ ಕೂರಿಸುತ್ತಾರೆ.

ನಂತರ ಮದುಮಗಳನ್ನು ಮನೆಯಿಂದ ಹೊರಗೆ ಕರೆದುಕೊಂಡು ಬರುವ ಕಾರ್ಯಕ್ರಮವಿರುತ್ತದೆ. ಮದುಮಗಳ ಸಹೋದರರು ಮದುಮಗಳ ಎರಡು ಕೈಗಳನ್ನು ಹಿಡಿದು ಮೇಲಕೆತ್ತಿದಾಗ ಮದುಮಗಳು ಬಾಗಿಲಿನ ಮೇಲ್ಭಾಗವನ್ನು ಗಟ್ಟಿಯಾಗಿ ಹಿಡಿದು ಪರಿಪರಿಯಾಗಿ ಅಳುತ್ತಾಳೆ. ತಾಂಡಾದ ಎಲ್ಲ ಜನರು ದುಃಖ ಭರಿತರಾಗಿ ಅವಳ ದುಃಖದಲ್ಲಿ ಪಾಲ್ಗೊಳ್ಳುತ್ತಾರೆ. ಕಷ್ಟಪಟ್ಟು ಮದುಮಗಳು ಹಿಡಿದಿರುವ ಬಾಗಿಲಿನ ಮೇಲ್ಭಾಗವನ್ನು ನಿಧಾನವಾಗಿ ಬಿಡಿಸಿ ಮನೆಯಿಂದ ಹೊರಗೆ ಕಳುಹಿಸುತ್ತಾರೆ. ಹಾಗೆಯೇ ವಧುವಿನ ತಂದೆ ತಾಯಿಯರು ಕೊಟ್ಟಿರುವ ಎಲ್ಲಾ ವಸ್ತುಗಳನ್ನು ಹಾಕಿರುವ ಪೆಟ್ಟಿಗೆಗೆ 'ತಾಂಗಡಿ' ಎಂದು ಕರೆಯುತ್ತಾರೆ. ಈ ತಾಂಗಡಿಯನ್ನು ಸಹ ಮನೆಯಿಂದ ಹೊರಗೆ ತಂದು ಮದುಮಗನ ಬೆನ್ನಿನ ಹಿಂಭಾಗಕ್ಕೆ ಇಡುತ್ತಾರೆ. ಮದುಮಗಳನ್ನು ಕರೆ ತಂದು ತಾಂಗಡಿಗೆ ಬೆನ್ನು ಕೊಟ್ಟು ಪೂರ್ವಕ್ಕೆ ಮುಖ ಮಾಡಿ ಕೂರಿಸುತ್ತಾರೆ. ಈ ಸಂದರ್ಭದಲ್ಲಿ ಸಂಬಂಧಿಕರೆಲ್ಲರೂ ಒಬ್ಬೊಬ್ಬರಾಗಿ ಬಂದು ಮದುಮಗಳ ಕೊರಳು ತಬ್ಬಿ ಢಾವಲೋ ಮಾಡುತ್ತಾ ಅಳುತ್ತಾರೆ. ತಾಂಗಡಿ ಯಿಂದ ವಧುವರರಿರ್ವರು ಎದ್ದಾಗ ಮದುಮಗನು ತಾಂಗಡಿಯ ಮೇಲೆ ಎರಡು ರೂಪಾಯಿಗಳನ್ನು ಇಡುತ್ತಾನೆ.

**ಹವೇಲಿ:** ಮದುಮಗಳು ತನ್ನ ತಂದೆ ತಾಯಿಯ ಮನೆಯನ್ನು ಬಿಟ್ಟು ಹೊರಡುವಾಗ ತನ್ನ ತಾಂಡಾಕ್ಕೆ, ತಾಂಡಾದ ಜನರಿಗೆ ಶುಭವಾಗಲೆಂದು ಪ್ರಾರ್ಥಿಸಿಕೊಳ್ಳುವ ಹಾಗೂ ಅಳುತ್ತಾ ಅವರ ಗುಣಗಾನ ಮಾಡುವ ಕ್ರಮವನ್ನು 'ಹವೇಲಿ' ಎಂದು ಕರೆಯುತ್ತಾರೆ. ಹವೇಲಿ ಎಂಬ ಕಾರ್ಯಕ್ರಮವು ಹೆಣ್ಣಿನ ಜೀವನದಲ್ಲಿ ಬಹು ಪ್ರಮುಖವಾದ ಸಂಸ್ಕಾರವಾಗಿದ್ದು. ಜೀವನದಲ್ಲಿ ಒಮ್ಮೆ ಮಾತ್ರ ಹವೇಲಿ ಮಾಡಲಾಗುತ್ತದೆ. ತಂದೆ ತಾಯಿಯ ಮನೆಯವರು ಕಾಣಿಕೆಯಾಗಿ ನೀಡಿದ ಎತ್ತು ಅಥವಾ ಆಕಳನ್ನು ಶೃಂಗರಿಸಿ ಮನೆಯಬಾಗಿಲ ಮುಂದೆ ನಿಲ್ಲಿಸುತ್ತಾರೆ. ಸಹೋದರರಿಬ್ಬರು ಮದುಮಗಳನ್ನು ಎತ್ತಿನ ಮೇಲೆ ನಿಲ್ಲಿಸಿ ಎರಡು ಕೈಗಳನ್ನು ಮೇಲಕೆತ್ತಿ ಹಿಡಿಯುತ್ತಾರೆ. ಈ ಸಂದರ್ಭದಲ್ಲಿ ಮದುಮಗಳು ನಿಂತಲ್ಲಿ ಐದುಸಲ ಪ್ರದಕ್ಷಿಣೆ ಹಾಕಿ ಅಳುತ್ತಾ ಢಾವಲೋ ಮಾಡುತ್ತಾ ತಾಂಡಾದ ನಾಯಕ, ಕಾರಭಾರಿ ಹಾಗೂ ತನ್ನ ತಂದೆ ತಾಯಿಯ ಗುಣಗಾನ ಮಾಡುತ್ತಾಳೆ. ಅಲ್ಲದೇ ತಾನು ಹುಟ್ಟಿ ಬೆಳೆದ ತಾಂಡಾ ಅಭಿವೃದ್ಧಿಯ ಪಥದತ್ತ ಸಾಗಲಿ ಎಂದು ಹಾರೈಸುತ್ತಾಳೆ. ಹೀಗೆ ಹವೇಲಿ ಮಾಡುತ್ತಾ ತಾಂಡಾದ ಮುಂದಿರುವ ಸಿತಳಾದ ಹತ್ತಿರ ಹೋಗುತ್ತಾರೆ. ಅಲ್ಲಿ ಕುಳಿತ ಎಲ್ಲರೂ ಯೋಗಕ್ಷೇಮವನ್ನು ಮಾತನಾಡುತ್ತಾರೆ. ಮದುಮಗನಿಗೆ ಒಂದು ಚರಿಗೆ ನೀರು ಕೊಡುತ್ತಾರೆ. ಆಗ

ಲೇರಿಯಾ "ಲಾಲ ಲಾಯೇಚು ಲಾಖ ಲೇಜಾರೋಚು" ಎಂದು ಕಸಳಾತ (ನುಡಿಗಟ್ಟು) ಹೇಳುತ್ತಾನೆ. ನಂತರ ಮದುಮಗಳನ್ನು ಕುರಿತು ತಾಂಡಾದ ಹಿರಿಯರು ಗಂಡನ ಮನೆಯಲ್ಲಿ ಚನ್ನಾಗಿ ನಡೆದು ಕೊಂಡು ತಾಂಡಾದ ಹೆಸರು ತರುವಂತೆ ಉಪದೇಶ ನೀಡುತ್ತಾರೆ. ಇದನ್ನು 'ಸಿಕವಾಡಿ' ಎಂದು ಕರೆಯುತ್ತಾರೆ. ಮದುಮಗಳ ಜೊತೆ ಅವಳ ಗೆಳತಿಯರು, ನಾಲ್ಕಾರು ಜನ ಹಿರಿಯರು, ಹುಡುಗರು ಮದುಮಗನ ಮನೆಗೆ ಹೊರಡುತ್ತಾರೆ. ಇವರನ್ನು 'ತಾಂಗಡಿವಾಳ' ಎಂದು ಕರೆಯುತ್ತಾರೆ. ಹೀಗೆ ತಾಂಡಾದವರು ಹಾಡುತ್ತಾ ದಿಬ್ಬಣವನ್ನು ತಾಂಡಾದ ಗಡಿ ದಾಟಿಸುತ್ತಾರೆ.

**ತಾಂಗಡಿ ಘರೇಮ ಲಾಯೇರೊ:** ಮದುಮಗಳ ತಾಂಡಾದಿಂದ ಹೊರಟ ತಾಂಗಡಿಯು ಮದುಮಗನ ತಾಂಡಾವನ್ನು ಮುಟ್ಟಿದ ಮೇಲೆ ತಾಂಗಡಿಯ ಜೊತೆ ಬಂದ ಎಲ್ಲರೂ ಮದುಮಗನ ತಾಂಡಾದ ಮುಂದೆ ಸಿತಳಾ ಹತ್ತಿರ ಕುಳಿತುಕೊಳ್ಳುತ್ತಾರೆ. ಇದನ್ನು ತಿಳಿದ ತಾಂಡಾದ ಹಿರಿಯರು ಹಾಗೂ ಮದುಮಗನ ಮನೆಯವರು ಬಂದಿರುವ ಜನರ ಹತ್ತಿರ ಹೋಗಿ ನೀರನ್ನು ಕೊಟ್ಟು ಯೋಗಕ್ಷೇಮ ವಿಚಾರಿಸುತ್ತಾರೆ. ಮದುಮಗನ ತಾಯಿಯು ತುಂಬಿದ ತಂಬಿಗೆಯನ್ನು ತೆಗೆದುಕೊಂಡು ಹೋಗಿ ಮದುಮಗನ ಕೊರಳ ತಬ್ಬಿ ಢಾವಲೋ ಮಾಡಿ ಅಳುತ್ತಾಳೆ. ಅಲ್ಲಿ ಸೇರಿರುವ ಎಲ್ಲರಿಗೂ ಗೋಧಿ ಚಪಾತಿ ಹಾಗೂ ಬೆಲ್ಲದಿಂದ ತಯಾರಿಸಿದ ಚೂರ್ಮೊ ತಿನ್ನಲು ಕೊಡುತ್ತಾರೆ. ನಂತರ ಮದುಮಗನ ಮನೆಗೆ ಬಂದು ದಂಪತಿಗಳಿಬ್ಬರು ಬಲಗಾಲಿಟ್ಟು ಮನೆ ಪ್ರವೇಶಿಸಿದ ಮೇಲೆ ಮದುಮಗಳ 'ಘುಂಗಟೋ'(ಒಡನಿ) ಸರಿಸಿ ದೀಪ ತೋರಿಸಿ, ತಲೆಗೆ ಬೆಲ್ಲದ ನೀರು ಹಚ್ಚುತ್ತಾರೆ. ನಂತರ ಮನೆಯಲ್ಲಿ ಸೆಣಬಿನ ಚೀಲದ ಮೇಲೆ ದಂಪತಿಗಳಿಬ್ಬರನ್ನು ಕೂರಿಸಿ ದೇವರ ದೀಪ ಹಚ್ಚಿ ಮೊದಲು ಮದುಮಗಳ ಉಡಿಯಲ್ಲಿ ಗಂಡು ಮಗುವನ್ನು ಏಳು ಬಾರಿ ಇಟ್ಟು ಎತ್ತಿಕೊಳ್ಳುವರು. ನಂತರ ಇದೇ ರೀತಿ ಮದುಮಗನ ಉಡಿಯಲ್ಲಿಯೂ ಸಹ ಗಂಡು ಮಗುವನ್ನು ಏಳು ಬಾರಿ ಇಟ್ಟು ಎತ್ತಿ ಕೊಳ್ಳುವರು ಇದನ್ನು 'ಖೋಳಿಮ ಘಾಲೆರೋ' ಎಂದು ಕರೆಯುತ್ತಾರೆ. ನಂತರ ರಾತ್ರಿ ಎಲ್ಲರೂ ಊಟ ಮಾಡಿ ಮಲಗುವರು.

**ದಾತಣ ದೇನ ಧೋಗೇರೋ:** ಮಾರನೆಯ ದಿನ ಮದುಮಗಳು ಬೇಗ ಎದ್ದು ಸ್ನಾನ ಮಾಡಿ ಸಣ್ಣ ಸಣ್ಣ ಅವರಿ ಕಡ್ಡಿಗಳನ್ನು ತೆಗೆದುಕೊಂಡು, ತನ್ನ ಗೆಳತಿಯರು ಹಾಗೂ ಮದುಮಗನ ಮನೆಯ ಹಿರಿಯರೊಂದಿಗೆ ಮದುಮಗನ ತಾಂಡಾದ ಪ್ರತಿಯೊಬ್ಬರ ಮನೆಗೆ ಹೋಗಿ ಮನೆಯ ಹಿರಿಯರಿಗೆ ಒಂದೊಂದು ಕಡ್ಡಿಯನ್ನು ಕೊಟ್ಟು ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾಳೆ. ಹೀಗೆ ನಮಸ್ಕರಿಸುವದನ್ನು 'ದಾತಣ ದೇನ ಧೋಗೇರೋ' ಎಂದು ಕರೆಯುತ್ತಾರೆ. ಇದರಿಂದಾಗಿ ಮದುಮಗಳಿಗೆ ಇಡೀ ತಾಂಡಾದ ಜನರ ಸಂಬಂಧಗಳು ಪರಿಚಯವಾಗುತ್ತದೆ.

**ತಾಂಗ್ಡಿ ಖೋಳಿರೋ:** ಸಾಯಂಕಾಲ ತಾಂಡಾದ ನಾಯಕಣ, ಕಾರಭಾಣ ಹಾಗೂ ಎಲ್ಲಾ ಹಿರಿಯ ಹೆಣ್ಣು ಮಕ್ಕಳನ್ನು ಮದುಮಗನ ಮನೆಗೆ ಕರೆಸಲಾಗುತ್ತದೆ. ಈ ಎಲ್ಲಾ ಹೆಣ್ಣು ಮಕ್ಕಳು ಮದುಮಗಳು ತವರು ಮನೆಯಿಂದ ತಂದ ವಸ್ತುಗಳನ್ನು ವೀಕ್ಷಿಸುವದನ್ನು 'ತಾಂಗ್ಡಿ ಖೋಳಿರೋ'

ಎಂದು ಕರೆಯುತ್ತಾರೆ. ಈ ತಾಂಗಡಿಯಲ್ಲಿ ಗಂಡಿನ ತಾಯಿಗೆಂದು ಸಾಸುರವೇಷ, ನವದಂಪತಿಗಳಿಗೆ ಅಡಿಗೆ ಮಾಡಿಕೊಳ್ಳಲು ಬೇಕಾದ ಎಲ್ಲಾ ವಸ್ತುಗಳು, ತಾಂಡಾದ ಹಿರಿಯ ಹೆಣ್ಣು ಮಕ್ಕಳಿಗಾಗಿ ಕುಪ್ಪಸಗಳು, ಮದುಮಗಳ ಬೆಲೆ ಬಾಳುವ ಬಟ್ಟೆ ಬರೆಗಳು, ಕೊಬ್ಬರಿ, ಬೆಲ್ಲ ಮುಂತಾದ ವಸ್ತುಗಳನ್ನು ಹಾಕಿರುತ್ತಾರೆ. ಹಿರಿಯ ಹೆಣ್ಣು ಮಕ್ಕಳು ಈ ವಸ್ತುಗಳನ್ನು ಒಂದೊಂದಾಗಿ ಪರೀಕ್ಷಿಸಿ ಅದರ ಗುಣಮಟ್ಟ ಚೆನ್ನಾಗಿದ್ದರೆ ಹೊಗಳುತ್ತಾರೆ. ಚೆನ್ನಾಗಿರದಿದ್ದರೆ ತೆಗಳುತ್ತಾರೆ. ಹೀಗೆ ತಾಂಗಡಿಯನ್ನು ನೋಡಿದ ನಂತರ ಮದುಮಗಳ ಮನೆಯಿಂದ ತಂದ ಕೊಬ್ಬರಿ ಬೆಲ್ಲವನ್ನು ಎಲ್ಲರಿಗೂ ಹಂಚಲಾಗುತ್ತದೆ.

ಮರುದಿನ ಬೆಳಿಗ್ಗೆ ತಾಂಗಡಿಯ ಹಿಂದೆ ಬಂದ ಮದುಮಗಳ ಸಂಬಂಧಿಕರು ಊಟ ಮಾಡಿ ಹೊರಡಲು ಸಿದ್ಧರಾಗುತ್ತಾರೆ. ಆ ಸಂದರ್ಭದಲ್ಲಿ ಮದುಮಗಳು ತಾಂಗಡಿಯ ಹಿಂದೆ ಬಂದ ಜನರ ಕೊರಳು ತಬ್ಬಿ ತುಂಬಾ ನೋವಿನಿಂದ ಢಾವಲೋ ಮಾಡುತ್ತಾ ಅಳುತ್ತಾಳೆ. ಕೊನೆಗೆ ಮದುಮಗನ ತಾಂಡಾದವರು ತಾಂಗಡಿಯವರನ್ನು ತಮ್ಮ ತಾಂಡಾದ ಗಡಿ ದಾಟುವವರೆಗೆ ಹಾಡುತ್ತಾ ಕಳುಹಿಸಿ ಬರುತ್ತಾರೆ. ತಾಂಗಡಿಯವರು ಹೋದ ದಿನ ರಾತ್ರಿ ಮದುಮಗನ ಮನೆಯಲ್ಲಿ ಶೋಭಾನ ಕಾರ್ಯಕ್ರಮ ನಡೆಯುತ್ತದೆ. ಮದುಮಗನ ಅತ್ತಿಗೆ ನವದಂಪತಿಗಳನ್ನು ಒಂದು ಕೋಣೆಗೆ ಸೇರಿಸುತ್ತಾಳೆ. ಪ್ರತಿಯಾಗಿ ಮದುಮಗನು ತನ್ನತ್ತಿಗೆಗೆ ಕೊಬ್ಬರಿ, ಅಡಿಕೆ ಮತ್ತು ಎಲೆಯನ್ನು ಕೊಟ್ಟು ಆಶೀರ್ವಾದ ಪಡೆಯುತ್ತಾನೆ. ಈ ರೀತಿಯಾಗಿ ಮೂರು ಜಿಲ್ಲೆಯ ಲಂಬಾಣಿಗರಲ್ಲಿ ವಿಶಿಷ್ಟ ರೀತಿಯ ವಿವಾಹದ ವಿಧಿವಿಧಾನಗಳು ಜಾರಿಯಲ್ಲಿವೆ. ತಿಂಗಳುಗಳವರೆಗೆ ಜರುಗುತ್ತಿದ್ದ ಲಂಬಾಣಿಗರ ವಿವಾಹದ ವಿಧಿ ವಿಧಾನಗಳು ಇಂದಿನ ಆಧುನಿಕ ಜೀವನ ಶೈಲಿಯಿಂದಲೋ, ಧಾವಂತದ ಬದುಕಿನಿಂದಲೋ ಸಂಕ್ಷಿಪ್ತಗೊಳ್ಳುತ್ತಾ ಸಾಗುತ್ತಿವೆ.

ಮೂರು ರಾಜ್ಯಗಳ ಮೂರು ಜಿಲ್ಲೆಗಳ ಲಂಬಾಣಿಗರಲ್ಲಿ ರಾಜ್ಯಗಳ ಕುರಿತಾದ ಭೌಗೋಳಿಕ ಗಡಿಯಿದೆಯೇ ಹೊರತು ಸಾಂಸ್ಕೃತಿಕ ಗಡಿಯೆಂಬುದಿಲ್ಲ. ಏಕೆಂದರೆ ಮೂರೂ ಜಿಲ್ಲೆಗಳ ಲಂಬಾಣಿಗರು ಗೋರಬೋಲಿ ಭಾಷೆಯನ್ನು ಮಾತನಾಡುತ್ತಾ ತಾವೆಲ್ಲರೂ ಒಂದೇ ಬುಡಕಟ್ಟು ಸಮುದಾಯದವರು ಹಾಗೂ ನಾವು ನಮ್ಮವರು ಎಂಬ ಪ್ರಬಲವಾದ ಸಾಮುದಾಯಿಕ ಭಾವನೆಯನ್ನು ಹೊಂದಿದ್ದಾರೆ. ಮೂರೂ ಜಿಲ್ಲೆಗಳ ಲಂಬಾಣಿಗರ ನಡುವೆ ವೈವಾಹಿಕ ಸಂಬಂಧಗಳು ಮೊದಲಿನಿಂದಲೂ ನಿರಾತಂಕ ವಾಗಿ ಸಾಗುತ್ತಾ ಬಂದಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಶಿಕ್ಷಣ ಪಡೆದ ವಿದ್ಯಾವಂತರ ಮಧ್ಯೆ ವೈವಾಹಿಕ ಸಂಬಂಧಗಳು ಕಡಿಮೆಯಾಗುತ್ತಿವೆ ಏಕೆಂದರೆ ಮೂರು ರಾಜ್ಯಗಳಲ್ಲಿ ಲಂಬಾಣಿಗರು ಸಂವಿಧಾನಿಕವಾಗಿ ಬೇರೆ ಬೇರೆ ಪಟ್ಟಿಗಳಲ್ಲಿರುವುದರಿಂದ ಸರ್ಕಾರಿ ನೌಕರಿಯಲ್ಲಿ ಮೀಸಲಾತಿ ದೊರಕುವುದಿಲ್ಲ, ಹಾಗೂ ಆಯಾ ರಾಜ್ಯದ ಮಾತೃಭಾಷೆಯಲ್ಲಿ ಶಿಕ್ಷಣ ಪಡೆದಿರುವುದರಿಂದ ಬೇರೆ ರಾಜ್ಯದಲ್ಲಿ ನೌಕರಿ ಸಿಗುವುದಿಲ್ಲ ಎಂಬ ಕಾರಣದಿಂದ ಮೂರು ರಾಜ್ಯಗಳ ವಿದ್ಯಾವಂತ ವಧುವರರ ನಡುವೆ ವೈವಾಹಿಕ ಸಂಬಂಧಗಳು ಕಡಿಮೆ ಪ್ರಮಾಣದಲ್ಲಿ ಜರುಗುತ್ತಿವೆ. ಆದರೆ ಅನಕ್ಷರಸ್ಥರ ನಡುವೆ ಎಂದಿನಂತೆ ವಿವಾಹಗಳು ನಿರಾತಂಕವಾಗಿ ನಡೆಯುತ್ತಿವೆ.

**ಮಟ್ಟಿ ಕರೇರೋ:** ಪ್ರತಿಯೊಬ್ಬ ವ್ಯಕ್ತಿಯ ಜೀವನದ ಕೊನೆಯ ಸಂಸ್ಕಾರಕ್ಕೆ 'ಅಂತ್ಯೇಷ್ಟಿ' ಎಂದು ಕರೆಯುವರು. ವ್ಯಕ್ತಿಯು ತನ್ನ ಜೀವನದಲ್ಲಿ ಕ್ರಮಬದ್ಧವಾದ ಸೂಕ್ತ ಸಂಸ್ಕಾರಗಳನ್ನು ಆಚರಿಸಿ ಬಾಳನ್ನು ಪವಿತ್ರಗೊಳಿಸುತ್ತಾನೆ. ಮರಣದ ನಂತರ ಸಮಾಜದ ಸದಸ್ಯರು ಅವನ ಅಂತ್ಯ ಕ್ರಿಯೆಯನ್ನು ನೆರವೇರಿಸಿ ಅವನ ಮುಂದಿನ ಆಧ್ಯಾತ್ಮಿಕ ಸುಖಕ್ಕೆ ಕಾರಣವಾಗುತ್ತಾರೆ. ಪರಲೋಕದ ಶ್ರೇಯಸ್ಸು ಇಹಲೋಕಕ್ಕಿಂತಲೂ ಶ್ರೇಷ್ಠವೆಂದು ಬುಡಕಟ್ಟಿನ ಜನರು ನಂಬುತ್ತಾರೆ. ಹುಟ್ಟಿನಿಂದ ಆಚರಿಸುವ ಸಂಸ್ಕಾರಗಳು ಇಹ ಲೋಕದ ಸುಖಕ್ಕೆ ಕಾರಣವಾದರೆ, ಮರಣ ನಂತರದ ಸಂಸ್ಕಾರಗಳು ಪರಲೋಕದ ಸಾಧನೆಗೆ ನೆರವಾಗುತ್ತವೆಂದು ಭಾವಿಸುತ್ತಾರೆ. ಅಂತ್ಯೇಷ್ಟಿ ಸಂಸ್ಕಾರದ ಆಚರಣೆಯ ಉದ್ದೇಶಗಳಲ್ಲಿ ಮೃತ್ಯುವಿನಿಂದಾಗುವ ಭಯ, ಬಂಧು ಬಳಗದವರ ದುಃಖಶಮನ, ಹುಟ್ಟಿದ ಮೇಲೆ ಸಾಯಲೇಬೇಕೆಂಬ ತಿಳುವಳಿಕೆ, ಮೃತದೇಹವನ್ನು  ಸಂಸ್ಕಾರಕ್ಕೆ ಒಳಪಡಿಸುವ ಹೊಣೆಗಾರಿಕೆ ಮುಂತಾದ ಅಂಶಗಳು ಅಡಕವಾಗಿವೆ.

'ಹುಟ್ಟು ಸಹಜ ಸಾವು ಖಚಿತ' ಎನ್ನುವಂತೆ ಭೂಮಿಯ ಮೇಲೆ ಜನಿಸುವ ಪ್ರತಿಯೊಂದು ಜೀವಿಯು ಸಾವನಪ್ಪಬೇಕಾದುದು ಅನಿವಾರ್ಯವಾದ ಪ್ರಕ್ರಿಯೆ. ಇದಕ್ಕೆ ಮಾನವನು ಹೊರತಾಗಿಲ್ಲ. ಮಾನವನು ಮರಣವನ್ನಪ್ಪಿದ ನಂತರ ಆಯಾ ಜಾತಿ, ಮತ, ಪಂಥ ಬುಡಕಟ್ಟುಗಳಿಗನುಗುಣವಾಗಿ ಭಿನ್ನ ಭಿನ್ನ ರೀತಿಗಳಲ್ಲಿ ಶವಸಂಸ್ಕಾರ ಮಾಡುವ ಪದ್ಧತಿ ಕಂಡುಬರುತ್ತದೆ. ಲಂಬಾಣಿಗರಲ್ಲಿ ವಿವಾಹ ಸಂಸ್ಕಾರವಾಗದವರು ಹಾಗೂ ದೇಹದ ಮೇಲೆ ತೊನ್ನಿರುವವರು ತೀರಿಕೊಂಡರೆ ಅವರನ್ನು ಹುಗಿಯುತ್ತಾರೆ. ವಿವಾಹ ಸಂಸ್ಕಾರಕ್ಕೆ ಒಳಗಾದವರು ಮೃತಪಟ್ಟರೆ ಅಂತಹವರನ್ನು ಚಿತೆಗೇರಿಸಿ ದಹಿಸುತ್ತಾರೆ. ಹೀಗೆ ಎರಡು ರೀತಿಯಲ್ಲಿ ಶವ ಸಂಸ್ಕಾರ ಮಾಡುವ ಪದ್ಧತಿ ಗೋಚರಿಸುತ್ತದೆ. ವ್ಯಕ್ತಿಯೊರ್ವನು ಮೃತಪಟ್ಟ ಸುದ್ದಿಯನ್ನು ಬಂಧು ಬಳಗದವರಿಗೆ ಮುಟ್ಟಿಸುತ್ತಾರೆ. ಮೃತ ದೇಹವನ್ನು ಶುಭ್ರವಾಗಿ ಸ್ನಾನ ಮಾಡಿಸಿ, ಮಡಿಬಟ್ಟೆಯನ್ನು ತೊಡಿಸಿ, ಹಣೆಗೆ ಒಂದು ರೂಪಾಯಿಯ ನಾಣ್ಯ ವನ್ನು ಹಾಗೂ ಕುಂಕುಮ ಹಚ್ಚಿ, ಹೂವಿನ ಹಾರ ಹಾಕುತ್ತಾರೆ. ಶುಭ್ರಗೊಂಡ ಮೃತ ದೇಹವನ್ನು ಮನೆಯ ಬಾಗಿಲಿಗೆ ನೇರವಾಗಿ ಮಲಗಿಸುತ್ತಾರೆ. "ಮೃತನ ದೇಹದ ಕೈಕಾಲುಗಳನ್ನು ಮಡಚುವದಾಗಲಿ, ಅತನನ್ನು ಗೋಡೆಗೆ ಒರಗಿಸಿ ಕೂರಿಸುವದಾಗಲಿ, ಶೃಂಗರಿಸುವದಾಗಲಿ ಇವರಲ್ಲಿಲ್ಲ"(ಖಂಡೋಬಾ ಪಿ ಕೆ: ೨೦೦೦:೫೭). ಶವದ ಸುತ್ತಲೂ ಹೆಣ್ಣು ಮಕ್ಕಳು ಕುಳಿತು ಅವನ ಗುಣಗಾನ ಮಾಡುತ್ತಾ ಅಳುತ್ತಾರೆ. ತಾಂಡಾದಲ್ಲಿ ಯಾರೇ ತೀರಿಕೊಂಡರೂ, ಅಂದು ಯಾವ ಮನೆಯಲ್ಲಿಯೂ ಒಲೆ ಹಚ್ಚುವುದಿಲ್ಲ. ಕೆಲಸಕ್ಕೂ ಸಹ ಹೋಗುವುದಿಲ್ಲ. ಎಲ್ಲರೂ ಮೃತ ವ್ಯಕ್ತಿಯ ಮನೆಯ ಮುಂದೆ ಕುಳಿತು ದುಃಖದಲ್ಲಿ ಪಾಲ್ಗೊಳ್ಳುತ್ತಾರೆ. ಸುದ್ದಿ ತಿಳಿದ ಸಂಬಂಧಿಕರು ಮೃತನ ಮನೆಗೆ ಬರುವಾಗ ತಾಂಡಾ ಪ್ರವೇಶಿಸುತ್ತಲೇ ಹೆಣ್ಣು ಮಕ್ಕಳು ಮಾತ್ರ  ಜೋರಾಗಿ 'ಧಾವಲೋ' ಮಾಡುತ್ತಾ, ಮೃತರ ಗುಣಗಾನ ಮಾಡುತ್ತಾ, ಮೃತರ ಮನೆಗೆ ಬರುತ್ತಾರೆ. ಎಲ್ಲಾ ಸಂಬಂಧಿಗಳು ಬಂದ ತಕ್ಷಣ ತಾಂಡಾದ ನಾಯಕನ ಮಾರ್ಗದರ್ಶನದಲ್ಲಿ ಹಿರಿಯರು ಎರಡು ಉದ್ದದ ಕಟ್ಟಿಗೆಗಳನ್ನು ತೆಗೆದುಕೊಂಡು ಅದಕ್ಕೆ ಅಡ್ಡಲಾಗಿ ಚಿಕ್ಕ ಚಿಕ್ಕ ಕಟ್ಟಿಗೆಗಳನ್ನು ಕಟ್ಟಿ, ಅದರ ಮೇಲೆ ಜೋಳದ ಕಣಕಿಯನ್ನು ಹಾಕಿ

ಬಿಗಿಯುತ್ತಾರೆ. ಈ ರೀತಿಯ ಚೆಟ್ಟವನ್ನು ಲಂಬಾಣಿಗರು 'ಖಾಟ' ಎಂದು ಕರೆಯುತ್ತಾರೆ. ಗಂಡ ಸತ್ತ ನಂತರ ಮಾಂಗಲ್ಯ ಸೂಚಕವಾದ ಘುಗರಿ, ಕಾಟಲಿ, ಖವ್ಯಾ, ಚೂಡೊ(ಬಳೆ) ಮುಂತಾದ ಮುತ್ತೈದೆ ಸೂಚಕವಾದ ವಸ್ತುಗಳನ್ನು ಈ ಖಾಟನ ಮೇಲೆಯೇ ತೆಗೆಸುತ್ತಾರೆ. ಈ ಸಂದರ್ಭದಲ್ಲಿ ಮೃತನ ಪತ್ನಿಯು ಅವನ ಗುಣಗಾನ ಮಾಡುತ್ತಾ, ತನ್ನ ಜೀವನವನ್ನು ಶಪಿಸುತ್ತಾ, ಮುಂದಿನ ಕಠಿಣ ಹಾದಿಯನ್ನು ನೆನೆಯುತ್ತಾ ಜೋರಾಗಿ ಅಳುತ್ತಾಳೆ. ಮೃತದೇಹವನ್ನು ಖಾಟನ ಮೇಲೆ ಮಲಗಿಸಿ ಬಿಳಿ ಬಟ್ಟೆಯನ್ನು ಹೊದಿಸುತ್ತಾರೆ. ಬಿಳಿ ಬಟ್ಟೆಯ ತುದಿಯಲ್ಲಿ ಒಂದು ರೂಪಾಯಿಯ ನಾಣ್ಯವನ್ನು ಕಟ್ಟುತ್ತಾರೆ. ಇದನ್ನು 'ವಾಟೇರ ಖರ್ಚ' ಎಂದು ಕರೆಯುತ್ತಾರೆ. ಹೀಗೆ ಮಲಗಿಸಿದ ಶವವನ್ನು ಹಗ್ಗದಿಂದ ಬಿಗಿದು ಕಟ್ಟುತ್ತಾರೆ. ಮೃತವ್ಯಕ್ತಿಯ ಹಿರಿಯ ಮಗನು ಖಾಟಗೆ ಮೊದಲು ಹೆಗಲನ್ನು ಕೊಡುತ್ತಾನೆ. ಒಂದು ವೇಳೆ ಮಕ್ಕಳಿರದಿದ್ದರೆ ಸಮೀಪದ ಬಂಧುಗಳು ಹೆಗಲನ್ನು ಕೊಡುತ್ತಾರೆ. ಶವವನ್ನು ಹೊತ್ತುಕೊಂಡು ಸಾಗುವಾಗ ದಾರಿಯುದ್ದಕ್ಕೂ ಜೋಳ, ಅಕ್ಕಿ ಇಲ್ಲವೇ ನವಣೆಯ ಕಾಳುಗಳನ್ನು ಚೆಲ್ಲುತ್ತಾರೆ. ಲಂಬಾಣಿಗರು ಹೆಣವನ್ನು ಹೊರಲು ಹಿಂಜರಿಯುವದಿಲ್ಲ. ಹೆಣ ಹೊರುವದರಿಂದ ಪುಣ್ಯ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆಯಿರುವದರಿಂದ ಮಾರ್ಗಮಧ್ಯದಲ್ಲಿ ಹೆಗಲನ್ನು ಬದಲಾಯಿಸುತ್ತಾ ಸಾಗುತ್ತಾರೆ. ಮುಂಚಿತವಾಗಿ ಒಂದು ಗುಂಪು ಸ್ಮಶಾನದಲ್ಲಿ ಚಿತೆ ದಹನಕ್ಕೆ ಬೇಕಾಗುವಷ್ಟು ಕಟ್ಟಿಗೆಯನ್ನು ವ್ಯವಸ್ಥಿತವಾಗಿ ಜೋಡಿಸಿರುತ್ತಾರೆ. ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಶವವನ್ನು ಕಟ್ಟಿಗೆಯ ಮೇಲೆ ಕೆಳಮುಖವಾಗಿ ಉತ್ತರ ದಿಕ್ಕಿಗೆ ತಲೆ ಮಾಡಿ ಮಲಗಿಸುತ್ತಾರೆ. ಆದರೆ ಸೋಲಾಪುರ ಜಿಲ್ಲೆಯ ಲಂಬಾಣಿಗರು ಶವವನ್ನು ಮೇಲ್ಮುಖವಾಗಿ ಮಲಗಿಸುತ್ತಾರೆ.

ಹಿರಿಯ ಮಗನು ಮೃತ ತಂದೆಯ ತಲೆಯ ಭಾಗಕ್ಕೆ ಮೊದಲು ಕೊಳ್ಳಿಯನ್ನು ಇಡಬೇಕು. ನಂತರ ಉಳಿದವರೆಲ್ಲರೂ ಎಲ್ಲ ಕಡೆಗೂ ಬೆಂಕಿ ಇಡುತ್ತಾರೆ. ಈ ಸಂದರ್ಭದಲ್ಲಿ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಮೃತ ವ್ಯಕ್ತಿಯ ಹಿರಿಯ ಮಗನು ಕೈಯಲ್ಲಿ ಬಾರಿ ಗಿಡದ ಉದ್ದನೆಯ ಕಟ್ಟಿಗೆಯನ್ನು ಹಿಡಿದು ತಂದೆಯ ಶವದ ತಲೆಯ ಭಾಗಕ್ಕೆ ಏಳು ಸಲ ತಾಗಿಸುತ್ತಾನೆ. ಇದನ್ನು 'ಟಿಂಚೋದೇರೋ'ಎಂದು ಕರೆಯುತ್ತಾರೆ. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಖಾಟ ಕಟ್ಟಿದ ಉದ್ದದ ಕಟ್ಟಿಗೆಯಿಂದಲೇ ತಂದೆಯ ಶವದ ತಲೆಯ ಭಾಗಕ್ಕೆ ಏಳು ಸಲ ತಾಗಿಸುತ್ತಾರೆ. ಆದರೆ ಸೋಲಾಪುರ ಜಿಲ್ಲೆಯ ಲಂಬಾಣಿಗರು ಶವ ಸುಟ್ಟು ತಲೆ ಸಿಡಿದ ನಂತರವೇ ಟಿಂಚೋದೇರೋ ಕ್ರಮ ಜರುಗಿಸುತ್ತಾರೆ. ಮೃತದೇಹವು ಸಂಪೂರ್ಣವಾಗಿ ಸುಟ್ಟು ತಲೆ ಸಿಡಿಯುವ ಶಬ್ದ ಕೇಳಿದ ನಂತರ ಸಲಿಕೆಯ ಕಾವುಗಳನ್ನು ಕಳಚಿ ಹಿಂದುಮುಂದಾಗಿ ಹಾಕಿ ಹಿಂದೆ ನೋಡದೇ ಮನೆಗೆ ಹೊರಡುತ್ತಾರೆ. ಹೋಗುವಾಗ ದಾರಿ ಮಧ್ಯದ ಕೆರೆ, ಬಾವಿ, ಹಳ್ಳಗಳಲ್ಲಿ ಕೈಕಾಲು ಮುಖವನ್ನು ತೊಳೆದುಕೊಂಡು ಬಾರಿ ಗಿಡದ ಎಲೆಯನ್ನು ಕಚ್ಚಿ ಉಗಿದು, ಬಾರಿಗಿಡಕ್ಕೆ ಪ್ರದಕ್ಷಿಣೆ ಹಾಕಿ ಮೃತನ ಮನೆಗೆ ಹಿಂದಿರುಗುತ್ತಾರೆ. ಲಂಬಾಣಿಗರಲ್ಲಿ ಪುರುಷರು ಮಾತ್ರ ಸ್ಮಶಾನಕ್ಕೆ ಹೋಗುತ್ತಾರೆ. ಸ್ತ್ರೀಯರು ಮತ್ತು ಅಪ್ರಾಪ್ತ ಬಾಲಕರು ಸ್ಮಶಾನಕ್ಕೆ ಹೋಗುವದನ್ನು ನಿಷೇಧಿಸಲಾಗಿದೆ.

ಒಂದು ವೇಳೆ ವಿವಾಹ ಸಂಸ್ಕಾರವಾಗದವರು ತೀರಿಕೊಂಡರೆ ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಯಲ್ಲಿ ಗೋಣಿ ಚೀಲದ ಜೋಳಿಗೆಯನ್ನು ಮಾಡಿ, ಅದರಲ್ಲಿ ಶವವನ್ನು ಹಾಕಿಕೊಂಡು ಸ್ಮಶಾನಕ್ಕೆ ಹೋಗಿ ಗುಂಡಿಯನ್ನು ತೋಡಿ ಕೆಳಮುಖವಾಗಿ ಉತ್ತರದಿಕ್ಕಿಗೆ ತಲೆ ಮಾಡಿ ಮಲಗಿಸುತ್ತಾರೆ. ಆದರೆ ಸೋಲಾಪುರ ಜಿಲ್ಲೆಯ ಲಂಬಾಣಿಗರು ಮೇಲ್ಮುಖ ಮಾಡಿ ಮಲಗಿಸುತ್ತಾರೆ. ಎಲ್ಲರೂ ಮೂರು ಸಲ ಮಣ್ಣನ್ನು ತೆಗೆದುಕೊಂಡು ಶವದ ಮೇಲೆ ಹಾಕಿದ ನಂತರ ಸಲಿಕೆಯಿಂದ ಮಣ್ಣನ್ನು ಎಳೆದು ಗುಂಡಿಯನ್ನು ಮುಚ್ಚುತ್ತಾರೆ. ಯಾವುದೇ ಪ್ರಾಣಿಗಳು ಶವವನ್ನು ಹೊರತೆಗೆದು ತಿನ್ನದಿರಲಿ ಎಂದು ಅದರ ಮೇಲೆ ಮುಳ್ಳನ್ನು ಹಚ್ಚಿ ಭದ್ರವಾಗಿ ಕಲ್ಲುಗಳನ್ನು ಇಡುತ್ತಾರೆ.

ಗರ್ಭಿಣಿ ಮಹಿಳೆಯು ಮರಣ ಹೊಂದಿದರೆ ವಿವಾಹ ಸಂಸ್ಕಾರಕ್ಕೆ ಒಳಗಾದವರಿಗೆ ಸಂಸ್ಕರಿಸುವಂತೆ 'ಖಾಟ'ನ ಮೇಲೆ ಮಲಗಿಸಿ ಸ್ಮಶಾನಕ್ಕೆ ತರುತ್ತಾರೆ. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಗರ್ಭಿಣಿಯ ಹೊಟ್ಟೆಯನ್ನು ಕೊಯ್ದು ಒಳಗಿನ ಪಿಂಡವನ್ನು ಹೊರತೆಗೆದು ಗರ್ಭಿಣಿ ಸ್ತ್ರೀಯನ್ನು ಯಥಾವತ್ತಾಗಿ ದಹಿಸುತ್ತಾರೆ. ಅವಳ ಪಕ್ಕದಲ್ಲಿಯೇ ಗುಂಡಿಯನ್ನು ತೋಡಿ ಪಿಂಡವನ್ನು ಹೂಳುತ್ತಾರೆ. ಹೊಟ್ಟೆಯಲ್ಲಿಯ ಪಿಂಡ ವಿವಾಹ ಸಂಸ್ಕಾರಕ್ಕೆ ಒಳಗಾಗಿರುವದಿಲ್ಲ ಹಾಗಾಗಿ ತಾಯಿಗೆ ಮಾಡುವ ಸಂಸ್ಕಾರವನ್ನು ಪಿಂಡಕ್ಕೆ ಮಾಡುವುದು ತಪ್ಪು ಎಂಬ ಭಾವನೆ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಲ್ಲಿದೆ.

ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಮರಣ ಹೊಂದಿದ ಗರ್ಭಿಣಿಯ ಹೊಟ್ಟೆಯನ್ನು ಕೊಯ್ದು ಪಿಂಡವನ್ನು ಹೊರ ತೆಗೆಯದೇ ದಹಿಸುತ್ತಾರೆ. ಆದರೆ ಸೋಲಾಪುರ ಜಿಲ್ಲೆಯ ಲಂಬಾಣಿಗರು ವಿವಾಹ ಸಂಸ್ಕಾರಕ್ಕೆ ಒಳಗಾದವರಂತೆ ಯಥಾವತ್ತಾಗಿ ದಹಿಸುತ್ತಾರೆ. ಈ ರೀತಿಯಾಗಿ ಮೃತ ಗರ್ಭಿಣಿಯ ಶವಸಂಸ್ಕಾರ ಮಾಡಲಾಗುತ್ತದೆ.

ಹೀಗೆ ಶವಸಂಸ್ಕಾರವಾದ ನಂತರ ಮೃತನ ಮನೆಗೆ ಮರಳಿ ಬಂದು ಕುಳಿತುಕೊಳ್ಳುತ್ತಾರೆ. ಮನೆಯಲ್ಲಿ ದೀಪ ಹಚ್ಚಿದ ನಂತರ ತಾಂಡಾದ ನಾಯಕ ಅಥವಾ ಹಿರಿಯ ವ್ಯಕ್ತಿ ಮನೆಯವರನ್ನು ಸಮಾಧಾನಪಡಿಸಿ ಯಥಾವತ್ತಾಗಿ ಜೀವನ ನಡೆಸಿಕೊಂಡು ಹೋಗಿ ಎಂದು ಮಾರ್ಗದರ್ಶನ ಮಾಡುತ್ತಾನೆ. ಇದನ್ನು 'ಸೀಕದೇರೋ' ಎಂದು ಕರೆಯುತ್ತಾರೆ. ಇಂದಿನಿಂದ ಮೂರನೆಯ ದಿನ 'ದಾಡೋ'(ದಿನ) ಮಾಡೋಣವೆಂದು ಹೇಳಿ ತಮ್ಮ ತಮ್ಮ ಮನೆಗೆ ತೆರಳುತ್ತಾರೆ. ಮೃತನ ಮನೆ ಯವರು ಭೂಕ್ಯಾ ಪಂಗಡದವರಾದರೆ ಜಾತ್ ಪಂಗಡದ ಸಂಬಂಧಿಕರು ಮೃತನ ಮನೆಯವರನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಸ್ನಾನ ಮಾಡಿಸಿ ಊಟ ಮಾಡಿಸುತ್ತಾರೆ. ಅಲ್ಲದೇ ಮೃತನ ಮನೆಗೆ ಊಟವನ್ನು ತಂದುಕೊಡುತ್ತಾರೆ. ಅಂದು ಸಾಯಂಕಾಲ ತಾಂಡಾದ ಇಬ್ಬರು ಹಿರಿಯ ವ್ಯಕ್ತಿಗಳು ಶವ ಸಂಸ್ಕಾರವಾದ ಸ್ಥಳಕ್ಕೆ ಹೋಗಿ ಸ್ವಲ್ಪ ಜಾಗವನ್ನು ಅಥವಾ ಬೂದಿಯನ್ನು ಸಮಗೊಳಿಸಿ ಬರುತ್ತಾರೆ. ರಾತ್ರಿ ಮುಖಂಡರು ಮೃತನ ಮನೆಗೆ ಬಂದು ತಡರಾತ್ರಿಯವರೆಗೆ ಮಾತನಾಡಿ ಮಲಗುತ್ತಾರೆ.

**ದಾಡೋ ಕರೇರೋ:** ಮರಣ ಹೊಂದಿದ ಮೂರನೆಯ ದಿವಸ ಮಾಡುವ ತಿಥಿಕಾರ್ಯವನ್ನು 'ದಾಡೋ ಕರೇರೋ' ಎಂದು ಕರೆಯುತ್ತಾರೆ. ಶವಸಂಸ್ಕಾರವಾದ ಮೂರನೆಯ ದಿನ ತಾಂಡಾದ ಹಿರಿಯರು ತಾಂಡಾದ ಹೊರಗಡೆ ಕೆರೆ ಭಾವಿ, ಹೊಳೆ ಅಥವಾ ನೀರಿನ ಹಾಗೂ ನೆರಳಿನ ಸೌಲಭ್ಯವಿರುವ ಕಡೆ ಒಲೆಯನ್ನು ಹೂಡಿ ಸಜ್ಜೆ ಅಥವಾ ಗೋಧಿ ಹಿಟ್ಟಿನ ದಪ್ಪ ದಪ್ಪ ಚಪಾತಿಯನ್ನು ಮಾಡಿ ಬೆಂಕಿಯ ಮೇಲೆ ಬೇಯಿಸುತ್ತಾರೆ. ಹೀಗೆ ಬೆಂದ ಚಪಾತಿಗಳನ್ನು ಬೆಲ್ಲದೊಂದಿಗೆ ಕಿವುಚಿ 'ಚೂರಮೊ' ತಯಾರಿಸುತ್ತಾರೆ. ಇನ್ನೊಂದೆಡೆ ಇಬ್ಬರು ಹಿರಿಯ ವ್ಯಕ್ತಿಗಳು ಕೈಯಲ್ಲಿ ಕೊಡಲಿ ಹಾಗೂ ಹಾಲನ್ನು ತೆಗೆದುಕೊಂಡು ಶವಸಂಸ್ಕಾರವಾದ ಸ್ಥಳಕ್ಕೆ ಹೋಗಿ ಮೊದಲೇ ಬೂದಿಯನ್ನು ಸಮಗೊಳಿಸಿದ ಜಾಗದಲ್ಲಿ ಹಾಲನ್ನು ಚೆಲ್ಲಿ ಬೂದಿಯ ಮೇಲೆ ಮೂಡಿದ ಹೆಜ್ಜೆಯನ್ನು ಗಮನಿಸಿ ತಿಥಿ ಕಾರ್ಯ ಮಾಡುತ್ತಿರುವ ಸ್ಥಳಕ್ಕೆ ಬರುತ್ತಾರೆ. ಅಲ್ಲಿ ಒಲೆಯ ಪೂಜೆ ಮಾಡಿದ ನಂತರ ನೆರೆದ ಎಲ್ಲರಿಗೂ ಸಾಲಾಗಿ ಕೂರಿಸಿ ಮೊದಲು ಮನೆಯವರಿಗೆ ಚೂರ್ಮೊದ ಉಂಡಿಗಳನ್ನು ಹಂಚುತ್ತಾರೆ. ನಂತರ ಎಲ್ಲರಿಗೂ ಚೂರ್ಮೊದ ಉಂಡಿಗಳನ್ನು ಹಂಚಲಾಗುತ್ತದೆ. ಆಗ ಶವ ಸಂಸ್ಕಾರ ಸ್ಥಳಕ್ಕೆ ಹೋಗಿ ಹೆಜ್ಜೆಯನ್ನು ಗುರುತಿಸಿ ಬಂದ ಇಬ್ಬರು ಹಿರಿಯ ವ್ಯಕ್ತಿಗಳು ಬೂದಿಯಲ್ಲಿ ಯಾವ ಪ್ರಾಣಿಯ ಹೆಜ್ಜೆ ಮೂಡಿರುತ್ತದೆಯೋ ಮೃತನು ಮುಂದಿನ ಜನ್ಮದಲ್ಲಿ ಆ ಪ್ರಾಣಿಯಾಗಿ ಜನಿಸುತ್ತಾನೆ ಎಂದು ಹೇಳುತ್ತಾರೆ. ತಾಂಡಾದ ನಾಯಕನು ಮನೆಯವರಿಗೆ ಸಮಾಧಾನ ಹೇಳುತ್ತಾನೆ. ಮೃತನ ಮನೆಯವರು ಮೊದಲು ಚೂರಮೋದ ತುತ್ತನ್ನು ಬಾಯಿಗೆ ಹಾಕಿಕೊಂಡ ನಂತರ ಎಲ್ಲರೂ ಚೂರಮೋ ತಿನ್ನುತ್ತಾರೆ. ನಂತರ ಕೈಕಾಲು ಮುಖ ತೊಳೆದು ಮನೆಗೆ ಹೋಗುತ್ತಾರೆ. ಒಂದು ವೇಳೆ ಶನಿವಾರ ಅಥವಾ ರವಿವಾರ ತೀರಿಕೊಂಡರೆ ಮೂರನೇಯ ದಿನ ಮಾಡುವ ತಿಥಿ ಕಾರ್ಯವನ್ನು ಅಂದೇ ಮಾಡುತ್ತಾರೆ.

**ಖರಾಯೇರೋ ಪರಾಯೇರೋ:** ತಿಥಿ ಮಾಡುವ ದಿನವೇ ಈ ಕಾರ್ಯಕ್ರಮ ಜರುಗುತ್ತದೆ. ಭೂಕ್ಯಾ ಪಾಡಾದವರು ತೀರಿಕೊಂಡರೆ ಜಾತ್ ಪಾಡಾದ ಸಂಬಂಧಿಕರು, ಜಾತ್ ಪಾಡಾದವರು ತೀರಿಕೊಂಡರೆ ಭೂಕ್ಯಾ ಪಾಡಾದ ಸಂಬಂಧಿಕರು ತಮ್ಮ ಖರ್ಚಿನಲ್ಲಿ ಕುರಿಯನ್ನು ತಂದು ಬಲಿಕೊಟ್ಟು, ಮೃತರ ಮನೆಯಲ್ಲಿ ಅಡಿಗೆ ಮಾಡಿಸುತ್ತಾರೆ. ನಂತರ ಮೃತರ ಮನೆಯ ಹಿರಿಯರಿಗೆ ಸಾರಾಯಿ ಕುಡಿಸಿ ಮಾಂಸದೂಟವನ್ನು ಮಾಡಿಸುತ್ತಾರೆ. ಹೀಗೆ ತಾಂಡಾದ ನಾಯಕ, ಕಾರಭಾರಿ, ಡಾವಸಾಣ ಎಲ್ಲರೂ ಮದ್ಯ ಸೇವಿಸಿ ಊಟ ಮಾಡುತ್ತಾರೆ. ಇದನ್ನು 'ಹಾಡ ಭಾಂದೇರೋ' ಅಥವಾ 'ಖರಾಯೇರೋ ಪರಾಯೇರೋ' ಎಂದು ಕರೆಯುತ್ತಾರೆ.

ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ತಿಥಿ ಮಾಡುವ ದಿನವೇ ಒಂದು ಹೋತವನ್ನು ಬಲಿಕೊಟ್ಟು, ಅದರ ಮಾಂಸವನ್ನು ಹಲವಾರು ಭಾಗಗಳನ್ನಾಗಿ ವಿಂಗಡಿಸುತ್ತಾರೆ. ತಾಂಡಾದ ಪ್ರತಿಯೊಂದು ಮನೆಗಳಿಗೂ ತಲಾ ಒಂದೊಂದು ಭಾಗ ನೀಡುತ್ತಾರೆ. ಈ ಪದ್ಧತಿ ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ಗೋಚರಿಸುವುದಿಲ್ಲ. ಉಳಿದ ಮಾಂಸವನ್ನು

ಮೃತನ ಮನೆಯಲ್ಲಿಯೇ ಬೇಯಿಸಿ ಅಡುಗೆ ಮಾಡುತ್ತಾರೆ. ಅಲ್ಲದೇ ಹೋತದ ರಕ್ತದಿಂದ ಸಳೋಯಿ ಮಾಡಿ ಮನೆಯವರಿಗೆ ಸಾರಾಯಿ ಕುಡಿಸಿ ಊಟ ಮಾಡಿಸುತ್ತಾರೆ ಇದನ್ನು ರಂಗಾರೆಡ್ಡಿ ಜಿಲ್ಲೆಯಲ್ಲಿ 'ಮುಂಡೋ ಭೋಡಾಯೇರೋ' ಎಂದು ಕರೆಯುತ್ತಾರೆ.

**ಬಾರೋ ತೇರೋ:** ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ಮರಣ ಹೊಂದಿದ ಹನ್ನೆರಡನೇ ದಿನಕ್ಕೆ ಇಬ್ಬರು ವಿಧವೆಯರು ಮೃತನ ಮನೆಯ ಮುಂದೆ ಅಕ್ಕಿಯನ್ನು ಬೇಯಿಸಿ ಅದರ ಗಂಜಿಯನ್ನು ಒಂದು ತಾಟಿನಲ್ಲಿ ತೆಗೆಯುತ್ತಾರೆ. ಅನ್ನಕ್ಕೆ ಬೆಲ್ಲ ಹಾಗೂ ತುಪ್ಪವನ್ನು ಬೆರಸಿ ಊಟ ಮಾಡುತ್ತಾರೆ. ಗಂಜಿ ತುಂಬಿದ ತಾಟು ಹಾಗೂ ನೀರು ತುಂಬಿಸಿದ ಲೋಟವನ್ನು ಮನೆಯ ಮುಂದಿಟ್ಟು ಅದರ ಮೇಲೆ ಬಿದರಿನ ಮರ(ಬುಟ್ಟಿ)ದಿಂದ ಮುಚ್ಚುತ್ತಾರೆ. ಮರುದಿನ ಮುಂಜಾನೆ ಗಂಜಿಯಲ್ಲಿ ಮೂಡಿರುವ ಹೆಜ್ಜೆಯನ್ನು ಗಮನಿಸುತ್ತಾರೆ. ಯಾವ ಪ್ರಾಣಿಯ ಹೆಜ್ಜೆ ಮೂಡಿರುತ್ತದೆಯೋ ಮುಂದಿನ ಜನ್ಮದಲ್ಲಿ ಮೃತನು ಆ ಪ್ರಾಣಿಯಾಗಿ ಹುಟ್ಟುತ್ತಾನೆ ಎಂದು ನಂಬುತ್ತಾರೆ. ಲೋಟದಲ್ಲಿಯ ನೀರು ಕಡಿಮೆಯಾಗಿದ್ದರೆ ಆತ್ಮವು ನೀರು ಕುಡಿದು, ಪ್ರಾಣಿಯ ರೂಪ ಪಡೆದು, ಗಂಜಿಯಲ್ಲಿ ತಿರುಗಾಡಿ ಹೋಗಿದೆ ಎಂಬ ಪುನರ್ಜನ್ಮದ ಪರಿಕಲ್ಪನೆಯನ್ನು ಲಂಬಾಣಿಗರು ಇಂದಿಗೂ ನಂಬುತ್ತಾರೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಈ ಕರ್ಮವನ್ನು ಮರಣ ಹೊಂದಿದ ಒಂಬತ್ತನೆಯ ದಿನಕ್ಕೆ ಮಾಡಲಾಗುತ್ತದೆ. ಇದನ್ನು 'ಮಾಂಡ ಭೇಳೀರೊ' ಎಂದು ಕರೆಯುತ್ತಾರೆ. ವಿವಾಹ ಸಂಸ್ಕಾರಕ್ಕೆ ಒಳಗಾಗದೇ ಮೃತಪಟ್ಟವರ ಶವ ಸಂಸ್ಕಾರವಾದ ಜಾಗವನ್ನು ಸಮಗೊಳಿಸಿ ಹಾಲು ಹಾಕುವದನ್ನು ಬಿಟ್ಟರೆ ಇನ್ನಾವುದೇ ಮರಣೋತ್ತರ ಸಂಸ್ಕಾರಗಳನ್ನು ಮಾಡುವುದಿಲ್ಲ. ಈ ರೀತಿಯಾಗಿ ಮೂರು ಜಿಲ್ಲೆಯ ಲಂಬಾಣಿಗರು ವಿಶಿಷ್ಟ ರೀತಿಯಿಂದ ಅಂತ್ಯೇಷ್ಟಿ ಸಂಸ್ಕಾರವನ್ನು ನೆರವೇರಿಸುತ್ತಿರುವದು ಇಂದಿಗೂ ಗೋಚರಿಸುತ್ತದೆ.

### ಲಂಬಾಣಿಗರ ವಿವಾಹದ ಪ್ರಕಾರಗಳು

ಲಂಬಾಣಿಗರಲ್ಲಿ ಹಲವಾರು ಪ್ರಕಾರದ ವಿವಾಹದ ಪದ್ಧತಿಗಳು ಜಾರಿಯಲ್ಲಿವೆ. ವಿಧವಾ ವಿವಾಹ, ವಿಚ್ಛೇದಿತ ವಿವಾಹ, ಅತ್ತಿಗೆ ಮೈದುನರ ವಿವಾಹ, ನಾದಿನಿ ವಿವಾಹ, ಬಹುಪತ್ನಿತ್ವ ವಿವಾಹ ಪದ್ಧತಿಗಳು ಲಂಬಾಣಿಗರಲ್ಲಿ ಗೋಚರಿಸುತ್ತವೆ. ಸಮಾಜದಲ್ಲಿಯ ಆರ್ಥಿಕ ಸ್ಥಿತಿಗತಿಗಳು, ಸಾಮಾಜಿಕ ಹಿನ್ನಲೆ ಹಾಗೂ ಪಾರಂಪರಿಕ ದೃಷ್ಟಿಕೋನ ಸಾಮಾಜಿಕ ನೀತಿ ನಿಯಮ ಮತ್ತು ಲೋಕರೂಢಿ ಗಳಿಂದಾಗಿ ಈ ವಿವಾಹದ ಪದ್ಧತಿಗಳು ಬೆಳದು ಬಂದಿರುವುದು ಕಂಡುಬರುತ್ತದೆ.

**೧. ವಿಧವಾ ವಿವಾಹ:** ಪತಿ ಗತಿಸಿದ ನಂತರ ಮಹಿಳೆಯು ಮತ್ತೊಂದು ವಿವಾಹವಾಗುವ ಕ್ರಮವನ್ನು ವಿಧವಾ ವಿವಾಹ ಎನ್ನಲಾಗುತ್ತದೆ. ಲಂಬಾಣಿ ಸಮಾಜದಲ್ಲಿ ಆರಂಭದ ಕಾಲದಿಂದಲೂ ವಿಧವಾ ವಿವಾಹಕ್ಕೆ ಸಾಮಾಜಿಕ ಮನ್ನಣೆ ನೀಡಲಾಗಿದೆ. ಮಧ್ಯ ವಯಸ್ಸಿನಲ್ಲಿ ಗಂಡ ತೀರಿದ ಬಳಿಕ ಮಹಿಳೆಗೆ ಮತ್ತೋರ್ವ ಪುರುಷನೊಂದಿಗೆ ಮರುವಿವಾಹ ಮಾಡಿಕೊಡುತ್ತಾರೆ. ಆದರೆ ಅವಿವಾಹಿತ ಪುರುಷನೊಂದಿಗೆ ವಿಧವೆಯು ವಿವಾಹ ಮಾಡಿಕೊಳ್ಳುವದನ್ನು ಲಂಬಾಣಿಗರು ನಿರಾಕರಿಸುತ್ತಾರೆ. ವಿಧವಾ ವಿವಾಹವು ಸಾಮಾನ್ಯವಾಗಿ ವಿಧವೆ ಮತ್ತು ವಿಧುರರ ಮಧ್ಯ ನಡೆಯುವದನ್ನು

ಸಮಾಜವು ಒಪ್ಪಿಕೊಳ್ಳುತ್ತದೆ. ಆದರೆ ವಿಧುರನೊಬ್ಬನು ಅವಿವಾಹಿತ ಕನ್ಯೆಯನ್ನು ಶಾಸ್ತ್ರೋಕ್ತವಾಗಿ ವಿವಾಹವಾಗುವುದನ್ನು ಲಂಬಾಣಿಗರು ಒಪ್ಪಿಕೊಳ್ಳುತ್ತಾರೆ.

೨. **ವಿಚ್ಛೇದಿತ ವಿವಾಹ:** ಸಾಮಾನ್ಯವಾಗಿ ಲಂಬಾಣಿಗರಲ್ಲಿ ವಿವಾಹ ವಿಚ್ಛೇದನಕ್ಕೆ ಆಸ್ಪದ ಇಲ್ಲ. ಗಂಡ ಹೆಂಡತಿಯ ಮಧ್ಯ ವಿರಸ ಬಂದು ಅವರು ಜಗಳವಾಡಿಕೊಂಡು ದೂರವಾದಾಗ ತಾಂಡಾದ ಹಿರಿಯರು ಅವರಿಬ್ಬರನ್ನು, ಅವರ ತಂದೆ ತಾಯಿಗಳನ್ನು ಕರೆದು ಬುದ್ಧಿ ಹೇಳುತ್ತಾರೆ. ಕೂಡಿ ಬಾಳಲು ಅಸಾಧ್ಯ ಎಂಬ ಪರಿಸ್ಥಿತಿ ಎದುರಾದಾಗ ಮಾತ್ರ ವಿವಾಹ ವಿಚ್ಛೇದನ ಪ್ರಕ್ರಿಯ ನಡೆಯುತ್ತದೆ. ಹೀಗೆ ವಿಚ್ಛೇದಿತ ಮಹಿಳೆ ಯಾವುದೇ ಕಾರಣಕ್ಕೂ ಅವಿವಾಹಿತ ಪುರುಷನನ್ನು ವಿವಾಹವಾಗುವಂತಿಲ್ಲ. ಈಗಾಗಲೇ ವಿವಾಹವಾಗಿ ಹೆಂಡತಿ ತೀರಿಹೋಗಿದ್ದರೆ ಅಥವಾ ಯಾವುದೋ ಕಾರಣಕ್ಕೆ ಹೆಂಡತಿ ದೂರವಾಗಿದ್ದರೆ ಅಂತಹ ಪುರುಷನು ವಿಚ್ಛೇದಿತ ಮಹಿಳೆಯೊಂದಿಗೆ ವಿವಾಹ ವಾಗುತ್ತಾನೆ. ಹೀಗೆ ಮರು ವಿವಾಹವಾಗುವ ವಿಚ್ಛೇದಿತ ಮಹಿಳೆಯು ಮೊದಲನೇ ಗಂಡನಿಗೆ 'ಮಾಮಲೋ' ರೂಪದಲ್ಲಿ ವಿಚ್ಛೇದಿತ ಪರಿಹಾರವನ್ನು ನೀಡಬೇಕಾಗುತ್ತದೆ. ಅಲ್ಲದೇ ಪಂಚಾಯತಿಯ ಖರ್ಚನ್ನು ಕೂಡಾ ಭರಿಸಬೇಕಾಗುತ್ತದೆ. ಒಂದು ವೇಳೆ ವಿಚ್ಛೇದಿತ ಪುರುಷನು ಮತ್ತೊರ್ವ ಮಹಿಳೆಯೊಂದಿಗೆ ವಿವಾಹವಾದರೆ ಅವನು ತನ್ನ ಮೊದಲ ಪತ್ನಿಗೆ ಪರಿಹಾರದ ರೂಪದಲ್ಲಿ ಹಣವನ್ನು ಕೊಡಬೇಕು ಅಲ್ಲದೇ ಪಂಚಾಯತಿಯ ಖರ್ಚನ್ನು ಕೂಡಾ ಭರಿಸಬೇಕಾಗುತ್ತದೆ.

ವಿಧವಾ ವಿವಾಹ ಮತ್ತು ವಿಚ್ಛೇದಿತ ವಿವಾಹಗಳು ಲಂಬಾಣಿಗರಲ್ಲಿ ತುಂಬಾ ಸರಳವಾಗಿ ನಡೆಯುತ್ತವೆ. ವಿಧವೆಯನ್ನು ತಾಂಡಾದ ನಾಯಕ ಹಾಗೂ ಹಿರಿಯರ ಸಮ್ಮುಖದಲ್ಲಿ ವಿವಾಹವಾಗ ಬಯಸುವ ಪುರುಷನು ಆಕೆ ಈಗಾಗಲೇ ವರ್ಜಿಸಿರುವ ಮಾಂಗಲ್ಯ ಸೂಚಕ ಪರಿಕರಗಳಾದ ಚೂಡಿ, ಘುಗರಿ, ಛಾಟಿಯಾ ಮುಂತಾದ ವಸ್ತುಗಳನ್ನು ತಾನು ಮದುವೆಯಾಗಬಯಸುವ ವಿಧವೆಗೆ ನೀಡಿ ವಿವಾಹವಾಗಬೇಕು. ವಿಚ್ಛೇದಿತ ಮಹಿಳೆಯಾಗಿದ್ದರೆ ತನ್ನ ಮೊದಲ ಪತಿಯ ಎಲ್ಲಾ ಮಾಂಗಲ್ಯ ಸೂಚಕ ಪರಿಕರಗಳು ಅವಳ ಮೈಮೇಲೆ ಇರುವದರಿಂದ ಮತ್ತೊಮ್ಮೆ ಇದನ್ನು ಕೊಡುವ ಅವಶ್ಯಕತೆ ಇರುವದಿಲ್ಲ.

೩. **ಅತ್ತಿಗೆ ಮೈದುನರ ವಿವಾಹ:** ಒಂದು ಕುಟುಂಬದಲ್ಲಿ ಅಣ್ಣನಾದವನು ಅಕಾಲ ಮೃತ್ಯುವಿಗೀಡಾ ದಾಗ ಅವನ ಪತ್ನಿಯಾದ ಅತ್ತಿಗೆಯು ಅನ್ಯ ಪುರುಷರ ಜೊತೆಗೆ ಅನೈತಿಕ ಸಂಬಂಧ ಹೊಂದ ಬಾರದೆಂದು, ಅವಳಿಗೆ ಏಕಾಂಗಿತನದ ಭಯ ಕಾಡಬಾರದು, ಅವಳ ಮೇಲೆ ಅನ್ಯರು ಕಾಕದೃಷ್ಠಿ ಬೀರಬಾರದೆಂದು, ತಾನು ವಿಧವೆ ಎಂಬ ಹಣೆ ಪಟ್ಟಿಯನ್ನು ಹೊರಬಾರದೆಂದು, ಮಕ್ಕಳಾಗದಿದ್ದರೆ ಮಕ್ಕಳಿಲ್ಲ ಎಂಬ ಕೊರಗು ಕಾಡಬಾರದೆಂದು, ಹೀಗೆ ಮುಂತಾದ ಕಾರಣಗಳಿಂದಾಗಿ ತಮ್ಮನಾದವನು ತನ್ನ ಅತ್ತಿಗೆಯನ್ನು ವಿವಾಹವಾಗುವ ಕ್ರಮವು ಲಂಬಾಣಿಗರಲ್ಲಿ ಚಾಲ್ತಿಯಲ್ಲಿತ್ತು. ಆದರೆ ಒಂದು ವೇಳೆ ಕಿರಿಯ ಸಹೋದರ ಗತಿಸಿಹೋದರೆ ಅವಳ ಪತ್ನಿಯನ್ನು ಅಣ್ಣನು ವಿವಾಹವಾಗಲು ಬರುವುದಿಲ್ಲ.

ಅತ್ತಿಗೆ ಮೈದುನರ ವಿವಾಹವು ಬಲವಂತವಾಗಿ ಮಾಡುವಂತಹದಲ್ಲ. ಅತ್ತಿಗೆ ಮತ್ತು ಮೈದುನ ಇಬ್ಬರಿಗೆ ಪರಸ್ಪರ ಒಪ್ಪಿಗೆ ಇದ್ದರೆ ಮಾತ್ರ ಇಂತಹ ವಿವಾಹಗಳು ನಡೆಯುತಿದ್ದವು. ಪರಸ್ಪರ ಒಪ್ಪಿಗೆ ಇಲ್ಲದಿದ್ದರೆ ಅತ್ತಿಗೆಯು ಸಮಾಜದೊಳಗೆ ತನಗಿಷ್ಟವಾದ ಪುರುಷನನ್ನು ವರಿಸಬಹುದು. ಆಗ ಅವಳಿಗೆ ಗಂಡನ ಆಸ್ತಿಯಲ್ಲಿ ಹಕ್ಕಿರಲಾರದು. ಮರುವಿವಾಹವಾಗದೆಯೂ ಕೂಡಾ ಅವಳು ಗತಿಸಿ ಹೋದ ತನ್ನ ಗಂಡನ ಪರಿವಾರದೊಂದಿಗೆ ವಿಧವಾ ಜೀವನವನ್ನು ದೂಡಬಹುದು. ಆದರೆ ಇಂದಿನ ಈ ಆಧುನಿಕ ಯುಗದಲ್ಲಿ ಅತ್ತಿಗೆ ಮೈದುನರ ವಿವಾಹ ಪದ್ಧತಿ ಮೂರು ಜಿಲ್ಲೆಯ ಲಂಬಾಣಿಗರಲ್ಲಿ ಗೋಚರಿಸುತ್ತಿಲ್ಲ.

**೪. ನಾದಿನಿ ವಿವಾಹ:** ಸಹೋದರಿ ಬಹುಪತ್ನಿತ್ವಕ್ಕೆ ಸಂಬಂಧಿಸಿದ ಒಂದು ವಿಶಿಷ್ಟ ಆಚರಣೆಯನ್ನು ನಾದಿನಿ ವಿವಾಹ ಅಥವಾ ಜಾಯಭಗಿನೀ ವಿವಾಹ ಎನ್ನಲಾಗಿದೆ. ನಾದಿನಿ ವಿವಾಹ ಪದ್ಧತಿಯ ಕ್ರಮದಂತೆ ಲಂಬಾಣಿಗರು ಗತಿಸಿದ ತನ್ನ ಪತ್ನಿಯ ಸಹೋದರಿಯನ್ನು ವಿವಾಹವಾಗುತ್ತಾರೆ. ಮೊದಲನೆಯ ಮಗಳು ವಿವಾಹದ ನಂತರ ಮರಣ ಹೊಂದಿದರೆ ಅಥವಾ ಅವಳಿಗೆ ಸಂತಾನ ಭಾಗ್ಯವಿಲ್ಲದಿದ್ದರೆ ತಂದೆ ತಾಯಿಗಳು ಆಕೆಯ ಗಂಡನಿಗೆ ತಮ್ಮ ಎರಡನೇ ಮಗಳನ್ನು ಕೊಟ್ಟು ವಿವಾಹ ಮಾಡುವ ಕ್ರಮ ಲಂಬಾಣಿಗರಲ್ಲಿ ಗೋಚರಿಸುತ್ತದೆ.

**೫. ಬಹುಪತ್ನಿತ್ವ ವಿವಾಹ:** ವಿವಾಹವಾದ ದಂಪತಿಗಳಿಗೆ ಹಲವಾರು ವರ್ಷಗಳು ಮಕ್ಕಳಾಗದೇ ಹೋದರೆ, ಸಂತಾನ ಪ್ರಾಪ್ತಿಗಾಗಿ ಇನ್ನೊಂದು ವಿವಾಹವನ್ನು ಮಾಡಿಕೊಳ್ಳುವ ಅವಕಾಶವಿದೆ. ಹೀಗೆ ಒಬ್ಬ ಪುರುಷನು ಒಬ್ಬರಿಗಿಂತ ಹೆಚ್ಚು ಜನ ಮಹಿಳೆಯರನ್ನು ವಿವಾಹವಾಗುವ ಕ್ರಮ ಲಂಬಾಣಿಗರಲ್ಲಿ ಕಾಣಸಿಗುತ್ತದೆ. ಲಂಬಾಣಿಗರಿಗೆ ಪುತ್ರಸಂತಾನದ ವ್ಯಾಮೋಹ ಇರುವದು ಕಂಡುಬರುತ್ತದೆ. ಪುತ್ರಸಂತಾನ ಭಾಗ್ಯ ಪ್ರಾಪ್ತವಾದರೆ ವಂಶೋದ್ಧಾರವಾಗುತ್ತದೆ. ಅಲ್ಲದೇ ಸಮಾಜದಲ್ಲಿ ಒಳ್ಳೆಯ ಗೌರವ ಸಿಗುತ್ತದೆ ಎಂಬ ಭಾವನೆ ಅವರಲ್ಲಿದೆ. ಗಂಡು ಮಗು ಜನಿಸಿದಾಗ ದೇವಾಲಯದಲ್ಲಿರುವ 'ನಗಾರಿ'ಯನ್ನು ಜೋರಾಗಿ ಬಾರಿಸುತ್ತಾರೆ. ಹೀಗೆ ಬಾರಿಸುವದರಿಂದ ಇಡೀ ತಾಂಡಾದ ಜನರಿಗೆ ಗಂಡು ಮಗು ಹುಟ್ಟಿರುವ ಸುದ್ದಿಯು ತಲುಪುತ್ತದೆ. ಈ ಕ್ರಮ ಹಿಂದಿನಿಂದಲೂ ಲಂಬಾಣಿಗರಲ್ಲಿ ಜಾರಿಯಲ್ಲಿದೆ. ಹೆಣ್ಣು ಮಗು ಜನಿಸಿದರೆ ನಗಾರಿಯನ್ನು ಬಾರಿಸುವದಿಲ್ಲ. ಹೀಗೆ ಪುತ್ರಸಂತಾನದ ವ್ಯಾಮೋಹವಿರುವ ಲಂಬಾಣಿಗರು ಪುತ್ರ ಸಂತಾನದ ಪ್ರಾಪ್ತಿಗಾಗಿಯೇ ಬಹುಪತ್ನಿತ್ವ ಪದ್ಧತಿಯನ್ನು ಆಚರಿಸುವ ಕ್ರಮ ಕಂಡುಬರುತ್ತದೆ. ಆದರೆ ಇಂದಿನ ಆಧುನಿಕ ಯುಗದಲ್ಲಿ ಬಹುಪತ್ನಿತ್ವ ಪದ್ಧತಿಯು ಆಚರಣೆಯಲ್ಲಿರುವದು ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತದೆ. ಹೀಗೆ ವಿವಾಹದ ಎಲ್ಲಾ ಪ್ರಕಾರಗಳು ಮೂರು ಜಿಲ್ಲೆಯ ಲಂಬಾಣಿಗರಲ್ಲಿ ಗೋಚರಿಸುತ್ತವೆ.

## ಕೌಟುಂಬಿಕ ವ್ಯವಸ್ಥೆ

ಲಂಬಾಣಿಗರಲ್ಲಿ ಕುಟುಂಬವು ಒಂದು ಸಾರ್ವತ್ರಿಕವಾದ ಸಂಸ್ಥೆಯಾಗಿದೆ. ಕುಟುಂಬವು ಅತ್ಯಂತ ಸರಳವಾದ ಹಾಗೂ ಸೂಕ್ಷ್ಮವಾದ ಸಮಾಜವಿದ್ದಂತೆ. ಕುಟುಂಬವಿಲ್ಲದೇ ಸಮಾಜವಿಲ್ಲ.

ಅದು ಲಂಬಾಣಿಗರ ಸಾಮಾಜಿಕ ಜೀವನದ ತಳಹದಿಯಾಗಿದೆ. ಕುಟುಂಬವೇ ಮಗುವಿನ ಪ್ರಪ್ರಥಮ ಸಾಮಾಜಿಕ ಪರಿಸರ ಹಾಗೂ ಸಮೂಹ. ನವಜಾತ ಶಿಶುವಿಗೆ ಸಂಸ್ಕಾರ ನೀಡುವುದು, ಶಿಕ್ಷಣ ಕೊಡುವುದು, ಅವನನ್ನು ಉತ್ತಮ ನಾಗರಿಕನನ್ನಾಗಿ ರೂಪಿಸುವ ಹೊಣೆ ಕುಟುಂಬದ್ದಾಗಿದೆ. ಕುಟುಂಬದಲ್ಲಿ ಮಾನವ ಸಹಜವಾದ ಭಾವನೆಗಳ ಆವಿಷ್ಕಾರವಾಗುವುದು. ದಾಂಪತ್ಯ ಪ್ರೇಮ, ಸಂತಾನೋತ್ಪತ್ತಿ, ಮಾತೃಪ್ರೇಮ, ಪಿತೃವಾತ್ಸಲ್ಯ, ಮಕ್ಕಳ ಪಾಲನೆ ಪೋಷಣೆ, ಭ್ರಾತೃಪ್ರೇಮ, ಸಹಕಾರ, ಸ್ನೇಹ, ಅನುಕಂಪ, ತ್ಯಾಗ ಮುಂತಾದ ಭಾವನೆಗಳು ಹಾಗೂ ಗುಣಾದರ್ಶಗಳು ಕುಟುಂಬಕ್ಕೆ ಆಧಾರ ಮಾತ್ರವಾಗಿರದೇ ಅದಕ್ಕೊಂದು ಮೆರುಗನ್ನಿತ್ತಿವೆ. ಕುಟುಂಬದ ಪ್ರತಿಷ್ಠೆಯನ್ನು ಕಾಯ್ದುಕೊಳ್ಳುವುದು, ಸುಖ-ದುಃಖಗಳಲ್ಲಿ ಪರಸ್ಪರ ಪಾಲ್ಗೊಳ್ಳುವುದು, ಸಾಮೂಹಿಕ ಒಳಿತಿಗಾಗಿ ಹೋರಾಡುವುದು ಇವೆಲ್ಲವು ಕುಟುಂಬ ಜೀವನದಲ್ಲಿ ಕಾಣುವ ವಿಶೇಷ ಭಾವನಾತ್ಮಕ ಕ್ರಿಯೆಗಳು. ಹೀಗಾಗಿ ಕುಟುಂಬದ ಬೇರುಗಳು ಲಂಬಾಣಿಗರ ಸಾಮಾಜಿಕ ವ್ಯವಸ್ಥೆಯಲ್ಲಿ ಆಳವಾಗಿ ಸೇರಿಕೊಂಡಿವೆ.

ಸಾಮಾನ್ಯವಾಗಿ ಲಂಬಾಣಿಗರಲ್ಲಿ ವಿಭಕ್ತ ಕುಟುಂಬಗಳ ಪ್ರಮಾಣವೇ ಹೆಚ್ಚು. ಅಲ್ಲಲ್ಲಿ ಅವಿಭಕ್ತ ಕುಟುಂಬಗಳು ಕೂಡಾ ಗೋಚರಿಸುತ್ತವೆ. ಆದರೆ ಸಂಖ್ಯಾತ್ಮಕವಾಗಿ ಈ ಕುಟುಂಬಗಳ ಸಂಖ್ಯೆ ತೀರಾ ಕಡಿಮೆ ಇರುವದು ಕಂಡುಬರುತ್ತದೆ. ವಿಭಕ್ತ ಕುಟುಂಬದಲ್ಲಿ ವಿವಾಹಿತ ಮಕ್ಕಳು ತಮ್ಮ ತಂದೆ ತಾಯಿಯರನ್ನು ಬಿಟ್ಟು ತಮ್ಮದೇ ಆದ ಪ್ರತ್ಯೇಕ ಕುಟುಂಬವನ್ನು ಸ್ಥಾಪಿಸಿಕೊಳ್ಳುವರು. ಲಂಬಾಣಿಗರಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದೆ. ಲಂಬಾಣಿ ಸಮಾಜದಲ್ಲಿ ವಂಶ ಪರಂಪರೆಯನ್ನು ತಂದೆಯಿಂದ ಮಗನಿಗೆ ಪರಿಗಣಿಸಲಾಗುವದು. ಆಸ್ತಿ ಅಧಿಕಾರ ಮತ್ತು ವಂಶದ ಕೀರ್ತಿಯ ಉತ್ತರಾಧಿಕಾರ ತಂದೆಯಿಂದ ಹಿರಿಯ ಮಗನಿಗೆ ಬರುವುದು. ತಂದೆಯ ನಂತರ ಕುಟುಂಬದ ಹಿರಿಯ ಮಗನೇ ಸಕಲ ಸೊತ್ತುಗಳ ವಾರಸುದಾರ. ಲಂಬಾಣಿಗರ ಕೌಟುಂಬಿಕ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಪ್ರಧಾನವಾದ ಹಕ್ಕು ಮತ್ತು ಸ್ವಾತಂತ್ರ್ಯವಿರುವುದಿಲ್ಲ. ಮನೆಯಲ್ಲಿ ನಡೆಯುವ ಕಾರ್ಯಕಲಾಪಗಳನ್ನು ಕರ್ತಾ ಎನಿಸಿಕೊಂಡಿರುವ ಹಿರಿಯ ವ್ಯಕ್ತಿಯೇ ನಿರ್ವಹಿಸುತ್ತಾನೆ. ತಂದೆಗೆ ವಯಸ್ಸಾದಲ್ಲಿ ಅಥವಾ ಅನಾರೋಗ್ಯದಿಂದ ಬಳಲುತ್ತಿದ್ದರೆ ಹಿರಿಯ ಅಣ್ಣನೇ ತಂದೆಯ ಸ್ಥಾನದಲ್ಲಿ ಮನೆಯ ಕರ್ತಾನಾಗಿ ಕಾರ್ಯನಿರ್ವಹಿಸುತ್ತಾನೆ. ಇಲ್ಲಿ ಸದಸ್ಯರುಗಳ ಸ್ಥಾನ ಮತ್ತು ಹೆಸರು ತಂದೆಯ ಕಡೆಯಿಂದಲೇ ನಿರ್ಧಾರವಾಗುತ್ತದೆ.

ಲಂಬಾಣಿಗರಲ್ಲಿ ಪಿತೃಗೃಹ ನಿವಾಸದ ಪದ್ಧತಿಯಿರುತ್ತದೆ. ವಿವಾಹದ ನಂತರ ಪತ್ನಿಯು ತನ್ನ ಗಂಡನ ಮನೆಗೆ ಬಂದು ಪತಿಯ ಪರಿವಾರದೊಂದಿಗೆ ವಾಸಿಸುತ್ತಾಳೆ. ಮಕ್ಕಳು ಇಲ್ಲಿಯೇ ಹುಟ್ಟಿ ಬೆಳೆಯುವರು ಆದರೆ ಹೆಣ್ಣು ಮಕ್ಕಳು ವಿವಾಹದ ನಂತರ ತಂದೆಯ ಮನೆಯಲ್ಲಿ ಉಳಿಯದೇ ತಮಗೆ ವಿವಾಹ ಮಾಡಿಕೊಟ್ಟ ಗಂಡನ ಮನೆಗೆ ಹೋಗುತ್ತಾರೆ.

ಲಂಬಾಣಿಗರಲ್ಲಿ ಏಕಪತ್ನಿ ಅಥವಾ ಏಕಪತಿ ವಿವಾಹ ಕುಟುಂಬಗಳು ಸಾಮಾನ್ಯವಾಗಿ ಜಾರಿಯಲ್ಲಿವೆ. ಒಂದು ವೇಳೆ ಮೊದಲನೆಯ ಪತ್ನಿಗೆ ಸಂತಾನಭಾಗ್ಯ ಪ್ರಾಪ್ತವಾಗದಿದ್ದಲ್ಲಿ ಅಥವಾ

ಗಂಡು ಸಂತಾನಭಾಗ್ಯ ಪ್ರಾಪ್ತವಾಗದಿದ್ದಲ್ಲಿ ಮಾತ್ರ ಸಂತಾನ ಪ್ರಾಪ್ತಿಗಾಗಿ ಒಬ್ಬರಿಗಿಂತ ಹೆಚ್ಚಿನ ಮಹಿಳೆಯರನ್ನು ವರಿಸುತ್ತಾರೆ. ಹೀಗಾಗಿ ಇವರಲ್ಲಿ ಬಹುಪತ್ನಿ ವಿವಾಹ ಕುಟುಂಬಗಳು ಕೂಡಾ ಕಂಡುಬರುತ್ತವೆ. ಆದರೆ ಲಂಬಾಣಿಗರಲ್ಲಿ ಬಹುಪತಿ ವಿವಾಹ ಕುಟುಂಬಗಳು ಎಲ್ಲಿಯೂ ಗೋಚರಿಸುವದಿಲ್ಲ. ಇಂತಹ ಕುಟುಂಬಗಳಿಗೆ ಇವರಲ್ಲಿ ಸಾಮಾಜಿಕ ಮನ್ನಣೆ ಇಲ್ಲ.

ಲಂಬಾಣಿಗರಲ್ಲಿ ಕುಟುಂಬವು ಸಂಸ್ಕೃತಿ ಸಂಚರಣೆಯ ಒಂದು ಪ್ರಬಲ ಸಾಧನವಾಗಿದೆ. ಕುಟುಂಬವು ಕೇವಲ ಮಾನವ ಸಂತತಿಯ ಮುಂದುವರಿಕೆಗಾಗಿ ಮಾತ್ರವಲ್ಲದೇ, ಸಮಾಜದ ಸಾಂಸ್ಕೃತಿಕ ನಿರಂತರತೆಗೆ ಕೂಡಾ ಕಾರಣವಾಗಿದೆ. ಕುಟುಂಬವು ಲೋಕಾಚಾರ, ನೈತಿಕ ನಿಯಮಗಳು, ರೂಢಿ ಸಂಪ್ರದಾಯ, ನಂಬಿಕೆ ಆಚರಣೆ, ಪದ್ಧತಿ ಮೌಲ್ಯಗಳು ಹೀಗೆ ಮುಂತಾದ ಸಾಂಸ್ಕೃತಿಕ ಅಂಶಗಳನ್ನು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಅಂದರೆ ತಂದೆ ತಾಯಿಯರಿಂದ ಮಕ್ಕಳಿಗೆ ವರ್ಗಾಯಿಸುವ ಕಾರ್ಯವನ್ನು ನಿರಂತರವಾಗಿ ಮಾಡುತ್ತಾ ಬಂದಿದೆ. ಹೀಗಾಗಿಯೇ ಮೂರು ಜಿಲ್ಲೆಯ ಲಂಬಾಣಿಗರು ಇಂದಿಗೂ ಸಿರಿವಂತವಾದ ಸಂಸ್ಕೃತಿಯೊಂದಿಗೆ ಬದುಕುತ್ತಿರುವುದು ಕಂಡು ಬರುತ್ತದೆ.

### ೪.೩. ಲಂಬಾಣಿಗರ ಆಹಾರ ಪದ್ಧತಿ

ಒಂದು ನಿರ್ದಿಷ್ಟವಾದ ಪರಿಸರದಲ್ಲಿ ಸಮುದಾಯಗಳು ನೆಲೆ ನಿಲ್ಲಬೇಕಾದರೆ ಅಲ್ಲಿನ ಸಾಮಾಜಿಕ, ಭೌಗೋಳಿಕ ಅಂದರೆ ಫಲವತ್ತಾದ ಮಣ್ಣು, ಹವಾಗುಣ ಪ್ರಮುಖ ಪಾತ್ರವಹಿಸುತ್ತವೆ. ಈ ಕಾರಣಾಂಶಗಳು ಮಾನವನು ತನ್ನ ಅಲೆಮಾರಿತನವನ್ನು ಅಂತ್ಯಗೊಳಿಸಿ ಒಂದೆಡೆ ನೆಲೆ ನಿಲ್ಲುವಂತೆ ಮಾಡುತ್ತವೆ. ಪ್ರಾಚೀನ ಕಾಲದಲ್ಲಿ ಮಾನವ ತನ್ನ ಮೂಲಭೂತ ಅಗತ್ಯಗಳಲ್ಲಿ ಒಂದಾದ ಆಹಾರವನ್ನು ಪಡೆದು ತನ್ನ ಹಸಿವನ್ನು ಈಡೇರಿಸಿಕೊಳ್ಳಲು ಋತುಮಾನಕ್ಕೆ ಅನುಗುಣವಾಗಿ ಲಭಿಸುವಂತಹ ಗೆಡ್ಡೆಗೆಣಸು, ಹಣ್ಣು-ಹಂಪಲು ಹಾಗೂ ಕಾಡಿನಲ್ಲಿರುವ ಪ್ರಾಣಿಪಕ್ಷಿಗಳನ್ನು ಶೋಧ ಮಾಡುವ ಕೆಲಸಗಳಲ್ಲಿ ತೊಡಗುತ್ತಿದ್ದ. ಮೂಲತಃ ಮಾಂಸಾಹಾರಿಯಾದ ಮನುಷ್ಯ ಇಂದಿನ ಬದಲಾದ ಸಂದರ್ಭದಲ್ಲಿ ಸಸ್ಯಹಾರವನ್ನು ಮೈಗೂಡಿಸಿಕೊಂಡಿದ್ದಾನೆ.

ವ್ಯಕ್ತಿ ದೀರ್ಘಕಾಲ ಬದುಕಿರಬೇಕಾದರೆ, ಆತ ತೆಗೆದುಕೊಳ್ಳುವ ಆಹಾರ ಇಂಧನವಾಗಿ ಕಾರ್ಯನಿರ್ವಹಿಸುತ್ತದೆ. ಕೇವಲ ಬದುಕುಳಿಯುವುದೊಂದೆ ಆಹಾರ ಸೇವನೆಯ ಮುಖ್ಯ ಉದ್ದೇಶವಲ್ಲ. ಹಿತಮಿತವಾದ ಆಹಾರವನ್ನು ಸೇವಿಸುವುದರಿಂದ ತನುಮನಗಳೆರಡಕ್ಕೂ ತೃಪ್ತಿ ಮತ್ತು ಆನಂದ ಉಂಟಾಗುತ್ತದೆ. ಆಹಾರ ಸೇವಿಸುವುದು ಅಗತ್ಯ ಮತ್ತು ಅನಿವಾರ್ಯವಾದರೂ ಹಿತಮಿತವಾಗಿ ಸೇವಿಸುವುದು ಬಹಳ ಮುಖ್ಯ. ಆಹಾರ ಸೇವನೆಯ ಮುಖ್ಯ ಉದ್ದೇಶವೇ ಆರೋಗ್ಯಕರವಾಗಿ ಬದುಕುಳಿಯುವುದು.

ಮೂಲತಃ ಅಲೆಮಾರಿಗಳಾದ ಲಂಬಾಣಿಗರು ಕಾಡು ಮೇಡುಗಳಲ್ಲಿ ಸಂಚರಿಸುವ ಸಮಯದಲ್ಲಿ ಅಲ್ಲಿ ಸಿಕ್ಕ ಪ್ರಾಣಿಗಳನ್ನು ಬೇಟೆಯಾಡಿ ಆಹಾರವನ್ನು ಬಳಸಿಕೊಂಡಿರುವುದು ಸಹಜ. ಇವರು

ಪ್ರಮುಖವಾಗಿ ಮಾಂಸಹಾರಿಗಳಾಗಿದ್ದರಿಂದ ಬೇಟೆ ವೃತ್ತಿಯೂ ಕೂಡ ರೂಢಿಗತವಾಗಿ ಬಂದಿದೆ. ಲಂಬಾಣಿಗರು ಬೇಟೆಯಾಡುವುದನ್ನು ಗೋರಬೋಲಿ ಭಾಷೆಯಲ್ಲಿ 'ಏಡೋರಮೇರೋ', 'ಶಿಕಾರ' ಎಂದು ಕರೆಯುತ್ತಾರೆ. ಇವರು ತಮ್ಮ ಆಹಾರಕ್ಕಾಗಿ ಬೇಟೆಯಾಡುವ ಪ್ರಮುಖ ಪ್ರಾಣಿಗಳೆಂದರೆ ಮೊಲ, ಮೀನು, ಏಡಿ, ಹಕ್ಕಿಗಳು, ಉಡ, ಕಾಡುಹಂದಿ, ಕೌಜುಗ ಮುಂತಾದವುಗಳು.

ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಯ ರಿಮೋಟ್ ತಾಂಡಾದ ಲಂಬಾಣಿಗರಲ್ಲಿ ವರ್ಷಕ್ಕೆ ಒಂದೆರಡು ಸಲ ವಿಶೇಷ ಬೇಟೆ ಕೈಗೊಳ್ಳುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ತಾಂಡಾದ ಕಟ್ಟುಮಸ್ತಾದ ಯುವಕರು ಕೈಯಲ್ಲಿ ಕಬ್ಬಿಣದ ಕಟ್ಟು ಹಾಕಿಸಿರುವ ದೊಣ್ಣೆಗಳನ್ನು ಹಿಡಿದು ಕೆಲವು ಗುಂಪುಗಳಲ್ಲಿ ಬೇಟೆಗೆ ತೆರಳುತ್ತಾರೆ. ಬೆಕ್ಕಿನ ಕಣ್ಣು ಹೊಂದಿದವರಿಗೆ ಬೇಟೆಯ ಪ್ರಾಣಿ ನಿಚ್ಚಳವಾಗಿ ಗೋಚರಿಸುತ್ತವೆಂಬುದು ತಾಂಡಾದ ಹಿರಿಯರುಗಳ ನಂಬಿಕೆಯಾಗಿದೆ. ಗುಂಪಿನಲ್ಲಿ ಬೇಟೆಗೆ ತೆರಳಿದಾಗ ಪ್ರಾಣಿಯನ್ನು ಯಾರೇ ಹೊಡೆದರೂ ಅದು ಒಬ್ಬನಿಗೆ ಮಾತ್ರ ಸೇರದೆ, ಬೇಟೆಗೆಂದು ತೆರಳಿರುವ ಎಲ್ಲರಿಗೂ ಸೇರುತ್ತದೆ. ಹೀಗೆ ಇಡೀ ದಿನ ಬೇಟೆಯಾಡಿ ಸಂಜೆ ಮನೆಗೆ ಹಿಂದಿರುಗುವಾಗ ಆಡಿರುವ ಬೇಟೆಗಳನ್ನೆಲ್ಲಾ ಒಂದು ಉದ್ದವಾದ ಕೋಲಿಗೆ ಪೋಣಿಸಿ ಹಲಗೆ ಬಾರಿಸುತ್ತ ಮೆರವಣಿಗೆಯಲ್ಲಿ ತುಂಬಾ ಸಂತೋಷದಿಂದ ತಾಂಡಾ ಪ್ರವೇಶಿಸುತ್ತಾರೆ. ತಾಂಡಾಕ್ಕೆ ಬಂದ ಮೇಲೆ ಒಟ್ಟಾಗಿ ಮಾಂಸವನ್ನು ತುಂಡು ಮಾಡಿ, ಬೇಟೆಗೆ ಹೋದವರಷ್ಟೇ ಅದನ್ನು ಹಂಚಿಕೊಳ್ಳದೇ, ತಾಂಡಾದ ಪ್ರತಿಯೊಬ್ಬರ ಮನೆಗೂ ಅದರ ಪಾಲು ಕೊಟ್ಟು ಕಳಿಸುತ್ತಾರೆ. ಈ ಪಾಲನ್ನು ಮೊದಲು ತಾಂಡಾದ ನಾಯಕನ ಮನೆಗೆ ಕಳುಹಿಸುವುದು, ನಾಯಕನಿಗೆ ತಾಂಡಾದ ಜನರು ಕೊಡುವ ಗೌರವದ ಸಂಕೇತವಾಗಿದೆ.

ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ಈ ರೀತಿಯ ಸಾಮೂಹಿಕ ಬೇಟೆ ಇತ್ತೀಚೆಗೆ ಕಂಡುಬರುವುದಿಲ್ಲ. ಅವರುಗಳು ಮಾರುಕಟ್ಟೆಯಲ್ಲಿ ಸಿಗುವ ಸಿದ್ಧ ಮಾಂಸವನ್ನು ತಂದು ಮಾಂಸಾಹಾರ ಸೇವಿಸುತ್ತಾರೆ. ಮಾಂಸಹಾರಿಗಳಾದ ಲಂಬಾಣಿಗರಿಗೆ ಮೊಲದ ಮಾಂಸವೆಂದರೆ ಪಂಚಪ್ರಾಣ ಎಂಬುದು ತಾಂಡಾವಾಸಿಗಳ ಅಭಿಮತವಾಗಿದೆ.

ಪ್ರಸ್ತುತ ದಿನಗಳಲ್ಲಿ ಗುಲಬರ್ಗಾ, ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ಬಹುತೇಕರು ಜೀವನಾಧಾರಕ್ಕಾಗಿ ಕೃಷಿ ಮತ್ತು ಕೃಷಿ ಕೂಲಿಕಾರ್ಮಿಕತೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಜೊತೆಗೆ ತಾಂಡಾವಾಸಿಗಳೆಲ್ಲರ ಮನೆಗಳಲ್ಲಿ ಕೋಳಿ, ಹುಂಜ, ಕುರಿ, ಹೋತಗಳನ್ನು ಸಾಕಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಈ ಪ್ರಾಣಿಗಳ ಸಾಕಾಣಿಕೆ ಆರ್ಥಿಕ ಲಾಭವನ್ನು ತುಂಬುವುದರ ಜೊತೆಗೆ ಮನೆಗೆ ಆಗಮಿಸಿರುವ ಅತಿಥಿಗಳ ಸತ್ಕಾರಕ್ಕೆ ಮತ್ತು ಹಬ್ಬಹರಿದಿನಗಳಲ್ಲಿನ ಭೋಜನ ಕೂಟಗಳಲ್ಲಿ ಮಾಂಸಹಾರ ತಯಾರಿಕೆಗೆ ಬಳಸುವುದು ಕಂಡುಬರುತ್ತದೆ.

ತಾಂಡಾವಾಸಿಗಳು ಹಬ್ಬಗಳ ದಿನಗಳಂದು ಸಿಹಿಪದಾರ್ಥಗಳನ್ನು ಸೇವಿಸಿದರೆ, ಮರುದಿವಸ 'ಕರಿ' ಎಂದು ಆಚರಿಸಿ ಅಂದು ಮಾಂಸಹಾರ ಸೇವಿಸುವುದನ್ನು ರೂಢಿಸಿಕೊಂಡಿರುವುದು ಎಲ್ಲೆಡೆ ಸಾಮಾನ್ಯ ಪದ್ಧತಿಯಾಗಿದೆ.

ಪ್ರಾಚೀನ ಕಾಲದಿಂದಲೂ ಪ್ರಕೃತಿಯ ಮಡಿಲಲ್ಲಿ ವಾಸಿಸುವ ಇವರುಗಳು ಪ್ರಾಕೃತಿಕವಾಗಿ ಲಭ್ಯವಾಗುವ ಹಣ್ಣುಗಳಾದ ಕ್ಯಾರಹಣ್ಣು, ಮಳ್ಳಿಹಣ್ಣು, ಸೀತಾಫಲ, ಬಾರೆಹಣ್ಣು, ಸೀಬೆಹಣ್ಣು, ಕವಳೆಹಣ್ಣು, ಮಾವಿನಹಣ್ಣು, ಪ್ರಾಣಿ, ಪಕ್ಷಿಗಳ ಮಾಂಸ, ಶುದ್ಧವಾಗಿ ಹರಿಯುವ ಹಳ್ಳಗಳ ನೀರು, ಸ್ವಚ್ಛವಾದ ಗಾಳಿಯ ಸೇವನೆಯಿಂದ, ಹೊಲಗಳಲ್ಲಿ ದೊರೆಯುವ ಜೇನು, ಹಸಿರು ಪಲ್ಯಗಳಾದ ಹತ್ತರಕಿ, ಗೋಳಿಪಲ್ಯ, ಕಾಡಕುಸಬಿ ಇತ್ಯಾದಿಗಳ ಸೇವನೆಯಿಂದ ಇವರುಗಳಲ್ಲಿ ಕಟ್ಟುಮಸ್ತಾದ ಗಟ್ಟಿಕಾಯವನ್ನು ಸ್ತ್ರೀ, ಪುರುಷರಿಬ್ಬರೂ ಹೊಂದಿರುತ್ತಿದ್ದರು. ಆದರೆ ಇಂದು ನಾಗರಿಕರೆನಿಸಿಕೊಂಡವರ ಹಸ್ತಕ್ಷೇಪದಿಂದಾಗಿ ಪ್ರಕೃತಿ ಮಾಲಿನ್ಯಕ್ಕೆ ಒಳಗಾಗುತ್ತಿದೆ. ತಾಂಡಾಗಳ ಹತ್ತಿರವಿರುವ ನದಿ, ಕೆರೆ, ಹಳ್ಳಗಳಲ್ಲಿ ಟ್ರ್ಯಾಕ್ಟರ, ಲಾರಿ, ಜೀಪ್ ಮುಂತಾದ ವಾಹನಗಳನ್ನು ಮತ್ತು ಬೆಳೆಗಳಿಗೆ ಔಷಧ ಸಿಂಪಡಿಸಿದ ಯಂತ್ರಗಳನ್ನು ತೊಳೆಯುವುದರಿಂದ ಕುಡಿಯುವ ನೀರು ಕಲುಷಿತಗೊಳ್ಳುತ್ತಿದೆ. ಈ ನೀರನ್ನು ಕುಡಿಯುವುದರಿಂದ ತಾಂಡಾವಾಸಿಗಳು ಹಲವಾರು ರೀತಿಯ ರೋಗರುಜಿನಗಳಿಗೆ ಬಲಿಯಾಗಿ ಆಧುನಿಕ ವೈದ್ಯ ಪದ್ಧತಿ ಮತ್ತು ಶುದ್ಧ ಕುಡಿಯುವ ನೀರನ್ನು ಅನಿವಾರ್ಯವಾಗಿ ಬಯಸುವಂತಾಗಿದೆ. ಇಂತಹ ಹಲವಾರು ಸಮಸ್ಯೆಗಳ ನಡುವೆಯೂ ಕೂಡಾ ಇಂದಿಗೂ ಲಂಬಾಣಿಗರು ತಮ್ಮತನವನ್ನು ಉಳಿಸಿಕೊಂಡು ಸಂಸ್ಕೃತಿಯ ಭಾಗವಾದ ಆಹಾರ ಪದ್ಧತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಜೀವನ ಸಾಗಿಸುತ್ತಿದ್ದಾರೆ. ಇವರು ಪಾಕಪ್ರವೀಣರೂ ಕೂಡ ಹೌದು ಎಂಬುದು ಅವರು ತಯಾರಿಸುವ ವಿಭಿನ್ನ ರೀತಿಯ ಸಸ್ಯಹಾರ–ಮಾಂಸಹಾರಗಳಿಂದ ತಿಳಿದುಬರುತ್ತದೆ. ಅವುಗಳಲ್ಲಿ ಪ್ರಮುಖವಾದವುಗಳು ಹೀಗಿವೆ.

**ಸಳೋಯಿ:** ಕುರಿ ಅಥವಾ ಮೇಕೆಯ ಹೊಟ್ಟೆಯೊಳಗಿನ ಕರಳು, ಶ್ವಾಸಕೋಶ, ಹೃದಯ ಮುಂತಾದ ಮೃದು ಮಾಂಸವನ್ನು ಬೇಯಿಸಿ, ರಕ್ತದಲ್ಲಿ ಜೋಳದ ಹಿಟ್ಟನ್ನು ಕದಡಿ, ರುಚಿಗೆ ತಕ್ಕಷ್ಟು ಉಪ್ಪು ಖಾರವನ್ನು ಬೆರೆಸಿ ಚೆನ್ನಾಗಿ ಬೇಯಿಸಿ ಸಿದ್ಧಪಡಿಸಿದ ಪದಾರ್ಥವನ್ನು 'ಸಳೋಯಿ' ಎಂದು ಕರೆಯುತ್ತಾರೆ. ಇದು ರುಚಿಕಟ್ಟಾದ ಪದಾರ್ಥವಾಗಿದ್ದು, ಕುರಿಯನ್ನು ಬಲಿಕೊಟ್ಟು ದೇವರ ಪೂಜೆ ಮಾಡುವಾಗ, ಹಬ್ಬದ ಕರಿ ಮಾಡುವಾಗ, ವಿವಾಹದಲ್ಲಿ ಗುರುರದಾಗ, ಗೋಟ ಮುಂತಾದ ಸಂದರ್ಭಗಳಲ್ಲಿ ಸಳೋಯಿಯನ್ನು ಮಾಡುತ್ತಾರೆ. ಇದು ಲಂಬಾಣಿಗರ ಅಚ್ಚುಮೆಚ್ಚಿನ ಆಹಾರ ಪದಾರ್ಥವಾಗಿದೆ.

**ಫೇರ / ಫೀಕಿಬೋಟಿ:** ಕುರಿಯನ್ನು ಬಲಿಕೊಟ್ಟು, ದೇವರ ಪೂಜೆ ಮಾಡುವ ಸಂದರ್ಭದಲ್ಲಿ ಕುರಿಯ ಹೊಟ್ಟೆಯೊಳಗಿನ ಭಾಗಗಳು, ಘುಂಡಿರ ಹಡಕಾ(ಸಂದೆಲುಬು)ಗಳಿಗೆ ರುಚಿಗೆ ತಕ್ಕಷ್ಟು ಉಪ್ಪನ್ನು ಹಾಕಿ ಬೇಯಿಸಿದ ಮಾಂಸವನ್ನು ಫೇರ ಅಥವಾ ಫೀಕಿಬೋಟಿ ಎಂದು ಕರೆಯುತ್ತಾರೆ. ಈ ಮಾಂಸದಿಂದ ದೇವರ ಪೂಜೆಯನ್ನು ಮಾಡಿ ಮಾಂಸದ ಚಿಕ್ಕ ಚಿಕ್ಕ ತುಂಡುಗಳನ್ನು ನೆರೆದ ಎಲ್ಲರಿಗೂ ಪ್ರಸಾದವಾಗಿ ಹಂಚುತ್ತಾರೆ. ತಾಂಡಾದ ನಾಯಕ, ಕಾರಭಾರಿ, ಡಾವಸಾಣರಿಗೆ(ಹಿರಿಯರು) ಹಾಗೂ ಅತಿಥಿಗಳಿಗೆ ಸಂದೆಲುಬು ಹಾಗೂ ಪಕ್ಕೆಲುಬುಗಳನ್ನು ಹಂಚುತ್ತಾರೆ. ಹಿರಿಯರಿಗೆ ಗೌರವಾನ್ವಿತ ವ್ಯಕ್ತಿಗಳಿಗೆ ಹಡಕಾ (ಎಲುಬು) ಕೊಡುವುದು ಲಂಬಾಣಿಗರಲ್ಲಿ ಮರ್ಯಾದೆಯ ಸಂಕೇತ. ಮಾಂಸವನ್ನು

ಬೇಯಿಸಿದ ರುಚಿಕಟ್ಟಾದ ಉಪ್ಪು ನೀರನ್ನು ಲಂಬಾಣಿಗರು 'ಫೀಕ್ಕೋ ಪಾಣಿ, ಫೇರೇರ ಪಾಣಿ, ಸಳೋಯರ ಪಾಣಿ' ಎಂದು ಕರೆಯುತ್ತಾರೆ.

**ಬೋಟಿಬಾಟಿ:** ಬೋಟಿ ಎಂದರೆ ಮಾಂಸ, ಬಾಟಿ ಎಂದರೆ ರೊಟ್ಟಿ ಎಂದರ್ಥವಾಗುತ್ತದೆ. "ಬಾಟಿ ಖಾವತೋ ಮಾಟಿ" (ರೊಟ್ಟಿ ತಿಂದರೆ ಗಂಡಸು, ರೊಟ್ಟಿ ತಿಂದರೆ ಮನುಷ್ಯ ಗಟ್ಟಿ) ಎಂಬ ಗಾದೆಯೊಂದು ಲಂಬಾಣಿಗರಲ್ಲಿ ಚಾಲ್ತಿಯಲ್ಲಿದೆ. ಮಾಂಸದ ಸಾರಿನೊಂದಿಗೆ ಜೋಳದ ರೊಟ್ಟಿ ತಿನ್ನುವುದನ್ನು ಲಂಬಾಣಿಗರು 'ಬೋಟಿಬಾಟಿ' ಎಂದು ಕರೆಯುತ್ತಾರೆ. ಈ ಆಹಾರ ಲಂಬಾಣಿಗರಿಗೆ ಬಲುಪ್ರಿಯವಾದುದು. "ಬೋಟಿ ರತೋ ದೀ ಬಾಟಿ ಜಾಪಾ ಖಾವುಂಚು" (ಮಾಂಸದ ಅಡುಗೆ ಇದ್ದರೆ ಎರಡು ರೊಟ್ಟಿ ಹೆಚ್ಚು ತಿನ್ನುತ್ತೇನೆ) ಎನ್ನುವ ಮಾತು ಇವರಲ್ಲಿ ಸಹಜವಾಗಿ ಕೇಳಿಬರುತ್ತದೆ.

**ಮಾಳ್ಳಿರ ಲಂಗಾಣ:** ಮೀನಿನ ಸಾರನ್ನು ಲಂಬಾಣಿಗರು 'ಮಾಳ್ಳಿರ ಲಂಗಾಣ' ಎಂದು ಕರೆಯುತ್ತಾರೆ. ಲಂಬಾಣಿಗರು ಬಿಡುವಿನ ವೇಳೆಯಲ್ಲಿ ಕೆರೆ, ಹಳ್ಳಗಳಿಗೆ ಮೀನು ಹಿಡಿಯಲು ಹೋಗುತ್ತಾರೆ. ಇತ್ತೀಚೆಗೆ ಮೀನು ಮಾರುವವರು ತಾಂಡಾಗಳಿಗೆ ಹೋಗುತ್ತಿರುವದರಿಂದ ಲಂಬಾಣಿಗರು ಮೀನನ್ನು ಯಥೇಚ್ಛವಾಗಿ ಬಳಸುತ್ತಾರೆ. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಮೀನಿಗೆ ಮಾಳ್ಳಿ, ಸೋಲಾಪುರ ಜಿಲ್ಲೆಯಲ್ಲಿ ಮಾಚಳಿ, ರಂಗಾರೆಡ್ಡಿ ಜಿಲ್ಲೆಯಲ್ಲಿ ಚೇಪಾ, ಮಾಳ್ಳಿ ಎಂದು ಕರೆಯುತ್ತಾರೆ.

**ಇಂಡಾರ ಲಂಗಾಣ:** ಮೊಟ್ಟೆಯ ಸಾರನ್ನು ಲಂಬಾಣಿಗರು 'ಇಂಡಾರ ಲಂಗಾಣ' ಎಂದು ಕರೆಯುತ್ತಾರೆ. ಮೊಟ್ಟೆಯನ್ನು ಬೇಯಿಸಿ ಮತ್ತು ಮೊಟ್ಟೆಯನ್ನು ಒಡೆದು ಎರಡು ಬಗೆಯಲ್ಲಿ ಸಾರು ಮಾಡುತ್ತಾರೆ. ಅಲ್ಲದೇ ಹಂಚಿನ ಮೇಲೆ ಆಮ್ಲೇಟನ್ನು ಮಾಡಿ ಸೇವಿಸುತ್ತಾರೆ. ಮೂರು ಜಿಲ್ಲೆಯ ತಾಂಡಾಗಳಲ್ಲಿ ಕೋಳಿ ಸಾಕಾಣಿಕೆಯು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಿದ್ದು, ಇವರು ಕೋಳಿ ಮಾಂಸ ಹಾಗೂ ಮೊಟ್ಟೆಯನ್ನು ಹೆಚ್ಚಿನ ಪ್ರಮಾಣದಲ್ಲಿ ಆಹಾರಕ್ಕಾಗಿ ಉಪಯೋಗಿಸುತ್ತಿರುವುದು ಕಂಡುಬರುತ್ತದೆ.

**ಭೋಂಜೋ ಕಳಜೋ, ಭುಂಜಿ ಬೋಟಿ:** ಮಾಂಸವನ್ನು ಒಂದು ಕಡ್ಡಿಯಲ್ಲಿ ಪೋಣಿಸಿ ಬೆಂಕಿಯಲ್ಲಿ ಸುಟ್ಟು ತಿನ್ನುವುದನ್ನು ಭೋಂಜೋ ಕಳಜೋ, ಭುಂಜಿ ಬೋಟಿ ಎಂದು ಕರೆಯುತ್ತಾರೆ. ಬೆಂಕಿಯಲ್ಲಿ ಸುಟ್ಟ ಮಾಂಸಕ್ಕೆ ಉಪ್ಪನ್ನು ಹಚ್ಚಿ ತಿನ್ನುವದು ಲಂಬಾಣಿಗರ ಸ್ವಾದಿಷ್ಟ ಆಹಾರ ಪದಾರ್ಥಗಳಲ್ಲಿ ಒಂದಾಗಿದೆ.

**ಸಂಗಟಿ:** ಹುರುಳಿಯನ್ನು ಹುರಿದು ಬೀಸಿದ ಹಿಟ್ಟನ್ನು ನೀರಿನಲ್ಲಿ ಕದಡಿ ರುಚಿಗೆ ತಕ್ಕಷ್ಟು ಉಪ್ಪನ್ನು ಬೆರೆಸಿ ತಯಾರಿಸಿದ ಪಾಯಸವನ್ನು 'ಸಂಗಟಿ' ಎಂದು ಕರೆಯುತ್ತಾರೆ.

**ಕಾಡೋ:** ಶುಂಠಿ, ಕರಿಮೆಣಸು, ಬೆಲ್ಲ, ಕೊಬ್ಬರಿಯನ್ನು ಪುಡಿ ಮಾಡಿಕೊಂಡು ಒಗ್ಗರಣೆ ಹಾಕಿ ತಯಾರಿಸಿದ ಪದಾರ್ಥವನ್ನು 'ಕಾಡೋ' ಎನ್ನುತ್ತಾರೆ. ಹೆರಿಗೆಯಾದ ಮೇಲೆ ಬಾಣಂತಿಗೆ ೪ ರಿಂದ ೫ ಸಲ ಕೊಡುತ್ತಾರೆ. ಕೆಮ್ಮು, ನೆಗಡಿಗೂ ಔಷಧವಾಗಿ ಬಳಸುತ್ತಾರೆ.

**ಲಾಪಸಿ:** ಸೋಲಾಪುರ ಮತ್ತು ಗುಲಬರ್ಗಾ ಜಿಲ್ಲೆಯಲ್ಲಿ ಗೋಧಿಯ ರವಾ ಹಾಗೂ ಬೆಲ್ಲದೊಂದಿಗೆ ತಯಾರಿಸಿದ ಪದಾರ್ಥವನ್ನು 'ಲಾಪಸಿ' ಎಂದು ಕರೆಯುತ್ತಾರೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಅಕ್ಕಿ ಮತ್ತು ಬೆಲ್ಲದಿಂದ ಲಾಪಸಿ ತಯಾರಿಸುತ್ತಾರೆ. ಇದನ್ನು ಪಾಯಸಂ ಎಂತಲೂ ಕೂಡ ಕರೆಯುತ್ತಾರೆ. ಈ ಲಾಪಸಿಯನ್ನು ಬಾಣಂತಿಗೆ ಆರಂಭದಲ್ಲಿ ತುಪ್ಪದೊಂದಿಗೆ ಸೇವಿಸಲು ನೀಡುತ್ತಾರೆ. ಬೇರೆ ಸಂದರ್ಭಗಳಲ್ಲಿಯೂ ಆಹಾರವಾಗಿ ಬಳಸುತ್ತಾರೆ.

**ದಳಿಯಾ:** ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳಲ್ಲಿ ತಯಾರಿಸುವ ಜೋಳದ ನುಚ್ಚಿಗೆ ದಳಿಯಾ ಎಂದು ಕರೆಯುತ್ತಾರೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ದಳಿಯಾ ನುಚ್ಚು ಅಕ್ಕಿಯಿಂದ ತಯಾರಿಸಿದ ಪದಾರ್ಥವಾಗಿದೆ.

**ಸುಂವಾಳಿ:** ಹೋಳಿ ಹಬ್ಬದ ಸಂದರ್ಭದಲ್ಲಿ ಧೂಂಡ(ಹುಟ್ಟು) ಹಬ್ಬವನ್ನು ಆಚರಣೆ ಮಾಡುವಾಗ ತಯಾರಿಸುವ ಪುರಿಗಳನ್ನು 'ಸುಂವಾಳಿ' ಎನ್ನುತ್ತಾರೆ. ಗೋಧಿ ಹಿಟ್ಟಿನಿಂದ ಚಿಕ್ಕ ಚಿಕ್ಕ ಚಪಾತಿಗಳನ್ನು ಲಟ್ಟಿಸಿ ಎಣ್ಣೆಯಲ್ಲಿ ಕರಿಯುತ್ತಾರೆ.

**ಬಾಟಿ:** ರೊಟ್ಟಿಯನ್ನು ಲಂಬಾಣಿಗರು 'ಬಾಟಿ' ಎನ್ನುತ್ತಾರೆ. ಜೋಳದ ರೊಟ್ಟಿಯನ್ನು ಮೂರು ಜಿಲ್ಲೆಯ ಲಂಬಾಣಿಗರು ದಿನನಿತ್ಯದ ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಸಜ್ಜೆಯ ರೊಟ್ಟಿಯನ್ನು ಕೂಡಾ ಸೇವಿಸುತ್ತಾರೆ. ಸೋಲಾಪುರ ಜಿಲ್ಲೆಯ ಲಂಬಾಣಿಗರು ಮಕರ ಸಂಕ್ರಾಂತಿಯಂದು ಮಾತ್ರ ಸಜ್ಜೆಯ ರೊಟ್ಟಿಯನ್ನು ಸೇವಿಸುತ್ತಾರೆ. ಘಂವುರ ಬಾಟಿ(ಚಪಾತಿ) ಮೂರು ಜಿಲ್ಲೆಯ ಲಂಬಾಣಿಗರಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ.

**ಕುಲ್ಲರ:** ಗೋಧಿಯ ಹಿಟ್ಟು ಹಾಗೂ ಬೆಲ್ಲದಿಂದ ತಯಾರಿಸಿದ ಪದಾರ್ಥವಿದು. ಇದನ್ನು ದಳವಾ ಧೋಕಾಯೇರೊ (ಹೆರಿಗೆಯಾದ ನಂತರ ಮಾಡುವ ಶಾಸ್ತ್ರ) ಕಾರ್ಯಕ್ರಮದಲ್ಲಿ ತಯಾರಿಸುತ್ತಾರೆ. ಈ ಪದಾರ್ಥವನ್ನು ತುಪ್ಪದೊಂದಿಗೆ ಸೇವಿಸುತ್ತಾರೆ.

**ಪೋಳಿ:** ಬೇಳೆಯಿಂದ ತಯಾರಿಸಿದ ಹೋಳಿಗೆಯನ್ನು ಲಂಬಾಣಿಗರು 'ಪೋಳಿ' ಎಂದು ಕರೆಯುತ್ತಾರೆ. ಹಬ್ಬದ ದಿನ ಪೋಳಿಯನ್ನು ಕಡ್ಲೆಬೇಳೆಯ ಹೂರಣ ಹಾಗೂ ಗೋಧಿಹಿಟ್ಟಿನ ಕಣಕದಿಂದ ತಯಾರಿಸುತ್ತಾರೆ. ಪೋಳಿಯನ್ನು ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಹೋಳ್ಗಿ ಎಂತಲೂ ಕರೆಯುತ್ತಾರೆ.

**ಧಾನ:** ಅಕ್ಕಿಯ ಅನ್ನವನ್ನು ಮಾಡುವುದಕ್ಕೆ ಲಂಬಾಣಿಗರು 'ಧಾನ' ಎಂದು ಕರೆಯುತ್ತಾರೆ. ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳಲ್ಲಿ ಲಂಬಾಣಿಗರು ರೊಟ್ಟಿಯನ್ನು ಪ್ರಧಾನವಾಗಿ ಸೇವಿಸುತ್ತಾರೆ. ಆದರೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಧಾನನ್ನು ಪ್ರಧಾನವಾಗಿ ಸೇವಿಸುತ್ತಾರೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಈ ಪದಾರ್ಥವನ್ನು 'ಅನ್ನಂ' ಎಂತಲೂ, ಗುಲಬರ್ಗಾ, ಸೋಲಾಪುರ ಜಿಲ್ಲೆಗಳಲ್ಲಿ 'ಚಾವಳ' ಎಂತಲೂ ಕರೆಯುತ್ತಾರೆ.

**ದಾಳೇರ ಅಂಬ್ರಾ:** ತೊಗರಿಬೇಳೆಯ ಸಾರನ್ನು ದಾಳೇರ ಅಂಬ್ರಾ ಎನ್ನುತ್ತಾರೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಈ ಪದಾರ್ಥವನ್ನು 'ಪಪ್ಪು' ಎಂದು ಕೂಡ ಕರೆಯುತ್ತಾರೆ.

**ಚುರಮೋ:** ಗೋಧಿ ಚಪಾತಿ, ಬೆಲ್ಲ ಹಾಗೂ ತುಪ್ಪದಿಂದ ತಯಾರಿಸಿದ ಪದಾರ್ಥವನ್ನು 'ಚುರಮೋ' ಎನ್ನುತ್ತಾರೆ. ಚುರಮೋದ ಉಂಡಿಗಳನ್ನು ಮಾಡಿ ಮಕ್ಕಳಿಗೆ ತಿನ್ನಲು ಕೊಡುತ್ತಾರೆ. ಹಾಲಿನೊಂದಿಗೂ ಕೂಡ ಈ ಪದಾರ್ಥವನ್ನು ಸೇವಿಸುತ್ತಾರೆ.

**ರಾಬಡಿ:** ಮೊಸರು, ಮಜ್ಜಿಗೆಗೆ ರುಚಿಗೆ ತಕ್ಕಷ್ಟು ಉಪ್ಪು, ಅರಿಶಿಣ ಹಾಕಿ ಒಗ್ಗರಣೆ ಕೊಟ್ಟು ತಯಾರಿಸಿದ ಆಹಾರವೇ 'ರಾಬಡಿ'. ಇದನ್ನು ಬಾಟಿ, ದಳಿಯಾ, ಧಾನದೊಂದಿಗೆ ಬೆರೆಸಿ ತಿನ್ನುತ್ತಾರೆ.

**ಕಡಾವೋ:** ಗೋಧಿಯ ನುಚ್ಚನ್ನು ಬೆಲ್ಲದೊಂದಿಗೆ ಸೇರಿಸಿ ಬೇಯಿಸಿ ತಯಾರಿಸಿದ ಪದಾರ್ಥವಿದು. ಲಂಬಾಣಿಗರ ಧರ್ಮಗುರು ಸಂತ ಸೇವಾಲಾಲನ ನೈವೇದ್ಯಕ್ಕಾಗಿ 'ಕಡಾವೋ' ತಯಾರಿಸುತ್ತಾರೆ. ಈ ಪದಾರ್ಥವನ್ನು ತುಪ್ಪದೊಂದಿಗೆ ಅಥವಾ ಹಾಲಿನೊಂದಿಗೆ ಸೇವಿಸುತ್ತಾರೆ.

**ಮುಟಿಯಾ:** ಜೋಳದ ಹಿಟ್ಟಿನಿಂದ ಮುಟ್ಟಿಗೆಯಲ್ಲಿ ಚಿಕ್ಕ ಚಿಕ್ಕ ಉಂಡೆಗಳನ್ನಾಗಿ ಮಾಡಿ ಒಂದು ಪಾತ್ರೆಯಲ್ಲಿ ಹಾಕಿ ಪಾತ್ರೆಯ ಬಾಯಿಯನ್ನು ಬಟ್ಟೆಯಿಂದ ಕಟ್ಟಿ ಬೇಯಿಸುವ ಪದಾರ್ಥ ಇದಾಗಿದ್ದು, ಕಾಳು ಪಲ್ಲೆ, ಬೇಳೆ ಸಾರು, ರಾಬಡಿಯೊಂದಿಗೆ ಸೇವಿಸುತ್ತಾರೆ.

**ಭೂಂಜಭಾಂಜ ಲಾಪಸಿ:** ಗೋಧಿಯ ರವೆಯನ್ನು ಎಣ್ಣೆ ಅಥವಾ ತುಪ್ಪದಲ್ಲಿ ಹುರಿದು ಅದಕ್ಕೆ ಬೆಲ್ಲ ಸೇರಿಸಿ ಗಟ್ಟಿಯಾಗಿ ತಯಾರಿಸುವ ಪದಾರ್ಥಕ್ಕೆ 'ಭೂಂಜಭಾಂಜ ಲಾಪಸಿ' ಎಂದು ಕರೆಯುತ್ತಾರೆ.

**ಸೇವೆ:** ಗೋಧಿಯ ಹಿಟ್ಟನ್ನು ಸರಿಯಾಗಿ ಹದ ಮಾಡಿ ಅದರಿಂದ ಶಾವಿಗೆ ಮಾಡುತ್ತಾರೆ. ಶಾವಿಗೆಗೆ ಬೆಲ್ಲ ಸೇರಿಸಿ ಬೇಯಿಸಿ ಮಾಡುವ ಪದಾರ್ಥವೇ 'ಸೇವೆ'. ಇದನ್ನು ತುಪ್ಪ ಅಥವಾ ಹಾಲಿನೊಂದಿಗೆ ಸೇವಿಸುತ್ತಾರೆ.

**ಫಳೀರ ಪೋಳಿ:** ಶೇಂಗಾ ಬೀಜದ ಹೂರಣವನ್ನು ಮಾಡಿ ಗೋಧಿ ಹಿಟ್ಟಿನಿಂದ ತಯಾರಿಸುವ ಶೇಂಗಾ ಹೋಳಿಗೆಯನ್ನು 'ಫಳೀರ ಪೋಳಿ' ಎಂದು ಕರೆಯುತ್ತಾರೆ. ಫಳೀರ ಪೋಳಿಯನ್ನು ಮಾಡಿಟ್ಟುಕೊಂಡು ಎಂಟು ಹತ್ತು ದಿನಗಳವರೆಗೆ ತುಪ್ಪದೊಂದಿಗೆ ಸೇವಿಸುತ್ತಾರೆ.

**ಹಲವಾಣಿ:** ಬೆಲ್ಲ, ಶುಂಠಿ, ಕರಿಮೆಣಸುಗಳನ್ನೆಲ್ಲ ಪುಡಿ ಮಾಡಿ ಒಗ್ಗರಣೆ ಹಾಕಿ ತಯಾರಿಸ ಲಾಗುತ್ತದೆ. ಇದನ್ನು 'ಗಲವಾಣಿ' ಎಂತಲೂ ಕರೆಯುತ್ತಾರೆ. ಚಪಾತಿ ಮತ್ತು ಹೋಳಿಗೆಯೊಂದಿಗೆ ಹಲವಾಣಿಯನ್ನು ಸೇವಿಸುತ್ತಾರೆ.

**ಥೋಟ:** ನೀರಿನಲ್ಲಿ ಬೆಲ್ಲವನ್ನು ಹಾಕಿ ಚೆನ್ನಾಗಿ ಕುದಿಯುತ್ತಿರುವ ಸಂದರ್ಭದಲ್ಲಿ ಚಪಾತಿಯನ್ನು ಲಟ್ಟಿಸಿ ಸಣ್ಣ ಸಣ್ಣ ತುಕಡಿಗಳನ್ನಾಗಿ ಮುರಿದು ಕುದಿಯುತ್ತಿರುವ ಬೆಲ್ಲದ ನೀರಿನಲ್ಲಿ ಹಾಕಿ ಚೆನ್ನಾಗಿ

ಬೇಯಿಸಿ ತಯಾರಿಸುವ ಆಹಾರಕ್ಕೆ ಥೋಟಿ ಎನ್ನುತ್ತಾರೆ. ಇದರ ಮೇಲೆ ತುಪ್ಪ ಹಾಕಿ ಊಟ ಮಾಡುತ್ತಾರೆ. ಇದನ್ನು ಗುಲಬರ್ಗಾ ಲಂಬಾಣಿಗರು ಥೋಟಿ, ತೊಡಿತಾಡಿ ಬಾಟಿ ಎಂದು ಕರೆದರೆ, ಸೋಲಾಪುರ ಲಂಬಾಣಿಗರು ಚಕೋಲ್ಯಾ ಹಾಗೂ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಚಪಾತಿ ಪಾಯಸಂ ಮತ್ತು ತೊಡಿತಾಡಿ ಮೀಟಬಾಟಿ ಎಂದು ಕರೆಯುವುದು ಕಂಡುಬರುತ್ತದೆ.

**ಹುಗ್ಗಿ:** ಗೋಧಿಯನ್ನು ನೆನೆಸಿ ಕುಟ್ಟಿ ಬೆಲ್ಲದೊಂದಿಗೆ ಬೇಯಿಸಿ ತಯಾರಿಸುವ ಪದಾರ್ಥಕ್ಕೆ ಹುಗ್ಗಿ ಎಂದು ಕರೆಯುತ್ತಾರೆ. ಗುಲಬರ್ಗಾ, ಸೋಲಾಪುರ ಜಿಲ್ಲೆಯ ಲಂಬಾಣಿಗರು ಈ ಪದಾರ್ಥಕ್ಕೆ ಹುಗ್ಗಿ ಎಂದು ಕರೆದರೆ, ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಗೋಧವಾ ಪಾಯಸಂ ಎನ್ನುತ್ತಾರೆ. ಈ ಪದಾರ್ಥವನ್ನು ತುಪ್ಪದೊಂದಿಗೆ ಸೇವಿಸುತ್ತಾರೆ.

ಮಾಂಸಹಾರ ಪ್ರಿಯರಾದ ಲಂಬಾಣಿಗರಿಗೆ ಹಿಂದಿನ ಕಾಲದಲ್ಲಿ ಬೇಟೆಯಾಡುವುದು ಮೋಜು, ಮನೋರಂಜನೆಯ ಕಾರ್ಯವಾಗಿತ್ತು. ಮಾಂಸಹಾರಕ್ಕಾಗಿ ಮೇಲಿಂದ ಮೇಲೆ ಬೇಟೆ ಕಾರ್ಯಕ್ಕೆ ತೆರಳುತ್ತಿದ್ದರು. ಆದರೆ ಪ್ರಸ್ತುತ ದಿನಗಳಲ್ಲಿ ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಇವರುಗಳು ಜೀವನ ಶೈಲಿ, ಉಡುಗೆ-ತೊಡುಗೆಗಳ ಜೊತೆಗೆ ಆಹಾರ ಪದ್ಧತಿಯಲ್ಲೂ ಆಧುನಿಕತೆಯನ್ನು ಅಳವಡಿಸಿಕೊಂಡಿರುವುದರಲ್ಲಿ ಎರಡು ಮಾತಿಲ್ಲ. ಸೀರಾ, ಉಪ್ಪಿಟ್ಟು, ದೋಸೆ, ಇಡ್ಲಿ, ವಡಾ, ಹಲ್ವಾಗಳಂತಹ ಉಪಹಾರಗಳು ತಾಂಡಾ ಮನೆಗಳಲ್ಲಿ ತಯಾರಾಗುತ್ತಿರುವುದು ಆಧುನಿಕತೆಯ ಸ್ಪರ್ಶದ ಪ್ರತೀಕವಾಗಿದೆ. ಬೇಟೆಯಿಂದ ಮಾಂಸಹಾರ ತಯಾರಿಸುತ್ತಿದ್ದ ಲಂಬಾಣಿಗರು ಇಂದು ಅಂಗಡಿಗಳಲ್ಲಿ ಲಭ್ಯವಾಗುವ ಸಿದ್ಧ ಮಾಂಸವನ್ನು ಕೊಂಡುಕೊಳ್ಳುತ್ತಿದ್ದಾರೆ. ಇದರಿಂದ ಗ್ರಾಮ ಮತ್ತು ರಸ್ತೆ ಬದಿಯ ತಾಂಡಾಗಳಲ್ಲಿ ಬೇಟೆಯೆಂಬುದು ಮರೀಚಿಕೆಯಾಗಿದೆ. ರಿಮೋಟ್ ತಾಂಡಾಗಳಲ್ಲಿ ಮಾತ್ರ ಇಂದಿಗೂ ಅಪರೂಪವಾಗಿ ಗೋಚರಿಸುತ್ತಿದ್ದು, ಅಳಿವಿನ ಅಂಚಿನಲ್ಲಿರುವದು ಸ್ಪಷ್ಟವಾಗಿ ಕಂಡುಬರುತ್ತದೆ.

### ೪.೪. ಲಂಬಾಣಿಗರ ಉಡುಗೆ ತೊಡುಗೆಗಳು

ಆಹಾರ ಮತ್ತು ವಸತಿಯಂತೆ ಉಡುಪು ಕೂಡ ಮಾನವನ ಮೂಲಭೂತ ಅವಶ್ಯಕತೆಯಾಗಿದೆ. ಆರಂಭದಲ್ಲಿ ದೇಹದ ರಕ್ಷಣೆಗೆ ಹಾಗೂ ಗುಪ್ತಾಂಗಗಳನ್ನು ಮುಚ್ಚಿಕೊಳ್ಳುವ ಉದ್ದೇಶದಿಂದ ರೂಪುಗೊಂಡ ಉಡುಪುಗಳು ಕಾಲಕ್ರಮೇಣ ಸೌಂದರ್ಯಪ್ರಜ್ಞೆ ಹೆಚ್ಚಿಸುವ ಸಾಧನಗಳಾಗಿ ಪರಿವರ್ತನೆ ಗೊಂಡವು. ಕಾಲ, ದೇಶ, ಪ್ರದೇಶ ಹಾಗೂ ಸಮುದಾಯಗಳಿಗೆ ತಕ್ಕಂತೆ ಉಡುಪಿನ ಸ್ವರೂಪ ಹಾಗೂ ವಿನ್ಯಾಸಗಳಲ್ಲಿ ಭಿನ್ನತೆ ಇರುವುದು ಎಲ್ಲೆಡೆ ಕಂಡುಬರುತ್ತದೆ. ಅಲ್ಲದೇ ಭೌತ ಸಂಸ್ಕೃತಿಯ ಸಾಧನವಾಗಿಯೂ ಗೋಚರಿಸುತ್ತದೆ. ಸಂಸ್ಕೃತಿಯಲ್ಲಿ ಮಾನವನ ಉಡುಗೆ ತೊಡುಗೆಗಳಿಗೆ ವಿಶೇಷವಾದ ಪ್ರಾಮುಖ್ಯತೆ ಇದೆ.

ಬುಡಕಟ್ಟು ಸಮೂಹಗಳಲ್ಲಿ ವಿಭಿನ್ನ ರೀತಿಯ ವೇಷ ಭೂಷಣಗಳಿರುವಂತೆ ಲಂಬಾಣಿ ಬುಡಕಟ್ಟಿನಲ್ಲಿಯೂ ವಿಶಿಷ್ಟ ರೀತಿಯ ಉಡುಗೆ ತೊಡುಗೆಗಳು ಕಂಡುಬರುತ್ತವೆ. ವೇಷಭೂಷಣಗಳಿಂದಲೇ

ಗುರುತಿಸಲ್ಪಡುವ ಲಂಬಾಣಿಗರು ಸಾಮಾನ್ಯವಾಗಿ ಕೆಂಪು ಬಣ್ಣದ ಬಟ್ಟೆಗಳನ್ನು ಬಹುವಾಗಿ ಪ್ರೀತಿಸುತ್ತಾರೆ. "ಶಹಾಬುದೀನ್ ಗೋರಿಯ ಕಾಲದಲ್ಲಿ ಲಂಬಾಣಿಗರು ಕ್ಷತ್ರಿಯ ವೀರರಾಗಿದ್ದು, ಅನೇಕ ಸಣ್ಣಪುಟ್ಟ ಸಂಸ್ಥಾನಗಳನ್ನು ಆಳುತ್ತಿದ್ದರು. ಚಾಂದಬರದಾಯಿಯು ಶಹಾಬುದೀನ್ ಗೋರಿಯ ತಲೆ ಕಡಿದನು. ಆಗ ಗೋರಿಯ ಸಂಬಂಧಿಕರು ಲಂಬಾಣಿಗರ ತಲೆ ಕಡಿಯಲು ಆಜ್ಞೆ ಮಾಡಿದರು. ಹೆದರಿದ ಲಂಬಾಣಿಗರು ತಪ್ಪಿಸಿಕೊಳ್ಳಲು ಅರಣ್ಯಕ್ಕೆ ಬಂದರು. ತಮ್ಮ ಬಟ್ಟೆ ಬರೆಗಳನ್ನು ಕಳಚಿ ಮಣ್ಣಲ್ಲಿ ಅಡಗಿಸಿ ಅಡಗಿಕೊಂಡರು. ನಂತರ ಮಣ್ಣಲ್ಲಿ ಹಾಕಿದ ಬಟ್ಟೆಗಳು ಕೆಂಪಾದವು ಅವುಗಳನ್ನು ಅವರು ಉಡತೊಡಗಿದರು. ತಾವು ಬದುಕಿ ಉಳಿಯಲು ಕಾರಣವಾದ ಮಣ್ಣು ಕೆಂಪನ್ನು ಒದಗಿಸಿದ್ದರಿಂದ ಕೆಂಪು ಬಣ್ಣದ ಪ್ರೀತಿ ಅವರಲ್ಲಿ ಸಹಜವಾಗಿ ಬೆಳೆಯಿತು. ಹೀಗಾಗಿ ಇಂದಿಗೂ ಕೆಂಪು ಬಣ್ಣದ ವಸ್ತ್ರಗಳನ್ನು ಸ್ತ್ರೀಯರು ಹೆಚ್ಚಾಗಿ ಪ್ರೀತಿಸುತ್ತಾರೆ" (ನಾಯಕ ಡಿ.ಬಿ:೧೯೯೪:೨೧).

ಲಂಬಾಣಿ ಮಹಿಳೆಯರು ತುಂಡು ತುಂಡು ಬಟ್ಟೆಗಳನ್ನು ಜೋಡಿಸಿ ಅದರಲ್ಲಿ ಹಲವಾರು ಕಲಾತ್ಮಕ ಕಸೂತಿಗಳನ್ನು ರಚಿಸಿ ಮಧ್ಯೆ ಮಧ್ಯೆ ಕನ್ನಡಿಗಳನ್ನು ಹಾಕಿ ಹೊಲಿದಿರುತ್ತಾರೆ. ಉಡುಗೆಯಲ್ಲಿ ಬೇರೆ ಬೇರೆ ಬಣ್ಣಗಳು ಕಂಡರೂ ಕೆಂಪು ಬಣ್ಣ ಪ್ರಧಾನವಾಗಿರುತ್ತದೆ. ಈ ಕೆಂಪು ಬಣ್ಣವನ್ನು ಪುಷ್ಟೀಕರಿಸುವ ದೃಷ್ಟಾಂತ ಹೀಗಿದೆ. ಲಂಬಾಣಿಗರು ಮೂಲದಲ್ಲಿ ಸನ್ಯಾಸಿಗಳಿಗೆ ಅಗತ್ಯವಿರುವ ಕಾವಿ ಬಟ್ಟೆಗಳಿಗೆ ಬಳಸಲಾಗುತ್ತಿದ್ದ ಕಾವಿ ಬಣ್ಣದ ವ್ಯಾಪಾರವನ್ನು ಮಾಡುತ್ತಿದ್ದರು. ದೂರ ದೂರದ ಕಾವಿ ಮಣ್ಣಿರುವ ಗುಡ್ಡಗಳನ್ನು ಅಗೆದು ಸೋಸಿ ಕತ್ತೆಗಳ ಮೇಲೆ ಹೇರಿಕೊಂಡು ತಂದು ಸನ್ಯಾಸಿಗಳಿಗೆ ಮಾರುತ್ತಿದ್ದರು. ಒಮ್ಮೆ ಲಂಬಾಣಿ ಹೆಂಗಸು ಕಾವಿ ಬಣ್ಣದ ಧೂಳಿನಿಂದ ಕೂಡಿದ್ದ ತಮ್ಮ ಉಡುಪುಗಳನ್ನು ತೊಳೆದಾಗ ಅವಳ ಉಡುಪುಗಳು ಸಹ ಕಾವಿ ಬಣ್ಣವಾದವು. ಕಾವಿ ಬಣ್ಣದ ಉಡುಪುಗಳು ಶ್ವೇತವರ್ಣೀಯ ಲಂಬಾಣಿ ಮಹಿಳೆಯರಿಗೆ ತುಂಬಾ ಚೆನ್ನಾಗಿ ಒಪ್ಪಿದವು. ಅಂದಿನಿಂದ ಲಂಬಾಣಿ ಸ್ತ್ರೀಯರು ಕಾವಿ ಬಣ್ಣದ ಬಟ್ಟೆಗಳನ್ನು ಧರಿಸಲಾರಂಭಿಸಿದರು. ಕ್ರಮೇಣ ಅದು ಕೆಂಪು ಬಣ್ಣದ ಬಟ್ಟೆಗಳಿಗೆ ಪರಿವರ್ತನೆಯಾಗಿ ಅವು ಪ್ರಿಯವಾದವು. ಲಂಬಾಣಿಗರ ಉಡುಗೆ ಕಸೂತಿ ಪ್ರಧಾನವಾಗಿರುವುದರಿಂದ ಸೂಜಿಯು ಇವರ ಉಡುಗೆಯನ್ನು ತಯಾರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಮಹಿಳೆಯರು ಬಿಡುವಿನ ವೇಳೆಯಲ್ಲಿ ತಮ್ಮ ಉಡುಪುಗಳ ಮೇಲೆ ಗಾಜಿನ ತುಂಡು, ತವರ, ತಗಡಿನ ಗುಂಡಿ, ಕವಡೆಗಳು, ಮಣಿ, ಪಾರಾ (ಮಿಶ್ರಧಾತುವಿನ ಮಣಿ) ಹೀಗೆ ಮುಂತಾದ ಬಗೆ ಬಗೆಯ ವಸ್ತುಗಳನ್ನು ಜೋಡಿಸಿ, ವಿವಿಧ ಮಾದರಿಯ ಕಸೂತಿ ತೆಗೆದಿರುತ್ತಾರೆ. ಲಂಬಾಣಿಗರು ಬಳಸುವ ಉಡುಗೆಗಳು ಅಪೂರ್ಣವಾಗಿರುವದು ಕಂಡುಬರುತ್ತದೆ. ಇದಕ್ಕೊಂದು ಐತಿಹ್ಯ ಹೀಗಿದೆ. "ಯುದ್ಧ ವೀರರಾದ ಲಂಬಾಣಿಗರ ಪೂರ್ವಜರಲ್ಲೊಬ್ಬನು ಯುದ್ಧಕ್ಕೆಂದು ಧಾವಿಸಿ ಹೋಗಿ ಹೋರಾಟದಲ್ಲಿ ಇದ್ದಕ್ಕಿದ್ದಂತೆ ಅಕಾಲ ಮೃತ್ಯುವನ್ನು ಹೊಂದಿದ ವಾರ್ತೆಯನ್ನು ತಿಳಿದು ಅವನ ವೀರಶಿರೋಮಣಿ ಸತಿಯು ಅದೇ ತಾನೆ ತನ್ನ ಪೋಷಾಕುಗಳನ್ನು ಕಲಾತ್ಮಕವಾಗಿ ಕಸೂತಿ ಕೆಲಸದಿಂದ ಸಿದ್ಧಪಡಿಸಿಕೊಳ್ಳುತ್ತಿದ್ದ ಅವಳು ದಿಗ್ಭ್ರಮೆಗೊಂಡು ಕೈಯಲ್ಲಿಯ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ ಪತಿಯ ಸಾವಿಗೆ ಪ್ರತಿಯಾಗಿ ಅವಳು ಚಿತೆ ಏರಿದ ಸಂಗತಿ ಅತ್ಯಂತ

ರೋಮಾಂಚನವಾಗಿದೆ. ಅನಾಗರಿಕತೆಯಿಂದ ನಾಗರಿಕತೆಯ ಹೊಸ್ತಿಲಲ್ಲಿ ಕಾಲಿಡುತ್ತಿರುವ ಆ ಸಮಯದಲ್ಲಿ ಈ ವೀರಶಿರೋಮಣಿಯು ಬಿಟ್ಟು ಹೋದ ಅಪೂರ್ಣ ಬಟ್ಟೆಗಳನ್ನು ಮುಂದಿನ ಪೀಳಿಗೆ ಅವುಗಳನ್ನು ಕೈಗೆತ್ತಿಕೊಂಡು ಪೂರ್ಣ ಬಟ್ಟೆಗಳೆಂದು ಧರಿಸಿಕೊಂಡರೆಂದು ಕಾಣಿಸುತ್ತದೆ. ಕಾರಣ ಇಂದು ಲಂಬಾಣಿಗರು ಧರಿಸುವ ಲಂಗ(ಫೇಟಿಯಾ) ಹಾಗೂ ಕುಪ್ಪಸ(ಕಾಂಚಳಿ) ಇವೆರಡೂ ಅಪೂರ್ಣ ಬಟ್ಟೆಗಳಾಗಿರಲು ಸಾಧ್ಯವಿದೆ. ಏಕೆಂದರೆ ಲಂಗದ ಎಡಗಡೆಗೆ ಇಂದಿಗೂ ಕಾಲುಭಾಗ ಹೊಲಿಯದೇ ಹಾಗೆಯೇ ಬಿಟ್ಟಿರುತ್ತಾರೆ. ಕುಪ್ಪಸವೂ ಕೂಡ ಕೇವಲ ಎದೆ ಮುಚ್ಚುವ ಬೆನ್ನು ಸಂಪೂರ್ಣವಾಗಿ ಕಾಣುವ ಅಪೂರ್ಣ ಪೋಷಾಕು. ಇನ್ನು ಛಾಂಟಿಯಾ ಎನ್ನುವ ಮೇಲ್ಮುಸುಕು ಪ್ರಾಯಶಃ ಮೊದಮೊದಲು ಇದ್ದಂತಿಲ್ಲ. ಮೇಲಿನ ಎರಡೂ ಅಪೂರ್ಣ ಪೋಷಾಕುಗಳನ್ನು ಮುಚ್ಚಿಕೊಳ್ಳಲು ಅನಂತರದಲ್ಲಿ ಮಾಡಿಕೊಂಡರೆಂದು ಕಾಣಿಸುತ್ತದೆ" (ಖಂಡೋಬಾ ಪಿ ಕೆ:೧೯೯೧:೬೧). ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

**ಫೇಟಿಯಾ:** ಲಂಬಾಣಿ ಮಹಿಳೆಯರು ಧರಿಸುವ ಲಂಗವನ್ನು 'ಫೇಟಿಯಾ' ಎಂದು ಕರೆಯುತ್ತಾರೆ. ಫೇಟಿಯಾದ ಮೇಲ್ಭಾಗದಲ್ಲಿ ನಾಲ್ಕರಿಂದ ಐದು ಗೇಣು ಉದ್ದವಿರುವ, ಒಂದು ಗೇಣು ಅಗಲವಿರುವ ಭಾಗವನ್ನು 'ಲೇಪೋ' ಎಂದು ಕರೆಯುತ್ತಾರೆ. ಇದು ದಪ್ಪವಾದ ಭಾಗವಾಗಿದ್ದು, ಇದರ ಮೇಲೆ ಗಾಜಿನ ತುಂಡುಗಳನ್ನು ಜೋಡಿಸಿರುತ್ತಾರೆ. ಗಾಜಿನ ತುಂಡುಗಳ ಮಧ್ಯ ಭಾಗಗಳಲ್ಲಿ ಬಣ್ಣಬಣ್ಣದ ದಾರದಿಂದ ಗಾಡರ, ವೆಲೆ, ಅಲ್ಲಿಗಳಂಥಹ ಹಲವಾರು ರೀತಿಯ ಕಸೂತಿಗಳನ್ನು ಹೆಣೆದಿರುತ್ತಾರೆ. ಲೇಪೋದ ಕೆಳಗಡೆ ಒಂದು ಗೇಣು ಅಗಲ ೧೨ ಮೊಳ ಉದ್ದದ ಕರಿ ಬಣ್ಣದ ಬಟ್ಟೆ ಜೋಡಿಸಿರುತ್ತಾರೆ. ಇದನ್ನು ಕಾಳೋ ಛಾಟಿಯಾರ ಫೇರೋ ಎಂದು ಕರೆಯುತ್ತಾರೆ. ಇದರ ಕೆಳಗಡೆ ಒಂದು ಗೇಣು ಅಗಲ ೧೨ ಮೊಳ ಉದ್ದದ ಕೆಂಪು ಬಣ್ಣದ ಬಟ್ಟೆ ಇರುತ್ತದೆ. ಇದನ್ನು ರಾತಡೋ ಛಾಂಟಿಯಾರ ಫೇರೋ ಎನ್ನುತ್ತಾರೆ. ಈ ಎರಡು ಭಾಗಗಳ ಮೇಲೆ ಗಾಜುಗಳನ್ನು ಜೋಡಿಸಿ ಕಸೂತಿಗಳನ್ನು ಹಾಕಿರುತ್ತಾರೆ. ರಾತಡೋ ಛಾಂಟಿಯಾರ ಫೇರೋ ಕೆಳಭಾಗದಲ್ಲಿ ಒಳಗಡೆಯಿಂದ ಸೀರೆಯ ಬಟ್ಟೆಯನ್ನು ಜೋಡಿಸಿ ಅದರ ಮೇಲೆ ಹಳದಿ, ನೀಲಿ ಅಥವಾ ಹಸಿರು ಬಣ್ಣದ ಬಟ್ಟೆಯನ್ನು ಹಾಕಿ ವಿವಿಧ ಬಣ್ಣಗಳ ಬಟ್ಟೆಯ ಕಾಂಪಲಿ (ತ್ರಿಕೋನಾಕಾರದ ಚಿಕ್ಕ ಬಟ್ಟೆ)ಗಳನ್ನು ಹೊಲಿದಿರುತ್ತಾರೆ. ಇದನ್ನು ಪಾಯಿ ಎಂದು ಕರೆಯುತ್ತಾರೆ. ಪಾಯಿಯ ಕೆಳಗಡೆ ಕರಿ ಮತ್ತು ಕೆಂಪು ಬಣ್ಣಗಳ ಬಟ್ಟೆಯ ಪಟ್ಟಿ ಇದ್ದು ಅದರ ಮಧ್ಯೆ ಹಳದಿ ಬಟ್ಟೆಯನ್ನು ಹಾಕಿ ಹೊಲಿಯುತ್ತಾರೆ. ಇದು ೧೨ ಮೊಳ ಉದ್ದ ೫ ರಿಂದ ೬ ಇಂಚು ಅಗಲವಿರುತ್ತದೆ. ಇದನ್ನು ಲಾವಣ ಎಂದು ಕರೆಯುತ್ತಾರೆ. ಲೇಪೋದ ಬಲಭಾಗದಲ್ಲಿ ಫೇಟಿಯಾದಷ್ಟು ಉದ್ದವಿರುವ ಎರಡು ಕವಡೆಯ ಸರಗಳನ್ನು ಬಿಟ್ಟಿರುತ್ತಾರೆ. ಫೇಟಿಯಾದ ಎಡಗಡೆ ಸ್ವಲ್ಪ ಭಾಗವನ್ನು ಹೊಲಿಯದೇ ಹಾಗೆಯೇ ಬಿಟ್ಟಿರುತ್ತಾರೆ. ಇದನ್ನು ಘುಂಗೋ ಎಂದು ಕರೆಯುತ್ತಾರೆ. ಸೊಂಟಕ್ಕೆ ಫೇಟಿಯಾ ಕಟ್ಟಿಕೊಳ್ಳಲು ಲೇಪೋದ ಎರಡು ಕೊನೆಗೆ ಉದ್ದನೆಯ ಕಸಿಗಳನ್ನು ಅಳವಡಿಸಿ ಅದರ ಎರಡು ಕೊನೆಗೆ ಕವಡೆಗಳನ್ನು ಹಾಕಿ ಹೊಲಿದಿರುತ್ತಾರೆ. ಈ ರೀತಿಯಾಗಿ ಕಲಾತ್ಮಕತೆಯಿಂದ ತಯಾರಿಸಬೇಕಾದ

ಫೇಟಿಯಾ ಇಂದು ಅಳಿವಿನಂಚಿನಲ್ಲಿರುವದು ಕಂಡುಬರುತ್ತದೆ. ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಲ್ಲಿ ೪೫ ರಿಂದ ೫೦ ವಯೋಮಾನದ ಮೇಲಿರುವ ಮಹಿಳೆಯರು ಫೇಟಿಯಾ ಧರಿಸುತ್ತಿರುವದು ಗೋಚರಿಸುತ್ತದೆ. ಅದರಲ್ಲೂ ಹಲವಾರು ಮಹಿಳೆಯರು ದರ್ಜಿಯೇ ಹೊಲಿದು ಕೊಡುವ ಘಾಗರೋ ಧರಿಸುತ್ತಿರುವದು ಕಂಡುಬರುತ್ತಿದೆ. ಯುವ ಪೀಳಿಗೆ ಸಾಂಪ್ರದಾಯಿಕ ಫೇಟಿಯಾದ ಬದಲಾಗಿ ಸೀರೆ ಧರಿಸಲು ಒಲವು ತೋರುತ್ತಿರುವುದು ಸ್ಪಷ್ಟವಾಗುತ್ತದೆ.

**ಕಾಂಚಳಿ:** ಲಂಬಾಣಿ ಮಹಿಳೆಯರು ಧರಿಸುವ ಕುಪ್ಪಸವನ್ನು 'ಕಾಂಚಳಿ' ಎಂದು ಕರೆಯುತ್ತಾರೆ. "ಉತ್ತರ ಭಾರತದ ಮಹಿಳೆಯರು ತಮ್ಮ ಎದೆ ಭಾಗವನ್ನು ಕಂಕುಳಿ ಎಂಬ ವಸ್ತ್ರದಿಂದ ಮರೆಮಾಡಿಕೊಳ್ಳುತ್ತಿದ್ದರು. ಉತ್ತರ ಭಾರತದ ಮಹಿಳೆಯರು ಧರಿಸುತ್ತಿದ್ದ ಕಂಕುಳಿಗೂ ಲಂಬಾಣಿ ಮಹಿಳೆಯರು ಧರಿಸುವ ಕಾಂಚಳಿಗೂ ಸಾಮ್ಯವಿದೆ. ಕಂಕುಳಿಯ ಪರಿವರ್ತಿತ ರೂಪವೇ ಕಾಂಚಳಿ ಯಾಗಿದೆ. ಸರಳವಾದ ಪ್ರಾಚೀನ ಕಾಲದ ಉತ್ತರ ಭಾರತದ ಮಹಿಳೆಯರ ಕಂಕುಳಿ ಲಂಬಾಣಿ ಮಹಿಳೆಯರ ಕಲಾಪೂರ್ಣ ಕಸೂತಿಯಿಂದ ಸುಂದರವಾದ ಕಾಂಚಳಿಯಾಗಿ ಪರಿವರ್ತನೆಯಾಗಿರುವದು ಕಂಡುಬರುತ್ತದೆ" (ಸಣ್ಣರಾಮ: ೧೯೯೯:೨೨೧-೨೨೨). ಕರಿಛಾಟಿಯಾ ಮತ್ತು ಕೆಂಪು ಛಾಟಿಯಾದಿಂದ ತಯಾರಿಸಿದ ಅರ್ಧಮೀಟರನಷ್ಟು ಉದ್ದವಿರುವ ಕಾಂಚಳಿಗೆ ಕೆಂಪು, ನೀಲಿ ಅಥವಾ ಹಸಿರು ಬಣ್ಣದ ಬಟ್ಟೆಯ ತೋಳುಗಳನ್ನು ಮಾಡಿ ಹಚ್ಚುತ್ತಾರೆ. ಈ ತೋಳುಗಳನ್ನು 'ಬಾಂಯಾ' ಎನ್ನುತ್ತಾರೆ. ಎದೆಯ ಭಾಗದಲ್ಲಿ ಆಯತಾಕಾರದ ಎರಡು ಕಾಂಟಲಿಗಳಿರುತ್ತವೆ. ಒಂದೊಂದು ಕಾಂಟಲಿಯ ಮೇಲೆ ಒಂದೊಂದು ಅಥವಾ ಎರಡೆರಡು ಅಥವಾ ಚಿಕ್ಕಚಿಕ್ಕ ಹಲವಾರು ವೃತ್ತಾಕಾರದ ಅಥವಾ ಚೌಕಾಕಾರದ ಗಾಜಿನ ತುಂಡುಗಳನ್ನು ಹಾಕಿ ಕಸೂತಿ ಮಾಡಿ ಕೆಳಗಡೆ ಕಾಸಿನ ಬಂದಿಗಳನ್ನು ಚಿಕ್ಕ ಚಿಕ್ಕ ಗೆಜ್ಜೆಗಳನ್ನು ಹಾಕಿ ಹೆಣೆದಿರುತ್ತಾರೆ. ಕಾಂಚಳಿಯ ಕೆಳಭಾಗದಲ್ಲಿ ಗಾಜುಗಳನ್ನು ಹಾಕಿ ಹಲವಾರು ಕಸೂತಿಗಳನ್ನು ಹೆಣೆದು ಕೆಳಭಾಗದಲ್ಲಿ ಕಾಸಿನ ಬಿಲ್ಲೆಗಳನ್ನು ಹೆಣೆದಿರುವ ಪೇಟಿಯನ್ನು ಜೋಡಿಸಿರುತ್ತಾರೆ. ಎಡತೋಳಿನ ಮೇಲೆ ಗಾಜು ಹಾಗೂ ಹಲವಾರು ರೀತಿಯ ಕಸೂತಿಗಳಿಂದ ತಯಾರಿಸಿದ ಚೌಕಾಕಾರದ 'ಖವ್ಯಾ' ಹಚ್ಚಲಾಗುತ್ತದೆ. ಕಾಂಚಳಿಯ ತುಂಬೆಲ್ಲ ಅಲ್ಲಲ್ಲಿ ಚಿಕ್ಕಚಿಕ್ಕ ತಗಡಿನ ಗುಂಡಿ, ಪಾರಾಗಳನ್ನು ಹಾಕಿ ಸುಂದರವಾದ ಕುಸುರಿ ಕೆಲಸವನ್ನು ಮಾಡಲಾಗಿರುತ್ತದೆ. ಕಾಂಚಳಿಯನ್ನು ಕಟ್ಟಿಕೊಳ್ಳಲು ಎರಡೆರಡು ಕಸಿಗಳನ್ನು ಅಳವಡಿಸಿರುತ್ತಾರೆ. ಕಾಂಚಳಿಯು ಎದೆ ಹಾಗೂ ಹೊಟ್ಟೆಯ ಭಾಗವನ್ನು ಆವರಿಸುವಂತಿದ್ದು, ಬೆನ್ನಿನ ಭಾಗ ಪೂರ್ತಿ ತೆರೆದಿರುತ್ತದೆ.

**ಛಾಂಟಿಯಾ:** ಲಂಬಾಣಿ ಮಹಿಳೆಯರು ಮುಡಿಯಿಂದ ಅಡಿಯವರೆಗೆ ಹೊದ್ದುಕೊಳ್ಳಲು ಬಳಸುವ ವಸ್ತ್ರವನ್ನು 'ಛಾಂಟಿಯಾ' ಎಂದು ಕರೆಯುತ್ತಾರೆ. ಕೆಂಪು, ನೀಲಿ ಇಲ್ಲವೇ ಹಸಿರು ಬಣ್ಣದ ೫ ಮೊಳ ಅಗಲ, ೩ ಮೊಳ ಉದ್ದದ ಬಟ್ಟೆಯ ಮೇಲೆ ಎರಡು ಕಡೆ ಅಂಚಿನಲ್ಲಿ ಕರಿಯ ಬಟ್ಟೆಯ ಹಾಗೂ ಒಳಗಡೆ ಕೆಂಪು ಬಟ್ಟೆಯ ಪಟ್ಟಿಯನ್ನು ಜೋಡಿಸುತ್ತಾರೆ. ಛಾಂಟಿಯಾದ ಮಧ್ಯ ಭಾಗದಲ್ಲಿ ನೀಲಿ, ಕೆಂಪು, ಬಿಳಿ, ಹಸಿರು ಹೀಗೆ ವಿವಿಧ ಬಣ್ಣಗಳ ದಾರದಿಂದ ಐದು ಹೂವುಗಳ

ಕಸೂತಿ ಹಾಕುತ್ತಾರೆ. ಹೂವುಗಳ ಮಧ್ಯ ಚಿಕ್ಕಚಿಕ್ಕ ಗಾಜು ಕೂಡಿಸಿ ವಿವಿಧ ವಿನ್ಯಾಸಗಳ ಕಸೂತಿ ಹಾಕಿ ಅಲ್ಲಲ್ಲಿ ಖಾಂಪಲಿ(ತ್ರಿಕೋನಾಕಾರದ ಬಟ್ಟೆ ತುಂಡು)ಗಳನ್ನು ಹಚ್ಚುತ್ತಾರೆ. ಛಾಂಟಿಯಾದ ಬಲಗಡೆ ಒಂದುವರೆಯಿಂದ ಎರಡು ಮೊಳ ಉದ್ದವಿರುವ ಐದರಿಂದ ಆರು ಇಂಚು ಅಗಲವಿರುವ ಘಂಗಟೋ ಜೋಡಿಸುತ್ತಾರೆ. ಈ ಘಂಗಟೋದಲ್ಲಿ ಒಂದು ಸಾಲು ದೊಡ್ಡ ಗಾಜಿನ ಬಿಲ್ಲೆಗಳಾದರೆ ಇನ್ನೊಂದು ಸಾಲು ಚಿಕ್ಕ ಚಿಕ್ಕ ಗಾಜಿನ ಬಿಲ್ಲೆಗಳಿರುತ್ತವೆ. ಹೀಗೆ ಎರಡು ಮೂರು ಸಾಲುಗಳಲ್ಲಿ ಅಳವಡಿಸುತ್ತಾರೆ. ಗಾಜಿನ ಬಿಲ್ಲೆಗಳ ಮಧ್ಯ ಮತ್ತು ಕೊನೆಯಲ್ಲಿ ವೇಲ್, ಗಾಡರ, ಕುತರಾರ ನಕ್, ಮೋರೇರ ನಕ್‌ನಂತಹ ಕಸೂತಿಗಳನ್ನು ತೆಗೆಯುತ್ತಾರೆ. ಘಂಗಟೋದ ಕೊನೆಯಲ್ಲಿ ಕಾಸಿನ ಬಿಲ್ಲೆಗಳನ್ನು ಜೋಡಿಸಿರುತ್ತಾರೆ. ಛಾಂಟಿಯಾದಲ್ಲಿ 'ಘಂಗಟೋ' ಭಾರವಾದ ಭಾಗವಾಗಿರುತ್ತದೆ. ತಲೆಯ ಮೇಲಿನ ಸೆರಗು ಜಾರದಿರಲಿ ಎಂಬುದು ಇದರ ಉದ್ದೇಶವಾಗಿರಬಹುದು. ಏಕೆಂದರೆ ತಲೆಯ ಮೇಲೆ ಸದಾ ಸೆರಗನ್ನು ಹೊದ್ದುಕೊಂಡಿರುವದು ಗೌರವದ ಸಂಕೇತವಾಗಿದೆ. ಛಾಂಟಿಯಾ ಎಂಬ ವಸ್ತ್ರವು ಕಾಂಚಳಿ ಮುಚ್ಚದೇ ಇರುವ ಬೆನ್ನಿನ ಭಾಗ ಹಾಗೂ ಫೇಟಿಯಾದಲ್ಲಿ ಹೊಲಿಯದೇ ಬಿಟ್ಟಿರುವ ಭಾಗವನ್ನು ಆವರಿಸುವಂತಿದ್ದು. ಅಲಂಕಾರಿಕ ವಸ್ತ್ರವಾಗಿ ಮಾನ ಮುಚ್ಚುವ ಸಾಧನವಾಗಿ, ಗೌರವದ ಸಂಕೇತವಾಗಿ ಲಂಬಾಣಿಗರಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ.

**ಲಂಬಾಣಿ ಮಹಿಳೆಯರ ತೊಡುಗೆಗಳು:** ಲಂಬಾಣಿ ಮಹಿಳೆಯರು ಆಭರಣ ಪ್ರಿಯರು. ತಲೆಯಿಂದ ಪಾದದವರೆಗೆ ಹಲವಾರು ರೀತಿಯ ಆಭರಣಗಳನ್ನು ಧರಿಸುತ್ತಾರೆ. ತಲೆ, ಕೊರಳು, ಮೂಗು, ಕಿವಿ, ಕೈಕಾಲುಗಳು, ಕೈಬೆರಳು, ಕಾಲ್ಬೆರಳುಗಳಲ್ಲಿ ಭಾರವಾದ ವಿವಿಧ ವಿನ್ಯಾಸದ ಆಭರಣ ಗಳನ್ನು ತೊಡುತ್ತಾರೆ. ಇದನ್ನು ಗಮನಿಸಿಯೇ ಎಡ್ಗರ್‌ಥರ್ಸ್ಟನ್ "ಅವರ ಉಡುಗೆ ವಿಚಿತ್ರವಾಗಿರುತ್ತವೆ. ನಾವು ಕಂಡಂತೆ ಲಂಬಾಣಿ ಮಹಿಳೆಯರು ೮ ಅಥವಾ ೧೦ ಪೌಂಡ್ ತೂಕದ ಲೋಹ ಅಥವಾ ದಂತದ ಆಭರಣಗಳನ್ನು ತೋಳು ಮತ್ತು ಕಾಲುಗಳಲ್ಲಿ ಧರಿಸಿ ಕೊಂಡಿರುತ್ತಾರೆ."(Thurston E and Rangachari K:1909:211) ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾರೆ.

**ಘಗರಿ, ಟೋಪಲಿ:** ಲಂಬಾಣಿ ಮಹಿಳೆಯರು ಕೆನ್ನೆಯ ಎರಡು ಬದಿಯ ಕೂದಲಿಗೆ ಘಗರಿ ಟೋಪಲಿಯನ್ನು ಹೆಣೆದು ಕಟ್ಟುತ್ತಾರೆ. ಅದರ ಮೇಲೆ ಕಡ್ಡಿ ಅಡಿಸಾಂಕಳಿಯನ್ನು ಸೇರಿಸುತ್ತಾರೆ. ಇದನ್ನು ಚೋಟಲಾ ಎಂದು ಕರೆಯುತ್ತಾರೆ. ಘುಗರಿ ಟೋಪಲಿಯೊಂದಿಗಿರುವ ದಾರದಲ್ಲಿ ಕೂದಲನ್ನು ಹೆಣೆದು ಒಟ್ಟು ಸೇರಿಸಿ ತಲೆಯ ಮೇಲ್ಭಾಗದಲ್ಲಿ ತುರುಬಿನ ರೀತಿ ಕಟ್ಟುತ್ತಾರೆ. ಕರಿದಾರದಲ್ಲಿ ಕವಡೆಯಿಂದ ತಯಾರಿಸಿದ ಆಂಟಿಯನ್ನು ತರುಬಿಗೆ ಕಟ್ಟುತ್ತಾರೆ. ಕೆಳಗಡೆ ಮೂರು ಸರ ಬಿಟ್ಟಿರುತ್ತಾರೆ. ಒಂದೊಂದು ಸರಕ್ಕೆ ಐದೈದು ಕವಡೆಗಳನ್ನು ಜೋಡಿಸಿರುತ್ತಾರೆ.

**ಪಟಿಯಾ:** ಒಂದು ಇಂಚು ಅಗಲದ ಬಟ್ಟೆಯ ಮೇಲೆ ವಿವಿಧ ಬಣ್ಣಗಳ ಮಣಿಗಳ ಐದು ಸಾಲುಗಳನ್ನು ಹೆಣೆದು ಕುತ್ತಿಗೆಗೆ ಕಟ್ಟಿಕೊಳ್ಳುತ್ತಾರೆ. ಇದನ್ನು 'ಪಟಿಯಾ' ಎನ್ನುತ್ತಾರೆ.

**ಪತಡಿ:** ವಿವಿಧ ಬಣ್ಣಗಳ ಮಣಿಗಳಿಂದ ಹೆಣೆದು ಕುತ್ತಿಗೆಗೆ ಕಟ್ಟಿಕೊಳ್ಳುವ ಈ ತೊಡುಗೆಯನ್ನು 'ಪತಡಿ' ಎಂದು ಕರೆಯುತ್ತಾರೆ.

**ವಾಂಕಿಯಾ:** ಒಂದು ಚಂದ್ರಾಕಾರದ ತಗಡಿನ ಕೆಳಗಡೆ ಚಿಕ್ಕ ಚಿಕ್ಕ ಗೆಜ್ಜೆಗಳು ಹಾಗೂ ಚೈನುಗಳನ್ನು ಜೋಡಿಸಿರುತ್ತಾರೆ. ಇದನ್ನು ಕೊರಳಲ್ಲಿ ಧರಿಸುತ್ತಾರೆ.

**ತಿಂತರಿವಾಳ ಹಾಂಸಲಿ:** ಬೆಳ್ಳಿಯ ವೃತ್ತಾಕಾರದ ಸಾಧನಕ್ಕೆ ಎರಡು ಕಡೆ ಚೈನು ಜೋಡಿಸಿ ಅದರ ಕೆಳಗಡೆ ಚಿಕ್ಕ ಚಿಕ್ಕೆ ಗೆಜ್ಜೆಗಳನ್ನು ಅಳವಡಿಸಿರುತ್ತಾರೆ. ಈ ಗೆಜ್ಜೆಗಳು ಎದೆಯ ಮೇಲೆ ಬೀಳುವಂತಿರುತ್ತವೆ.

**ಹಾಂಸಲಿ:** ಬೆಳ್ಳಿಯ ವೃತ್ತಾಕಾರದ ಸಾಧನವಾಗಿದ್ದು ಕೊರಳಲ್ಲಿ ಧರಿಸುತ್ತಾರೆ. ಎದೆಯ ಭಾಗದಲ್ಲಿರುವ ಹಾಂಸಲಿಯ ಭಾಗವನ್ನು ಬೆಳ್ಳಿಯ ತಂತಿಯಿಂದ ವಿವಿಧ ವಿನ್ಯಾಸದಲ್ಲಿ ಅಲಂಕಾರಗೊಳಿಸಲಾಗಿರುತ್ತದೆ.

**ಪಿಸಾರ ಹಾರ:** ಐವತ್ತು ಪೈಸೆಯ ನಾಣ್ಯಗಳಿಗೆ ಕೊಂಡಿಯನ್ನು ಮಾಡಿಸಿ ದಪ್ಪನೆಯ ದಾರದಲ್ಲಿ ಮಧ್ಯ ಮಧ್ಯ ಕೆಂಪು ಮಣಿಗಳೊಂದಿಗೆ ಪೋಣಿಸಲಾಗುತ್ತದೆ. ಈ ನಾಣ್ಯಗಳ ಸರದ ಮಧ್ಯ ಎದೆಯ ಭಾಗದಲ್ಲಿ ಒಂದು ರೂಪಾಯಿಯ ನಾಣ್ಯವನ್ನು ಪೋಣಿಸಿರುತ್ತಾರೆ. ಇದನ್ನು 'ರಪಿಯಾರ ಹಾರ' ಎಂತಲೂ ಕರೆಯುತ್ತಾರೆ.

**ಕನಿಯಾ:** ಮೇಲ್‌ಕಿವಿಯ ಭಾಗದಲ್ಲಿಯ ವೃತ್ತಾಕಾರದ ಆಭರಣ. ಅದಕ್ಕೆ ಉದ್ದದ ಚೈನನ್ನು ಜೋಡಿಸಿರುತ್ತಾರೆ. ಚೈನಿನ ಕೆಳಭಾಗದಲ್ಲಿ ಚಿಕ್ಕ ಚಿಕ್ಕ ಗೆಜ್ಜೆಗಳಿರುತ್ತವೆ. ಇದು ಕಿವಿಯಿಂದ ಹೊಟ್ಟೆಯವರೆಗೆ ಚಾಚಿಕೊಂಡಿರುತ್ತದೆ. ಒಂದೊಂದು ಕಿವಿಯಲ್ಲಿ ಎರಡೆರಡು ಕನಿಯಾ ಹಾಕಿರುತ್ತಾರೆ.

**ಮರಕಿ:** ಕಿವಿ ಆಲೆಯಲ್ಲಿ ವೃತ್ತಾಕಾರದ ಆಭರಣವನ್ನು ಹಾಕಿ ಅದಕ್ಕೆ ಜೋಡಿಸಿರುವ ಚೈನನ್ನು ಕಿವಿಯ ಮೇಲ್ಭಾಗದಲ್ಲಿರುವ ಕೂದಲಿಗೆ ಜೋಡಿಸಲಾಗಿರುತ್ತದೆ.

**ಘುಲಾ:** ಕಿವಿಯಲ್ಲಿ ಹಾಕಿಕೊಳ್ಳುವ ಓಲೆಯನ್ನು ಘುಲಾ ಎಂದು ಕರೆಯುತ್ತಾರೆ.

**ಭೂರಿಯಾ:** ಮೂಗಿನಲ್ಲಿ ಹಾಕಿಕೊಳ್ಳುವ ಬಂಗಾರದ ವೃತ್ತಾಕಾರದ ಆಭರಣ ಇದರ ಮೇಲೆ ವಿವಿಧ ರೀತಿಯ ವಿನ್ಯಾಸವನ್ನು ಮಾಡಿರುತ್ತಾರೆ.

**ಹಳಜಾವಣಿ:** ಭೂರಿಯಾದ ಢಾಲದಿಂದ ಚೋಟಲಾದ ಮೇಲ್ಭಾಗಕ್ಕೆ ಒಂದು ಚೈನನ್ನು ಜೋಡಿಸಿರುತ್ತಾರೆ. ಚೈನಿನ ಕೊನೆಯಲ್ಲಿ ಚಿಕ್ಕ ಚಿಕ್ಕ ಗೆಜ್ಜೆಗಳಿರುತ್ತವೆ.

**ಲಾಂಲ್ದಿರ ಹಾರ:** ವಿವಿಧ ಬಣ್ಣದ ಮಣೆಗಳನ್ನು ದಾರದಲ್ಲಿ ಪೋಣಿಸಿ ಎರಡು ಅಥವಾ ನಾಲ್ಕು ಸರಗಳನ್ನಾಗಿ ಕೊರಳಲ್ಲಿ ಹಾಕಿಕೊಳ್ಳುತ್ತಾರೆ. ಈ ಸರ ಎದೆಯವರೆಗೆ ಚಾಚಿಕೊಂಡಿರುತ್ತದೆ.

**ಕಸೋಟಿಯಾ:** ಎರಡು ಕೈಗಳ ರಟ್ಟೆಗಳಲ್ಲಿ ಕಟ್ಟಿಕೊಳ್ಳುವ ಆಭರಣ. ರಟ್ಟೆಗೆ ಕಟ್ಟಿಕೊಳ್ಳಲು ಪಟ್ಟಿಯನ್ನು ತಯಾರಿಸಿ ಅದರ ಮೇಲೆ ಬೆಸೆದ ನಾಣ್ಯಗಳನ್ನು ಹಾಕಿ ಸಿದ್ಧಪಡಿಸಿರುತ್ತಾರೆ. ಅದರ

ಕೆಳಗಡೆ ಕವಡೆ ಅಥವಾ ಬಣ್ಣ ಬಣ್ಣದ ಮಣಿಗಳಿಂದ ತಯಾರಿಸಿದ ಎರಡೆರಡು ಸರಗಳನ್ನು ಜೋಡಿಸಿರುತ್ತಾರೆ. ಈ ಸರಗಳನ್ನು 'ಫಳಿ' ಎಂದು ಕರೆಯುತ್ತಾರೆ. ಫಳಿಯ ಕೆಳಗಡೆ ಪಾರಿಯ ಝುಂಡಿ ಮತ್ತು ಚಿಕ್ಕ ಚಿಕ್ಕ ಗೆಜ್ಜೆಗಳನ್ನು ಅಳವಡಿಸಿರುತ್ತಾರೆ.

**ಚೂಡೋ:** ಕಸೋಟಿಯಾದ ಮೇಲೆ ಧರಿಸುವ ಬಿಳಿ ಬಣ್ಣದ ಹಸ್ತದಂತಿಯ ಬಳೆ. ಎರಡು ತೋಳುಗಳಲ್ಲಿ ಒಂದೊಂದು ಚೂಡೋ ಧರಿಸುತ್ತಾರೆ.

**ಚೂಡಿ:** ಅಂಗೈಯಿಂದ ಮುಂಗೈವರೆಗೆ ಐದರಿಂದ ಆರು ಬಿಳಿ ಬಣ್ಣದ ಅಗಲವಾದ ಪ್ಲಾಸ್ಟಿಕ್ ಬಳೆಗಳನ್ನು ಎರಡು ಕೈಗಳಲ್ಲಿ ಧರಿಸುತ್ತಾರೆ.

**ಕರಬರಿ:** ಎಡಗೈಯ ಹೆಬ್ಬೆರಳಿನಲ್ಲಿ ಧರಿಸುವ ಬೆಳ್ಳಿಯ ಉಂಗುರ.

**ಘೂಲಾ:** ಎಡಗೈಯ ತೋರ್ಬೆರಳು ಹಾಗೂ ಉಂಗುರ ಬೆರಳುಗಳಲ್ಲಿ ಉಂಗುರಿನ ಮೇಲೆ ೨೫ ಪೈಸೆಯ ನಾಲ್ಕು ನಾಣ್ಯಗಳನ್ನು ಬೆಸೆದು ಅದರ ಮೇಲೆ ಚಿಕ್ಕ ಚಿಕ್ಕ ಗೆಜ್ಜೆಗಳನ್ನು ಜೋಡಿಸಿರುವ ಘೂಲಾ ಧರಿಸುತ್ತಾರೆ.

**ರಪಿಯಾ:** ಬಲಗೈ ತೋರ್ಬೆರಳು ಹಾಗೂ ಉಂಗುರ ಬೆರಳಿನಲ್ಲಿ ಉಂಗುರಿನ ಮೇಲೆ ಒಂದು ರೂಪಾಯಿಯ ನಾಣ್ಯವನ್ನು ಬೆಸೆದಿರುವ ರಪಿಯಾ ಧರಿಸುತ್ತಾರೆ.

**ಕಸ್ಸೆ:** ಬಟ್ಟೆಯಿಂದ ತಯಾರಿಸಿದ ಬೆರಳಾಕಾರದ ವಸ್ತುವಿನ ಮೇಲೆ ವಿವಿಧ ವಿನ್ಯಾಸದ ಕಸೂತಿ ಯನ್ನು ತೆಗೆದು ಎರಡು ಕಾಲುಗಳಲ್ಲಿ ಹಾಕಿಕೊಳ್ಳುತ್ತಾರೆ. ಇದನ್ನು 'ಕಸ್ಸ' ಎಂತಲೂ ಕರೆಯುತ್ತಾರೆ.

**ವಾಂಕಡಿ:** ಅಂಕುಡೊಂಕಾದ ಹಿತ್ತಾಳೆಯ ಆಭರಣವನ್ನು ಎರಡು ಕಾಲುಗಳಲ್ಲಿ ಹಾಕಿಕೊಳ್ಳುತ್ತಾರೆ.

**ಅಂಗುತಳಾ:** ಎರಡು ಕಾಲುಗಳ ಹೆಬ್ಬೆರಳಿನಲ್ಲಿ ಎರಡೆರಡು ಬೆಳ್ಳಿಯ ಉಂಗುರಗಳನ್ನು ಹಾಕಿ ಕೊಳ್ಳುತ್ತಾರೆ.

**ಚಟಕಿ:** ಕಾಲಿನ ಉಂಗುರ ಬೆರಳಿನಲ್ಲಿ ಎರಡೆರಡು ಬೆಳ್ಳಿಯ ಉಂಗುರಗಳನ್ನು ಧರಿಸುತ್ತಾರೆ.

**ಬಿಚ್ಚುವಾ:** ಎರಡು ಕಾಲಿನ ಮಧ್ಯ ಬೆರಳು ಹಾಗೂ ನಾಲ್ಕನೇ ಬೆರಳುಗಳಿಗೆ ಒಂದೊಂದು ಉಂಗುರಗಳನ್ನು ಹಾಕಿಕೊಳ್ಳುತ್ತಾರೆ.

**ಕರಾಂಗಳಿ:** ಎರಡು ಕಾಲಿನ ಕಿರಿ ಬೆರಳಿನಲ್ಲಿ ಹಾಕಿಕೊಳ್ಳುವ ಒಂದೊಂದು ಉಂಗುರಗಳನ್ನು ಕರಾಂಗಳಿ ಎಂದು ಕರೆಯುತ್ತಾರೆ.

**ಗರತಣಿ:** ವಿವಾಹವಾಗದ ಯುವತಿಯು ತನ್ನೆರಡು ಕಾಲುಗಳಲ್ಲಿ ಹಾಕಿಕೊಳ್ಳುವ ನೀಲಿ ಮಣಿಗಳ ಸರವನ್ನು ಗರತಣಿ ಎನ್ನುತ್ತಾರೆ.

**ಜೋಡಿ:** ವಿವಾಹವಾಗದ ತರುಣಿಯ ಕಾಲಲ್ಲಿ ಹಾಕಿಕೊಳ್ಳುವ ಗೆಜ್ಜೆಯ ಸರ.

**ಅಡಭೇಡಾರ ಕೋತಳಿ:** ಮಹಿಳೆಯರು ತಮ್ಮ ಛಾಂಟಿಯಾದ ಬಲ ತುದಿಗೆ ಕಟ್ಟಿಕೊಳ್ಳುವ ಸಾಧನವನ್ನು 'ಅಡಭೇಡಾರ ಕೋತಳಿ' ಎನ್ನುತ್ತಾರೆ. ಬಟ್ಟೆಯಿಂದ ಚಿಕ್ಕ ಚೀಲವನ್ನು ತಯಾರಿಸಿ ಅದರ ಎರಡು ಕಡೆ ಐದ್ಯೆದು ಗಾಜಿನ ತುಂಡುಗಳನ್ನು ಹಾಕಿ ಹೊಲಿಯುತ್ತಾರೆ. ಇಂತಹ ಕೋತಳಿಯ ಮೇಲೆ ಕಟ್ಟಿಗೆಯಿಂದ ತಯಾರಿಸಿದ ಉಂಗುರದಂತ ಎರಡು ಸಾಧನಗಳನ್ನು ಹಾಕುತ್ತಾರೆ. ಇವುಗಳನ್ನು 'ಬೊದ್ಲು' ಎಂದು ಕರೆಯುತ್ತಾರೆ.

**ಪೀಸಾರ ಪೋಡಿಯಾ:** ಎಂಟರಿಂದ ಒಂಭತ್ತು ಇಂಚು ಉದ್ದ ಹಾಗೂ ಆರರಿಂದ ಏಳು ಇಂಚು ಅಗಲವಿರುವ ಚಿಕ್ಕ ಚೀಲವನ್ನು ಹೊಲಿದು ಅದರ ಮೇಲೆ ಬಣ್ಣ ಬಣ್ಣದ ಮಣಿಗಳಿಂದ ಶೃಂಗಾರಮಯವಾಗಿ ಹೊಲಿಯುತ್ತಾರೆ. ಈ ಚೀಲದ ಕೆಳಗಡೆ ಬಣ್ಣಬಣ್ಣದ ಮಣಿಗಳ ಸರಗಳನ್ನು ಜೋಡಿಸುತ್ತಾರೆ. ಕಟ್ಟಿಕೊಳ್ಳಲು ಎರಡು ಕಡೆ ಕಸಿಗಳನ್ನು ಹೊಲಿಯುತ್ತಾರೆ. ಈ ಹಣ ಹಾಕುವ ಚೀಲವನ್ನು ಮಹಿಳೆಯರು ಬಲಗಡೆ ಫೇಟಿಯಾ ಕಟ್ಟುವ ಕಸಿಯಲ್ಲಿ ಹಾಕಿ ಕಟ್ಟುತ್ತಾರೆ.

ಸುಮಂಗಲಿಯವರು ಎಲ್ಲ ರೀತಿಯ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ. ವಿಧವೆಯರು ಮುತ್ತೈದೆಯ ಸಂಕೇತದ ಉಡುಗೆ-ತೊಡುಗೆಗಳಾದ ಘುಘಟೋ, ಕಾಂಟಲಿ, ಖವಿಯಾ, ಘುಗರಿ, ರಟ್ಟಿರ ಚೂಡೋ, ಕಸೋಟಿಯಾಗಳನ್ನು ಧರಿಸುವುದಿಲ್ಲ. ವಿವಾಹವಾಗದ ಯುವತಿಯರು ಮುತ್ತೈದೆ ಸಂಕೇತದ ಉಡುಗೆ ತೊಡುಗೆಗಳನ್ನು ಬಿಟ್ಟು ಉಳಿದೆಲ್ಲ ಬಟ್ಟೆ, ಆಭರಣಗಳನ್ನು ಹಾಕಿಕೊಳ್ಳುತ್ತಾರೆ. ಗರತಣಿ ಮತ್ತು ಜೋಡಿ ತರುಣಿಯರಿಗೆ ಮಾತ್ರ ಮೀಸಲಾಗಿರುವ ತೊಡುಗೆಗಳಾಗಿವೆ.

**ಕೋಷ್ಟಕ ೪.೪.೧. ಗುಲಬರ್ಗಾ ಜಿಲ್ಲೆಯ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ**

| ತಾಂಡಾಗಳು | ಒಟ್ಟು ಹೆಣ್ಣುಮಕ್ಕಳು | ಪಾರಂಪರಿಕ ಉಡುಗೆ ತೊಡುಗೆ ಧರಿಸಿದವರು |
|---|---|---|
| ರಿಮೋಟ್ ತಾಂಡಾ | ೨೫೦ | ೮೨ |
| ಗ್ರಾಮಹತ್ತಿರ ತಾಂಡಾ | ೨೧೯ | ೬೧ |
| ರಸ್ತೆ ಹತ್ತಿರ ತಾಂಡಾ | ೧೮೫ | ೪೮ |

(ಮೂಲ: ಕ್ಷೇತ್ರಾಧ್ಯಯನ)

ಸಮೀಕ್ಷೆಗೊಳಪಟ್ಟ ಗುಲಬರ್ಗಾ ಜಿಲ್ಲೆಯ ರಿಮೋಟ್ ತಾಂಡಾದಲ್ಲಿ ೨೫೦ ಮಹಿಳೆಯರಿದ್ದು, ಅವರಲ್ಲಿ ಪಾರಂಪರಿಕ ಉಡುಗೆ ತೊಡುಗೆ ಧರಿಸುತ್ತಿರುವವರ ಪ್ರಮಾಣ ಶೇ. ೩೨.೮ರಷ್ಟಿದೆ. ಗ್ರಾಮ ಹತ್ತಿರದ ತಾಂಡಾದಲ್ಲಿ ೨೧೯ ಮಹಿಳೆಯರಿದ್ದು, ಶೇ. ೨೭.೮೫ರಷ್ಟು ಮಹಿಳೆಯರು ಹಾಗೂ ರಸ್ತೆ ಹತ್ತಿರದ ತಾಂಡಾದಲ್ಲಿ ೧೮೫ ಮಹಿಳೆಯರಿದ್ದು, ಶೇ. ೨೫.೯೪ರಷ್ಟು ಮಹಿಳೆಯರು ಪಾರಂಪರಿಕ ಉಡುಗೆ ತೊಡುಗೆ ಧರಿಸುತ್ತಿರುವುದು ಕಂಡುಬರುತ್ತದೆ. ಗ್ರಾಮ ಹತ್ತಿರ ಮತ್ತು ರಸ್ತೆ ಹತ್ತಿರದ

ತಾಂಡಾಗಳಿಗಿಂತ ಪಾರಂಪರಿಕ ಉಡುಗೆ ತೊಡುಗೆ ಧರಿಸುತ್ತಿರುವವರ ಪ್ರಮಾಣ ರಿಮೋಟ್ ತಾಂಡಾದಲ್ಲಿ ಹೆಚ್ಚಾಗಿರುವುದು ಸ್ಪಷ್ಟವಾಗುತ್ತದೆ.

**ಕೋಷ್ಟಕ ೪.೪.೨. ಸೋಲಾಪುರ ಜಿಲ್ಲೆಯ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ**

| ತಾಂಡಾಗಳು | ಒಟ್ಟು ಹೆಣ್ಣುಮಕ್ಕಳು | ಪಾರಂಪರಿಕ ಉಡುಗೆ ತೊಡುಗೆ ಧರಿಸಿದವರು |
|---|---|---|
| ರಿಮೋಟ್ ತಾಂಡಾ | ೨೩೮ | ೮೨ |
| ಗ್ರಾಮಹತ್ತಿರ ತಾಂಡಾ | ೧೯೮ | ೨೪ |
| ರಸ್ತೆ ಹತ್ತಿರ ತಾಂಡಾ | ೧೩೧ | ೧೮ |

(ಮೂಲ: ಕ್ಷೇತ್ರಾಧ್ಯಯನ)

ಸೋಲಾಪುರ ಜಿಲ್ಲೆಯ ರಿಮೋಟ್ ತಾಂಡಾದಲ್ಲಿ ೨೩೮, ಗ್ರಾಮ ಹತ್ತಿರದ ತಾಂಡಾದಲ್ಲಿ ೧೯೮ ಹಾಗೂ ರಸ್ತೆ ಹತ್ತಿರದ ತಾಂಡಾದಲ್ಲಿ ೧೩೧ ಮಹಿಳೆಯರಿದ್ದು, ಪಾರಂಪರಿಕ ಉಡುಗೆ ತೊಡುಗೆ ಧರಿಸುತ್ತಿರುವವರ ಪ್ರಮಾಣ ಕ್ರಮವಾಗಿ ಶೇ. ೩೪.೪೫, ಶೇ. ೧೨.೧೨ ಹಾಗೂ ಶೇ. ೧೩.೭೪ರಷ್ಟಿರುವುದು ಕಂಡುಬರುತ್ತದೆ. ಗ್ರಾಮ ಹತ್ತಿರ ಮತ್ತು ರಸ್ತೆ ಹತ್ತಿರದ ತಾಂಡಾಗಳಿಗಿಂತ ರಿಮೋಟ್ ತಾಂಡಾದಲ್ಲಿ ಪಾರಂಪರಿಕ ಉಡುಗೆ ತೊಡುಗೆ ಧರಿಸುತ್ತಿರುವವರ ಪ್ರಮಾಣ ಅಧಿಕ ವಾಗಿರುವುದು ಕಂಡುಬರುತ್ತದೆ.

**ಕೋಷ್ಟಕ ೪.೪.೩. ರಂಗಾರೆಡ್ಡಿ ಜಿಲ್ಲೆಯ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ**

| ತಾಂಡಾಗಳು | ಒಟ್ಟು ಹೆಣ್ಣುಮಕ್ಕಳು | ಪಾರಂಪರಿಕ ಉಡುಗೆ ತೊಡುಗೆ ಧರಿಸಿದವರು |
|---|---|---|
| ರಿಮೋಟ್ ತಾಂಡಾ | ೨೫೮ | ೭೮ |
| ಗ್ರಾಮಹತ್ತಿರ ತಾಂಡಾ | ೧೮೮ | ೪೪ |
| ರಸ್ತೆ ಹತ್ತಿರ ತಾಂಡಾ | ೨೬೫ | ೬೬ |

(ಮೂಲ: ಕ್ಷೇತ್ರಾಧ್ಯಯನ)

ರಂಗಾರೆಡ್ಡಿ ಜಿಲ್ಲೆಯಲ್ಲಿ ಸಮೀಕ್ಷೆಗೊಳಪಟ್ಟ ರಿಮೋಟ ತಾಂಡಾಗಳಲ್ಲಿ ೨೫೮ ಮಹಿಳೆಯರಿದ್ದು, ಶೇ. ೩೦.೨೩, ಗ್ರಾಮ ಹತ್ತಿರದ ತಾಂಡಾದಲ್ಲಿ ೧೮೪ ಮಹಿಳೆಯರಿದ್ದು, ಶೇ. ೨೩.೯೧ ಹಾಗೂ ರಸ್ತೆ ಹತ್ತಿರದ ತಾಂಡಾದಲ್ಲಿ ೨೬೫ ಮಹಿಳೆಯರಿದ್ದು, ಶೇ. ೨೪.೯೦ರಷ್ಟು ಮಹಿಳೆಯರು ಪಾರಂಪರಿಕ ಉಡುಗೆ ತೊಡುಗೆ ಧರಿಸುತ್ತಿರುವುದು ಕಂಡುಬರುತ್ತಿದೆ. ರಂಗಾರೆಡ್ಡಿ ಜಿಲ್ಲೆಯಲ್ಲಿಯೂ ಸಹ ಗ್ರಾಮ ಹತ್ತಿರದ ಮತ್ತು ರಸ್ತೆ ಹತ್ತಿರದ ತಾಂಡಾಗಳಿಗಿಂತ ರಿಮೋಟ್ ತಾಂಡಾದಲ್ಲಿ ಸಾಂಪ್ರದಾಯಿಕ ಉಡುಗೆ ತೊಡುಗೆ ಧರಿಸುತ್ತಿರುವವರ ಪ್ರಮಾಣ ಹೆಚ್ಚಾಗಿರುವುದು ಗೋಚರಿಸುತ್ತದೆ.

**ಕೋಷ್ಟಕ ೪.೪.೪. ಮೂರು ಜಿಲ್ಲೆಗಳಲ್ಲಿ ಪಾರಂಪರಿಕ ಉಡುಗೆ-ತೊಡುಗೆ ಧರಿಸಿದ ಲಂಬಾಣಿ ಮಹಿಳೆಯರ ವಿವರ**

| ತಾಂಡಾಗಳು | ಒಟ್ಟು ಹೆಣ್ಣುಮಕ್ಕಳು | ಪಾರಂಪರಿಕ ಉಡುಗೆ ತೊಡುಗೆ ಧರಿಸಿದವರು |
|---|---|---|
| ಗುಲಬರ್ಗಾ | ೬೫೪ | ೧೯೧ |
| ಸೋಲಾಪುರ | ೫೬೭ | ೧೨೪ |
| ರಂಗಾರೆಡ್ಡಿ | ೭೦೭ | ೧೮೮ |

(ಮೂಲ: ಕ್ಷೇತ್ರಾಧ್ಯಯನ)

ಮೂರು ಜಿಲ್ಲೆಗಳನ್ನು ತುಲನಾತ್ಮಕವಾಗಿ ವೀಕ್ಷಿಸಿದಾಗ ಗುಲಬರ್ಗಾ ಜಿಲ್ಲೆಯಲ್ಲಿ ೬೫೪ ಸ್ತ್ರೀಯರಲ್ಲಿ ಶೇ. ೨೯.೨೦, ಸೋಲಾಪುರ ಜಿಲ್ಲೆಯಲ್ಲಿ ೫೬೭ ಸ್ತ್ರೀಯರಲ್ಲಿ ಶೇ. ೨೧.೮೬, ರಂಗಾರೆಡ್ಡಿ ಜಿಲ್ಲೆಯಲ್ಲಿ ೭೦೭ ಸ್ತ್ರೀಯರಲ್ಲಿ ಶೇ. ೨೬.೫೯ರಷ್ಟು ಸ್ತ್ರೀಯರು ಪಾರಂಪರಿಕ ಉಡುಗೆ ತೊಡುಗೆ ಧರಿಸುತ್ತಿರುವುದು ಕಂಡುಬರುತ್ತದೆ. ಮೂರು ಜಿಲ್ಲೆಗಳ ರಿಮೋಟ್ ತಾಂಡಾಗಳಲ್ಲಿ ಪಾರಂಪರಿಕ ಉಡುಗೆ ತೊಡುಗೆ ತೊಡುವವರ ಪ್ರಮಾಣ ಅಧಿಕವಾಗಿದ್ದು, ಈ ತಾಂಡಾಗಳು ಗ್ರಾಮ, ನಗರಗಳಿಂದ ದೂರವಿರುವುದರಿಂದ ಇತರೆ ಸಮುದಾಯಗಳ ಹಾಗೂ ಆಧುನಿಕತೆಯ ಪ್ರಭಾವ ಗ್ರಾಮ ಮತ್ತು ರಸ್ತೆ ಹತ್ತಿರದ ತಾಂಡಾಗಳಿಗಿಂತ ಕಡಿಮೆಯಿರುವದು ಸ್ಪಷ್ಟವಾಗುತ್ತದೆ. ಗುಲಬರ್ಗಾ ಹಾಗೂ ರಂಗಾರೆಡ್ಡಿ ಜಿಲ್ಲೆಗಳಿಗಿಂತ ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ಪಾರಂಪರಿಗೆ ಉಡುಗೆ ತೊಡುಗೆ ಧರಿಸುವವರ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತದೆ.

ಕಾಲಾಂತರದಲ್ಲಿ ಲಂಬಾಣಿ ಮಹಿಳೆಯರು ಆಧುನಿಕತೆಯ ಪ್ರಭಾವದಿಂದಾಗಿ ತಮ್ಮ ಕಲಾತ್ಮಕವಾದ ಉಡುಗೆ ತೊಡುಗೆಗಳಿಂದ ದೂರವಾಗುತ್ತಿದ್ದು ಸೀರೆ, ಕುಪ್ಪಸ, ಗಾಜಿನ ಬಳೆಗಳನ್ನು ಧರಿಸುತ್ತಿದ್ದಾರೆ. ಯುವತಿಯರು ಲಂಗ, ದಾವಣಿ, ಚೂಡಿದಾರ, ಸೀರೆ ಹೀಗೆ ಆಧುನಿಕ ಉಡುಗೆ ತೊಡುಗೆಗಳಿಗೆ ಮಾರುಹೋಗುತ್ತಿರುವದು ಕಂಡುಬರುತ್ತದೆ. ಸೋಲಾಪುರ ಜಿಲ್ಲೆಯಲ್ಲಿ ಪಾರಂಪರಿಕ ಉಡುಗೆ ತೊಡುಗೆಗಳು ಅಳಿವಿನಂಚಿನಲ್ಲಿವೆ. ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರಲ್ಲಿ ಸಾಂಪ್ರದಾಯಿಕ ಉಡುಗೆ ತೊಡುಗೆಗಳನ್ನು ತೊಡುವವರ ಪ್ರಮಾಣ ಹೆಚ್ಚಾಗಿರುವದು ಕಂಡುಬರುತ್ತದೆ. ಇದೇ ರೀತಿಯ ಸನ್ನಿವೇಶ ಮುಂದುವರೆದರೆ ಮುಂದಿನ ದಿನಗಳಲ್ಲಿ ಲಂಬಾಣಿ ಮಹಿಳೆಯರ ಕಲಾತ್ಮಕವಾದ ಪಾರಂಪರಿಕ ಉಡುಗೆ ತೊಡುಗೆಗಳು ಕಣ್ಮರೆಯಾಗುತ್ತವೆ.

**ಲಂಬಾಣಿ ಗಂಡಸರ ಉಡುಗೆ ತೊಡುಗೆಗಳು**

ಲಂಬಾಣಿ ಗಂಡಸರ ಉಡುಗೆ ತೊಡುಗೆಗಳು ಮಹಿಳೆಯರಷ್ಟು ಆಕರ್ಷಕವಾಗಿರುವುದಿಲ್ಲ. ವಿವಾಹ ಸಂದರ್ಭದಲ್ಲಿ ಮಾತ್ರ ವಿಶೇಷ ಉಡುಗೆ ತೊಡುಗೆಗಳನ್ನು ಧರಿಸುತ್ತಾರೆ. ತಲೆಗೆ ೧೦-೧೨ ಮೊಳ ಉದ್ದದ ಕೆಂಪು, ಹಳದಿ ಅಥವಾ ಬಿಳಿ ಬಣ್ಣದ ರುಮಾಲನ್ನು ಕಟ್ಟಿಕೊಳ್ಳುತ್ತಾರೆ. ಬಿಳಿ ಬಣ್ಣದ ಅಂಗಿ, ಪಂಚೆಯನ್ನು ಧರಿಸಿ ಕಾಲಲ್ಲಿ ಮೋಚಡಿ(ಚಪ್ಪಲಿ) ಹಾಕಿಕೊಳ್ಳುತ್ತಾರೆ.

**ಕಣದೋರೋ:** ಲಂಬಾಣಿಗರು ಸೊಂಟಕ್ಕೆ ಕಟ್ಟಿಕೊಳ್ಳುವ ಉಡಿದಾರವನ್ನು 'ಕಣದೋರೋ' ಎಂದು ಕರೆಯುತ್ತಾರೆ. ಬೆಳ್ಳಿಯ ಎರಡು ಎಳೆಗಳಿಂದ ಕೂಡಿದ ಉಡಿದಾರದ ಬಲಗಡೆ ಚೌಕಾಕಾರದ ಚಿಕ್ಕ ಪಟ್ಟಿ ಇರುತ್ತದೆ. ಇದನ್ನು 'ಮಕ್ಕಾ' ಎನ್ನುತ್ತಾರೆ. ಇದನ್ನು ವಿವಾಹದ ಸಂದರ್ಭದಲ್ಲಿ ಧರಿಸುತ್ತಾರೆ. ಬೇರೆ ಸಂದರ್ಭಗಳಲ್ಲಿ ದಪ್ಪ ಕರಿದಾರದ ಎರಡು ಅಥವಾ ಮೂರು ಎಳೆಗಳನ್ನು ಹೆಣೆದು ಅಲ್ಲಲ್ಲಿ ಪಾರಿ(ತವರು ಮಣಿ)ಗಳನ್ನು ಹಾಕಿ ಕಟ್ಟಿಕೊಳ್ಳಲು ಕೊಂಡಿಯನ್ನು ಮಾಡಿರುತ್ತಾರೆ.

**ಝುಂಡಿ:** ಕೆಂಪು ದಾರದಲ್ಲಿ ಪಾರಾಗಳನ್ನು ಪೋಣಿಸಿ ಒಂದು ಗೇಣು ಉದ್ದದ ಎರಡು ಸರಗಳನ್ನು ಮಾಡಿ ಕಣದೋರೋದ ಬಲಭಾಗಕ್ಕೆ ಕಟ್ಟುವ ಈ ತೊಡುಗೆಯನ್ನು 'ಝುಂಡಿ' ಎಂದು ಕರೆಯುತ್ತಾರೆ.

**ಝೋಣ್ಣಾ:** ಮದುವೆ ಸಂದರ್ಭದಲ್ಲಿ ಎಲೆ ಅಡಿಕೆ ಹಾಕಿಕೊಳ್ಳಲು ತಯಾರಿಸುವ ಎಲೆ ಅಡಿಕೆ ಚೀಲವನ್ನು 'ಝೋಣ್ಣಾ' ಎಂದು ಕರೆಯುತ್ತಾರೆ. ಝೋಣ್ಣಾ ಒಂದು ಘೂಟ ಅಗಲ ಹಾಗೂ ಒಂದು ಘೂಟ ಉದ್ದವಿರುತ್ತದೆ. ಇದರೊಳಗಡೆ ನಾಲ್ಕರಿಂದ ಐದು ಪದರುಗಳಿರುತ್ತವೆ. ಈ ಪದರುಗಳಲ್ಲಿ ಎಲೆ, ಅಡಿಕೆ, ತಂಬಾಕು, ಕಾಂಚ, ಏಲಕ್ಕಿ, ಲವಂಗ, ಅಡಕೊತ್ತುಗಳನ್ನು ಹಾಕುತ್ತಾರೆ. ಝೋಣ್ಣಾದ ಮೇಲ್ಭಾಗದಲ್ಲಿ ಚಿಕ್ಕ ಚಿಕ್ಕ ಗಾಜಿನ ತುಂಡುಗಳನ್ನು ಹಾಕಿ ಬಣ್ಣ ಬಣ್ಣದ ದಾರಗಳಿಂದ ವಿವಿಧ ರೀತಿಯ ಕಸೂತಿಯನ್ನು ಹೆಣೆದಿರುತ್ತಾರೆ. ಝೋಣ್ಣಾ ಹೆಗಲಿಗೆ ಹಾಕಿಕೊಳ್ಳಲು ಒಂದೂವರೆ ಯಿಂದ ಎರಡು ಮೊಳ ಉದ್ದದ ಕೆಂಪು ಪಟ್ಟಿಯನ್ನು ಅಳವಡಿಸಿರುತ್ತಾರೆ. ಝೋಣ್ಣಾವನ್ನು 'ಚಂಚಿ' ಅಥವಾ 'ಪಾನೇರಚಂಚಿ' ಎಂತಲೂ ಕರೆಯುತ್ತಾರೆ.

**ಕನಿಯಾ:** ಪುರುಷರು ತಮ್ಮ ಕಿವಿಗಳಿಗೆ ಹಾಕಿಕೊಳ್ಳುವ ವೃತ್ತಾಕಾರದ ಆಭರಣವನ್ನು ಕನಿಯಾ ಎಂದು ಕರೆಯುತ್ತಾರೆ.

**ವಿಂಟಿ:** ಪುರುಷರು ಕೈಯ ಉಂಗುರ ಬೆರಳು ಹಾಗೂ ತೋರ್ಬೆರಳಿನಲ್ಲಿ ಹಾಕಿಕೊಳ್ಳುವ ಉಂಗುರಗಳನ್ನು 'ವಿಂಟಿ', 'ವಿಟಿ' ಎನ್ನುತ್ತಾರೆ.

**ಕುಲ್ಡಾ:** ಪುರುಷರು ತಮ್ಮ ಕೈಯಲ್ಲಿ ಹಾಕಿಕೊಳ್ಳುವ ಬೆಳ್ಳಿಯ ಕಡಗವನ್ನು ಕುಲ್ಡಾ ಎಂದು ಕರೆಯುತ್ತಾರೆ. ಈ ರೀತಿಯ ಉಡುಗೆ ತೊಡುಗೆಗಳನ್ನು ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಧರಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಮೂರು ಜಿಲ್ಲೆಯ ಲಂಬಾಣಿಗರಲ್ಲಿ ಝೋಣ್ಣಾದ ಬಳಕೆಯು ಕಣ್ಮರೆಯಾಗಿರುವುದು ಸ್ಪಷ್ಟವಾಗುತ್ತದೆ. ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಸೋಲಾಪುರ ಜಿಲ್ಲೆಯ ಲಂಬಾಣಿಗರು ಆಧುನಿಕ ಉಡುಪುಗಳಾದ ಪ್ಯಾಂಟ್, ಷರ್ಟುಗಳಿಗೆ ಮಾರು ಹೋಗಿದ್ದು ಪಾರಂಪರಿಕ ಉಡುಗೆ ತೊಡುಗೆ ಧರಿಸುವ ಪುರುಷರ ಪ್ರಮಾಣ ತೀರಾ ಕಡಿಮೆಯಾಗಿರುವುದು ಕಂಡುಬರುತ್ತದೆ.

### ೪.೫. ಹಬ್ಬಗಳು

ಪ್ರಾಚೀನ ಕಾಲದಿಂದಲೂ ಮಾನವ ಪ್ರಾಕೃತಿಕ ಜೀವನದಲ್ಲಿ ಮಾಡಿದ ಹೋರಾಟಗಳ ದಿಗ್ವಿಜಯಗಳನ್ನು ಆನಂದದಿಂದ ಸ್ವೀಕರಿಸಿದ ದಿನಗಳನ್ನು 'ಹಬ್ಬ'ಗಳೆಂದು ಆಚರಿಸಲು ಪ್ರಾರಂಭಿಸಿದ. ಈ 'ಹಬ್ಬ' ಎಂಬುದರ ಅರ್ಥ ಸಂಸ್ಕೃತ ನಿಘಂಟುಗಳಲ್ಲಿ 'ಪಬ್ಬಂ', 'ಪರ್ವ' ಎಂದಿವೆ ಪಿರಾಟ್ಲ ಸುಬ್ರಹ್ಮಣ್ಯಶಾಸ್ತ್ರಿಯವರು ಹೇಳುವಂತೆ "ಅಲೌಕಿಕ ಶಕ್ತಿಗಳೊಂದಿಗೆ ಆದಿವಾಸಿಗಳಾದ ಗಿರಿಜರು ಎರಡು ರೀತಿಯಲ್ಲಿ ಸಂಬಂಧಗಳನ್ನು ಏರ್ಪಡಿಸಿಕೊಳ್ಳುತ್ತಾರೆ. ಅವುಗಳಲ್ಲಿ ಮೊದಲನೆಯದು ಮಂತ್ರ ತಂತ್ರಗಳಿಂದ ಶಕ್ತಿಯ ಕೃಪೆಯಿಂದ ಒಳ್ಳೆಯ ಕೆಲಸಗಳನ್ನು ಪ್ರಾರಂಭಿಸುತ್ತಾರೆ. ಹಾಗೆಯೇ ದುಷ್ಟಶಕ್ತಿಗಳಿಂದ ರಕ್ಷಣೆ ಪಡೆಯುತ್ತಾರೆ. ಶಕ್ತಿದೇವತೆಗೆ ಪೂಜಾಕಾರ್ಯಗಳನ್ನು ಕೈಗೊಳ್ಳುವ ಮೂಲಕ ತಮ್ಮ ಕೋರಿಕೆಗಳನ್ನು ನೆರವೇರಿಸಿಕೊಳ್ಳುತ್ತಾರೆ."

"ಈ ಹಬ್ಬಾಚರಣೆಗಳು ವಿವಿಧ ರೀತಿಯ ಸಾಮಾಜಿಕ ರೀತಿ-ನೀತಿಗಳನ್ನು ತೋರ್ಪಡಿಸುತ್ತವೆ. ಇವು ಸಮಾಜದಲ್ಲಿನ ಸಾಂಸ್ಕೃತಿಕ, ಸಾಮಾಜಿಕ, ನೈತಿಕ, ಆಧ್ಯಾತ್ಮಿಕ, ತಾತ್ವಿಕ, ಐತಿಹಾಸಿಕ, ವಿಶೇಷ ಆಚಾರ ಸಂಪ್ರದಾಯಗಳನ್ನು ಪ್ರತಿಬಿಂಬಿಸುತ್ತವೆ. ಜೊತೆಗೆ ಈ ಹಬ್ಬಗಳು ಕುಟುಂಬ ಸಂಬಂಧಿ, ಮತ ಸಂಬಂಧಿ, ಜಾತಿ ಸಂಬಂಧಿ, ಸಮುದಾಯ ಸಂಬಂಧಿ, ದೇಶ ಸಂಬಂಧಿಯಾಗಿ ಆಚರಿಸಲ್ಪಡುತ್ತವೆ" (ರವಿ ವಿ:೨೦೦೨:೯). ಲಂಬಾಣಿಗರು ಗುಲಬರ್ಗಾ ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಗಳಲ್ಲಿ ಋತುಗಳನ್ನಾಧರಿಸಿ ಹಬ್ಬಗಳನ್ನು ಆಚರಿಸುವುದು ಕಂಡುಬರುತ್ತದೆ. "ಪ್ರಕೃತಿ ನೀಡುವ ಪ್ರತಿ ಹೊಸ ವಿಷಯದಲ್ಲಿ ಯಾವುದೋ ಒಂದು ಅದ್ಭುತ ಶಕ್ತಿ ಇರುತ್ತದೆಂಬ ನಂಬಿಕೆಗಳ ಆಧಾರದ ಮೇಲೆ ಇವರು ಹಬ್ಬಗಳನ್ನಾಚರಿಸುತ್ತಾರೆ" (ಅದೇ:ಪು:೯). ಇವರುಗಳು ಹಬ್ಬಗಳಾಚರಣೆಗೆ ಪ್ರಾಣಿಬಲಿಗಳನ್ನು ನೀಡಿ ಸಂಬಂಧಿಕರನ್ನು ಆಹ್ವಾನಿಸಿ ಅವರೊಂದಿಗೆ ಆನಂದವನ್ನು ಅನುಭವಿಸುತ್ತಾರೆ. ಇವರು ಹಬ್ಬಗಳನ್ನಾಚರಿಸುವ ದಿನಗಳನ್ನು 'ನವೋ ದಾಡೋ'(ಹೊಸ ದಿನ) ಎಂದು ಕರೆಯುತ್ತಾರೆ.

#### ೧. ಹೋಳಿ ಹಬ್ಬ

ಹೋಳಿ ಹಬ್ಬವು ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ. ಅದರಂತೆ ಲಂಬಾಣಿಗರು ಕೂಡಾ ಭಾರತದ ಹಲವಾರು ಬುಡಕಟ್ಟುಗಳಂತೆ ಹೋಳಿ ಹಬ್ಬವನ್ನು ತುಂಬಾ ವೈಶಿಷ್ಟಪೂರ್ಣವಾಗಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಹಬ್ಬವನ್ನು ಆಚರಿಸುವ ಅನುಮತಿಗಾಗಿ ತಾಂಡಾವಾಸಿಗಳು ಹದಿನೈದು ದಿನಗಳ ಮುಂಚೆ ನಾಯಕನ ಮನೆಗೆ ಹೋಗಿ ಅನುಮತಿಯನ್ನು ಕೇಳುತ್ತಾರೆ, ನಾಯಕನು ಕಾರಭಾರಿ ಹಾಗೂ ಡಾವಸಾಣರೊಂದಿಗೆ ಚರ್ಚಿಸಿ ಅನುಮತಿಯನ್ನು ನೀಡುತ್ತಾನೆ. ಅನುಮತಿ ಪಡೆದ ದಿನದಿಂದ ಹೋಳಿ ಹಬ್ಬ ಆಚರಿಸುವವರೆಗೆ ಸುಮಾರು ಹದಿನೈದು ದಿನಗಳ ಕಾಲ ದಿನಾಲು ಸಾಯಂಕಾಲದಿಂದ ತಡರಾತ್ರಿಯವರೆಗೆ ಗಂಡು ಪುರುಷರು ಲೇಂಗಿ(ಪ್ರೇಮಗೀತೆ)ಯ ಗೀತೆಗಳನ್ನು ಹಾಡುತ್ತಾರೆ. ಮಹಿಳೆಯರು ಹಾಡುತ್ತಾ, ಕುಣಿಯುತ್ತಾರೆ. ಈ ಹಬ್ಬದಲ್ಲಿ ತಾಂಡಾದ ಯುವಕ, ಯುವತಿಯರು ಪ್ರಮುಖ ಪಾತ್ರವಹಿಸುತ್ತಾರೆ.

ಕಾಮದಹನಕ್ಕಾಗಿ ಇಬ್ಬರು ವಿವಾಹಯೋಗ ಯುವನಾಯಕರನ್ನು ಆಯ್ಕೆ ಮಾಡಲಾಗುತ್ತದೆ, ಒಬ್ಬನು ಭೂಕ್ಯಾ ಪಂಗಡಕ್ಕೆ ಸೇರಿದರೆ, ಮತ್ತೊಬ್ಬನು ಜಾತ್ ಪಂಗಡಕ್ಕೆ ಸೇರಿದವನಾಗಿರಬೇಕು ಎಂಬ ನಿಯಮವಿದೆ. ಈ ಇಬ್ಬರನ್ನು 'ಗೇರಿಯಾಗಳು' ಎಂದು ಕರೆಯುತ್ತಾರೆ. ಇವರು ತಲೆಗೆ ರುಮಾಲು ಸುತ್ತಿಕೊಂಡು ಅದಕ್ಕೆ ಕೆಂಪು ಬಣ್ಣದ ರಿಬ್ಬನ ಅಂಟಿಸಿಕೊಂಡಿರುತ್ತಾರೆ, ಕೈಯಲ್ಲಿ ರಿಬ್ಬನ ಕಟ್ಟಿ ಶೃಂಗರಿಸಿದ ಕೋಲು ಇರುತ್ತದೆ, ಇಡೀ ಹೋಳಿ ಹಬ್ಬದ ಆಚರಣೆ ಇವರ ನಾಯಕತ್ವದಲ್ಲಿಯೇ ನಡೆಯುತ್ತದೆ. ಈ ಹಬ್ಬದ ಸಂದರ್ಭವನ್ನು "ಬಂಜಾರರು ಇದಕ್ಕೆ ಹೋಳಿರಪಾಕ ಎಂದು ಕರೆಯುತ್ತಾರೆ"(ನಾಯಕ ಚೀನಿಯಾ ಬಿ:೧೯೯೮:೨೧೯). ಹೋಳಿ ಹಬ್ಬದ ಮುಂಚೆ ದಿನ ಸಾಯಂಕಾಲ ಗೇರಿಯಾಗಳ ನಾಯಕತ್ವದಲ್ಲಿ ಎಲ್ಲಾ ಯುವಕರು ಪ್ರತಿ ಮನೆಗೆ ತೆರಳಿ ಕಾಮದಹನ ಮಾಡಲು ಆಹ್ವಾನ ನೀಡುತ್ತಾರೆ, ಅಲ್ಲದೇ ರಾತ್ರಿಯೆಲ್ಲ ತಿರುಗಾಡಿ ಕಟ್ಟಿಗೆಗಳನ್ನು ಸಂಗ್ರಹಿಸುತ್ತಾರೆ.

ನಸುಕಿನ ಜಾವ ನಾಲ್ಕರಿಂದ ಐದು ಗಂಟೆಯ ಸುಮಾರಿಗೆ ತಾಂಡಾದ ಪುರುಷರು ಮಾತ್ರ ನಾಯಕನ ಮನೆಯ ಮುಂದೆ ಸೇರಿ ನಾಯಕನ ಅನುಮತಿಯೊಂದಿಗೆ ಕಾಮದಹನ ಮಾಡಲು ತೆರಳುತ್ತಾರೆ. ರಾತ್ರಿ ತಂದಿರುವ ಕಟ್ಟಿಗೆಗಳನ್ನು ಗುಡಿಸಲಿನ ಆಕಾರದಲ್ಲಿ ಜೋಡಿಸಿ ಬೆಂಕಿ ಇಡುತ್ತಾರೆ, ಕಾಮದಹನ ಸ್ಥಳದಿಂದ ಸ್ವಲ್ಪ ದೂರದಲ್ಲಿರುವ ಕೆರೆ, ಹಳ್ಳ, ಅಥವಾ ಬಾವಿಗಳಿಗೆ ಹೋಗಿ ಗೇರಿಯಾಗಳು ಹೆಗಲ ಮೇಲಿರುವ ವಸ್ತ್ರವನ್ನು ಒದ್ದೆ ಮಾಡಿಕೊಂಡು ಕೈಯಲ್ಲಿ ಟಿಸಿಲುಗಳಿಲ್ಲದ ಔಡಲ ಗಿಡದ ಕೋಲನ್ನು ಹಿಡಿದುಕೊಂಡು ವೀರಾವೇಶದಿಂದ ಓಡಿ ಬರುತ್ತಾರೆ. ಟಿಸಿಲುಗಳಿಲ್ಲದ ಔಡಲ ಗಿಡದ ಕೋಲನ್ನು ಲಂಬಾಣಿಗರು 'ದಾಂಡೊ' ಎಂದು ಕರೆಯುತ್ತಾರೆ. ಈ ದಾಂಡೋ ಹಿಡಿದುಕೊಂಡೆ ಕಾಮನ ಬೆಂಕಿಯ ಸುತ್ತ ಏಳು ಸುತ್ತು ಪ್ರದಕ್ಷಣೆ ಹಾಕುತ್ತಾರೆ. ನಂತರ ಧೂಂಡ (ಹುಟ್ಟು ಹಬ್ಬ) ಇರುವ ಮನೆಯಿಂದ ತಂದಿರುವ ಸುಂವಾಳಿ(ಪುರಿ)ಯನ್ನು ಗೇರಿಯಾಗಳಿಗೆ ತಿನ್ನಿಸುತ್ತಾರೆ. ಹೀಗೆ ಏಳು ಸುತ್ತು ಪ್ರದಕ್ಷಿಣೆ ಹಾಕುವದನ್ನು 'ದಾಂಡೋ ಕಾಡೇರೋ' ಎಂದು ಕರೆಯುತ್ತಾರೆ. ಕಾಮದಹನವಾದ ನಂತರ ಎಲ್ಲರು ಕಾಮದಹನದ ಬೂದಿಯನ್ನು ತೆಗೆದುಕೊಂಡು ಹಿರಿಯರ ಹಣೆಗೆ ಹಚ್ಚಿ ನಮಸ್ಕರಿಸುತ್ತಾರೆ. ನಂತರ ಲೇಂಗಿ ಹಾಕುತ್ತಾ, ಕುಣಿಯುತ್ತಾ, ಸಂತೋಷದಿಂದ ಮನೆಗೆ ತೆರಳುತ್ತಾರೆ. ಸಾಯಂಕಾಲ ಆ ವರ್ಷದಲ್ಲಿ ಹುಟ್ಟಿದ ಗಂಡು ಮಕ್ಕಳ ಮನೆಗೆ ತೆರಳಿ ಧೂಂಡ ಕಾರ್ಯಕ್ರಮ ಆಚರಿಸುತ್ತಾರೆ. ಅಂದು ರಾತ್ರಿ ತಾಂಡಾದ ಮಹಿಳೆಯರು ಉಡಿಯಲ್ಲಿ ಜೋಳ ಅಥವಾ ಅಕ್ಕಿಯ ಕಾಳುಗಳನ್ನು ಹಾಕಿಕೊಂಡು ಹೋಳಿ ಮಾತೆಯ ಸುತ್ತ ಹಾಡುತ್ತಾ, ಕುಣಿಯುತ್ತಾ ಹೋಳಿ ಮಾತಗೆ ಏಳು ಸುತ್ತು ಪ್ರದಕ್ಷಿಣೆಯನ್ನು ಹಾಕುತ್ತಾರೆ. ಹೀಗೆ ಮಹಿಳೆಯರು ಹೋಳಿ ಮಾತೆಗೆ ಪೂಜೆಯನ್ನು ಸಲ್ಲಿಸುತ್ತಾರೆ.

ಹೋಳಿಯ ಮರುದಿನ ಪರಸ್ಪರರು ಬಣ್ಣವನ್ನು ಎರಚುತ್ತಾ ಬಣ್ಣ ಆಡುತ್ತಾರೆ, ಇದನ್ನು 'ಫಾಗ್' ಎಂದು ಕರೆಯುತ್ತಾರೆ. "ಪೂರ್ವದಲ್ಲಿ ಚವ್ಹಾಣರ ಮುಖ್ಯ ಪುರುಷ ಸಾಮಂತನು ರಾಜನಾಗಿದ್ದನಂತೆ ಅವನ ಸ್ಮರಣಾರ್ಥವಾಗಿ ಇಂದಿಗೂ ಅವರ ವಂಶದಲ್ಲಿ ಈ ಆಚರಣೆ ನಡೆಯುತ್ತದೆ" (ಖಂಡೋಬಾ ಪಿ ಕೆ: ೧೯೯೧:೮೦). ಬಣ್ಣದ ನಂತರ ಸಾಯಂಕಾಲ ಹೋತಗಳನ್ನು ಬಲಿ

ಕೊಟ್ಟು ಓರಿ(ಕರಿ) ಮಾಡಲು ತಾಂಡಾದ ಪ್ರತಿಯೊಂದು ಮನೆಗೆ ಮಾಂಸದ ಪಾಲನ್ನು ನೀಡಲಾಗುತ್ತದೆ. ಈ ರೀತಿಯಾಗಿ ಮೂರು ಜಿಲ್ಲೆಯ ಲಂಬಾಣಿಗರು ಹೋಳಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಿರುವದು ಕಂಡುಬರುತ್ತದೆ.

೨. ದೀಪಾವಳಿ

"ಯಾವ ದಿನ ರಾತ್ರಿಯ ಕತ್ತಲು ಕಳೆದು ಬೆಳಗಾಗುತ್ತದೆಯೋ, ಯಾವಾಗ ಸಾಲವನ್ನು ತೀರಿ ಋಣದ ಭಾರ ಇಲ್ಲದಂತಾಗುತ್ತದೆಯೋ, ಯಾವಾಗ ಮನಸ್ಸಿನಲ್ಲಿರುವ ಪಾಪವೆಲ್ಲ ತೊಲಗುತ್ತದೆಯೋ, ಗ್ರಾಮದಲ್ಲಿರುವ ಕೊಳಚೆ ಇಲ್ಲವಾಗುತ್ತದೆಯೋ, ಮನಸ್ಸಿನಲ್ಲಿರುವ ದುಃಖ ಪರಿಹಾರವಾಗುತ್ತದೆಯೋ ಅಂದು ಮನೆಯೊಳಗೆ, ಮನದೊಳಗೆ, ಗ್ರಾಮದೊಳಗೆ ಧನಲಕ್ಷ್ಮಿ ಪ್ರವೇಶಿಸುತ್ತಾಳೆ. ಈ ರೀತಿ ಎಲ್ಲರಿಗೂ ಭಾಗ್ಯವನ್ನು ದೊರಕುವ ದಿನವನ್ನೇ ದೀಪಾವಳಿಯ ಹಬ್ಬವನ್ನಾಗಿ ಆಚರಿಸುವ ಪದ್ಧತಿ ಲಂಬಾಣಿಗರಲ್ಲಿದೆ"(ನಾಯಕ ಚೇನಿಯಾ ಬಿ:೧೯೯೮:೨೩೯). ಲಂಬಾಣಿಗರು ದೀಪಾವಳಿ ಹಬ್ಬವನ್ನು 'ದವಾಳಿ', 'ಕಾಳಿಮಾಸ' ಎಂದು ಕರೆಯುತ್ತಾರೆ. ಈ ದಿನ ಶ್ರೀರಾಮಚಂದ್ರ ಲಂಕೆಯನ್ನು ಜಯಸಿ ತನ್ನ ಅಯೋಧ್ಯೆಯ ಅರಮನೆಗೆ ಹಿಂತಿರುಗಿ ಬಂದ ದಿನವಾಗಿದೆ. ಈ ದಿವಸ ನಗರದವರೆಲ್ಲಾ ರಾಮ ಹದಿನಾಲ್ಕು ವರ್ಷದ ವನವಾಸದಿಂದ ಅಯೋಧ್ಯೆಗೆ ಬಂದ ಸಂತಸದಲ್ಲಿ ನಗರವನ್ನು ದೀಪಗಳಿಂದ ಅಲಂಕರಿಸುತ್ತಾರೆ"(ಅದೇ:ಪು:೨೩೯). ಈ ನಿಮಿತ್ತವಾಗಿ ಲಂಬಾಣಿಗರು ದೀಪದ ಹಬ್ಬವಾದ ದೀಪಾವಳಿಯನ್ನು ಸಡಗರದಿಂದ ಆಚರಿಸುತ್ತಾರೆ. ಅಂದು ಮನೆಯಲ್ಲಿ ಸಿಹಿ ಅಡುಗೆಯನ್ನು ಮಾಡುತ್ತಾರೆ. ರಾತ್ರಿ ತಾಂಡಾದ ಯುವತಿಯರೆಲ್ಲಾ ಶೃಂಗರಿಸಿಕೊಂಡು ತಟ್ಟೆಯಲ್ಲಿ ದೀಪವನ್ನು ಇಟ್ಟುಕೊಂಡು ಮೊದಲು ನಾಯಕನ ಮನೆಗೆ ಬಂದು "ವರ್ಷದಾಡೆರ ಖೋಟ ದವಾಳಿ ಬಾಪು ತೋನ ಮೇರಾ" ಎಂದು ತಂದೆ ತಾಯಿ ಹಾಗೂ ದೇವರ ಹೆಸರುಗಳನ್ನು ಹೇಳುತ್ತಾ, ಹಾಡುಗಳನ್ನು ಹಾಡುತ್ತಾ ಆರತಿ ಬೆಳಗುತ್ತಾರೆ. ಇದನ್ನು 'ಮೇರಾ' ಎಂದು ಕರೆಯುತ್ತಾರೆ. ಹೀಗೆ ನಾಯಕನ ಮನೆಯಿಂದ ಪ್ರಾರಂಭವಾದ ಮೇರಾ ತಾಂಡಾದ ಪ್ರತಿಯೊಂದು ಮನೆಯಲ್ಲಿಯೂ ನಡೆಯುತ್ತದೆ. ಇದಕ್ಕೆ ಪ್ರತಿಯಾಗಿ ಪ್ರತಿ ಮನೆಯವರು ತಮ್ಮ ಶಕ್ತ್ಯಾನುಸಾರ ಹಣವನ್ನು ಕಾಣಿಕೆಯಾಗಿ ನೀಡುತ್ತಾರೆ.

ಮರುದಿನ ಬೆಳಿಗ್ಗೆ ಯುವತಿಯರು ಹೊಸ ಬಟ್ಟೆಗಳನ್ನು ತೊಟ್ಟು, ಶೃಂಗರಿಸಿಕೊಂಡು, ಕೈಯಲ್ಲಿ ತಲಾ ಒಂದೊಂದು ಬುಟ್ಟಿಯನ್ನು ಹಿಡಿದು ಹೂ ತರಲು ಅಡವಿಗೆ ಹೋಗುತ್ತಾರೆ. ಅಂದು ತಾಂಡದ ಯಾವ ಮನೆಯಲ್ಲಿಯೂ ರಾಸುಗಳು ಹಾಕಿದ ಸೆಗಣಿಯನ್ನು ಪೂಜೆ ಆಗುವವರೆಗೂ ತೆಗೆಯುವದಿಲ್ಲ. ಅಡವಿಯಿಂದ ವಿವಿಧ ಹೂಗಳನ್ನು ತಂದು "ಆವೊಯೇ ಕಾಕಿದಾದಿ ಗೋದಣ ಪೂಜಾ" ಎಂದು ಹಿರಿಯರನ್ನು ಸೆಗಣಿ ಪೂಜೆಗೆ ಆದರದಿಂದ ಕರೆಯುವ ಅರ್ಥದ ಹಾಡುಗಳನ್ನು ಹಾಡುತ್ತಾ ಸೆಗಣಿಯಲ್ಲಿ ಹೂವನ್ನು ಇಟ್ಟು ಪೂಜೆ ಮಾಡುತ್ತಾರೆ. ಇದನ್ನು 'ಗೋದಣ ಪೂಜಾ' ಎಂದು ಕರೆಯುತ್ತಾರೆ. "ಪೂರ್ವದಲ್ಲಿ ಸಾವಿರಗಟ್ಟಲೆ ಜಾನುವಾರುಗಳನ್ನು ಹೊಂದಿದ್ದ ಲಂಬಾಣಿಗರಲ್ಲಿ ಗೋಪೂಜೆಗೆ ಅಗ್ರಸ್ಥಾನವಿದೆ. ಈ ಸಂದರ್ಭದಲ್ಲಿ ಕೊಟ್ಟಿಗೆಯಲ್ಲಿರುವ ಜಾನುವಾರುಗಳನ್ನು ತುಂಬಾ

ಭಕ್ತಿಯಿಂದ ಪೂಜೆ ಮಾಡುತ್ತಾರೆ" (ಖಂಡೋಬಾ ಪಿ ಕೆ: ೧೯೯೧:೭೪). ಗೋದಣ ಪೂಜೆಯ ನಂತರ ಲಂಬಾಣಿಗರು ಮನೆಯಲ್ಲಿ 'ಲಾಪಸಿ'(ಪಾಯಸ) ಮಾಡಿ ಮನೆಯ ಮುಂದೆ ಹೋಮ ಏರ್ಪಡಿಸಿ ಲಾಪಸಿಯನ್ನು ತುಪ್ಪದೊಂದಿಗೆ ಸುರಿದು ಹಿರಿಯರಿಗೆ ನೈವೇದ್ಯ ಸಲ್ಲಿಸಿ ಪೂಜೆ ಮಾಡುತ್ತಾರೆ. "ಹೀಗೆ ನೈವೇದ್ಯ ಸಲ್ಲಿಸಿ ಪೂರ್ವಜರನ್ನು ಸ್ಮರಿಸಿಕೊಳ್ಳುವ ಲಂಬಾಣಿಗರ ವಿಶಿಷ್ಟ ಪದ್ಧತಿಯು ರಜಪೂತರಲ್ಲಿಯೂ ಕಂಡುಬರುತ್ತದೆ. ಇದನ್ನು ಅವರು ಲಕ್ಷ್ಮಿ ಪೂಜೆ ಎಂದು ಕರೆಯುತ್ತಾರೆ. ಲಂಬಾಣಿಗರಂತೆ ರಜಪೂತರಲ್ಲಿಯೂ ಗೋಪೂಜೆಯನ್ನು ಅತ್ಯಂತ ವೈಭವಪೂರ್ಣವಾಗಿ ಆಚರಿಸುತ್ತಾರೆ" (ಅದೇ:ಪು:೭೪). ಗೋದಣ ಪೂಜೆಯ ನಂತರ ಸಾಯಂಕಾಲ ಹೋತಗಳನ್ನು ಬಲಿಕೊಟ್ಟು ಓರಿ ಮಾಡುತ್ತಾರೆ. ಈ ರೀತಿಯಾಗಿ ದೀಪಾವಳಿ ಹಬ್ಬವನ್ನು ಆಚರಿಸುವ ಕ್ರಮ ಮೂರು ಜಿಲ್ಲೆಯ ಲಂಬಾಣಿಗರಲ್ಲಿ ಕಂಡುಬರುತ್ತದೆ. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಈ ಹಬ್ಬವನ್ನು 'ದವಾಳಿ ಹಬ್ಬ' ಎಂದು ಸೋಲಾಪುರ ಜಿಲ್ಲೆಯ ಲಂಬಾಣಿಗರು 'ದವಾಳಿ ಸಸ್' ಎಂದೂ ಹಾಗೂ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು 'ದವಾಳಿ ಪಂಡುಗ' ಎಂದು ಕರೆಯುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಧುನಿಕತೆ ಹಾಗೂ ಪ್ರಾಂತೀಯ ಸಂಸ್ಕೃತಿಯ ಪ್ರಭಾವದಿಂದಾಗಿ ಮೂರು ಜಿಲ್ಲೆಯ ಲಂಬಾಣಿಗರು ದೀಪಾವಳಿ ಹಬ್ಬದಲ್ಲಿ ಪಟಾಕಿ ಸಿಡಿಸುತ್ತಿರುವುದು ಮತ್ತು ಮನೆಯ ಮೇಲೆ ಆಕಾಶ ಬುಟ್ಟಿಯನ್ನು ನೇತುಹಾಕುತ್ತಿರುವದು ಕಂಡುಬರುತ್ತಿದೆ.

**೩. ತೀಜ್ (ಗೌರಿಹಬ್ಬ)**

ಲಂಬಾಣಿಗರು ಜೂನ್ ತಿಂಗಳಿನಿಂದ ನವೆಂಬರ್ ತಿಂಗಳ ಮಧ್ಯದ ಕಾಲಾವಧಿಯಲ್ಲಿ ಗೋಧಿ ಸಸಿಗಳೊಂದಿಗೆ ಆಚರಿಸುವ ಗೌರಿ ಹಬ್ಬವನ್ನು 'ತೀಜ್' ಎಂದು ಕರೆಯುತ್ತಾರೆ. ತೀಜ್ ಹಬ್ಬದ ಆಚರಣೆಗೆ ಸಂಬಂಧಿಸಿದಂತೆ ಲಂಬಾಣಿಗರಲ್ಲಿ ಐತಿಹ್ಯವೊಂದು ಪ್ರಚಲಿತದಲ್ಲಿದೆ. ಒಂದು ದಿನ ಶ್ರೀಕೃಷ್ಣನು ತನ್ನ ಗೋಪಿಕೆಯರೊಂದಿಗೆ ದನ ಕಾಯಲು ಅರಣ್ಯಕ್ಕೆ ಹೋಗಿ ದನಗಳನ್ನು ಮೇಯಲು ಬಿಟ್ಟು ತಾನು ಗೋಪಿಕೆಯರೊಂದಿಗೆ ಜಲಕ್ರೀಡೆಯಲ್ಲಿ ಮಗ್ನನಾದನು. ಗೋವುಗಳು ಮೇಯುತ್ತಾ ಬಹಳ ದೂರವನ್ನು ಕ್ರಮಿಸಿ ಬ್ರಾಹ್ಮಣನ ಗೋಧಿಯ ಹೊಲಕ್ಕೆ ನುಗ್ಗಿ ಗೋಧಿಯ ಬೆಳೆಯನ್ನು ತಿಂದು ಹಾಕಿದವು. ಇದನ್ನು ಗಮನಿಸಿದ ಬ್ರಾಹ್ಮಣನು ಗೋವುಗಳನ್ನು ಹೊಡೆದು ದೂರ ಅಟ್ಟಿದನು. ಹೀಗೆ ಗೋವುಗಳು ಅರಣ್ಯದಲ್ಲಿ ಬಹುದೂರ ಕ್ರಮಿಸಿದವು. ಇತ್ತ ಜಲಕ್ರೀಡೆ ಮುಗಿಸಿದ ಶ್ರೀಕೃಷ್ಣ ಮತ್ತು ಗೋಪಿಕೆಯರು ಗೋವುಗಳು ಇಲ್ಲದನ್ನು ಕಂಡು ದುಗುಡಕ್ಕೆ ಒಳಗಾದರು.

ಶ್ರೀಕೃಷ್ಣ, ರಾಧೆ ಹಾಗೂ ಗೋಪಿಕೆಯರು ಗೋವುಗಳನ್ನು ಹುಡುಕುತ್ತಾ ಸಾಗಿದರು. ಎಂಟು ದಿನಗಳವರೆಗೆ ಸತತವಾಗಿ ಹುಡುಕಿದರೂ. ಗೋವುಗಳು ಸಿಗಲಿಲ್ಲ. ಬಳಲಿದ ಶ್ರೀಕೃಷ್ಣ ಇನ್ನೇನು ಮನೆಗೆ ಹಿಂದಿರುಗಬೇಕು ಎನ್ನುವಷ್ಟರಲ್ಲಿ ಗೋವುಗಳ ಸಗಣಿ ಕಾಣಿಸಿಕೊಂಡಿತು. ಸಗಣಿಯಲ್ಲಿ ಗೋಧಿಯ ಸಸಿಗಳು ಮೊಳಕೆಯೊಡೆದಿದ್ದವು. ಸಸಿಯಿರುವ ಸಗಣಿಯನ್ನು ಹಿಂಬಾಲಿಸುತ್ತಾ ಹೋದ ಶ್ರೀಕೃಷ್ಣನಿಗೆ ಒಂಭತ್ತನೆಯ ದಿನ ತನ್ನೆಲ್ಲ ಗೋವುಗಳು ಲಭಿಸಿದವು. ಸಂತೋಷಭರಿತನಾದ ಶ್ರೀಕೃಷ್ಣ

ತಲೆಯ ಮೇಲೆ ಸಗಣಿಯನ್ನು ಇಟ್ಟುಕೊಂಡು ಕುಣಿದಾಡಿರಬೇಕು. ಈ ಘಟನೆಯ ಸವಿನೆನಪಿಗಾಗಿ ಲಂಬಾಣಿಗರು ಇಂದಿಗೂ ಗೋಧಿಯ ಸಸಿಗಳನ್ನು ತಲೆಯ ಮೇಲಿಟ್ಟು ಕುಣಿದಾಡುವ ತೀಜ್ ಹಬ್ಬವನ್ನು ಆಚರಿಸುತ್ತಾರೆ ಎಂಬುದು ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರ ಅಭಿಪ್ರಾಯವಾಗಿದೆ.

ತೀಜ್ ಹಬ್ಬ ಆಚರಣೆಯ ಸಲುವಾಗಿ ತಾಂಡಾದ ನಾಯಕ, ಕಾರಭಾರಿ, ಡಾವಸಾಣರೆಲ್ಲರು ಕುಳಿತುಕೊಂಡು ಹಬ್ಬ ಆಚರಿಸುವ ದಿನವನ್ನು ನಿಶ್ಚಯಿಸುತ್ತಾರೆ. ಈ ಹಬ್ಬ ಹತ್ತು ದಿನಗಳವರೆಗೆ ನಿರಂತರವಾಗಿ ನಡೆಯುತ್ತದೆ. ತೀಜ್ ಹಬ್ಬ ಪ್ರಾರಂಭವಾಗುವ ಮೊದಲ ದಿನ ರಾತ್ರಿ ಕಡಲೆ ಕಾಳುಗಳನ್ನು ನೀರಿನಲ್ಲಿ ನೆನೆಸಿಟ್ಟು ಮುಂಜಾನೆ ಎಲ್ಲ ಯುವತಿಯರು, ಮಹಿಳೆಯರು ಕಡಲೆ ಬೀಜಗಳನ್ನು ತೆಗೆದುಕೊಂಡು ಹಾಡುತ್ತಾ, ಕುಣಿಯುತ್ತಾ ಬಾರಿಗಿಡವಿರುವಲ್ಲಿಗೆ ಹೋಗುತ್ತಾರೆ. ಯುವಕರು ಕೂಡ ಜೊತೆಗಿರುತ್ತಾರೆ. ಬಾರಿಗಿಡದ ಮುಳ್ಳಿನಲ್ಲಿ ಕಡಲೆಕಾಳುಗಳನ್ನು ಸೇರಿಸಲು ಯುವತಿಯರು ಪ್ರಯತ್ನಿಸುತ್ತಾರೆ. ಯುವಕರು ಬಾರಿಗಿಡವನ್ನು ಅಲ್ಲಾಡಿಸಿ ಯುವತಿಯರ ಪ್ರಯತ್ನವನ್ನು ವಿಫಲಗೊಳಿಸುತ್ತಾರೆ. ಹೀಗೆ ಸಾಕಷ್ಟು ಸಮಯ ಪರಸ್ಪರರು ವಿನೋದ, ಚೇಷ್ಟೆ ಮಾಡುತ್ತಾ ಬಾರಿಗಿಡದ ಮುಳ್ಳಿಗೆ ಕಡಲೆ ಬೀಜಗಳನ್ನು ಸೇರಿಸುತ್ತಾರೆ. ಈ ಪ್ರಕ್ರಿಯೆಯನ್ನು 'ಬೋರಡಿ ಝುಪಕೇರೋ' ಎಂದು ಕರೆಯುತ್ತಾರೆ. ನಂತರ ತಾಂಡಾದ ನಾಯಕನ ಮನೆ ಮುಂದೆ ಎಲ್ಲರೂ ಸೇರಿ ಮೊದಲು ನಾಯಕನ ತೀಜ್ ಬುಟ್ಟಿಯಲ್ಲಿ ಫಲವತ್ತಾದ ಮಣ್ಣು, ಗೊಬ್ಬರ ಮತ್ತು ರಾತ್ರಿ ನೆನೆಸಿಟ್ಟ ಗೋಧಿಯ ಕಾಳುಗಳನ್ನು ಹಾಕಿ ಸಿದ್ಧಗೊಳಿಸುತ್ತಾರೆ. ನಂತರ ತಾಂಡಾದ ಪ್ರತಿ ಮನೆಯವರಿಗಾಗಿ ಒಂದೊಂದು ಬುಟ್ಟಿಯನ್ನು ಸಿದ್ಧಗೊಳಿಸುತ್ತಾರೆ. ಇವುಗಳನ್ನು 'ತೀಜೇರ ವೊಲ್ಡಿ' ಎಂದು ಕರೆಯುತ್ತಾರೆ. ಗುಲಬರ್ಗಾ ಜಿಲ್ಲೆಯ ಲಂಬಾಣಿಗರಲ್ಲಿ ಮಾತ್ರ ಇಬ್ಬರು ಅವಿವಾಹಿತ ಯುವಕರು ಫಲವತ್ತಾದ ಮಣ್ಣು, ಗೊಬ್ಬರ, ನೆನೆಸಿಟ್ಟ ಗೋಧಿಯ ಕಾಳುಗಳನ್ನು ಹಾಕಿ ಎರಡು ಬುಟ್ಟಿಯನ್ನು ತಯಾರಿಸುತ್ತಾರೆ. ಇವುಗಳನ್ನು 'ಚಲಕೋಡಿರ ವೊಲ್ಡಿ' ಎಂದು ಕರೆಯುತ್ತಾರೆ.

ಅವಿವಾಹಿತ ಯುವತಿಯರು ತೀಜ್ ಹಬ್ಬದಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಒಂಭತ್ತು ದಿನಗಳವರೆಗೆ ಉಪ್ಪು, ಖಾರ, ಅರಿಶಿನ ಇಲ್ಲದ ಸಪ್ಪೆ ಊಟ ಮಾಡುತ್ತಾರೆ. ಅರಿಶಿನ ತಿಂದರೆ ಗೋಧಿಯ ಸಸಿಗಳು ಹಳದಿ ಬಣ್ಣಕ್ಕೆ ತಿರುಗುತ್ತವೆ ಎಂಬ ನಂಬಿಕೆ ಕಂಡುಬರುತ್ತದೆ. ಮುಂಜಾನೆ ಬೇಗ ಎದ್ದು ಸ್ನಾನ ಮಾಡಿ ಕೆರೆ, ಬಾವಿಗಳಿಂದ ಮಡಿ ನೀರನ್ನು ತಂದು ತೀಜ್ ಬುಟ್ಟಿಗಳಿಗೆ ಹಾಕಿ ನಮಿಸುತ್ತಾರೆ. "ಇವರು ಈ ಹಬ್ಬಕ್ಕೆ ಸಂಬಂಧಿಸಿದ ಪೂಜಾರಿಗಳು"(ಭೂಕ್ಯಾ ತಿರುಪತಿ: ೨೦೦೫:೧೩). ಎಂದು ಲೇಖಕರು ತೀಜ್ ಹಬ್ಬದಲ್ಲಿ ಅವಿವಾಹಿತ ಯುವತಿಯರ ಪಾತ್ರದ ಪ್ರಾಮುಖ್ಯತೆಯನ್ನು ಹೇಳಿದ್ದಾರೆ.

ಈ ಪ್ರಕ್ರಿಯೆ ಒಂಭತ್ತು ದಿನಗಳವರೆಗೆ ನಡೆದು ಸಸಿಗಳನ್ನು ಜೋಪಾನವಾಗಿ ಕಾಪಾಡುತ್ತಾ, ಸೋಂಪಾಗಿ ಬೆಳೆಸುತ್ತಾರೆ. ಹಬ್ಬ ನಡೆಯುವ ಒಂಭತ್ತು ದಿನಗಳವರೆಗೆ ಪ್ರತಿದಿನ ಸಾಯಂಕಾಲ

ಯುವಕ, ಯುವತಿಯರು ನೃತ್ಯ, ಹಾಡು, ತಮಾಷೆ ಮಾಡುತ್ತಾ ಮನೋರಂಜನೆ ಮಾಡುತ್ತಾರೆ. ರಂಗಾರೆಡ್ಡಿ ಜಿಲ್ಲೆಯ ಕೆಲವು ಕಡೆ ಜೋಕಾಲಿ ಆಡುತ್ತಾರೆ.

ತೀಜ್ ಹಬ್ಬದ ಎಂಟನೆಯ ದಿನ ರಾತ್ರಿ ನಾಯಕನ ಮನೆಯಲ್ಲಿ ಎಲ್ಲರೂ ಸೇರಿ ಗಣಗೋರ ಹಾಗೂ ಗಣಗೋರಿ ಎಂಬ ಗಂಡು ಮತ್ತು ಹೆಣ್ಣಿನ ಮೂರ್ತಿಗಳನ್ನು ತಯಾರಿಸಿ ಗಣಗೋರ ಮೂರ್ತಿಗೆ ಗಂಡಿನ ಮತ್ತು ಗಣಗೋರಿ ಮೂರ್ತಿಗೆ ಹೆಣ್ಣಿನ ಉಡುಗೆ ತೊಡುಗೆ ತೊಡಿಸಿ ಸಜ್ಜೆಯ ಅಥವಾ ಗೋಧಿಯ ಚಪಾತಿ ಹಾಗೂ ಬೆಲ್ಲದಿಂದ ತಯಾರಿಸಿದ ಚೂರಮೋದ ಪ್ರಸಾದವನ್ನಿಟ್ಟು ಪೂಜಿಸುತ್ತಾರೆ.

ತೀಜ್ ಹಬ್ಬದ ಒಂಭತ್ತನೆಯ ದಿನ ಮುಂಜಾನೆ ಹಬ್ಬದ ಮೊದಲ ದಿನದಂತೆ ಬಾರಿಗಿಡದ ಮುಳ್ಳಿಗೆ ನೆನೆಸಿಟ್ಟ ಕಡಲೆಕಾಳುಗಳನ್ನು ಸೇರಿಸಿ ಬೋರ್ಡಿ ಝುಪಕೇರೋ ಕಾರ್ಯಕ್ರಮ ಮಾಡುತ್ತಾರೆ. ಎರಡನೆ ಬಾರಿ ಮಾಡುವ ಈ ಕಾರ್ಯಕ್ರಮ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಲ್ಲಿ ಮಾತ್ರ ಕಂಡುಬರುತ್ತಲಿದ್ದು, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಹಬ್ಬದ ಮೊದಲನೆಯ ದಿನ ಒಂದು ಸಲ ಮಾತ್ರ ಬೋರ್ಡಿ ಝುಪಕೇರೋ ಕಾರ್ಯಕ್ರಮ ಆಚರಿಸುತ್ತಾರೆ.

ಈ ಹಬ್ಬದ ಒಂಭತ್ತನೆಯ ದಿನ ಬಂಧುಬಳಗ, ಅತಿಥಿಗಳನ್ನು ಮನೆಗೆ ಬರಮಾಡಿಕೊಂಡು ಹೋಳಿಗೆಯನ್ನು ತಯಾರಿಸಿ ಸೋಂಪಾಗಿ ಬೆಳೆದ ಗೋಧಿಯ ಸಸಿಗಳುಳ್ಳ ತೀಜ್ ಬುಟ್ಟಿಗೆ ಪೂಜೆ ಸಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ಬಂಧುಬಳಗ, ಹಿರಿಯರು, ಅತಿಥಿಗಳು, ಯುವತಿಯರಿಗೆ ತಮ್ಮ ಶಕ್ತ್ಯಾನುಸಾರ ಹಣ, ಬಟ್ಟೆಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ಮನೆಯಲ್ಲಿ ಎಲ್ಲರ ಊಟವಾದ ನಂತರ ಎಲ್ಲ ಯುವತಿಯರು ತಮ್ಮ ತೀಜ್ ಬುಟ್ಟಿಗಳನ್ನು ತೆಗೆದುಕೊಂಡು ಹಾಡುತ್ತಾ, ಕುಣಿಯುತ್ತಾ ನಾಯಕನ ಮನೆಯ ಮುಂದೆ ತೀಜ್ ಬುಟ್ಟಿಗಳನ್ನು ಸಾಲಿನಲ್ಲಿಟ್ಟು ಪೂಜೆ ಸಲ್ಲಿಸುತ್ತಾರೆ. ನಾಯಕನು ಎಲ್ಲಾ ಯುವತಿಯರಿಗೆ ಒಂದೊಂದು ರೂಪಾಯಿ ಕಾಣಿಕೆಯನ್ನು ನೀಡಿ ತೀಜ್‌ಬುಟ್ಟಿಯಿಂದ ನಾಲ್ಕಾರು ಸಸಿಗಳನ್ನು ಕಿತ್ತಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಯುವತಿಯರು ಪರಸ್ಪರ ತಬ್ಬಿಕೊಂಡು ದುಃಖದಿಂದ ಅಳುತ್ತಾರೆ. ಮುಂದಿನ ತೀಜ್ ಹಬ್ಬ ಬರುವವರೆಗೆ ತಮ್ಮ ವಿವಾಹವಾಗುತ್ತದೆ, ಮುಂದಿನ ತೀಜ್ ಹಬ್ಬದಲ್ಲಿ ತಾವು ಭಾಗವಹಿಸುವುದಿಲ್ಲ ಎಂಬ ದುಃಖದಿಂದ ರೋಧಿಸುತ್ತಾರೆ. ನಂತರ ತಮ್ಮ ತಮ್ಮ ಬುಟ್ಟಿಗಳಿಂದ ಗೋಧಿ ಸಸಿಗಳನ್ನು ಕಿತ್ತಿ ನಾಯಕ, ಕಾರಭಾರಿ, ಡಾವಸಾಣ, ತಂದೆ ತಾಯಿ, ಹಿರಿಯರು ಮತ್ತು ಅತಿಥಿಗಳಿಗೆ ಕೊಟ್ಟು ನಮಸ್ಕರಿಸುತ್ತಾರೆ. ಕೊನೆಯಲ್ಲಿ ತೀಜ್ ಬುಟ್ಟಿಗಳನ್ನು ತಲೆಯ ಮೇಲಿಟ್ಟುಕೊಂಡು ಹಾಡುತ್ತಾ, ಕುಣಿಯುತ್ತಾ, ಹಲಗೆ ಬಾರಿಸುತ್ತಾ, ಕೇಕೆ ಹಾಕುತ್ತಾ ಸಂತೋಷದಿಂದ ಹಳ್ಳ ಅಥವಾ ಹೊಳೆಯ ದಂಡೆಗೆ ಬರುತ್ತಾರೆ. "ಹೆಣ್ಣು ಮಕ್ಕಳು ಈ ಪುಟ್ಟಿಗಳನ್ನು ಅಷ್ಟು ಸುಲಭವಾಗಿ ವಿಸರ್ಜಿಸಲು ಬಿಡದೇ ಹಟ ಮಾಡುತ್ತಾರೆ. ಆಗ ಪ್ರಾಯದ ಹುಡುಗರು ಅವರ ಕೈಯಿಂದ ಬಲವಂತವಾಗಿ ಕಿತ್ತುಕೊಂಡು ಕೆರೆಯಲ್ಲಿ ಮುಳುಗಿಸಿ ಬರುತ್ತಾರೆ" (ಗಂಗಾನಾಯಕ ಕೆ ಎನ್:೨೦೦೭:೯೪). ಅದರಂತೆ ಯುವತಿಯರು ಸಹ ಯುವಕರ ಚಲಕೊಡಿರ ವೊಲ್ಡಿಯನ್ನು ನೀರಿನಲ್ಲಿ ವಿಸರ್ಜಿಸುತ್ತಾರೆ. ಈ ಪ್ರಕ್ರಿಯೆಯನ್ನು 'ಡಂಬೋಳಿ' ಎಂದು ಕರೆಯುತ್ತಾರೆ.

ತೀಜ್ ಹಬ್ಬದ ಹತ್ತನೆಯ ದಿನ ತಾಂಡಾದಲ್ಲಿ ಎರಡು ಹೋತಗಳನ್ನು ಬಲಿಕೊಟ್ಟು ತಾಂಡಾದಲ್ಲಿರುವ ಮನೆಗಳ ಸಂಖ್ಯೆಗನುಗುಣವಾಗಿ ಮಾಂಸವನ್ನು ವಿಭಾಗಿಸಿ ಪ್ರತಿಯೊಂದು ಮನೆಗೂ ಪಾಲನ್ನು ನೀಡುತ್ತಾರೆ. ಈ ರೀತಿಯಾಗಿ ನಿರಂತರವಾಗಿ ಹತ್ತು ದಿನಗಳವರೆಗೆ ತೀಜ್ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಮೊದಲು ತೀಜ್ ಹಬ್ಬವನ್ನು ಪ್ರತಿವರ್ಷ ತಪ್ಪದೇ ಆಚರಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಆಧುನಿಕತೆಯ ಪ್ರಭಾವ, ಸಮಯದ ಅಭಾವ, ಧಾವಂತದ ಬದುಕು, ನಾವು ನಮ್ಮವರು ಎಂಬ ಭಾವನೆಯ ಕೊರತೆ ಹೀಗೆ ಮುಂತಾದ ಕಾರಣಗಳಿಂದಾಗಿ ಮೂರು ಜಿಲ್ಲೆಯ ಲಂಬಾಣಿಗರು ತೀಜ್ ಹಬ್ಬವನ್ನು ತುಂಬಾ ವಿರಳವಾಗಿ ಆಚರಿಸುತ್ತಾರೆ. ಎಷ್ಟೋ ತಾಂಡಾಗಳಲ್ಲಿ ತೀಜ್ ಹಬ್ಬ ಆಚರಿಸುವ ಪರಂಪರೆಯನ್ನೇ ಕೈಬಿಟ್ಟಿರುವುದು ಸ್ಪಷ್ಟವಾಗಿ ಗೋಚರಿಸುತ್ತಿದೆ.

**೪. ಸಿತ್ಲಾ**

ಸಿತ್ಲಾ ಹಬ್ಬವನ್ನು ಲಂಬಾಣಿಗರು ಪ್ರತಿವರ್ಷ ಜೂನ್-ಜುಲೈ ತಿಂಗಳಲ್ಲಿ ಆಚರಿಸುತ್ತಾರೆ. ತಾಂಡಾದಲ್ಲಿ ಕೆಮ್ಮು, ನೆಗಡಿ, ಜ್ವರ, ಕಾಲರಾ, ಸಿಡುಬು ಮುಂತಾದ ರೋಗಗಳು ಗಾಳಿ ದೇವತೆಯ ಮುನಿಸಿನಿಂದ ಹರಡುತ್ತವೆ ಎಂಬ ನಂಬಿಕೆ ಅವರಲ್ಲಿ ಬಲವಾಗಿದೆ. ಆದ್ದರಿಂದ ತಾಂಡಾ ವಾಸಿಗಳಿಗೆ ಹಾಗೂ ಅವರ ಪಶುಗಳಿಗೆ ಯಾವುದೇ ರೀತಿಯ ಆಪತ್ತುಗಳು ಬಾರದಿರಲೆಂದು ಹಾಗೂ "ಯಾವುದೇ ದುಷ್ಟ ಶಕ್ತಿಯ ಪ್ರಭಾವ ಉಂಟಾಗದಂತೆ ತಮ್ಮನ್ನು ಕಾಪಾಡಬೇಕೆಂದು ದೇವತೆಯಲ್ಲಿ ಪ್ರಾರ್ಥಿಸಿಕೊಳ್ಳುವ ಹಬ್ಬ ಇದಾಗಿದೆ. ಏಳು ಚಿಕ್ಕ ಚಿಕ್ಕ ಕಲ್ಲುಗಳನ್ನು ಏಳು ಜನ ಅಕ್ಕತಂಗಿಯರೆಂದು ಭಾವಿಸಿ ಹೂಳುತ್ತಾರೆ. ಇವರೇ ಲಂಬಾಣಿಗರಲ್ಲಿ 'ಸಾತಿ ಭವಾನಿ'ಯರೆಂಬ ನಂಬಿಕೆಯಿದೆ"(ಭೂಕ್ಯಾ ತಿರುಪತಿ:೨೦೦೫:೧೨). ಸಾತಿ ಭವಾನಿ(ಏಳು ಜನ ಅಕ್ಕತಂಗಿಯರು)ಯನ್ನು ಪೂಜಿಸುವ ಆಶಯವೇ ಸಿತ್ಲಾ ಹಬ್ಬದ ಉದ್ದೇಶವಾಗಿದೆ.

ತಾಂಡಾದ ಹಿರಿಯರೆಲ್ಲ ಸೇರಿ ಸಿತ್ಲಾ ಹಬ್ಬ ಆಚರಿಸಲು ನಿಗದಿಪಡಿಸಿದ ದಿನದಂದು ತಾಂಡಾದ ಹೊರಗಡೆ ಏಳು ಕಲ್ಲುಗಳನ್ನು ತೊಳೆದು ಪ್ರತಿಷ್ಠಾಪಿಸಿ ಅದರ ಮುಂದೆ ಹೋತವನ್ನು ಬಲಿ ಕೊಡುತ್ತಾರೆ. ಸಾಯಂಕಾಲ ತಾಂಡಾದ ಪ್ರತಿಯೊಂದು ಮನೆಯವರು ಸಿತ್ಲಾದ ಮುಂದೆ ಒಂದೊಂದು ಹುಂಜವನ್ನು ಬಲಿ ಕೊಡುತ್ತಾರೆ. ಹುಂಜದ ತಲೆಯನ್ನು ಸಿತ್ಲಾ ಭವಾನಿಯ ಮುಂದೆ ಇಟ್ಟು ಉಳಿದ ಭಾಗವನ್ನು ಮನೆಗೊಯ್ಯುತ್ತಾರೆ. ಮನೆಯಲ್ಲಿ ಹುಂಜದ ಹೊಟ್ಟೆಯೊಳಗಿನ ಕಳಜೋ ಮತ್ತು ಸ್ವಲ್ಪ ಮಾಂಸವನ್ನು ಬೇಯಿಸಿ ತಟ್ಟೆಯಲ್ಲಿ ಹಾಕಿಕೊಂಡು ಅದರ ಮೇಲೆ ಒಂದು ಬಟ್ಟೆಯನ್ನು ಮುಚ್ಚಿ ತಾಂಡಾದ ಮುಂದೆ ಸಿತ್ಲಾ ದೇವಿಯ ಪ್ರಸಾದಕ್ಕೆಂದು ತರುತ್ತಾರೆ. ಈ ಹಬ್ಬದಲ್ಲಿ ಕುಣಿಯುವುದಾಗಲಿ, ಚೇಷ್ಟೆ ಮಾಡುವುದಾಗಲಿ ಮಾಡುವುದಿಲ್ಲ. ಸಿತ್ಲಾ ದೇವಿಗೆ ಪ್ರಾರ್ಥಿಸುವ ಹಾಡುಗಳನ್ನು ಹಾಡಿ ತುಂಬಾ ಭಯ ಭಕ್ತಿಯಿಂದ ಮೂರು ಜಿಲ್ಲೆಯ ಲಂಬಾಣಿಗರು ಈ ಹಬ್ಬವನ್ನು ಆಚರಿಸುವದು ಕಂಡುಬರುತ್ತದೆ.

೫. ಘರಘರ ಪೂಜಾ

ಜೂನ್-ಜುಲೈ ತಿಂಗಳಲ್ಲಿ ನಡೆಯುವ ಈ ಪೂಜೆಯನ್ನು ಆಚರಿಸಲು ನಾಯಕ, ಕಾರಭಾರಿ, ಡಾವಸಾಣರೆಲ್ಲ ಕುಳಿತು ದಿನವನ್ನು ನಿರ್ಧರಿಸುತ್ತಾರೆ. ಘರಘರ ಪೂಜೆಯನ್ನು ಕಡ್ಡಾಯವಾಗಿ ಮಂಗಳವಾರ ಆಚರಿಸಬೇಕೆಂಬ ನಿಯಮ ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರಲ್ಲಿ ಕಂಡುಬರುತ್ತದೆ. ಈ ಪೂಜೆ ನೆರವೇರಿಸುವ ಒಂದು ದಿನ ಮುಂಚೆಯೇ ಮನೆ ಹಾಗೂ ದೇವಾಲಯವನ್ನು ಸ್ವಚ್ಛಗೊಳಿಸುತ್ತಾರೆ. ಪೂಜೆಯಲ್ಲಿ ಪಾಲ್ಗೊಳ್ಳಲು ಬಂಧುಬಳಗ ದವರನ್ನು ಬರಮಾಡಿಕೊಳ್ಳುತ್ತಾರೆ. ಪೂಜಾ ದಿನದಂದು ಮರಿಯಮ್ಮ (ಆಯಿ) ದೇವಿಯ ದೇವಾಲಯದ ಮುಂದೆ ಜೋಳದ ಅಥವಾ ಅಕ್ಕಿಯ ಹಿಟ್ಟಿನಿಂದ ರಂಗೋಲಿಯನ್ನು ಹಾಕುತ್ತಾರೆ. ಇದನ್ನು ಲಂಬಾಣಿಗರು 'ಚೋಕೋ ಪೂರೇರೋ' ಎಂದು ಕರೆಯುತ್ತಾರೆ. ರಂಗೋಲಿಯ ಹಿಂದೆ ಸೆಣಬಿನ ಚೀಲವನ್ನು ಮಡಚಿ, ಅದರ ಮೇಲೆ ಎರಡು ಕಡೆ ಬೇವಿನ ಸೊಪ್ಪನ್ನು ಇಡುತ್ತಾರೆ. ರಂಗೋಲಿಯ ಮಧ್ಯ ದೀಪ ಹಾಗೂ ಊದಿನಕಡ್ಡಿಯನ್ನು ಹಚ್ಚುತ್ತಾರೆ. ಇದನ್ನು ಮರಿಯಮ್ಮ ದೇವಿ ಎಂದು ಭಾವಿಸುತ್ತಾರೆ. ಮರಿಯಮ್ಮ ದೇವಿಯ ನೇರಕ್ಕೆ ಸ್ವಲ್ಪ ದೂರದಲ್ಲಿ ಹೋತವನ್ನು ನಿಲ್ಲಿಸಿ, ಒಂದು ಲೋಟದಲ್ಲಿ ಅರಿಶಿನ ಹಾಗೂ ಬೇವಿನ ಎಲೆಗಳನ್ನು ಹಾಕಿ ಹೋತದ ಮೈಮೇಲೆ ಚೆಲ್ಲುತ್ತಾರೆ. "ಆಗ ಹೋತವು ದೇಹವನ್ನು ಅಲುಗಾಡಿಸುತ್ತದೆ. ಇದನ್ನು 'ಧಡ್ ಧಡಿ ಲೇರೋ' ಎಂದು ಕರೆಯುತ್ತಾರೆ"(ಭೂಕ್ಯಾ ತಿರುಪತಿ:೨೦೦೫:೧೪). ನಂತರ ಹೋತವನ್ನು ಬಲಿಕೊಟ್ಟು ಅದರ ತಲೆಯನ್ನು ಹಾಗೂ ಮುಂದಿನ ಎರಡು ಕಾಲುಗಳನ್ನು ಮರಿಯಮ್ಮದೇವಿಯ ಮುಂದೆ ಇಡುತ್ತಾರೆ. ಹೋತದ ಹೊಟ್ಟೆಯೊಳಗಿನ ಕರಳು, ಶ್ವಾಸಕೋಶ, ಹೃದಯ ಹಾಗೂ ಹಡಕಾ(ಎಲುಬು)ಗಳನ್ನು ರುಚಿಗೆ ತಕ್ಕಷ್ಟು ಉಪ್ಪು ಹಾಕಿ ಬೇಯಿಸಿ, ಒಂದು ತಟ್ಟೆಯಲ್ಲಿ ಹಾಕಿ ದೇವಿಯ ಮುಂದಿಟ್ಟು ಪ್ರಾರ್ಥಿಸುತ್ತಾರೆ. ನಂತರ ನೆರೆದವರಿಗೆಲ್ಲಾ ಪ್ರಸಾದವಾಗಿ ಫೇರ(ಮಾಂಸ)ನ್ನು ಹಾಗೂ ನಾಯಕ, ಕಾರಭಾರಿ ಹಾಗೂ ಡಾವಸಾಣರಿಗೆ (ಹಿರಿಯರಿಗೆ) ಹಡಕಾಗಳನ್ನು ಹಂಚುತ್ತಾರೆ.

ತಾಂಡಾದಲ್ಲಿ ಮರಿಯಮ್ಮ ದೇವಿಯ ಒಟ್ಟಿನ ಪೂಜೆಯಾದ ನಂತರ ಮೇಲಿನ ಪ್ರಕ್ರಿಯೆಯಂತೆ ಪ್ರತಿಯೊಬ್ಬರ ಮನೆಯ ಮುಂದೆ ದೇವಿಯನ್ನು ಪ್ರತಿಷ್ಠಾಪಿಸಿ, ಪ್ರತಿ ಮನೆಗೊಂದು ಹೋತವನ್ನು ಬಲಿ ಕೊಡುತ್ತಾರೆ. ಈ ಪದ್ಧತಿ ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳ ಲಂಬಾಣಿಗರಲ್ಲಿ ಕಡ್ಡಾಯವಾಗಿ ಗೋಚರಿಸುತ್ತದೆ. ಆದರೆ ರಂಗಾರೆಡ್ಡಿ ಜಿಲ್ಲೆಯ ತಾಂಡಾಗಳಲ್ಲಿ ಒಂದೇ ಪಾಡಾದ ಸಹೋದರರಾಗಿರುವ ಮೂರು ನಾಲ್ಕು ಕುಟುಂಬದವರು ಸೇರಿ ಒಂದೊಂದು ಹೋತವನ್ನು ಬಲಿ ಕೊಡುವುದು ಕಂಡುಬರುತ್ತದೆ. ಅಂದು ಮನೆಯ ಯಜಮಾನ ಉಪವಾಸವಿದ್ದು, ದೇವಿಯ ಪೂಜೆಯಾದ ನಂತರ ಉಪವಾಸವಿದ್ದ ವ್ಯಕ್ತಿಗೆ ಮೊದಲು ಪ್ರಸಾದವನ್ನು ನೀಡಿ ನಂತರ ಎಲ್ಲರಿಗೂ ಹಂಚುತ್ತಾರೆ. ರಾತ್ರಿ ಮನೆಗೆ ಬಂದ ನೆಂಟರೊಂದಿಗೆ ಸಾರಾಯಿ ಕುಡಿದು ಮಾಂಸದೂಟ ಮಾಡಿ, ರಾತ್ರಿಯೆಲ್ಲ ಭಜನೆ ಮಾಡುತ್ತಾ ದೇವಿಯ ಜಾಗರಣೆ ಮಾಡುತ್ತಾರೆ. ಈ ಪೂಜೆಯನ್ನು ಗುಲಬರ್ಗಾ,

ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರು ಕಡ್ಡಾಯವಾಗಿ ಆಚರಿಸುತ್ತಾರೆ. ಈ ಪೂಜೆಗೆ 'ಘರ ಘರ ಪೂಜಾ' ಅಥವಾ 'ಘರ ಪಟ್ಟಿ ಪೂಜಾ' ಎಂದು ಕರೆಯುತ್ತಾರೆ.

ಘರ ಪಟ್ಟಿ ಆಚರಿಸುವುದರಿಂದ ಮರಿಯಮ್ಮ ತಾಯಿಯ ಕೃಪಾಕಟಾಕ್ಷ ಹಾಗೂ ಕರುಣೆಯಿಂದ ಕುಟುಂಬದವರಲ್ಲಿ ಸುಖ, ಶಾಂತಿ ನೆಲೆಸುತ್ತವೆ. ಆ ಕುಟುಂಬದವರು ಯಾವುದೇ ವಿಧದ ವೃತ್ತಿ ಕೈಗೊಂಡರೂ ಅದರಲ್ಲಿ ಲಾಭವುಂಟಾಗುತ್ತದೆ. ಬೆಳೆಗಳು ಉತ್ತಮ ಫಸಲನ್ನು ನೀಡುತ್ತವೆ. ಸಮಾಜದಲ್ಲಿ ಕೀರ್ತಿ ಪ್ರತಿಷ್ಠೆಗಳು ದೊರೆಯುತ್ತವೆ. ತಾಂಡಾಗಳಿಗೆ ಯಾವುದೇ ರೀತಿಯ ಕಷ್ಟ ಆಪತ್ತು ಎದುರಾದರೂ ದೇವಿಮಾತೆ ಅವುಗಳನ್ನು ಪರಿಹರಿಸುತ್ತಾಳೆಂಬ ಬಲವಾದ ನಂಬಿಕೆ ಇರುವದು ಮೂರು ಜಿಲ್ಲೆಗಳ ಲಂಬಾಣಿಗರಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

### ೪.೬ ಹಚ್ಚೆ ಕಲೆ

ಲಂಬಾಣಿ ಸಮುದಾಯಗಳು ನಂಬಿಕೆ ಬಗೆಗೆ ಅಗಾಧವಾದ ಕಾಳಜಿಯನ್ನು ವಹಿಸಿವೆ. ನಂಬಿಕೆಯೆ ಇವರ ಬಾಳಿನ ಮೂಲ. ಈ ಲಕ್ಷಣವನ್ನು ಅವರಲ್ಲಿ ಇಂದಿಗೂ ಗುರುತಿಸಬಹುದಾಗಿದೆ. ಈ ನಂಬಿಕೆಯೇ ಸಮಾಜದಲ್ಲಿನ ಹಲವಾರು ಸಂಪ್ರದಾಯ ಆಚರಣೆಗಳಿಗೆ ಕಾರಣವಾಗಿದೆ. ಮಾನವ ಸಮಾಜದ ಅಸ್ತಿತ್ವಕ್ಕೂ ಈ ನಂಬಿಕೆಯೇ ಮೂಲವಸ್ತು. ಬುಡಕಟ್ಟು ಸಮುದಾಯಗಳಲ್ಲೊಂದಾದ ಲಂಬಾಣಿಗರ ಪ್ರದರ್ಶನ ಕಲೆಗಳು ಅವರ ಸಾಂಸ್ಕೃತಿಕ ಪುರಾವೆಗಳಾಗಿರುವಂತೆ ಪರಂಪರೆಯಿಂದ ಬೆಳೆದುಬಂದ ಕುರುಹುಗಳೂ ಆಗಿವೆ. ಈ ಸಮುದಾಯದ ಜನಜೀವನದ ಒಟ್ಟು ಸಂಸ್ಕೃತಿಯು ಜನಪದ ಪ್ರದರ್ಶನ ಕಲೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಇವುಗಳು ಮೂಲತಃ ದೈವೀ ಕಲ್ಪನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡರೂ ಈ ಕಲೆಗಳು ಬಹುಶಃ ಮಾನವನ ಬದುಕು ಒಂದು ರೀತಿ ದುರ್ಭರವಾದಾಗ ಈ ಕಲೆಗಳಲ್ಲಿ ಕೆಲವು ಅನಿವಾರ್ಯವಾಗಿ ಉಪಜೀವನದ ಮಾರ್ಗವಾಗಿ ವೃತ್ತಿಕಲೆಯಾಗಿ ಪರಿಣಮಿಸಿದವು. ವೃತ್ತಿ ಮನರಂಜಕರು ತಲೆತಲಾಂತರಗಳಿಂದ ಬಳುವಳಿಯಾಗಿ ಬಂದ ಜನಪದ ಕಲೆಗಳನ್ನು ಜನಪದ ಸಮೂಹದ ಮಧ್ಯೆ ಪ್ರದರ್ಶಿಸುವುದರ ಮೂಲಕ ತಮ್ಮ ಬದುಕಿನ ಜೊತೆಗೆ ಆ ಕಲೆಗಳಿಗೆ ಜೀವಂತಿಕೆಯನ್ನು ನೀಡಿದರು. ಈ ಜನಪದ ಪ್ರದರ್ಶನ ಕಲೆ ಗಳಲ್ಲಿ ಪ್ರಮುಖವಾದವುಗಳೆಂದರೆ ಶಿಲ್ಪ, ಚಿತ್ರ, ಕಸೂತಿ, ವಾದ್ಯ-ವಾದನ, ಕುಣಿತಗಳು, ಹಚ್ಚೆಕಲೆ ಹಾಗೂ ನಾಟಕಗಳು ಸಮಾವೇಶಗೊಳ್ಳುತ್ತವೆ. ಲಂಬಾಣಿಗರ ಜನಪದ ಕುಶಲಕಲೆಗಳಲ್ಲಿ ಹಚ್ಚೆ, ಕಸೂತಿ ಮುಂತಾದವುಗಳು ಅತ್ಯಂತ ಪ್ರಮುಖವಾದವುಗಳಾಗಿದ್ದು, ಇವುಗಳನ್ನು ಪ್ರದರ್ಶನ ಕಲೆಗಳೆಂದು ಪರಿಗಣಿಸಲಾಗಿದೆ.

"ಮಾನವನು ದೇಹ ಸೌಂದರ್ಯಕ್ಕೆ ವಸ್ತ್ರಗಳನ್ನು ಬಳಸಿಕೊಳ್ಳುವ ಮುನ್ನ ಬಂದ ಕಲೆ ಹಚ್ಚೆ ಕಲೆ. ದುರದೃಷ್ಟವಶಾತ್ ಅದರ ಪ್ರಾಚೀನತೆಯ ಬಗೆಗೆ ಪ್ರಾಗೈತಿಹಾಸಿಕ ದಾಖಲೆಗಳು ನಮಗೆ ಸಿಗುವುದಿಲ್ಲ. ದೇಹದ ಸೌಂದರ್ಯ ವರ್ಧನೆಗಾಗಿ ಜಾಣ್ಮೆಯಿಂದ ದೇಹಕ್ಕೆ ಅಳಿಸಲಾಗದಂತೆ ಬಣ್ಣವನ್ನು ತುಂಬಿಕೊಳ್ಳುವ ಕಲೆ ಅತೀ ಪ್ರಾಚೀನ ಕಾಲದಲ್ಲಿಯೇ ಪ್ರಾರಂಭವಾಗಿರಬೇಕೆಂಬುದು ವಿದ್ವಾಂಸರ ಅಭಿಮತವಾಗಿದೆ" (ಸಣ್ಣರಾಮ:೧೯೯೯:೨೦೭). ಎಂದು ಅಭಿಪ್ರಾಯಪಟ್ಟಿದ್ದಾರೆ.

ವೆಟ್ಜ್ ಗಾರ್ಡೆಂಟ್ಸ್ ಮತ್ತು ಇತರರು ಹೇಳುವಂತೆ "ಹಚ್ಚೆಯು ಧರ್ಮದ ಸಂಕೇತವಾಗಿ ಉಗಮವಾಗಿದೆ." ಜೋಸ್ ಮತ್ತು ವೆಸ್ಟರ್‌ಮಾರ್ಕ್ ಹೇಳುವಂತೆ "ಹಚ್ಚೆ ಹಾಕಿಸಿಕೊಳ್ಳುವುದು ದೇಹವನ್ನು ಶೃಂಗರಿಸಿಕೊಳ್ಳುವುದಕ್ಕಾಗಿ" ಎಂದು ನಿರೂಪಿಸಿದ್ದಾರೆ. ಪ್ರಪಂಚದ ಬಹುಪಾಲು ವಿದ್ವಾಂಸರ ಅಭಿಪ್ರಾಯಗಳನ್ನು ಪರಿಶೀಲಿಸಿದಾಗ ಹಚ್ಚೆ ಹಾಕಿಸಿಕೊಳ್ಳುವುದು ಶೃಂಗಾರದ ವರ್ಧನೆಗಾಗಿ ಎಂಬುದು ತಿಳಿದುಬರುತ್ತದೆ. ಆದರೆ ನಮ್ಮ ದೇಶದ ಬುಡಕಟ್ಟು ಸಮುದಾಯಗಳಲ್ಲಿ ಅದರಲ್ಲೂ ವಿಶೇಷವಾಗಿ ಲಂಬಾಣಿಗರಲ್ಲಿ ಈ ಹಚ್ಚೆ ಕಲೆಯು ಸೌಂದರ್ಯದ ಪರಿಕಲ್ಪನೆಯ ಜೊತೆಗೆ ಧಾರ್ಮಿಕ ನೆಲೆಯನ್ನು ಹೊಂದಿರುವುದು ತಿಳಿದುಬರುತ್ತದೆ.

ಪ್ರಪಂಚದ ಎಲ್ಲಾ ಸಮುದಾಯಗಳಲ್ಲಿ ಕಂಡುಬರುವ ಈ ಕಲೆ ಲಂಬಾಣಿಗರಲ್ಲಿ ಅವರದೇ ಆಚರಣೆ, ನಂಬಿಕೆ ಹಾಗೂ ಕಟ್ಟುಕಟ್ಟಳೆಗಳ ಮೇಲೆ ರೂಪುಗೊಂಡಿದೆ. ಹಚ್ಚೆ ಹಾಕಿಸಿಕೊಳ್ಳುವುದರ ಹಿನ್ನೆಲೆಯಲ್ಲಿ ಅನೇಕಾನೇಕ ಕಾರಣಗಳಿರಬಹುದಾದರೂ ಅವುಗಳ ಜೊತೆಗೆ ಶರೀರದ ಸೌಂದರ್ಯದ ಪರಿಕಲ್ಪನೆಯೂ ಸೇರಿಕೊಂಡಿರುವುದರಲ್ಲಿ ಸಂಶಯವಿಲ್ಲ. "ಹಚ್ಚೆ ಎಂದು ಪ್ರಸಿದ್ಧವಾಗಿರುವ ಈ ಜನಪದ ಕಲೆಗೆ ಕನ್ನಡದಲ್ಲಿ ಅನೇಕ ಪದಗಳು ಪ್ರಾದೇಶಿಕ ಭಿನ್ನತೆಯಿಂದ ಬಳಸಲ್ಪಡುತ್ತಿವೆ. ಹಚ್ಚೆ, ಅಚ್ಚೆ, ಅಣಚೆ, ಹಣಚೆ ಎಂಬ ಪದಗಳು ಕೆಲವು ಪ್ರದೇಶಗಳಲ್ಲಿ ಬಳಕೆಯಾಗುತ್ತಿವೆ. ಅಣಚೆ ಎಂಬ ಪದದಲ್ಲಿ 'ಅಣೆ' ಎಂದರೆ ಅಲಂಕರಿಸುವುದು ಎಂಬ ಅರ್ಥ ಬರುತ್ತದೆ. ಅಲ್ಲದೇ 'ಅಣ್' ಎಂದರೆ ಲೇಪಿಸು ಅಥವಾ ಅಂಟು ಎಂಬ ಅರ್ಥವು ನಿಷ್ಪನ್ನಗೊಳ್ಳುತ್ತದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ನಮ್ಮ ಸಂಸ್ಕೃತಿಯಲ್ಲಿ ಅಣಚೆ ಎನ್ನುವ ಶಬ್ದಕ್ಕೆ ಮುತ್ತೈದೆ, ಸುಮಂಗಲಿ, ಸೌಭಾಗ್ಯವತಿ, ಗರತಿ ಎನ್ನುವ ಅರ್ಥದ ವಿಶಾಲತೆ ಇದೆ. ಹಚ್ಚೆ ಎಂಬ ಪದಕ್ಕೆ ಇಂಗ್ಲೀಷ್‌ನಲ್ಲಿ 'ಟಾಟೂ' ಎಂದು ಕರೆಯುತ್ತಾರೆ"(ಕಾಳೇಗೌಡ ನಾಗವಾರ ಮತ್ತು ಹುಚ್ಚಪ್ಪ ಮಾಸ್ತರ.ಎನ್:೨೦೦೦:೧೦೧).

ಲಂಬಾಣಿಗರಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು ಸೌಂದರ್ಯ ಸಾಧನೆಯ ವಿಶೇಷವೆಂದೂ, ಸೌಭಾಗ್ಯದ ಹಾಗೂ ಪಾವಿತ್ರ್ಯತೆಯ ಪ್ರತೀಕವೆಂಬ ನಂಬಿಕೆಯಿದೆ. "ವಿವಾಹ ಪೂರ್ವದಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು ಲಂಬಾಣಿಗರಲ್ಲಿ ನಡೆದುಬಂದಿರುವ ಒಂದು ಸಂಪ್ರದಾಯ. ಕೇವಲ ಹಚ್ಚೆಯ ಆಧಾರದ ಮೇಲೆಯೇ ಲಂಬಾಣಿ ಸ್ತ್ರೀಯರನ್ನು ಗುರುತಿಸುವ ವಿಧಾನ ಲಂಬಾಣಿಗರಲ್ಲಿದೆ. ಹುಬ್ಬುಗಳ ಎರಡೂ ಬದಿಗೆ, ಬರಿಗಣ್ಣಿನ ಸ್ಥಾನಗಳಲ್ಲಿ ಹಾಗೂ ಗದ್ದದ ಮೇಲೆ ಚುಕ್ಕೆ ಆಕಾರದ ಹಚ್ಚೆಗಳನ್ನು ಹಾಕಿಸಿಕೊಂಡಿರುವ ಸ್ತ್ರೀಯರನ್ನು ಲಂಬಾಣಿಗರೆಂದು ಥಟ್ಟನೆ ಗುರುತಿಸಬಹುದು"(ಖಂಡೋಬಾ ಪಿ ಕೆ:೧೯೯೧:೧೨೧).

ಲಂಬಾಣಿ ಮಹಿಳೆಯರು ಸಾಮಾನ್ಯವಾಗಿ ಹಣೆ, ಮುಂಗೈ, ತೋಳು, ಪಾದ, ಕಾಲು, ಮೀನಖಂಡ, ಮುಂಗೈ ಬೆರಳುಗಳ ಮೇಲೆ, ಗದ್ದ, ಮೂಗಿನ ಎಡಭಾಗಕ್ಕೆ, ಹುಬ್ಬುಗಳ ಎರಡೂ ಬದಿಗೆ, ನಡು, ಮೊಳಕಾಲು, ಬೆನ್ನು ಮೊದಲಾದ ದೇಹದ ವಿವಿಧ ಭಾಗಗಳಿಗೆ ಅತ್ಯಂತ ಕಲಾತ್ಮಕವಾಗಿ ವಿವಿಧ ರೇಖಾಕೃತಿಗಳಲ್ಲಿ ಹಚ್ಚೆ ಹಾಕಿಸಿಕೊಂಡಿರುವುದು ಗುಲಬರ್ಗಾ, ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಗಳಲ್ಲಿ ಕಂಡುಬಂದಿದೆ.

ಲಂಬಾಣಿ ಸ್ತ್ರೀಯರು ಹಾಕಿಸಿಕೊಂಡಿರುವ ಪ್ರಮುಖ ಹಚ್ಚೆಯ ಚಿತ್ರಗಳೆಂದರೆ ಸಾಲಾದ ಏಳು ಜನ ಅಕ್ಕ-ತಂಗಿಯರ ಚಿತ್ರಗಳು(ಸಾತಿಭವಾನಿ), ರಾಮರಥ, ತುಳಸೀಕಟ್ಟೆ, ಪಗಡಿಬಾಜಾರ, ಹಾವು-ಚೇಳಿನ ಚಿತ್ರಗಳು, ಬಾಸಿಂಗ, ಬೆರಳು ಮತ್ತು ಅಂಗೈ ಮೇಲೆ ಚುಕ್ಕೆಗಳು ಇತ್ಯಾದಿ.

"ಕರ್ನಾಟಕದ ಅನೇಕ ಜಾತಿಗಳ ಉಪಕಸುಬು ಹಚ್ಚೆ ಹುಯ್ಯುವುದೇ ಆಗಿದೆ. ನನಗೆ ದೊರೆತಿರುವ ಮಾಹಿತಿಯ ಪ್ರಕಾರ ಕರ್ನಾಟಕದಲ್ಲಿ ಕೊರಮರು, ಕುಕ್ಕೆಕೊರಮರು, ಕರೆಗಾರರು, ಬೆಸ್ತರು, ಬುಲ್ಡೆಬೆಸ್ತರು, ಗುಂಡೆಬೆಸ್ತರು, ಕೊರವಂಜಿಗಳು, ಬ್ಯಾಡರು, ಒಡ್ಡರು, ಗೊಂಬೆಯಾಟದ ಮರಾಠಿಗರು, ಜಾತಿಗಾರರು, ದೊಂಬರು ಹಚ್ಚೆ ಹುಯ್ಯುತ್ತಾರೆ. ಇವರಲ್ಲಿ ಕೆಲವು ಜಾತಿಯವರು ನಿರ್ದಿಷ್ಟ ಹಳ್ಳಿಗಳಲ್ಲಿ ವಾಸಿಸುತ್ತಾರಾದರೂ ಬಹುತೇಕ ಜನ ಅಲೆಮಾರಿಗಳಾಗಿದ್ದಾರೆ. ಈ ಜಾತಿ ಯವರಲ್ಲದೆ ಕೆಲವರು ಜಾತ್ರೆ ಮತ್ತು ಸಂತೆಗಳಲ್ಲಿ ಹಜಾಮರಂತೆ ಹಚ್ಚೆ ಹುಯ್ಯುವವರೂ ಇರುತ್ತಾರೆ"(ಕಾಳೇಗೌಡ ನಾಗವಾರ ಮತ್ತು ಹುಚ್ಚಪ್ಪಮಾಸ್ತರ ಎನ್:೨೦೦೦:೧೦೫).

ಲಂಬಾಣಿಗರಲ್ಲಿ ತಾವೇ ಹಚ್ಚೆ ಹಾಕಿಕೊಳ್ಳುವ ಮತ್ತು ವೃತ್ತಿನಿರತರಿಂದ ಹಚ್ಚೆ ಹಾಕಿಸಿಕೊಳ್ಳುವ ಎರಡೂ ಪದ್ಧತಿಗಳು ರೂಢಿಯಲ್ಲಿವೆ. ವೃತ್ತಿನಿರತರಿಂದ ಹಚ್ಚೆ ಹಾಕಿಸಿಕೊಂಡಾಗ ಹಚ್ಚೆ ಹಾಕಿದ್ದಕ್ಕಾಗಿ ತೆಂಗಿನಕಾಯಿ, ದವಸ ಧಾನ್ಯಗಳನ್ನು ಕಾಣಿಕೆಯಾಗಿ ಕೊಡುವುದು ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರಲ್ಲಿ ಕಂಡುಬರುತ್ತದೆ. ಅಕ್ಕಿಯೊಂದಿಗೆ ಹಣವನ್ನು ಕೊಡುವುದು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿ ಕಂಡುಬರುತ್ತದೆ.

**ಹಚ್ಚೆ ಕುರಿತಾದ ನಂಬಿಕೆಗಳು**

"ಅತ್ಯಂತ ವ್ಯಾಪಕವಾಗಿ ಬೆಳೆದಿರುವ ಜಾನಪದ ಕಲೆಯ ಹಿಂದೆ ಅನೇಕ ಸಮುದಾಯಗಳ, ಧರ್ಮಗಳ ಗಾಢವಾದ ನಂಬಿಕೆ ಇದೆ. "ಸತ್ತಾರೆ ನಮಕೂಟ ಮತ್ತೇನು ಬರಬಹುದು? ಹಚ್ಚೀಯ ಬೊಟ್ಟು ಹಣೆಬೊಟ್ಟು ಸುಲುಹಲ್ಲು ಕಟ್ಟಿರೋ ತುರುಬು" ಎಂದು ನಂಬಿರುವ ಜನಪದರಿಗೆ ಬದುಕಿನುದ್ದಕ್ಕೂ ನಂತರ ಸತ್ತಾಗಲೂ ಬರುವ ಸಂಗತಿಯೆಂದರೆ ಹಚ್ಚೆಯ ಚಿಹ್ನೆಗಳು"(ಅದೇ:ಪು:೧೧೨). ಲಂಬಾಣಿ ಸಮುದಾಯದಲ್ಲಿ ಈ ಹಚ್ಚೆ ಕುರಿತಂತೆ ಅವರದೇ ಆದ ಕೆಲವು ನಂಬಿಕೆಗಳು, ವಿಧಿ-ನಿಷೇಧಗಳಿರುವುದು ಕಂಡುಬರುತ್ತದೆ. ವಿವಾಹಪೂರ್ವ ಹಚ್ಚೆ ಹಾಕಿಸಿಕೊಳ್ಳುವುದು ಧರ್ಮದ ಪ್ರತೀಕವಾದರೆ, ವಿವಾಹ ನಂತರ ಹಚ್ಚೆ ಹಾಕಿಸಿಕೊಳ್ಳುವುದು ಪಾಪಕಾರ್ಯ ಎಂಬುದು ಗುಲಬರ್ಗಾ, ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರ ನಂಬಿಕೆ ಒಂದೇ ಆಗಿದೆ. ಹಾಗೆಯೇ ಹಾವು-ಚೇಳಿನ ಚಿತ್ರಗಳನ್ನು ಹಾಕಿಸಿಕೊಳ್ಳುವುದರಿಂದ ಅವು ಕಚ್ಚುವುದಿಲ್ಲವೆಂಬುದು ಗುಲಬರ್ಗಾ ಜಿಲ್ಲೆಯ ಮತ್ತು ಸೋಲಾಪುರ ಜಿಲ್ಲೆ ಲಂಬಾಣಿಗರ ನಂಬಿಕೆಯಾದರೆ, ಅವು ಕಚ್ಚಿದರೂ ವಿಷವೇರುವುದಿಲ್ಲವೆಂಬುದು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ನಂಬಿಕೆಯಾಗಿರುವುದು ಕಂಡುಬರುತ್ತದೆ. ಮುಂಗೈ ಬೆರಳುಗಳ ಮೇಲೆ ಮತ್ತು ಅಂಗೈನಲ್ಲಿ ಹಚ್ಚೆ ಹಾಕಿಸಿಕೊಂಡರೆ ಮಾಡುವ ಅಡುಗೆ ಬೇಗ ಹಳಸುವುದಿಲ್ಲವೆಂಬುದು ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ನಂಬಿಕೆಯಾದರೆ, ಅಡುಗೆಯ

ಪ್ರಮಾಣ ಹೆಚ್ಚುತ್ತದೆಂಬುದು ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಗಳ ಲಂಬಾಣಿಗರ ನಂಬಿಕೆಯಾಗಿದೆ. ಹಣೆಯ ಮೇಲಿನ ಹಚ್ಚೆ ಹಿಂದೂಧರ್ಮದ ಸಂಕೇತವಾದರೆ, ಎರಡೂ ಕಣ್ಣಿನ ಪಕ್ಕದಲ್ಲಿ ಮತ್ತು ಗದ್ದಕ್ಕೆ ಹಾಕಿಕೊಳ್ಳುವ ಹಚ್ಚೆ ಲಂಬಾಣಿಗರ ಧರ್ಮವೆಂಬುದು ಲಂಬಾಣಿ ಸಮುದಾಯದ ಹಿರಿಯ ಮಹಿಳೆಯರ ಅಭಿಪ್ರಾಯವಾಗಿದೆ. ಹಾಗೆಯೇ ಹಚ್ಚೆ ಸಾವಿನ ನಂತರ ಜೊತೆಗೆ ಬರುವಂತದ್ದು ಎಂಬ ನಂಬಿಕೆ ಸೋಲಾಪುರ ಜಿಲ್ಲೆಯ ಲಂಬಾಣಿಗರ ಅಭಿಪ್ರಾಯವಾದರೆ, ಹಚ್ಚೆ ಧಾರ್ಮಿಕ ಹಿನ್ನೆಲೆ ಹೊಂದಿರುವುದರಿಂದ ಸಾವಿನ ನಂತರ ಸ್ವರ್ಗ ಪ್ರಾಪ್ತಿಯಾಗುತ್ತದೆಂಬುದು ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರ ಅಭಿಪ್ರಾಯವಾಗಿದೆ.

ಇತ್ತೀಚಿನ ದಿನಗಳಲ್ಲಿ ಈ ಹಚ್ಚೆ ಕಲೆ ಅವನತ್ತಿಯತ್ತ ಸಾಗುತ್ತಿದ್ದು, ಈ ಕ್ರಿಯೆಯಲ್ಲಿ ಒಂದೇ ಸೂಜಿಯನ್ನು ಬಳಸುವುದರಿಂದ ಏಡ್ಸ್‌ನಂತಹ ಕಾಯಿಲೆಗಳಿಗೂ ಕಾರಣವಾಗಬಹುದೆಂಬ ವಿಚಾರ ವಾಸ್ತವಕ್ಕೆ ಹತ್ತಿರವಾಗಿದೆ. ಗುಲಬರ್ಗಾ, ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಗಳ ಲಂಬಾಣಿಗರಲ್ಲಿ ಹಚ್ಚೆ ಕಲೆಯ ಕುರಿತು ಮಾಡಿರುವ ಸಮೀಕ್ಷೆಯಿಂದ ಸೋಲಾಪುರ ಜಿಲ್ಲೆಯ ಮಹಿಳೆಯರಲ್ಲಿ ಈ ಕಲೆ ಸುಮಾರು ೫೦ ವರ್ಷದ ನಂತರದ ಮಹಿಳೆಯರಲ್ಲಿ ಗೋಚರಿಸುತ್ತಿದ್ದು, ವಿವಾಹಪೂರ್ವ ಬಾಲಕಿಯರಲ್ಲಿ ಕಂಡುಬಂದಿರುವುದಿಲ್ಲ. ಹಾಗೆಯೇ ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಮಧ್ಯವಯಸ್ಕ ಮಹಿಳೆಯರಲ್ಲಿ ಗೋಚರಿಸುತ್ತಿದ್ದು, ಬಾಲಕಿಯರಲ್ಲಿ ಅತೀ ವಿರಳ ಪ್ರಮಾಣದಲ್ಲಿ ಗೋಚರಿಸುತ್ತಿದೆ. ಹೀಗೆ ಒಂದೆಡೆ ಅಳಿವಿನ ಅಂಚಿನಲ್ಲಿರುವ ಈ ಹಚ್ಚೆ ಕಲೆ ಮತ್ತೊಂದೆಡೆ ವಿಶ್ವದ ಬಹುತೇಕ ರಾಷ್ಟ್ರಗಳಲ್ಲಿ ಟಾಟೂ ಚಿತ್ರಗಳು ಇತ್ತೀಚೆಗೆ ಹೆಚ್ಚು ಪ್ರಸಿದ್ಧಿ ಪಡೆಯುತ್ತಿರುವುದು 'ಹಚ್ಚೆ ಕಲೆ ಪುನರ್‌ಹುಟ್ಟು' ಎಂದರೆ ತಪ್ಪಾಗಲಾರದು.

ಒಟ್ಟಿನಲ್ಲಿ ಹೇಳುವುದಾದರೆ ಭಾರತದ ಬಹುತೇಕ ಕಲೆಗಳು ಸೌಂದರ್ಯವರ್ಧನೆಯ ದೃಷ್ಟಿಯಿಂದ ಹುಟ್ಟಿಕೊಂಡು ಕಾಲಾನಂತರದಲ್ಲಿ ಧಾರ್ಮಿಕ ಉದ್ದೇಶಗಳನ್ನು ಪಡೆದುಕೊಂಡಿರುವಂತೆ, ಲಂಬಾಣಿ ಮಹಿಳೆಯರ ಹಚ್ಚೆ ಕಲೆ ಕೂಡ ಮೂಲತಃ ಸೌಂದರ್ಯವರ್ಧನೆಯ ಸಾಧನವಾಗಿ ಹುಟ್ಟಿಕೊಂಡು ಕಾಲಕ್ರಮೇಣ ಧಾರ್ಮಿಕ ಹಿನ್ನೆಲೆಯನ್ನು ಪಡೆದುಕೊಂಡಿದೆ. ಲಂಬಾಣಿ ಪುರುಷರು ಸಾಮಾನ್ಯವಾಗಿ ಹಚ್ಚೆ ಹಾಕಿಸಿಕೊಳ್ಳುವುದಿಲ್ಲ. ಆದರೂ ಪ್ರೇಯಸಿಯರ ಹೆಸರುಗಳನ್ನು, ಪ್ರೇಮದ ಸಂಕೇತಗಳನ್ನು, ಆಂಜನೇಯನ ಚಿತ್ರಗಳನ್ನು ಎದೆ, ತೋಳುಗಳ ಮೇಲೆ, ಮೊಣಕೈ ಕೆಳಭಾಗದಲ್ಲಿ ಹಾಕಿಸಿಕೊಂಡಿರುವುದು ಅತೀ ವಿರಳವಾಗಿ ಗೋಚರಿಸುತ್ತಿವೆ.

### ೪.೭ ಗೋರಬೋಲಿ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಗಳ ಪ್ರಭಾವ

ನಮ್ಮ ಸುತ್ತಮುತ್ತಲಿನವರೊಡನೆ ವ್ಯವಹರಿಸುವುದಕ್ಕೆ ಹಾಗೂ ವಿಚಾರ ವಿನಿಮಯ ಮಾಡುವುದಕ್ಕೆ ಭಾಷೆ ಒಂದು ಅಮೂಲ್ಯ ಸಾಧನ. ಇಂಥ ಅಮೂಲ್ಯವಾದ ಭಾಷೆಯ ಉತ್ಪತ್ತಿ ಎಂದು ಮತ್ತು ಹೇಗಾಯಿತು ಎಂಬ ಪ್ರಶ್ನೆಗೆ ಸರಿಯಾದ ಉತ್ತರ ಹೇಳುವುದು ಕಷ್ಟಸಾಧ್ಯ. ಮನುಷ್ಯ ಬುದ್ಧಿಜೀವಿ, ಜಗತ್ತಿನ ಮಿಕ್ಕೆಲ್ಲ ಜೀವಿಗಳಿಂದ ಈತನನ್ನು ಪ್ರತ್ಯೇಕಗೊಳಿಸುವುದು ಅವನ ಭಾಷೆ ಮತ್ತು ಬೌದ್ಧಿಕಶಕ್ತಿ.

ತನ್ನ ಬುದ್ಧಿಶಕ್ತಿಯಿಂದ ಮನುಷ್ಯ ಭಾಷೆಯನ್ನು ರೂಪಿಸಿಕೊಂಡಿದ್ದಾನೆ. ಇದು ಮನುಷ್ಯನಿಗೆ ನಿಸರ್ಗದತ್ತವಾದ, ಸಹಜವಾದ, ಸ್ವಾಭಾವಿಕ ಕ್ರಿಯೆಯಲ್ಲ. ಭಾಷೆ ಕಲಿಕೆಯಿಂದ ಬರುವಂತಹದು. ಭಾಷೆ ಎಂದರೇನು? ಎಂಬುದನ್ನು ಸೂಕ್ತವಾಗಿ ಹೇಳುವುದು ಕಷ್ಟವಾದರೂ ಅಂತಹ ಕೆಲವು ಪ್ರಯತ್ನಗಳು ನಡೆದಿವೆ. ಬ್ಲಾಕ್ ಮತ್ತು ಟ್ರೇಗರ್ ಅವರು ಹೇಳುವಂತೆ "Language is a system of arbitrary vocal symbols by means of which a social group co-operates" (ಚಿದಾನಂದಮೂರ್ತಿ ಎಂ, ೨೦೦೮:೧೮). ಎಂದು ಪ್ರಸಿದ್ಧ ಭಾಷಾತಜ್ಞರು ಅಭಿಪ್ರಾಯಪಟ್ಟಿದ್ದಾರೆ.

"ಭಾಷೆ ಎನ್ನುವುದು ಒಂದು ವ್ಯವಸ್ಥೆ. ಒಂದು ದೃಷ್ಟಿಯಿಂದ ಹೇಳುವುದಾದರೆ ಅದು ಧರ್ಮ, ಕಾನೂನು ಮುಂತಾದ ವ್ಯವಸ್ಥೆಗಳಿಂದ ಬೇರೆಯೇನೂ ಅಲ್ಲ. ಒಂದು ಸಮಾಜದ ಧರ್ಮ, ಅಥವಾ ಕಾನೂನುಗಳನ್ನು ಪ್ರತ್ಯೇಕವಾಗಿ ಎಲ್ಲಿಯೂ ಕಾಣಲಾರೆವು. ಜನರ ನಡತೆಯಿಂದ ಅವುಗಳನ್ನು ಊಹಿಸಬೇಕಾಗುತ್ತದೆ. ಹಾಗೆಯೇ ಭಾಷೆಯನ್ನೂ ಕೂಡ"(ಚಿದಾನಂದಮೂರ್ತಿ ಎಂ: ೨೦೦೮:೧೮). ಮನುಷ್ಯ ಸಮಾಜ ಜೀವಿ ಅವನು ತನ್ನ ಅನೇಕ ಅವಶ್ಯಕತೆಗಳಿಗಾಗಿ ಇತರರನ್ನು ಅವಲಂಬಿಸಿರ ಬೇಕಾಗಿರುವುದರಿಂದ ತನ್ನ ಸುತ್ತಮುತ್ತಲಿನ ಜನರೊಡನೆ ಒಂದಲ್ಲಾ ಒಂದು ರೀತಿಯ ಸಂಪರ್ಕವಿಟ್ಟು ಕೊಳ್ಳಬೇಕಾಗುತ್ತದೆ. ಹಾಗೆಯೇ ಒಂದು ಸಮಾಜ, ಸಮುದಾಯ ಕೂಡ ಇತರ ಸಮಾಜ ಸಮುದಾಯಗಳೊಡನೆ, ಸಂಸ್ಕೃತಿಯೊಡನೆ ಸಂಪರ್ಕವಿಟ್ಟುಕೊಂಡಿರುತ್ತದೆ. ಎರಡು ಸಂಸ್ಕೃತಿಗಳು ಪರಸ್ಪರ ಒಂದನ್ನೊಂದು ಅರಿಯುವ ಪ್ರಸಂಗ ಒದಗಿದಾಗ ಒಂದು ಮತ್ತೊಂದರಿಂದ ಅನೇಕ ಹೊಸ ಭಾವನೆಗಳನ್ನು, ಹೊಸ ವಸ್ತುಗಳನ್ನು ಸ್ವೀಕರಿಸುತ್ತದೆ. ಆ ಹೊಸ ಭಾವನೆಗಳ ಮತ್ತು ಹೊಸ ವಸ್ತುಗಳ ಜೊತೆಯಲ್ಲಿ ಆ ಭಾಷೆಯಲ್ಲಿರುವ ಹೆಸರುಗಳು ಪ್ರಯಾಣ ಮಾಡಿ ಹೊಸ ಭಾಷೆಯನ್ನು ಪ್ರವೇಶಿಸುತ್ತವೆ. ಒಂದು ಭಾಷೆ ಅನ್ಯಭಾಷೆಯಿಂದ ಏನನ್ನೂ ಎರವಲಾಗಿ ತೆಗೆದುಕೊಳ್ಳಬಾರದೆಂದು ಯಾರೂ ತಿಳಿಯಲಾಗದು. ನೆರೆಹೊರೆಯ ಭಾಷೆಗಳಲ್ಲಿ ಕೊಳುಕೊಡುಗೆಯ ವ್ಯವಹಾರ ನಡೆದೇ ನಡೆಯುತ್ತದೆ. ಅದು ಸಜೀವ ಭಾಷೆಯ ಲಕ್ಷಣ ಆದರೆ ಸ್ವೀಕರಿಸುವಾಗ ತನ್ನತನವನ್ನು ಕಳೆದುಕೊಳ್ಳದಂತೆ ಕಾಪಾಡಿಕೊಳ್ಳಬೇಕು. ಹಿಂದೆ ಸಂಸ್ಕೃತ ಭಾಷೆಯಿಂದ ಅನೇಕ ಶಬ್ದಗಳನ್ನು ಕನ್ನಡ ತನ್ನಲ್ಲಿ ಅಳವಡಿಸಿಕೊಂಡಿದೆ.

"ಭಾರತ ಬಹುಭಾಷೆಗಳ ದೇಶ ಸುಮಾರು ೧೦೦೮ಕ್ಕೂ ಹೆಚ್ಚು ಭಾಷೆಗಳು ಬೇರೆ-ಬೇರೆ ಭಾಷೆಗಳು ಭಾರತದಲ್ಲಿ ಇಲ್ಲದೆ ಇಲ್ಲ, ಬೇರೆ-ಬೇರೆ ಸಮುದಾಯ, ಜಾತಿ, ಸಮಾಜ, ಸಂಸ್ಕೃತಿ, ಧರ್ಮ ಇತ್ಯಾದಿಗೆ ಸಂಬಂಧಿಸಿದ ಜನರಿದ್ದು ಭಾರತದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಒಂದಲ್ಲ ಒಂದು ಭಾಷೆಯನ್ನು ಮಾತನಾಡಲು ಬೇರೆಯವರೊಡನೆ ಸಂಪರ್ಕ ಬೆಳೆಸಿಕೊಳ್ಳಲು ಬಯಸುತ್ತಾನೆ. ಅದು ಅವನಿಗೆ ಮಾತೃಭಾಷೆಯಾದರೆ ಉಳಿದ ಭಾಷೆಗಳು ಪರಭಾಷೆಗಳಾಗಿರುತ್ತವೆ. ಅದೇ ರೀತಿಯಾಗಿ ಆಂಧ್ರದಲ್ಲಿ ತೆಲಗು ಭಾಷೆ ಮಾತೃಭಾಷೆಯಾಗಿ ಉಳಿದ ಭಾಷೆಗಳು ಬೇರೆ ಭಾಷೆಗಳಾಗಿ ರುತ್ತವೆ. ಅದೇ ರೀತಿ ತಮಿಳುನಾಡಿನಲ್ಲಿ ತಮಿಳು, ಮಹಾರಾಷ್ಟ್ರದಲ್ಲಿ ಮರಾಠಿ, ಗುಜರಾತಿನಲ್ಲಿ

ಗುಜರಾತಿ, ಹೀಗೆ ಭಾಷಾವಾರು ರಾಜ್ಯಗಳನ್ನಾಗಿ ಭಾರತವು ಮಾಡಿದೆ"(ರಾಜಶೇಖರಪ್ಪ ಎಂ: ೨೦೦೯:೧೬೬). ಭಾರತವು ಬಹುಭಾಷೆಗಳ ದೇಶವಾಗಿರುವಂತೆ ಭಿನ್ನ ಜಾತಿ, ಸಮುದಾಯ, ಬುಡಕಟ್ಟುಗಳಿಂದ ಕೂಡಿದೆ. ವಿಪುಲವಾದ ಜನಸಂಪತ್ತಿನಿಂದ ಕೂಡಿದ ಭಾರತದಲ್ಲಿ ನಾವು ನಮ್ಮವರು ಎಂಬ ಭಾವನೆಯಿಂದ ತಮ್ಮದೇ ಆದ ಸಂಸ್ಕೃತಿ, ಸಂಪ್ರದಾಯ, ರೀತಿ-ನೀತಿಗಳೊಂದಿಗೆ ಬದುಕುತ್ತಿರುವ ಹಲವಾರು ಜನಸಮುದಾಯಗಳಲ್ಲಿ ರಂಗು-ರಂಗಿನ ವೇಷಭೂಷಣ ಗಳೊಂದಿಗೆ ವಿಶಿಷ್ಟವಾಗಿ ಸಿರಿವಂತ ಸಂಸ್ಕೃತಿಯೊಂದಿಗೆ ಗುರುತಿಸಿಕೊಂಡಿರುವ ಲಂಬಾಣಿ ಸಮುದಾಯವು ತನ್ನದೇ ಆದ ಸಾಮಾಜಿಕ ರಚನೆಯೊಂದಿಗೆ ಗ್ರಾಮ, ನಗರ, ಪಟ್ಟಣಗಳಿಂದ ಅನತಿ ದೂರದಲ್ಲಿ ತಾಂಡಾಗಳನ್ನು ರಚಿಸಿಕೊಂಡು ತಮ್ಮದೇ ಆದ ಭಾಷೆಯನ್ನು ಮಾತನಾಡುತ್ತಾರೆ. ಈ ಭಾಷೆಗೆ 'ಗೋರಬೋಲಿ' ಎಂದು ಕರೆಯಲಾಗುತ್ತದೆ. ಇವರಾಡುವ ಈ ಗೋರಬೋಲಿ ಭಾಷೆ ಇಂಡೊ ಆರ್ಯನ್ ಗುಂಪಿಗೆ ಸೇರಿದ ಭಾಷೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ ನಗರೀಕರಣ, ಆಧುನೀಕರಣದ ಪ್ರಭಾವದಿಂದ ಕರ್ನಾಟಕದ ಗೋರಬೋಲಿ ಭಾಷೆ ಕನ್ನಡದಿಂದ ಪ್ರಭಾವಿತ ಗೊಂಡಿರುವಂತೆ, ಮಹಾರಾಷ್ಟ್ರದ ಗೋರಬೋಲಿ ಭಾಷೆಯು ಮರಾಠಿ ಭಾಷೆಯಿಂದ ಹಾಗೆಯೇ ಆಂಧ್ರ ಪ್ರದೇಶದ ಗೋರಬೋಲಿ ಭಾಷೆ ತೆಲಗು ಭಾಷೆಯಿಂದಲೂ ಪ್ರಭಾವಿತಗೊಂಡಿರುವುದು ಕಂಡುಬರುತ್ತದೆ. "ಬಹುಸಂಖ್ಯಾತರಾಗಿರುವ ಕನ್ನಡಿಗರಿಂದ ಅಲ್ಪಸಂಖ್ಯಾತರಾಗಿರುವ ಲಂಬಾಣಿಗರು ಬಹಳಷ್ಟು ಪದಗಳನ್ನು ಸ್ವೀಕರಿಸಿದ್ದಾರೆ. ಆದರೆ ಇದಕ್ಕೆ ಪ್ರತಿಯಾಗಿ ಕನ್ನಡವು ಗೋರಬೋಲಿ ಭಾಷೆಯಿಂದ ಏನನ್ನೂ ಸ್ವೀಕರಿಸಿಲ್ಲ ಆದ್ದರಿಂದ ಇದು ಏಕಪಕ್ಷೀಯ ಸ್ವೀಕರಣಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ. ಈ ಏಕಪಕ್ಷೀಯ ಸ್ವೀಕರಣದಲ್ಲಿ ಕೆಳಭಾಷೆ ಮತ್ತು ಮೇಲುಭಾಷೆ ಎಂದು ಎರಡನ್ನು ಗುರುತಿಸಬಹುದು. ನೀರಿನಂತೆ ಮೇಲುಭಾಷೆಯಿಂದ ಕೆಳಭಾಷೆಗೆ ಭಾಷಾಂಶಗಳು ಹರಿದು ಬರುತ್ತಲೇ ಇರುತ್ತವೆ" (ಚಿದಾನಂದಮೂರ್ತಿ ಎಂ:೨೦೦೮:೭೬). ಕರ್ನಾಟಕದಲ್ಲಿ ಮೇಲುಭಾಷೆಯಾದ ಕನ್ನಡದಿಂದ ಕೆಳಭಾಷೆ ಯಾದ ಗೋರಬೋಲಿ ಭಾಷೆಯು ಕನ್ನಡದಿಂದ ನೂರಾರು ಪದಗಳನ್ನು ಸ್ವೀಕರಿಸಿದೆ, ಆದರೆ ಕನ್ನಡವು ನಮಗೆ ತಿಳಿದ ಮಟ್ಟಿಗೆ ಏನನ್ನೂ ಸ್ವೀಕರಿಸಿಲ್ಲ. ಪ್ರಾರಂಭದಲ್ಲಿ ಅಲೆಮಾರಿಗಳಾಗಿದ್ದರಿಂದ ಪಶುಪಾಲನೆಯನ್ನೇ ಬಹುವಾಗಿ ನೆಚ್ಚಿಕೊಂಡ ಇವರು ಕಾಲಕಳೆದಂತೆ ಕನ್ನಡಿಗರ ಮಧ್ಯ ಒಂದಡೆ ನೆಲೆನಿಂತು ವಾಸಿಸಲು ಪ್ರಾರಂಭಿಸಿದಾಗಿನಿಂದ ಅನಿವಾರ್ಯವಾಗಿ ಕನ್ನಡಿಗರಿಂದ ವ್ಯವಸಾಯವನ್ನು ಕಲಿತದ್ದಲ್ಲದೆ, ವ್ಯವಸಾಯಕ್ಕೆ ಸಂಬಂಧಿಸಿದ ಹಲವಾರು ಪದಗಳನ್ನು ಕನ್ನಡದಿಂದ ಸ್ವೀಕರಿಸಿ ತಮ್ಮ ಧ್ವನಿ ವ್ಯವಸ್ಥೆಗೆ ಹೊಂದಿಸಿಕೊಂಡರು.

"ಕನ್ನಡವು ಅವರಿಗೆ ಹೊರನಾಗರಿಕತೆಗೆ ಹೆಬ್ಬಾಗಿಲು. ಕನ್ನಡವು ಇಂಗ್ಲೀಷನಿಂದ ಅಥವಾ ಇತರೆ ಭಾಷೆಗಳಿಂದ ಏನನ್ನು ಸ್ವೀಕರಿಸುತ್ತದೆಯೋ ಅದು ಲಂಬಾಣಿ ಭಾಷೆಯ ಆಸ್ತಿಯಾಗಿ ಪರಿಣಮಿಸುತ್ತದೆ. ಕಾಲೇಜು, ಮೋಟಾರ್ಸ, ಸೆಕೆಂಡ್, ಇಂಗ್ಲೀಷು, ಗುಂಡ್ಪಿನ್ನು, ಹೋಟ್ಲು, ಕೋರ್ಟು, ಕೋಟು, ಬೈಸಿಕಲ್, ಆಸ್ಪತ್ರೆ ಇತ್ಯಾದಿಗಳನ್ನು ಗೋರಬೋಲಿಯು ಕನ್ನಡದಿಂದ ಸ್ವೀಕರಿಸಿದೆ.

ಕನ್ನಡವು ಇಂಗ್ಲೀಷನಿಂದ ಸ್ವೀಕರಿಸಿದೆ"(ಚಿದಾನಂದಮೂರ್ತಿ ಎಂ:೨೦೦೮:೭೭). ಯಾವ ರೀತಿ ಕರ್ನಾಟಕದ ಲಂಬಾಣಿಗರು ಕನ್ನಡ ಭಾಷೆಯ ಪ್ರಭಾವಕ್ಕೆ ಒಳಗಾಗಿ ಕನ್ನಡ ಭಾಷೆಯ ಪದಗಳನ್ನು ಸ್ವೀಕರಿಸಿದ್ದೇ ಅಲ್ಲದೆ ತನ್ನ ಧ್ವನಿ ವ್ಯವಸ್ಥೆಗೆ ತಕ್ಕಂತೆ ಅಲ್ಪ-ಸ್ವಲ್ಪ ಮಾರ್ಪಾಡುಗಳನ್ನು ಮಾಡಿ ಕೊಂಡಿದೆಯೋ, ಇದೇ ರೀತಿಯಾಗಿ ಮಹಾರಾಷ್ಟ್ರದ ಲಂಬಾಣಿಗರು ಮರಾಠಿ ಭಾಷೆಯ ಪ್ರಭಾವ ಕ್ಕೊಳಗಾಗಿ ಹಲವಾರು ಮರಾಠಿ ಪದಗಳನ್ನು ಸ್ವೀಕರಿಸಿರುವುದು ಕಂಡುಬರುತ್ತದೆ. ಅದರಂತೆ ಆಂಧ್ರ ಪ್ರದೇಶದ ಲಂಬಾಣಿಗರು ತೆಲಗು ಭಾಷೆಯಿಂದ ಪ್ರಭಾವಿತರಾಗಿ ಹಲವಾರು ತೆಲಗು ಭಾಷೆಯ ಪದಗಳನ್ನು ಸ್ವೀಕರಿಸಿರುವುದು ಸ್ಪಷ್ಟವಾಗುತ್ತದೆ. ಹೀಗಾಗಿ ಗುಲಬರ್ಗಾ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ಕನ್ನಡ, ಸೋಲಾಪುರ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ಮರಾಠಿ ಹಾಗೂ ರಂಗಾರೆಡ್ಡಿ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ತೆಲಗು ಭಾಷೆಯ ಪ್ರಭಾವ ವಾಗಿರುವುದು ಅಧ್ಯಯನದಿಂದ ಕಂಡುಬಂದಿದೆ.

**ಕೋಷ್ಟಕ ೪.೭೧. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಗೋರಬೋಲಿ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಗಳ ಪ್ರಭಾವ**

| ಕನ್ನಡ ಭಾಷೆ ಪದ | ಗುಲಬರ್ಗಾ ಜಿಲ್ಲೆ ಗೋರಬೋಲಿ ಪದ | ಮರಾಠಿ ಭಾಷೆ ಪದ | ಸೋಲಾಪುರ ಜಿಲ್ಲೆ ಗೋರಬೋಲಿ ಪದ | ತೆಲಗು ಭಾಷೆ ಪದ | ರಂಗಾರೆಡ್ಡಿ ಜಿಲ್ಲೆ ಗೋರಬೋಲಿ ಪದ |
|---|---|---|---|---|---|
| ೧ | ೨ | ೩ | ೪ | ೫ | ೬ |
| ಎತ್ತು | ಬಳದ | ಬೈಲ್ | ಬಳದ | ಎದ್ಲು | ಬಳದ |
| ಆಕಳು | ಗಾವಡಿ | ಗಾಯ್ | ಗಾವಡಿ | ಆವು | ಗಾವಡಿ |
| ಹೋರಿ | ಕೇಲ್ಡಾ | ಖೊಂಡ | ಕೇಲ್ಡಾ | ಬುಡ್ಡಾಲು | ಕೆಲ್ಡಾ |
| ನೇಗಿಲು | ನೆಗ್ಲಿ | ನಾಗರ | ನಾಗರ | ನಾಗಲು | ನಾಗಲು |
| ಕುಂಟೆ | ಕುಂಟಿ | ಕುಳೋ | ಕೊಳ್ಪಿ | ಜಂಬು | ಜಂಬು |
| ಹಣೆ ಹಗ್ಗ | ಹಣೆಗ್ಗಾ | ಕಾಸರಾ | ಕಾಸರಾ | ಪಗ್ಗಂ | ಪಗ್ಗ |
| ಎಡಿ | ಎಡಿ | ಎಡಿ | ಎಡಿ | ದಂತಿಯಾ | ದಂತಿಯಾ |
| ಜೋಳ | ಜಾರ | ಜ್ವಾರಿ | ಜಾರ | ಜೊನ್ನಲು | ಜಾರ |
| ಸಜ್ಜೆ | ಬಾಜ್ರೆ | ಬಾಜ್ರೆ | ಬಾಜ್ರೆ | ಸಜ್ಜಲು | ಬಾಜರಿ |
| ಗೋಧಿ | ಘಂವು | ಗಂವು | ಗಂವು | ಗೋಜ್ಮಲು | ಘಂವು |
| ಹೆಸರು | ಮುಂಗ | ಮುಗದಾಳ | ಮುಂಗದಾಳ | ಪೆಸರ | ಮೂಂಗ |
| ತೊಗರಿ | ತೂರಿ | ತುರದಾಳ | ತುರಿದಾಳ | ಕಂದಿ | ತೂರಿದಾಳ |
| ಕಡಲೆ | ಚಣಾ | ಹರಬರ | ಚಣಾ | ಸೆನೆಗೆಲು | ಚಣಾ |

| ೧ | ೨ | ೩ | ೪ | ೫ | ೬ |
|---|---|---|---|---|---|
| ಬೆಳೆ | ಬೆಳಿ | ಪಿಕ್ | ಪಿಕ್ | ಮೊಲ್ಕಾಲು | ಮೊಲ್ಕಾ |
| ರಾಶಿ | ರಾಸ | ರಾಸ್ | ರಾಸ್ | ರಾಶಿ | ರಾಶಿ |
| ಭತ್ತ | ಭತ್ತಾ, ಸಾಳ | ತಾಂದೂಳ | ತಾಂದೂಳ | ಒಡ್ಲು | ಸಾಳ, ಒಡ್ಲು |
| ಬಡಿಗ | ಬಡಗ್ಯಾ | ಸುತಾರ | ಬಡಗ್ಯಾ, ಸುತಾರ | ಒಡ್ಲೊಡು | ಒಡ್ಲೊಡು, ಖಾತಿ |
| ಕಮ್ಮಾರ | ಕಮಾರ, ಲವಾರ | ಲೋಹಾರ | ಲೋಹರ | ಕಮ್ಮಾರಲು | ಲವಾರ, ಕಮ್ಮಾರ |
| ಚಮ್ಮಾರ | ಚಮ್ಮಾರ | ಚಾಂಭಾರ | ಚಮಾರ | ಮೊಚ್ಚಲಂ | ಮೊಚ್ಚಲ |
| ಉಳಿ | ಉಳಿ | ಛನ್ನಿ | ಚನ್ನಿ | ಛನ್ನಿ | ಛನ್ನಿ |
| ಬಾಚಿ | ಬಾಚಿ | ಬಾಚಿ | ಬಾಚಿ | ಬಾರಸ್ಯಾ | ಬಾರಸ್ಯಾ |
| ಸುತ್ತಿಗೆ | ಸುತ್ಗಿ | ಹತೋಡಾ | ಹತೋಡಾ | ಸುತ್ಯಾ | ಸುತ್ಯಾ |
| ಗುದ್ದಲಿ | ಕುದಾಳಿ, ಟಿಕಾವ | ಕುದಳ | ಕುದಾಳಿ, ಟಿಕಾವ | ಟಿಕಾವ | ಟಿಕಾವ |
| ಕೂರಿಗೆ | ಕೂರ್ಗಿ | ತಿಪ್ಪಣಿ | ತಿಪ್ಪನಿ | ಗೋರು | ಗೋರು |
| ಸೇರು | ಸೇರ | ಸೇರ | ಸೇರ | ಸೋಲಾ | ಸೋಲಾ, ಸೇರ |
| ಖಣ | ಹಂತಿ | ಖಳಾ | ಖಳೋ | ಬಂತಿ | ಬಂತಿ |
| ಚಕ್ರ | ಗಾಲಿ | ಚಾಕ್ | ಚಾಕ್ | ಚಕ್ರಂ | ಚಕ್ರ, ಪಯ್ಯಾ |
| ಸಲಿಕೆ | ಸಲ್ಕಿ | ಫಾವಡಾ | ಫಾವಡಾ, ಸನ್ಕಿ | ಸಲಕ್ಯಾ | ಸಲಕ್ಯಾ |
| ಎಮ್ಮೆ | ಭೆಂಸಿ | ಮೈಹಿಸ್ | ಭೇಸಿ | ಬರ್ರ್ಯಾ | ಭೇಸಿ, ಬರ್ರ್ಯಾ |
| ಕರು | ಕೇಲ್ದಾ | ವಾಸ್ರು | ಲವಾರಾ, ಕೆಲ್ದಾ | ಲ್ಯಾಗಾ | ಕೆಲ್ದಾ |
| ಹಾಲು | ದೂದ | ದೂದ | ದೂದ | ಪಾಲು | ದೂದ |
| ಮೊಸರು | ಧೈ | ದಹಿ | ದಹಿ | ಪೆರಗು | ಧೈ |
| ಬೆಣ್ಣೆ | ನೂಣಿ | ಲೋಣಿ | ಲೂಣಿ | ವೆನ್ನಾ | ನುಣಿ |
| ಬಿತ್ತುವಿಕೆ | ಪೇರಣಿ | ಪೇರಣಿ | ಪೇರಣಿ | ಎದವೆಟ್ಟು | ಎದವೆಟ್ಟು |
| ನವಣೆ | ರಾಳೋ | ರಾಳ | ರಾಳೋ | ಕೊರ್ರಲು | ರಾಳೊ |
| ತುಪ್ಪ | ಘೀ | ತುಪ | ಘೀ | ನೆಯಿ | ಘೀ |
| ಮಜ್ಜಿಗೆ | ಜಾಮಣ್ | ತಾಕ್ | ಜಾಮಣ | ಸಲ್ಲಾ | ಜಾಮಣ, ಸಲ್ಲಾ |
| ಗೂಟ | ಘೂಟಾ | ಮೇಕ್ | ಖಿಲ್ಲಾ | ಗೂಟಂ | ಘುಟ |
| ಕೊಟ್ಟಿಗೆ | ಕೊಟ್ಗಿ | ದಾವನ | ದಾಮಣ | ಕೊಟಮ್ | ಕೋಟಾ |
| ಸಗಣಿ | ಗೋಬರ | ಸೇಣ | ಗೋಬರ | ಪೆಂಡಾ | ಪೆಂಡಾ, ಗೋಬರ |
| ಗೊಬ್ಬರ | ಗೋಬ್ರಾ | ಖತ್ | ಖಾತ್ | ಎರುವು | ಎರು |

| ೧ | ೨ | ೩ | ೪ | ೫ | ೬ |
|---|---|---|---|---|---|
| ಕೋಡು | ಸಿಂಗ | ಸಿಂಗ್ | ಸಿಂಗ್ | ಕೊಮ್ಮುಲು | ಸಿಂಗ |
| ಬಾಲ | ಪುಚ್ಡಿ | ಪೇಪುಚ್ | ಪುಚಡಿ | ತೋಕಾ | ಪುಚಡಿ, ತೋಕಾ |
| ಚರ್ಮ | ಖಾಲ್ದೋ | ಕಾತಡಿ | ಖಾಲ್ದೋ | ಚರ್ಮಂ | ಖಾಲ್ದೊ |
| ನೀರಾವರಿ | ನೀರಾವರಿ | ಬಾಗೈತ | ಬಾಗೈತ | ತರಿಪೋಲಂ | ತರಿಪೋಲ |
| ಒಣ ಬೇಸಾಯ | ಒಣ ಬೇಸಾಯ | ಜಿರೈತ | ಜಿರೈತ | ಎಲವಾಭೂಮಿ | ಎಲವಾಭೂಮಿ |
| ಕೂಲಿ | ಕೂಲಿ | ಮಜೂರಿ | ಮಜೂರಿ | ಕೂಲಿ | ಕೂಲಿ |
| ಆಡು | ಥೇಳಿ | ಶೇಳಿ | ಥೇಳಿ | ಮ್ಯಾಕಾ | ಥೇಳಿ, ಮೆಕಾ |
| ಕೋಳಿ | ಕುಕಡಿ | ಕೊಂಬ್ಡಿ | ಕುಕಡಿ | ಕೋಡಿ | ಕುಕಡಿ |
| ಓದು | ಓದ | ವಾಚಣೆ | ವಾಚ್ | ಚದವಡಂ | ಸದವ, ಸದ್ವ |
| ಬರಹ | ಲಕ | ಲಿಹಿಣೆ | ಲಿಖ್ | ರಾಯೆಡಂ | ಲಕರೋ, ರಾಯೆಡಂ |
| ಕಲಿ | ಸಿಕ | ಸಿಕಣೆ | ಸಿಕ | ನೇರ್ಚುಕುನ್ನಡಂ | ಸಿಕ್ |
| ಪುಸ್ತಕ | ಪುಸ್ತಕಾ | ಪುಸ್ತಕ | ಪುಸ್ತಕ | ಪುಸ್ತಕಂ | ಪುಸ್ತಕ |
| ಲೆಕ್ಕಣಿಕೆ | ಪೆನ್ನ | ಲೇಖಣಿ | ಲೇಖನಿ, ಪೆನ್ನ | ಪೆನ್ | ಪೆನ್ |
| ಲೆಕ್ಕ | ಲೆಕ್ಕಾ, ಹಸಾಬ | ಹಿಸೋಬ | ಹಸಾಬ | ಲೆಕ್ಕಾ | ಲೆಕ್ಕಾ, ಹಸಾಬ |
| ಸೀಸಪೆನ್ಸಿಲ | ಪೆನ್ಸಿಲ | ಸಿಸ ಪೆನ್ಸಿಲ | ಸಿಸ ಪೆನ್ಸಿಲ | ಪೆನ್ಸಿಲ್ | ಪೆನ್ಸಿಲ |
| ಇಂಚುಪಟ್ಟಿ | ಪಟ್ಟಿ | ಘುಟ ಪಟ್ಟಿ | ಪಟ್ಟಿ | ಸ್ಕೇಲ್ | ಸ್ಕೆಲ |
| ಶಾಲೆ | ಸಾಲಿ | ಶಾಳಾ | ಸಾಲಿ | ಶಾಲಾ | ಸಾಲ್ಯಾ |
| ಶಿಕ್ಷಕ | ಮಾಸ್ತಾರ | ಶಿಕ್ಷಕ | ಮಾಸ್ತಾರ | ಗುರು, ಪಂತಲು | ಗುರು, ಸಾರ್ |
| ಶಿಕ್ಷಕಿ | ಮಾಸ್ತಾರಣಿ | ಶಿಕ್ಷಿಕಾ | ಮಾಸ್ತಾರಣಿ | ಪಂತುಲಮ್ಮ | ಪಂತುಲಮ್ಮಾ |
| ವಿದ್ಯಾರ್ಥಿ | ವಿದ್ಯಾರ್ಥಿ | ವಿದ್ಯಾರ್ಥಿ | ವಿದ್ಯಾರ್ಥಿ | ವಿದ್ಯಾರ್ಥಿ | ವಿದ್ಯಾರ್ಥಿ |
| ಬಾಲಕ | ಭೋರಾ | ಮುಲ್ಗಾ | ಭೋರಾ | ಪಿಲ್ಲಗಾಡು | ಭೋರಾ |
| ಬಾಲಕಿ | ಭೋರಿ | ಮುಲ್ಗಿ | ಭೋರಿ | ಆಡಪಿಲ್ಲಾ | ಭೋರಿ |
| ಕಪ್ಪುಹಲಗೆ | ಬೋರ್ಡ | ಫಳಾ | ಫಳಾ | ನಲ್ಲಾಬಲ್ಲಾ | ನಲ್ಲಾಬಲ್ಲಾ |
| ಹಲಗೆ (ಸ್ಲೇಟ್) | | ಪಾಟಿ | ಪಾಟಿ | ಪಾಟಿ | ಪಲಕಾ |
| ಪರೀಕ್ಷೆ | ಪರಿಕ್ಷಾ | ಪರೀಕ್ಷಾ | ಪರೀಕ್ಷಾ | ಪರೀಕ್ಷಾಲು | ಪರೀಕ್ಷಾ |
| ಗುಡಿಸಲು | ಝುಪ್ಡಿ | ಜೋಪಡಿ | ಝುಪಡಾ | ಗುಡಸ್ಯಾ | ಝುಪಡಾ |
| ಹೋಳಿಗೆ | ಹೋಳ್ಗಿ | ಪುರಣ ಪೋಳಿ | | ಪೋಳಿ | ಪೋಲೆಲ, ಪೋಳಿ |
| ಜಾತ್ರೆ | ಜಾತ್ರಾ | ಜತ್ರಾ | ಜಾತ್ರಾ | ಜಾತ್ರಾ | ಜಾತ್ರಾ |

| ೧ | ೨ | ೩ | ೪ | ೫ | ೬ |
|---|---|---|---|---|---|
| ಬಚ್ಚಲು | ಬಚ್ಚಲಾ | ಮೋರಿ | ಮೋರಿ, ಬಚಲಾ | ಜಾರಟ್ಲ | ಜಾರಟ್ಲಾ |
| ಮಧ್ಯಾಹ್ನ | ದೊಪೇರ | ದುಪಾರ | ದೊಪ್ಪೆರ | ಮದ್ಯಾನಂ | ದೊಪ್ಪೆರ |
| ಮುಂಜಾನೆ | ಪರಬಾತಿ | ಸಕಾಳ | ಪರಾತಿ | ಉದಯಂ | ಪರಬಾತಿ |
| ಸಂಜೆ | ಸಾಂಜ | ಸಂಧ್ಯಾಕಾಳ | ಸಾಂಜ್ | ಸಾಯಂತ್ರಂ | ಸಾಂಜ |
| ಮನುಷ್ಯ | ಮಾಣಸ, ಮನಕ್ಯಾ | ಮಾನುಷ | ಮಾಣಷ, ಮನಕ್ಯಾ | ಮನುಷಿ | ಮನಕ್ಯಾ |
| ಅಂಗಿ | ಝಿಗಲಾ | ಸದರಾ | ಜಿಗ್ಲಾ | ಅಂಗಿ | ಝಿಗಲಾ |
| ಚಪಾತಿ | ಚಪಾತಿ | ಚಪಾತಿ | ಚಪಾತಿ | ಚಪಾತಿಲು | ಚಪಾತಿ |
| ಮನೆ | ಘರ್ | ಘರ | ಘರ | ಇಲ್ಲು | ಇಲ್ಲು, ಘರ |
| ಕೋಣೆ | ಖೋಲಿ | ಖೋಲಿ | ಖೋಲಿ | ಕೊಟಂ | ಕೊಠಡಿ |
| ರಾತ್ರಿ | ರಾತ | ರಾತ್ರ | ರಾತ್ | ರಾತ್ರಿ | ರಾತ |
| ಹಗಲು | ದಾಡೋ | ದಿವಸ | ದಾಡೋ | ರೋಜು | ದಾಡೋ |
| ಅಮವಾಸ್ಯೆ | ಅಮಾಸ | ಅಮವಾಸ್ಯಾ | ಅಮಾಸ | ಅಮವಾಸ | ಅಮವಾಸ |
| ಹುಣ್ಣಿಮೆ | ಹುಣ್ಣಿ | ಪೂರ್ಣಿಮಾ | ಪೂನಮ್ | ಪುನ್ನಂ | ಪೂನಂ |
| ನಿದ್ರೆ | ನಿಂದ | ಝೋಪ | ನಿಂದ | ನಿದ್ರಾ | ನಿಂದ |
| ದುಃಖ | ದುಃಖಾ | ದುಃಖ | ದಕ್ | ದುಃಖಂ | ದುಃಖಾ |
| ಸುಖ | ಸುಃಖಾ | ಸುಃಖ | ಸಕ್ | ಸುಃಖಂ | ಸುಃಖಾ |
| ಅನುಮಾನ | ಅನುಮಾನ, ಸಂಶ್ಯಾ | ಸಂಸಯ | ಸಂವಶ್ಯಾ | ಅನುಮಾನಂ | ಅನುಮಾನ |
| ಕಾರಣ | ಕಾರಣ | ಕಾರಣ | ಕಾರಣ | ಕಾರಣಂ | ಕಾರಣ |
| ಕಸ | ಕಸಾ | ಕಚರಾ | ಕಚರೋ | ಕಸ | ಕಚರೋ |
| ಸಾಲ | ಸಾಲಾ | ವ್ಯಾಜ | ವ್ಯಾಜ್ | ಅಪ್ಪು | ಅಪ್ಪು, ಬಾಕಿ |
| ಅಸಲು | ಅಸಲ, ಗಟಡಿ | ಮುದ್ದತ | ಗಟಡಿ | ಗಂಟು | ಗಟಡಿ |
| ಚಿಕ್ಕವನು | ನಾನಕ್ಯಾ | ಲಹಾನ | ಬಾರಕ್ಯಾ, ನಾಣಕ್ಯಾ | ಚಿನ್ನೊಡು | ಚಿನ್ನೊಡು, ನಾನಕ್ಯಾ |
| ದೊಡ್ಡವನು | ಮೋಟೋ | ಮೋಠಾ, ಮೋಠೆ | ಮೋಟೋ | ಪೆದ್ದೊಡು | ಪೆದ್ದೊಡು, ಮೋಟೊ |
| ಹಬ್ಬ | ಹಬ್ಬಾ | ಸಣ | ಸನ್ | ಪಂಡುಗಾ | ಪಾಂಡಗಾ |
| ಕಣ್ಣು | ಆಂಕಿ | ಡೋಳೆ | ಡೋಳಾ | ಕಣ್ಲು | ಆಂಕಿ |
| ಕಾಲು | ಟಾಂಗ | ಪಾಯ | ಪಗ | ಕಾಳ್ಲು | ಟಾಂಗ |
| ಗೆಜ್ಜೆ | ಗೆಜ್ಜಿ, ಘುಘರಾ | ಗುಂಗರ | ಗುಗರಾ | ಗೆಜ್ಜಲು | ಗೆಜ್ಜಲು, ಜೊಡಿ |
| ಸೀರೆ | ಸಾಡೋ | ಸಾಡಿ | ಸಾಡಿ | ಸೀರಾ | ಸಿರಾ |

| ೧ | ೨ | ೩ | ೪ | ೫ | ೬ |
|---|---|---|---|---|---|
| ಗಂಡು | ಮಾಟಿ | ಪುರುಷ | ಮಾಟಿ | ಪುರುಷಲು | ಮಾಟಿ |
| ಹೆಣ್ಣು | ತಾಂಡ್ರಿ | ಸ್ತ್ರಿ | ತಾಂಡ್ರಿ | ಸ್ತ್ರೀಲು | ತಾಂಡ್ರಿ |
| ದೇವರು | ದೇವ | ದೇವ | ದೇವ | ದೇವುಡು | ದೇವ |
| ಬೆಡಗು | ಪಾಡಾ | ಗೋತಾವಳಾ | ಪಾಡಾ | ಗೋತ್ರಂ | ಪಾಡಾ |
| ಸಂಬಂಧ | ಸಂಬಂಧ | ನಾತಲಗ | ಗೋತವಾಡಾ | ಸಂಬಂಧಂ | ಸಂಬಂದಾ |
| ವಯಸ್ಸು | ವಯಸ್ಸ | ವಯ | ವಯ | ವಯಸ್ಸು | ವಯಸ್ಸ್ |
| ಕೆಲಸ | ಕಾಮ | ಕಾಮ | ಕಾಮ | ಪನಿ | ಕಾಮ |
| ಅಂಗವಿಕಲ | ಲಂಗಡೋ | ಅಪಂಗ | ಲಂಗಡೋ | ವಿಕಲಾಂಗುಲು | ಲಂಗಡೋ |
| ವಿಧವೆ | ರಂಡಿಮುಂಡಿ | ವಿಧವಾ | ವಿಧವಾ, ರಂಡಿಮುಂಡಿ | ವಿಧವಾ | ವಿಧವಾ, ರಂಡಿಮುಂಡಿ |
| ವೃದ್ಧಾಪ್ಯ | ಬುಡಾಪಣ | ಮಾತಾರಾ | ಬುಡೋ | ವೃದ್ಯಾಪದಶಾ | ಬುಡೋ, ಪೆದ್ದಾ |
| ಸೌಲಭ್ಯ | ಸೌಲತ | ಸೌಲತ್ | ಸೌಲತ್ | ಅನುಕೂಲಂ | ಅನುಕೂಲಾ |
| ಕಾಗೆ | ಕಾಗ್ಲಾ | ಕಾವಳಾ | ಕಾಗಲಾ | ಕಾಕಿ | ಕಾಕಿ, ಕಾಗ್ಲಾ |
| ಮೊಲ | ಸಸ್ಯಾ | ಸಸಾ | ಸಸ್ಯಾ | ಕುಂದೆಲು | ಸಸ್ಯಾ |
| ಪಾರಿವಾಳ | ಕಬೂತರ | ಕಬೂತರ | ಕಬೂತರ | ಪೌರಂ | ಪೌರಾ |
| ಹುಂಜ | ಕುಕಡೋ | ಕೊಂಬಡಾ | ಕುಕಡೋ | ಕೊಡಿಪುಂಜು | ಕುಕಡೋ |
| ಹುಲಿ | ಹುಲಿ, ವಾಗ | ವಾಗ | ವಾಗ | ಪುಲಿ | ಪುಲಿ |
| ಸಿಂಹ | ಸಿಮ್ಹಾ | ಸಿಂಹ | ಸಿಂಹಾ | ಸಿಂಹಂ | ಸಿಂಹಾ |
| ಚಿಗರೆ | ಚಿಗ್ರಿ, ಹಣ್ಣಿ | ಹರೀಣ | ಹಣ್ಣಿ | ಜಿಂಕಾ | ಜಿಂಕಾ |
| ಗಿಳಿ | ಗಿಳಿ | ಪೋಪಟ | ಪೋಪಟ | ಚಿಲುಕಾ | ಚಿಲಕಾ |
| ಕೋಗಿಲೆ | ಕೋವಲ | ಕೋಕಿಳಾ | ಕೋವಲ | ಕೋಕಿಲಾ | ಕೋಕಿಲ |
| ಚಿರತೆ | ಚಿರ್ತಿ | ಚಿತ್ತಾ | ಚಿತ್ತಾ | ಚಿರತಾ | ಚಿರ್ತಾ |
| ಮೀನು | ಮಾಳ್ಳಿ | ಮಾಸಾ | ಮಾಚಳಿ | ಚೇಪಾ | ಚೇಪಾ, ಮಾಳ್ಳಿ |
| ಮೊಸಳೆ | ಮಂಗರ | ಮಗರ್ | ಮಗರ್, ಮಂಗರ್ | ಮೊಸಲಿ | ಮಂಗರ |
| ಛತ್ರಿ | ಛತ್ರಿ | ಛತ್ರಿ | ಛತ್ರಿ | ಗೊಡಗು | ಗೊಡಗಾ |
| ಹಂದಿ | ಹಂದಿ, ಸೂರಿ | ಡುಕ್ಕರ | ಡುಕ್ಕರ, ಸೂರಿ | ಪಂದಿ | ಪಂದಿ, ಸೂರಿ |
| ಮಂಗ | ಬಾಲ್ಯಾ | ಮಾಕಡ್ | ಬಾಲ್ಯಾ | ಹಣುತ | ಹಣುತ |
| ದೀಪಾವಳಿ | ದವಾಳಿ | ದಿವಾಳಿ | ದವಾಳಿ | ದೀಪಾವಳಿ | ದವಾಳಿ |
| ಹೋಳಿ | ಹೋಳಿ | ಸಿಮ್ಲಾ | ಹೋಳಿ | ಹೋಲಿ | ಹೋಳಿ |

| ೧ | ೨ | ೩ | ೪ | ೫ | ೬ |
|---|---|---|---|---|---|
| ಕಾರಹುಣ್ಣಿಮೆ | ಕಾರೋಣ್ಣಿ | ಬೈಲ ಪೋಳಾ | ಪೋಳಾ | ಎರಕಾಮುನ್ನಂ | ಎರ್ಕಾ |
| ದಸರಾ | ದಸರಾವ | ದಶಮಿ | ದಸರಾ | ದಸರಾ | ದಸರಾವ |
| ಯುಗಾದಿ | ಉಗಾದಿ | ಗುಡಿ ಪಾಡವಾ | ಪಡವಾ | ವುಗಾದಿ | ವುಗಾದಿ |
| ಮಕರ ಸಂಕ್ರಾಂತಿ | ಸಂಕ್ರಾಂತಿ | ಮಕರ ಸಂಕ್ರಾಂತಿ | ಸಂಕ್ರಾಂತಿ | ಮಕರ ಸಂಕ್ರಾಂತಿ | ಸಂಕ್ರಾಂತಿ |
| ವಿವಾಹ | ವಾಯಾ | ಲಗ್ನ | ವಾಯಾ | ಪೆಂಡ್ಲಿ | ವಾಯಾ |
| ಜನನ | ಹೊಯೋಚ್, ಜನಮ್ | ಜನ್ಮ | ಜನಮ್ | ಪುಟ್ಟು | ಹೊಯೋಚ್, ಪುಟ್ಟಿಂಡಾ |
| ಮರಣ | ಸಮಾಗೋ, ಮರಣ | ಮೃತ್ಯು | ಸಮಾಗೋ, ಮರಣ | ಮರಣಿಂಚ್ಚಡು | ಮರಗೋ |
| ಹಾರಿ | ಹಾರಿ | ಪಾರ | ಪಾರ | ಗಢಾಪಾರ | ಗಡ್ಡಾಪಾರಾ |
| ಕಿಟಕಿ | ಖಿಡ್ಕಿ | ಖಿಡಕಿ | ಖಿಡಕಿ | ಕಿಟಕಿ | ಖಿಡಕಿ |
| ಪರದೆ | ಪರ್ದಾ | ಪಡದಾ, ಪಡದೆ | ಪರ್ದಾ | ಪಡದಾ | ಪಡದಾ |
| ಗೋಡೆ | ಗೋಡಿ | ಭಿಂತ್ | ಭೀತ್ | ಗೋಡಾ | ಗೋಡಾ |
| ಸಿಮೆಂಟ್ | ಸಿಮೆಂಟ | ಸಿಮೆಂಟ | ಸಿಮೆಂಟ | ಸಿಮೆಂಟ | ಸಿಮೆಂಟ |
| ಬಾಗಿಲು | ಬಾಗ್ಲೋ | ದರ್ವಾಜಾ | ಬಾಗ್ಲೋ | ದರವಾಜಾ | ದರವಾಜೋ |
| ಮಂಚ | ಮಂಚಾ | ಪಲಂಗ | ಪಲಂಗ | ಮಂಚಂ | ಪಲಂಗ |
| ಗೊಂಬೆ | ಗೊಂಬಿ | ಬಾಹುಲಿ | ಭಾಹುಲಿ | ಬೊಮ್ಮಾ | ಬೊಮ್ಮಾ |
| ಬುನಾದಿ | ಬುನಾದಿ | ಪಾಯಾ | ಪಾಯಾ | ಬುನಾದಿ | ಬುನಾದಿ |
| ಕಮಾನು | ಕಮಾನ | ಕಮಾನ | ಕಮಾನ | ಕಮಾನು | ಕಮಾನ |
| ಮೆಟ್ಟಿಲು | ಮೆಟ್ಟಿಲ್ | ಪಾಯರಿ | ಪಾಯರಿ | ಮೆಟ್ಟಲು | ಮೆಟ್ಟಲಾ |
| ನಲ್ಲಿ | ನಳಾ | ನಳ | ನಳ | ನಲಾ | ನಳಾ |
| ವಾರ | ವಾರ | ಅಠವಡಾ | ಅಠೋಡಾ | ವಾರಂ | ವಾರಾ |
| ಗಡಿಯಾರ | ಘಡಿ | ಘಡ್ಯಾಳ | ಘಡ್ಯಾಳ | ಗಡಿಯಾರಂ | ಘಡಿ |
| ಹೊರಸು | ಹೊರ್ಸ್ | ಬಾಜ್ | ಬಾಜ್ | ಮಂಚಂ | ಮಂಚಾ |
| ಕುಟುಂಬ | ಕುಟುಂಬ | ಕುಟುಂಬ | ಕಟಮಾಳೋ | ಕುಟುಂಬಂ | ಕುಟುಂಬಾ |
| ಪೀಳಿಗೆ | ಪೀಳ್ಗಿ | ಪೀಡಿ | ಪೀಡಿ | ವಂಶಂ | ವಂಶಾ |
| ಸಂಘ | ಸಂಘಾ | ಸಂಘಟನಾ | ಮಂಡಳ | ಸಂಘಂ | ಸಂಘಾ |
| ರುಮಾಲು | ರುಮಾಲ | ಪೇಟಾ | ರುಮಾಲ | ರುಮಾಲ | ರುಮಾಲ |
| ಧೋತರ | ಧೋತಿ | ಧೋತರ | ಧೋತಿ | ಪಂಚಾ | ಪಂಚಾ |

| ೧ | ೨ | ೩ | ೪ | ೫ | ೬ |
|---|---|---|---|---|---|
| ಟಮಾಟೋ | ಟಮಾಟ್ಯಾ | ಟಮಾಟೋ | ತಮಾಟಾ | ಟಮಾಟಾ | ಟಮೇಟಾ |
| ಗಜ್ಜರಿ | ಗಾಜರ್ | ಗಾಜರ | ಗಾಜರ್ | ಗಾಜರಮು | ಗಾಜರ |
| ರಸ್ತೆ | ರಸ್ತಾ | ರಸ್ತಾ | ರಸ್ತಾ | ರಸ್ತಾ | ರಸ್ತಾ |
| ಬದನೆಕಾಯಿ | ವೇಂಗಣ | ವಾಂಗಿ | ವೆಂಗಣ | ವಂಕಾಯಾ | ವಂಕಾಯಾ, ವೆಂಗಣ |
| ಆಲೂಗಡ್ಡೆ | ಆಲೂಗಡ್ಡಾ | ಆಲೂಗಡ್ಡಿ | ಆಲೂಗಡ್ಡಾ | ಆಲೂಗಡ್ಡಾ | ಆಲೂಗಡ್ಡಾ |
| ಬೆಂಡೆಕಾಯಿ | ಭಿಂಡಾ | ಭೇಂಡಿ | ಭಿಂಡಾ | ಬೆಂಡಾಕಾಯಾ | ಭಿಂಡಾ |
| ಕೊತ್ತಂಬರಿ | ಕೊತ್ಮಿ | ಕೊತ್ತಂಬರ | ಕೊತ್ಮಿರ್ | ಕೊತ್ತಮಿರಾ | ಕೊತ್ತಮಿರಾ |
| ಅರಿಶಿಣ | ಹಳದ | ಹಳದಿ | ಹಳ್ದ | ಪಸುಪು | ಪಸುಪು, ಹಳದ |
| ಮೆಣಸಿನಕಾಯಿ | ಮರ್ಚ್ಯಾ | ಮಿರ್ಚಿ | ಮರ್ಚ್ಯಾ | ಮಿರ್ಪಾಕಾಯಾ | ಮರ್ಚಾ |
| ಉಪ್ಪು | ನುಣ | ಲವಣ | ಲುಣ | ಉಪ್ಪು | ನುಣ |
| ಕರಿಬೇವು | ಕರಿಬೇವು | ಕಡಪತ್ತಾ | ಕಡಪತ್ತಾ | ಕರವೈಪಾಕು | ಕರ್‍ಯಾಪಾನ |
| ಎಣ್ಣೆ | ತೇಲ | ತೇಲ | ತೇಲ | ನೂನ್ಯ | ತೇಲ |
| ಖಾರದಪುಡಿ | ಖೋಡಿ | ಥಿಕ್ಕಟ | ಖೋಡಿ | ಕಾರಂ | ಕಾರ, ಖೋಡಿ |
| ಬೆಲೆ | ಬೆಲೆ | ಭಾವ | ಭಾವ | ದರ | ದರಾ |
| ಚಳುವಳಿ | ಚಳುವಳಿ | ಆಂದೋಳನ | ಆಂದೋಲನ | ಆಂದೋಲನು | ಆಂದೋಲನಾ |
| ಊಟ | ಊಟಾ, ಖಾಣೋ | ಜೇವಣ | ಖಾಣೋ, ಜೇವಣ | ತಿನ್ನಡಂ | ತಿನ್ನಡಾ, ಖಾನೊ |
| ಬಡ್ಡಿ | ಬಡ್ಡಿ | ವ್ಯಾಜ್ಯ | ವ್ಯಾಜ್ಯ | ವಡ್ಡಿ | ವಡ್ಡಿ |
| ದೇವಸ್ಥಾನ | ಗುಡಿ | ಮಂದಿರ | ಗುಡಿ | ಗುಡಿ | ಗುಡಿ |
| ಬೆಂಕಿ ಪೊಟ್ಟಣ | ಕಡ್ಡಿ ಪೇಟಿ | ಕಾಡಿ ಪೇಟಿ | ಕಾಡಿ ಪೇಟಿ | ಅಗ್ಗಿಪೆಟ್ಟ | ಅಗ್ಗಿ ಪೆಟ್ಟಿ |
| ಒಳ್ಳೆಯದು | ಆಚೋ | ಚಾಂಗ್ಲಾ | ಆಚೋ | ನಯಂ | ನಯಂ, ಆಚೋ |
| ಸುಣ್ಣ | ಚೂನೋ | ಚುನ್ನಾ | ಚುನೊ | ಸುನ್ನ | ಸುನ್ನ |
| ಮಾಯಾ | ಮಾಯಾ | ಹರೋಲೆ | ಮಾಯಾ | ಮಾಯಂ | ಮಾಯಾ |
| ಜಾಗ್ರತೆ | ಜಾಗ್ರ | ಜಾಗ್ರಣ | ಜಾಗ್ರಣ | ಜಾಗ್ರತ್ತ | ಜಾಗ್ರತ್ತ |
| ಜನರು | ಲೋಕ | ಲೋಕ | ಲೋಕ | ಜನಂ | ಜನಂ |
| ಮಂತ್ರ ತಂತ್ರ | ಮಂತ್ರ ತಂತ್ರ | ಮಂತ್ರ ತಂತ್ರ | ಮಂತರ ತಂತರ್ | ಮಂತ್ರ ತಂತ್ರಾಲು | ಮಂತ್ರ ತಂತ್ರ |
| ರಕ್ತ | ಲೋಯಿ | ರಕ್ತ | ಲೋಯಿ | ರಕ್ತಂ | ಲೋಯಿ |

| ಲೋಹ | ಲವ್ವೋ | ಲೋಹ | ಲವ್ವೋ | ಲೋಹಂ | ಲವ್ |
|---|---|---|---|---|---|
| ೧ | ೨ | ೩ | ೪ | ೫ | ೬ |
| ಚಕ್ಕಡಿ | ಗಾಡಿ | ಬೈಲಗಾಡಿ | ಗಾಡಿ | ಬಂಡಿ | ಬಂಡಿ |
| ಹೊಟ್ಟು | ಭಸ್ಕಾ | ಬೂಸಾ | ಭೂಸಾ | ಪೊಟ್ಟು | ಪೊಟ್ಟು |
| ಪುಟ್ಟಿ | ಒಲ್ಡಿ | ಟೋಕಲಿ | ಒಲ್ಡಿ | ಗಂಪ | ಗಂಪ |
| ಸವತೆಕಾಯಿ | ಕಾಕಡಿ | ವಾಕಶ | ಕಾಕಡಿ | ದೋಸಕಾಯ | ಕಾಕಡಿ |
| ತೋಟ | ಮಳೋ | ಭಾಗವಾಡಿ | ಮಳೋ | ತೋಟಂ | ತೋಟ |
| ಮಣ್ಣು | ಧೂಡ | ಮಾತಿ | ಧೂಡ | ಮಟ್ಟಿ | ಧೂಡ |
| ಆನೆ | ಹಾಥಿ, ಆನಿ | ಹಾಥಿ | ಹಾಥಿ | ಏನುಗ | ಏನುಗ, ಹಾತಿ |
| ಮೇಸ್ತ್ರಿ | ಮೇಸ್ತ್ರಿ | ಮೇಸ್ತ್ರಿ | ಮೇಸ್ತ್ರಿ | ಮೇಸ್ತ್ರಿ | ಮೇಸ್ತ್ರಿ |
| ಕಪ್ಪು | ಕಾಳೋ | ಕಾಳಾ | ಕಾಳೋ | ನಲ್ಲಗ | ಕಾಳೋ |
| ತಿಪ್ಪೆ | ಅಕೋಲ್ಡಿ | ಕಚ್ರಾ ಗುಂಡಿ | ಕಚ್ರಾ ಗುಂಡಿ | ಪೆಂಟಕುಪ್ಪ | ಕಂಟಕುಪ್ಪ |
| ಪೈಸೆ | ಪಿಸಾ | ಪೈಸೆ | ಪಿಸಾ | ಪೈಸಲು | ಪೀಸಾ |
| ರೂಪಾಯಿ | ರಪ್ಯಾ | ರೂಪಾಯಿ | ರಪ್ಯಾ | ರೂಪಾಯಿಲು | ರಪಿಯಾ |
| ದಾರ | ದೋರಾ | ಡೋರಾ | ದೋರಾ | ದಾರಂ | ದೋರಾ |
| ಲುಂಗಿ | ಲುಂಗಿ | ಲುಂಗಿ | ಲುಂಗಿ | ಲುಂಗಿ | ಲುಂಗಿ |
| ಟಾವೆಲ್ | ಟಾವಿಲ್ | ಟವಲ | ಟವೆಲ | ತುವ್ವಾಲಾ | ತುವ್ವಾಲಾ |
| ದೀಪ | ದಿವೋ | ದೀವಾ | ದಿವೊ | ದೀಪಂ | ದೀಯಾ |
| ಹೊಸ್ತಿಲು | ಹೊಸ್ತಲ್ | ಚೌಕಟ | ಚೌಕಟ | ಮೂತ | ಮೂತ |
| ಖುರ್ಚಿ | ಖುರ್ಚಿ | ಖುರ್ಸಿ | ಖುರ್ಸಿ | ಕುರ್ಚಿ | ಕುರ್ಚಿ |
| ಡಬ್ಬಿ | ಡಬ್ಬಿ | ಡಬ್ಬಾ | ಡಬ್ಬಾ | ಡಬ್ಬ | ಡಬ್ಬ |
| ಕತ್ತರಿ | ಕತ್ತರ್ಣಿ | ಕೈಂಚಿ | ಕೈಂಚಿ | ಕತ್ತೆರ | ಕತ್ತೇರ |
| ಗ್ಲಾಸ್ | ಗಿಲಾಸ್ | ಗ್ಲಾಸ್ | ಗ್ಲಾಸ | ಗ್ಲಾಸು | ಗಿಲಾಸ |
| ನಾಚಿಕೆ | ಲಾಜ | ಲಾಜ | ಲಾಜ | ಸಿಗ್ಗು | ಸಿಗ್ಗು, ಲಾಜ |
| ಜ್ಯೋತಿ | ದಿವೋ | ದಿವಾ | ದಿವೊ | ಜ್ಯೋತಿ | ಜ್ಯೋತಿ |
| ಸಂಸಾರ | ಸಂಸಾರ | ಸಂಸಾರ | ಸಂಸಾರ | ಸಂಸಾರಂ | ಸಂಸಾರ |
| ಬಣ್ಣ | ಬಣ್ಣಾ, ರಂಗ | ರಂಗ | ರಂಗ | ರಂಗು | ರಂಗ |
| ವಿಷಯ | ವಿಷ್ಯ | ವಿಷಯ | ವಿಷ್ಯಾ | ವಿಷಯಂ | ವಿಷಯ |
| ಫೋಟೋ | ಫೋಟು | ಫೋಟೋ | ಫೋಟು | ಫೋಟೋ | ಫೋಟೋ |

| ಜೀವರಾಶಿಗಳು | ಜೀವರಾಸ | ಜೀವರಾಶಿ | ಜೀವರಾಸ | ಜೀವರಾಸುಲು | ಜೀವರಾಸ |
|---|---|---|---|---|---|
| ೧ | ೨ | ೩ | ೪ | ೫ | ೬ |
| ಬಂಡೆಗಲ್ಲು | ಭಾಟಾ | ದಗಡ | ಭಾಟಾ | ಬಂಡ | ಬಂಡ, ಭಾಟಾ |
| ಪೂರ್ಣ | ಪೂರ್ಣ | ಪೂರ್ಣ | ಪೂರ್ಣಾ | ಪೂರ್ತಿಗಾ | ಪೂರ್ತಿಗಾ |
| ನೆನೆಸು | ಹರದ | ಭಿಜವಾಯಿತಾ | ಹರ್ದ | ನಾನಬೆಟ್ಟು | ನಾನಬೆಟ್ಟು, ಹರ್ದ |
| ಕಟ್ಟಿಗೆ | ಲಕಡಿ | ಕಟ್ಟಾ | ಲಕಡಿ | ಕಟ್ಟ್ಯಾ | ಕಟ್ಟ್ಯ, ಲಕಡಿ |
| ಜಾರುವುದು | ಜಾರ್ಗ್ಗೋ, ಸರಕ | ಘಸರ್ಲಾ | ಘಸರ್ಲಾ | ಜಾರಿಪೋವಟಂ | ಜಾರ್ಗ್ಗೋ |
| ತಾಳಿ | ತಾಳಿ | ಮಂಗಳಸೂತ್ರ | ಮಂಗಳಸೂತ್ರ | ಪುಸ್ತ್ಯಾ | ಘೂಸ್ತಾ |
| ಮಡಿ | ಮಡಿ | ಮಡಿ | ಮಡಿ | ಮಡಿ | ಮಡಿ |
| ಬೋಳುತಲೆ | ಬೋಳಾಮಾತೋ | ಹೊಂಡಿ | ಹೊಂಡಿ | ಬೋಡಗುಂಡು | ಬೋಡಗುಂಡಾ |
| ಬಳ್ಳಿ | ವೆಲ್ಡಿ, ವೇಲ | ವೇಲ | ವೇಲ | ತೀಗ | ತೀಗ, ವೇಲ |
| ಸೀತಾಫಲ | ಚಿತಾಪಳ | ಸೀತಾಫಲ | ಸಿತಾಪಳ | ಸೀತಾಫಲಂ | ಸಿತಾಫಳ |
| ವನವಾಸ | ವನವಾಸ | ವನವಾಸ | ವನವಾಸ | ವನವಾಸಂ | ವನವಾಸ |
| ಬಿಸಿ | ತಾತೋ, ಗರಂ | ಗರಂ | ಗರಂ | ವೇಡಿ | ತಾತೋ, ವೇಡಿ |
| ಜಾಕೇಟ್ | ಜಾಕೇಟ | ಜಾಕೇಟ್ | ಜಾಕೇಟ | ಜಾಕೇಟ್ | ಜಾಕೇಟ |
| ಘಂಟೆ | ಘಂಟಾ | ಸಮಯ | ಸಮಯ | ಘಂಟಾ | ಘಂಟಾ |
| ಹುಟ್ಟುಗುಣ | ಹುಟ್ಗುಣಾ | ಜನ್ಮತಾ ಗುಣ | ಜನ್ಮೇರ ಗುಣ | ಪುಟ್ಟುಕ | ಪುಟ್ಕ |
| ಪ್ರಕಟಣೆ | ಪ್ರಕಟಣೆ | ಪ್ರಕಟಣ | ಪ್ರಕಟಣ | ಪ್ರಕಟಣ | ಪ್ರಕಟನ |
| ಕತ್ತಿ | ತಲವಾರ | ತಲವಾರ | ತಲವಾರ | ಕತ್ತಿ | ಕತ್ತಿ |
| ಪಾಲಕಪಲ್ಲೆ | ಪಾಲಕ ಭಾಜಿ | ಪಾಲಕಭಾಜಿ | ಪಾಲಕಭಾಜಿ | ಪಾಲಕೂರ | ಪಾಲ್ಕಭಾಜಿ |
| ಮಾಂಸ | ಬೋಟಿ | ಮಾಂಸ | ಬೋಟಿ | ಮಾಂಸಂ | ಬೋಟಿ |
| ದ್ರಾಕ್ಷಿ | ದ್ರಾಕ್ಷಿ, ಅಂಗುರ | ದ್ರಾಕ್ಷಿ | ದ್ರಾಕ್ಷಿ, ಅಂಗುರ | ಅಂಗುರ | ಹಂಗುರ |
| ರಂಗೋಲಿ | ರಂಗೋಲಿ | ರಂಗೋಳಿ | ರಂಗೋಲಿ | ಮುಗ್ಗು | ಮುಗ್ಗಾ |
| ಸಾರಿಸು | ಲೀಪ್ | ಸಾರವಣೆ | ಲೀಪ್ | ಅಲುಕು | ಅಲ್ಕು |
| ನಾಮ | ಟೀಕೋ | ತಿಲಕ | ಟೀಕೋ, ತಿಲಕ | ಬೊಟ್ಟು | ಬೊಟ್ಟು |
| ಕಿವಿಯೋಲೆ | ಕನಿಯಾ | ಕಾಣೋತಲೆ | ಕನ್ಯಾ | ಕಮ್ಮಾಲು | ಕಮ್ಮಲು, ಕನಿಯಾ |
| ಮೆಹಂದಿ ಎಲೆ | ಮೇಂದಿರಪಾಲೋ | ಮೆಹಂದಿ ಪಾನ | ಮೆಂದಿ ಪಾನ | ಗೋರಂಟಾಕು | ಗೋರ್ಲ ಫೇಂಟು |

| ವಜ್ರ | ವಜ್ರ, ಹಿರಾ | ಹೀರಾ | ಹೀರಾ | ವಜ್ರಂ | ವಜ್ರಾ |
|---|---|---|---|---|---|

### ೪.೮. ಲಂಬಾಣಿಗರ ರಾಜಕೀಯ ಸ್ಥಿತಿಗತಿಗಳ ವಿವರ

ಮಾನವರು ಪ್ರಾರಂಭದಲ್ಲಿ ಪ್ರಾಣಿಗಳ ಜೊತೆ ಪ್ರಾಣಿಗಳಂತೆ ವಾಸಿಸುತ್ತಿದ್ದರು. ಅಲ್ಲಿ ಸಾಮಾಜಿಕ ನಿಯಂತ್ರಣದ ಯಾವುದೇ ನೀತಿ-ನಿಯಮಗಳು, ಲೋಕರೂಢಿಗಳು, ಪದ್ಧತಿಗಳು ಇರಲಿಲ್ಲ. ನಿಸರ್ಗ ಸಹಜವಾದ ಶಕ್ತಿ ಪ್ರದರ್ಶನವೇ ಮಾನವನ ಜೀವನದ ಮಾರ್ಗವಾಗಿತ್ತು. ದೈಹಿಕ ಶಕ್ತಿಯಿಂದ ಬಲಿಷ್ಠರು ಕನಿಷ್ಠರನ್ನು ಸೋಲಿಸಿ ಬದುಕುತ್ತಿದ್ದರು. ಹೀಗಾಗಿ ಸದಾ ಪ್ರಾಣಾಪಾಯದಲ್ಲಿದ್ದ ಮಾನವನ ಜೀವನ ಕಷ್ಟಕರವಾಗಿತ್ತು. ಆದರೆ ಕಾಲಕ್ರಮೇಣ ಗುಂಪಿನ ಅವಶ್ಯಕತೆಯಲ್ಲಿದ್ದ ಮಾನವ ನಾವು ನಮ್ಮವರು ಎಂಬ ಭಾವನೆಯಿಂದ ಸಮುದಾಯ ಅಥವಾ ಪಂಗಡಗಳನ್ನು ರಚಿಸಿಕೊಂಡ. ಪಂಗಡಗಳನ್ನು ಹುಟ್ಟುಹಾಕಿದ ಆರಂಭದಲ್ಲಿ ದೈಹಿಕವಾಗಿ ಬಲಿಷ್ಠನಾಗಿದ್ದು, ಇತರರನ್ನು ಹೊಡೆದುರುಳಿಸ ಬಲ್ಲ ಬಲಾಢ್ಯ ವ್ಯಕ್ತಿಯೇ ಪಂಗಡವೊಂದರ ನಾಯಕನಾಗಿ, ಆಡಳಿತ ಅಧಿಕಾರವೆಲ್ಲವು ಅವನಲ್ಲಿ ಕೇಂದ್ರೀಕೃತವಾಗಿರುತ್ತಿತ್ತು. "ಈಗಲೂ ಅನೇಕ ಆದಿವಾಸಿ ಪಂಗಡಗಳಲ್ಲಿ ಅಧಿಕಾರಕ್ಕಾಗಿ ಹೋರಾಟಗಳು ಏರ್ಪಡುವುದುಂಟು"(ಕೃಷ್ಣ ಬಿ ಆರ್:೨೦೧೨:೫೨೦). ಆದಿವಾಸಿ ಸಮುದಾಯಗಳು ಅನಾದಿಕಾಲ ದಿಂದಲೂ ಅಸ್ತಿತ್ವದಲ್ಲಿವೆ. ಈ ಸಮುದಾಯಗಳು ತಮ್ಮದೇ ಆದ ಸಾಮುದಾಯಿಕ ಆಡಳಿತ ವ್ಯವಸ್ಥೆಯೊಂದನ್ನು ಹೊಂದಿದ್ದು, ಸಮುದಾಯವನ್ನು ನಿಭಾಯಿಸುತ್ತಿದ್ದವು. ಈ ಆಡಳಿತ ವ್ಯವಸ್ಥೆಯನ್ನು ನ್ಯಾಯ ಪಂಚಾಯತಿ ವ್ಯವಸ್ಥೆ ಎಂದು ಕರೆಯುತ್ತೇವೆ. "ಅತ್ಯಂತ ಪ್ರಾಚೀನ ನ್ಯಾಯ ಪಂಚಾಯತಿ ಆದಿವಾಸಿಗಳಿಂದಲೇ ಆರಂಭವಾಗಿದೆ. ಪ್ರಪಂಚದ ಮೇಲೆ ಅವಿರ್ಭವಿಸಿದ ಮಾನವರೇ ಆದಿವಾಸಿಗಳು" (ಉಮೇಶ್ ಕೆ: ೨೦೧೧:೧೩೩). ನ್ಯಾಯ ಪಂಚಾಯತಿ ವ್ಯವಸ್ಥೆ ಪ್ರತಿಯೊಂದು ಬುಡಕಟ್ಟು ಸಮುದಾಯದ ಸದಸ್ಯರ ವರ್ತನೆಯನ್ನು ನಿಯಂತ್ರಿಸುವ ಸಾಮಾಜಿಕ ನಿಯಂತ್ರಣದ ಸಾಧನವಾಗಿ ಕಾರ್ಯನಿರ್ವಹಿಸುತ್ತವೆ. "ನ್ಯಾಯವು ಅನ್ಯಾಯಕ್ಕೆ ಪರಿಹಾರ. ಇದನ್ನರಿತ ಮಾನವ ಈ ಭೂಮಿಯ ಮೇಲೆ ಹುಟ್ಟಿದಂದಿನಿಂದಲೂ ಒಂದಿಲ್ಲೊಂದು ರೂಪದಲ್ಲಿ ಅವನಿಗೆ ನ್ಯಾಯ ನೀಡಲಾಗುತ್ತಿದೆ. ಆಸ್ತಿ ಎಂಬುದು ಅಸ್ತಿತ್ವಕ್ಕೆ ಬಂದ ಮೇಲೆ ಅವನ ನ್ಯಾಯ ವ್ಯವಹಾರಗಳು ಹೆಚ್ಚುತ್ತಾ ಹೋಗಿ ನ್ಯಾಯಶಾಸ್ತ್ರದ ವ್ಯಾಪಕ ಪದ್ಧತಿಗಳ ಅವಶ್ಯಕತೆ ಹೆಚ್ಚಿಸಿರುವವು" (ಪ್ರಭಾಕರ್ ಎ ಎಸ್: ೨೦೦೬:೨೦೬). ಹೀಗಾಗಿಯೇ ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿ ನ್ಯಾಯ ಪಂಚಾಯತಿಯ ವ್ಯವಸ್ಥೆ ಕಂಡುಬರುತ್ತದೆ.

ಬೇಡ ಬುಡಕಟ್ಟಿನವರ ಕಟ್ಟೆಮನೆ, ಮೇದರ ನ್ಯಾಯಕಟ್ಟೆ, ಗೊಂಡರ ರಾಯಕೇಂದ್ರದಂತೆ ಲಂಬಾಣಿಗರಲ್ಲಿ 'ಗೋರ ಪಂಚಾಯತ್' ಎಂಬ ಒಳಾಡಳಿತದ ರಾಜಕೀಯ ವ್ಯವಸ್ಥೆ ಕಂಡುಬರುತ್ತದೆ. ಲಂಬಾಣಿಗರು ತಮ್ಮ ತಾಂಡಾದ ಆಂತರಿಕ ವ್ಯವಸ್ಥೆಯಲ್ಲಿ ಉಂಟಾಗುವ ಹಲವಾರು ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ತಾಂಡಾದ ಹೊರಗಡೆ ಇರುವ ಬೃಹತ್ ಆಕಾರದ ಆಲದ ಮರದ ಕೆಳಗೆ ಇಲ್ಲವೇ ದೇವಾಲಯದ ಅಂಗಳದಲ್ಲಿ ಸೇರುವುದನ್ನು 'ನಸಾಬ್' ಎಂದು ಕರೆಯುತ್ತಾರೆ. "ಬಳಗದವರು

ಒಟ್ಟಾಗಿ ನ್ಯಾಯ ತೀರ್ಮಾನಿಸಲು ಕುಳಿತಿರುವ ಗುಂಪನ್ನು ನಸಾಬ್ ಎಂದು ಅರ್ಥೈಸಬಹುದು. ಕೆಲವೊಮ್ಮೆ ನೇವ್‌ನಸಾಬ್ ಎಂದು ಸಹ ಕರೆದುಕೊಳ್ಳುತ್ತಾರೆ. ಇಲ್ಲಿ ನೇವ್ ಎಂದರೆ ನ್ಯಾಯವೆಂದು ಹೇಳಬಹುದು. ಒಟ್ಟಾರೆ ನೇವ್‌ನಸಾಬ್ ಎಂದರೆ ನ್ಯಾಯ ಪಂಚಾಯತಿ ಎಂದು ಅರ್ಥೈಸಬಹುದು" (ಸಣ್ಣರಾಮ: ೧೯೯೯:೨೭೯). ಗೊಂಡರ ರಾಯಕೇಂದ್ರದ ಮುಖ್ಯಸ್ಥನನ್ನು ಸರಪಂಚ ಎಂದು ಕರೆಯುವಂತೆ, ಲಂಬಾಣಿಗರಲ್ಲಿ ಗೋರ್ ಪಂಚಾಯತ್‌ನ ಮುಖ್ಯಸ್ಥನನ್ನು 'ನಾಯಕ' ಎಂದು ಕರೆಯುತ್ತಾರೆ. ನಾಯಕ ತಾಂಡಾದ ಮುಖಂಡನಾಗಿದ್ದು ಅವನ ಆಜ್ಞೆಯನ್ನು ತಾಂಡಾದ ಎಲ್ಲಾ ಸದಸ್ಯರು ಪಾಲಿಸುತ್ತಾರೆ. ನಾಯಕನು ಸಾಮಾನ್ಯವಾಗಿ ಭೂಕ್ಯಾ ಪಂಗಡಕ್ಕೆ ಸೇರಿದ್ದು, ಈ ಹುದ್ದೆ ವಂಶಪಾರಂಪರ್ಯವಾಗಿರುವುದು ಕಂಡುಬರುತ್ತದೆ. ತಾಂಡಾದಲ್ಲಿ ಈತನ ಅಂತಸ್ತು, ಸ್ಥಾನಮಾನಗಳು ಉನ್ನತ ಮಟ್ಟದ್ದಾಗಿರುತ್ತದೆ. ನಾಯಕನಿಗೆ ಸಹಾಯಕನಾಗಿ 'ಕಾರಭಾರಿ' ಇದ್ದು, ಇವನು ಕಾರ್ಯದರ್ಶಿಯಂತೆ ಎಲ್ಲ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಾನೆ. ಸೂಕ್ತ ಸಂದರ್ಭದಲ್ಲಿ ನಾಯಕನಿಗೆ ಸಲಹೆಗಳನ್ನು ನೀಡುತ್ತಾನೆ. ತಾಂಡಾದಲ್ಲಿ ಹಿರಿಯ ಹಾಗೂ ಚಾಣಾಕ್ಷಮತಿಯಿರುವ ವ್ಯಕ್ತಿಗೆ 'ಡಾವೋ' ಎಂದು ಕರೆಯುತ್ತಾರೆ. ಈ ವ್ಯಕ್ತಿ ಪ್ರತಿಯೊಂದು ಹಂತದಲ್ಲಿಯೂ ನಾಯಕ ಮತ್ತು ಕಾರಭಾರಿಗೆ ಸೂಕ್ತ ಸಲಹೆಗಳನ್ನು ನೀಡುತ್ತಾನೆ. ನ್ಯಾಯ ನಿರ್ಣಯದಲ್ಲಿ ತಾಂಡಾದ ಅನುಭವಿಗಳು ಮತ್ತು ಹಿರಿಯರು ಭಾಗವಹಿಸಿ ನಾಯಕನಿಗೆ ಸಹಾಯ ಮಾಡುತ್ತಾರೆ.

ಗೋರ್ ಪಂಚಾಯತ್ ವ್ಯವಸ್ಥೆಯಲ್ಲಿ ಥಾಲಿಯಾನ ಪಾತ್ರವು ಮುಖ್ಯವಾಗಿದ್ದು, ಇವನು ನಾಯಕನ ಆಜ್ಞೆಯಂತೆ ಹಲಿಗೆ ಬಾರಿಸುತ್ತಾ ಡಂಗುರ ಸಾರುವುದು, ಪಂಚಾಯತಿಗೆ ಅವಶ್ಯವಾಗಿರುವ ವ್ಯಕ್ತಿಗಳನ್ನು ಕರೆತರುವುದು, ಅಪರಾಧಿಗಳನ್ನು ನಾಯಕನ ಮುಂದೆ ನಿಲ್ಲಿಸುವುದು ಅಲ್ಲದೇ ಇವನು ಇಡೀ ತಾಂಡಾದ ಸೇವಕನಾಗಿರುತ್ತಾನೆ. ಲಂಬಾಣಿಗರ ವೃತ್ತಿ ಗಾಯಕನನ್ನು 'ಢಾಡಿ' ಎಂದು ಕರೆಯುತ್ತಾರೆ. ಇವನು ಸಹ ಪಂಚಾಯತಿಯಲ್ಲಿ ಹಲವಾರು ದೃಷ್ಟಾಂತಗಳು, ಕಥೆಗಳು ಹಾಗೂ ನುಡಿಗಟ್ಟುಗಳನ್ನು ಹೇಳುವ ಮೂಲಕ ಸಮಸ್ಯೆಗಳನ್ನು ಬಗೆಹರಿಸುತ್ತಾನೆ.

ಅನ್ಯಾಯಕ್ಕೆ ಒಳಪಟ್ಟ ವ್ಯಕ್ತಿಯು ತಾಂಡಾದ ನಾಯಕನ ಮನೆಗೆ ಹೋಗಿ ದೂರನ್ನು ಸಲ್ಲಿಸುತ್ತಾನೆ. ನಾಯಕನು ಕಾರಭಾರಿಯೊಂದಿಗೆ ಚರ್ಚಿಸಿ, ಥಾಲಿಯಾನನ್ನು ಕರೆದು ಡಂಗುರ ಸಾರಲು ಹೇಳುತ್ತಾನೆ. ಅದರಂತೆ ಥಾಲಿಯಾ ಹಲಿಗೆಯನ್ನು ಬಾರಿಸುತ್ತಾ ತಾಂಡಾದಲ್ಲಿ ತಿರುಗಾಡಿ ಡಂಗೂರ ಸಾರುತ್ತಾನೆ. ಡಂಗುರಕ್ಕೆ ಪ್ರತಿಸ್ಪಂದಿಸಿ ಜನ ನ್ಯಾಯ ಪಂಚಾಯತಿ ನಡೆಯುವ ಸ್ಥಳದಲ್ಲಿ ಸೇರುತ್ತಾರೆ. ವಾದಿ-ಪ್ರತಿವಾದಿಗಳ ಹೇಳಿಕೆಯನ್ನು ಪಡೆದುಕೊಂಡು ಪರಾಮರ್ಶಿಸಿ, ಕಾರಭಾರಿ ಹಾಗೂ ಡಾವಸಾಣರೊಂದಿಗೆ ಚರ್ಚಿಸಿ ನಾಯಕನು ಅಂತಿಮವಾಗಿ ತೀರ್ಪನ್ನು ನೀಡುತ್ತಾನೆ.

"ಒಬ್ಬರಿಗೊಬ್ಬರು ಮೆಟ್ಟಿನಲ್ಲಿ ಹೊಡೆಯುವುದು, ಹೊಡೆಸಿಕೊಳ್ಳುವುದು, ಜೈಲಿನಲ್ಲಿದ್ದು ಬರುವುದು, ತಮ್ಮ ಶ್ರೇಣಿಗಿಂತ ಕೀಳೆಂದು ಭಾವಿಸಿದವರ ಮನೆಯಲ್ಲಿ ಉಣ್ಣುವುದು, ಅಂಥವರೊಡನೆ ದೈಹಿಕ ಸಂಪರ್ಕ ಹೊಂದುವುದು, ಒಂದು ಹೆಣ್ಣಿನೊಡನೆ ಅಕ್ರಮ ಸಂಪರ್ಕ ಹೊಂದುವುದು, ಗುಂಪಿನ

ಹಿರಿಯರು ವಿಧಿಸಿದ ಶಿಕ್ಷೆ ದಂಡಗಳನ್ನು ಒಪ್ಪದೇ ಇರುವುದು" (ನಾಗೇಶ್ ಹೆಚ್ ಬಿ: ೨೦೦೩:೨೫). ಕಳ್ಳತನ, ಮೋಸ, ಸುಳ್ಳು ಹೇಳುವುದು, ಗಂಡ ಹೆಂಡರ ಜಗಳ, ಹೊಲ, ಮನೆಯ ತಕರಾರುಗಳು ಹೀಗೆ ಮುಂತಾದ ಪ್ರಕರಣಗಳು ಗೋರ್ ಪಂಚಾಯತ್‌ನಲ್ಲಿ ಕಂಡುಬರುತ್ತವೆ.

ಗೋರ್ ಪಂಚಾಯತ್‌ನಲ್ಲಿ ತಾಂಡಾದಿಂದ ಬಹಿಷ್ಕಾರ ಹಾಕುವ ಶಿಕ್ಷೆಯು ಅತೀ ಉಗ್ರವಾದ ಶಿಕ್ಷೆಯಾಗಿರುತ್ತದೆ. ಉಳಿದವುಗಳೆಂದರೆ ಹಣದ ರೂಪದಲ್ಲಿ ದಂಡ ಕೊಡುವುದು, ಕ್ಷಮೆ ಕೇಳುವುದು, ದೇವಾಲಯದ ಮುಂದೆ ಮೂಗು ಉಜ್ಜುವುದು, ಬಳಗದವರಿಗೆ ಊಟ ಹಾಕಿಸುವುದು ಹೀಗೆ ಮುಂತಾದ ರೀತಿಯ ಶಿಕ್ಷೆಗಳನ್ನು ನೀಡುತ್ತಾರೆ. ತಪ್ಪಿತಸ್ಥರು ಗೋರ್ ಪಂಚಾಯತ್‌ನ ಖರ್ಚನ್ನು ಭರಿಸುತ್ತಾರೆ. ಈ ರೀತಿಯ ಗೋರ್ ಪಂಚಾಯತ್ ವ್ಯವಸ್ಥೆಯು ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಲ್ಲಿ ಕಂಡುಬಂದರೂ ಅವುಗಳ ವ್ಯಾಪ್ತಿ ಕ್ರಮೇಣ ಸೀಮಿತವಾಗುತ್ತಿರುವುದು ಕಂಡುಬರುತ್ತದೆ. ಮೂರು ಜಿಲ್ಲೆಗಳನ್ನು ಅನುಲಕ್ಷಿಸಿದಾಗ ಸೋಲಾಪುರ ಜಿಲ್ಲೆಗಿಂತ ಗುಲಬರ್ಗಾ ಹಾಗೂ ರಂಗಾರೆಡ್ಡಿ ಜಿಲ್ಲೆಗಳಲ್ಲಿ ಗೋರ್ ಪಂಚಾಯತ ಪ್ರಬಲವಾಗಿ ಕಾರ್ಯನಿರ್ವಹಿಸುತ್ತಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಬ್ರಿಟಿಷರ ಆಗಮನಕ್ಕಿಂತ ಪೂರ್ವದಲ್ಲಿ ಜಾತಿ ಪಂಚಾಯತಿಗಳು ವ್ಯಾಪಕ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದವು. ಹೀಗಾಗಿಯೇ ರಿಸ್ಲೇ ಎಂಬ ಸಮಾಜಶಾಸ್ತ್ರಜ್ಞ "ಜಾತಿ ತನಗೆ ತಾನೇ ದೊರೆಯಾಗಿದೆ" ಎಂದು ಹೇಳಿದ್ದಾನೆ. "ಬ್ರಿಟಿಷರು ಭಾರತಕ್ಕೆ ತಂದ ಅನೇಕ ಮೌಲ್ಯಗಳಲ್ಲಿ ರಾಜಕೀಯ ಮೌಲ್ಯ ಹಾಗೂ ವ್ಯವಸ್ಥೆ ಅತ್ಯಂತ ಮಹತ್ವದ್ದಾಗಿದೆ. ಅವರ ಆಗಮನದ ನಂತರ ಮೊದಲೇ ಅಸ್ತಿತ್ವದಲ್ಲಿದ್ದ ಸ್ಥಳಿಯ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಗಳು ಬದಲಾವಣೆಯ ಪ್ರಕ್ರಿಯೆಯಲ್ಲಿ ಸಿಲುಕಿಕೊಂಡವು" (ಅದೇ:ಪು:೧೩೨). ಸ್ವಾತಂತ್ರ್ಯ ನಂತರದ ಭಾರತವು ತನ್ನದೇ ಆದ ರಾಜಕೀಯ ವ್ಯವಸ್ಥೆಯನ್ನು ಸಂವಿಧಾನ ಮತ್ತು ಪ್ರಜಾಪ್ರಭುತ್ವದ ತಳಹದಿಯ ಮೇಲೆ ನಿರ್ಮಿಸಿಕೊಂಡಿದೆ. ಇಲ್ಲಿನ ರಾಜಕೀಯ ವ್ಯವಸ್ಥೆಯಲ್ಲಿ ಮತದಾರ ಮತ್ತು ಚುನಾವಣಾ ಅಭ್ಯರ್ಥಿಗಳ ಪಾತ್ರ ಗಮನಾರ್ಹವಾದುದು. ಪ್ರಜಾಪ್ರಭುತ್ವವೆಂದರೆ ಮತದಾರರ ಭಾಗವಹಿಸುವಿಕೆ ಎಂಬರ್ಥವನ್ನು ನೀಡುತ್ತದೆ. ಅಬ್ರಹಾಂ ಲಿಂಕನ "ಪ್ರಜೆಗಳಿಗೋಸ್ಕರ ಪ್ರಜೆಗಳಿಂದಲೇ ರಚಿತವಾದ ಪ್ರಜೆಗಳ ಸರ್ಕಾರ" ಎಂದು ಹೇಳುತ್ತಾರೆ. ಈ ವ್ಯವಸ್ಥೆಯಲ್ಲಿ ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯ ವಿಧಾನದಲ್ಲಿ ಪ್ರತಿನಿಧಿಗಳನ್ನು ಆಯ್ಕೆ ಮಾಡಲಾಗುತ್ತದೆ. ಸಂವಿಧಾನದ ವಿಧಿ-ನಿಯಮದಂತೆ ಕನಿಷ್ಠ ೧೮ ವರ್ಷ ಪೂರೈಸಿದ ಭಾರತೀಯ ಪ್ರಜೆಯೊಬ್ಬನಿಗೆ ಲಿಂಗ, ಮತ, ಜಾತಿ, ಅಂತಸ್ತುಗಳ ಭೇದವಿಲ್ಲದೇ ಮತದಾನ ಮಾಡುವ ಹಕ್ಕನ್ನು ನೀಡಲಾಗಿದೆ. ಈ ಮೂಲಕ ಎಲ್ಲ ವಯಸ್ಕರು ಮತದಾನದಲ್ಲಿ ಭಾಗವಹಿಸಿ ತಮ್ಮ ಪ್ರತಿನಿಧಿಗಳನ್ನು ವಿವಿಧ ಸ್ಥಾನಗಳಿಗೆ ಆಯ್ಕೆ ಮಾಡುತ್ತಾರೆ.

ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ, ಜಿಲ್ಲಾ ಪಂಚಾಯತಿ, ವಿಧಾನಸಭೆ,

ಲೋಕಸಭೆಗಳಿಗೆ ಪ್ರತಿನಿಧಿಗಳನ್ನು ಚುನಾವಣೆಯ ಮೂಲಕ ಆಯ್ಕೆ ಮಾಡುತ್ತಾರೆ. ಈ ಚುನಾವಣೆಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಮಹಿಳೆಯರಿಗೆ ಮೀಸಲಾತಿಯ ಸೌಲಭ್ಯವಿದೆ. ಈ ಮೀಸಲಾತಿಯ ಸೌಲಭ್ಯದ ಫಲವಾಗಿ ಇಂದು ತಳಮಟ್ಟದ ಸಮುದಾಯಗಳು ರಾಜಕೀಯ ಪ್ರವೇಶ ಮಾಡಲು ಸಾಧ್ಯವಾಗಿದೆ. ಈ ತಳಮಟ್ಟದ ಸಮುದಾಯಗಳಲ್ಲಿ ಒಂದಾದ ಲಂಬಾಣಿಗರಲ್ಲಿ ಕೂಡಾ ಇತ್ತಿಚೀನ ದಿನಗಳಲ್ಲಿ ರಾಜಕೀಯ ಪ್ರಜ್ಞೆ ಜಾಗೃತವಾಗುತ್ತಿರುವುದು ಕಂಡುಬರುತ್ತಿದೆ. ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಲಂಬಾಣಿಗರು ಸಂವಿಧಾನಾತ್ಮಕವಾಗಿ ಮೀಸಲಾತಿಯ ಬೇರೆ ಬೇರೆ ಪಟ್ಟಿಗಳನ್ನು ಪ್ರತಿನಿಧಿಸುತ್ತಾರೆ. ಮೂಲತಃ ಒಂದೇ ಸಮುದಾಯಕ್ಕೆ ಸೇರಿದ ಲಂಬಾಣಿಗರು ಕರ್ನಾಟಕ ರಾಜ್ಯದಲ್ಲಿ ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರುತ್ತಾರೆ. ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಬರುವ ೧೦೧ ಜಾತಿಗಳಿಗೆ ನೀಡಿರುವ ೧೫ ಪ್ರತಿಶತ ಮೀಸಲಾತಿಯಲ್ಲಿ ಲಂಬಾಣಿಗರು ಕೂಡಾ ಫಲಾನುಭವಿಗಳಾಗಿದ್ದಾರೆ. ಆಂಧ್ರ ಪ್ರದೇಶ ರಾಜ್ಯದಲ್ಲಿ ಸುಗಾಲಿ, ಲಂಬಾಡಿ ಎಂದು ಕರೆಯಲ್ಪಡುವ ಈ ಸಮುದಾಯ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಬರುತ್ತದೆ. ಪರಿಶಿಷ್ಟ ಪಂಗಡಕ್ಕೆ ನೀಡಲಾಗಿರುವ ಶೇ. ೬ ಪ್ರತಿಶತ ಮೀಸಲಾತಿಯನ್ನು ಈ ಪಟ್ಟಿಯಲ್ಲಿ ಬರುವ ಲಂಬಾಣಿಗರು, ೩೩ ಬುಡಕಟ್ಟು ಸಮುದಾಯಗಳೊಂದಿಗೆ ಫಲಾನುಭವಿಗಳಾಗಿದ್ದಾರೆ. ಮಹಾರಾಷ್ಟ್ರ ರಾಜ್ಯದಲ್ಲಿ ಲಮಾನ ಎಂದು ಕರೆಯಲ್ಪಡುವ ಈ ಸಮುದಾಯವು ವಿಮುಕ್ತ ಜಾತಿಯ ಪಟ್ಟಿಯಲ್ಲಿ ಬರುತ್ತಿದ್ದು, ವಿಮುಕ್ತ ಜಾತಿಯ ೧೪ ಸಮುದಾಯಗಳೊಂದಿಗೆ ಶೇ. ೩ ಪ್ರತಿಶತ ಮೀಸಲಾತಿಯ ಫಲಾನುಭವಿಗಳಾಗಿದ್ದಾರೆ. ಆದರೆ ವಿಮುಕ್ತ ಜಾತಿಯ ಪಟ್ಟಿಗೆ ಶಿಕ್ಷಣ, ಉದ್ಯೋಗಗಳಲ್ಲಿ ಮೀಸಲಾತಿ ಇದ್ದು ರಾಜಕೀಯ ಕ್ಷೇತ್ರದಲ್ಲಿ ಮೀಸಲಾತಿ ಇಲ್ಲದಿರುವುದು ಕಂಡುಬರುತ್ತದೆ. ಇವರು ಜಿಲ್ಲಾ ಪಂಚಾಯತ ಚುನಾವಣೆಗಳಲ್ಲಿ ಇತರೆ ಹಿಂದುಳಿದ ವರ್ಗಗಳಿಗೆ ಮೀಸಲಾಗಿರುವ ಸ್ಥಾನಗಳಲ್ಲಿ ಸ್ಪರ್ಧಿಸಬೇಕು. ವಿಧಾನಸಭಾ ಹಾಗೂ ಲೋಕಸಭಾ ಕ್ಷೇತ್ರಗಳಿಗೆ ಸಾಮಾನ್ಯ ಕ್ಷೇತ್ರಗಳಲ್ಲಿ ಸ್ಪರ್ಧಿಸ ಬೇಕಾಗುತ್ತದೆ.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾದ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಎರಡು ಅವಧಿಯ ವಿಧಾನಸಭಾ ಸದಸ್ಯರು, ಲೋಕಸಭಾ ಸದಸ್ಯರು ಹಾಗೂ ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರದ ರಾಜ್ಯದ ಸೋಲಾಪುರ ಹಾಗೂ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳಲ್ಲಿ ಎರಡು ಅವಧಿಯ ಅಂದರೆ ಪ್ರಸ್ತುತ ಹಾಗೂ ಹಿಂದಿನ ಅವಧಿಯ ಜಿಲ್ಲಾ ಪಂಚಾಯತ ಚುನಾವಣೆಗಳಲ್ಲಿ ಸದಸ್ಯರಾಗಿ ಆಯ್ಕೆಯಾಗಿರುವ ಲಂಬಾಣಿಗರ ಮಾಹಿತಿಯನ್ನು

ಸಂಗ್ರಹಿಸಲಾಗಿದೆ.

**ಕೋಷ್ಟಕ ೪.೮.೧. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲಾ ಪಂಚಾಯತಿಗಳ ಸದಸ್ಯರ ವಿವರ**

| ಜಿಲ್ಲೆಗಳು | ಅವಧಿ | ಒಟ್ಟು ಸದಸ್ಯರ ಸಂಖ್ಯೆ | ಸಾಮಾನ್ಯ ವರ್ಗದ ಸದಸ್ಯರ ಸಂಖ್ಯೆ | ಪ.ಜಾ. ಸದಸ್ಯರ ಸಂಖ್ಯೆ | ಪ.ಪಂ. ಸದಸ್ಯರ ಸಂಖ್ಯೆ | ಹಿಂದುಳಿದ ವರ್ಗದ ಸಂಖ್ಯೆ | ಲಂಬಾಣಿ ಸಮುದಾಯದ ಸದಸ್ಯರ ಸಂಖ್ಯೆ |
|---|---|---|---|---|---|---|---|
| ಗುಲಬರ್ಗಾ | ೨೦೦೬–೧೦ | ೬೫ | ೨೩ | ೧೬ | ೦೪ | ೨೨ | ೦೬ |
| ಸೋಲಾಪುರ | ೨೦೦೭–೧೨ | ೬೮ | ೩೯ | ೦೯ | ೦೨ | ೧೮ | ೦೧ |
| ರಂಗಾರೆಡ್ಡಿ | ೨೦೦೧–೦೬ | ೩೩ | ೧೦ | ೦೭ | ೦೨ | ೧೪ | ೦೨ |

(ಮೂಲ: ಕ್ಷೇತ್ರಾಧ್ಯಯನ)

ಗುಲಬರ್ಗಾ ಜಿಲ್ಲಾ ಪಂಚಾಯತಿಯ ೨೦೦೬ ರಿಂದ ೨೦೧೦ ರವರೆಗಿನ ೫ ವರ್ಷದ ಕಾಲಾವಧಿಗೆ ಒಟ್ಟು ೬೫ ಸದಸ್ಯರು ಆಯ್ಕೆಯಾಗಿದ್ದು, ಇದರಲ್ಲಿ ಸಾಮಾನ್ಯ ವರ್ಗದ ೨೩ ಸದಸ್ಯರು, ಪರಿಶಿಷ್ಟ ಜಾತಿಗೆ ಮೀಸಲಿರಿಸಿದ ಕ್ಷೇತ್ರಗಳಲ್ಲಿ ೧೬ ಸದಸ್ಯರು ಪರಿಶಿಷ್ಟ ಪಂಗಡದ ೪ ಜನ ಸದಸ್ಯರು ಆಯ್ಕೆಯಾಗಿರುತ್ತಾರೆ. ಒಟ್ಟು ಸದಸ್ಯರ ಸಂಖ್ಯೆಯಲ್ಲಿ ಈ ಅವಧಿಯಲ್ಲಿ ಲಂಬಾಣಿ ಸದಸ್ಯರು ಶೇ. ೯.೨೩ರಷ್ಟಿರುವುದು ಗೋಚರಿಸುತ್ತದೆ. ಪರಿಶಿಷ್ಟ ಜಾತಿಗೆ ಮೀಸಲಿರಿಸಿದ ಒಟ್ಟು ಸಂಖ್ಯೆಯಲ್ಲಿ ಲಂಬಾಣಿಗರ ಪ್ರಮಾಣ ಶೇ. ೩೭.೫ರಷ್ಟಿರುವುದು ಕಂಡುಬರುತ್ತದೆ.

ಅವಿಭಜಿತ ಗುಲಬರ್ಗಾ ಜಿಲ್ಲೆಯ ಜಿಡಗಾ ಕ್ಷೇತ್ರದಿಂದ ಸುಭಾಷ ವಿಠ್ಠಲಸಿಂಗರವರು ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ ಪಕ್ಷದ ಅಭ್ಯರ್ಥಿಯಾಗಿ ಆಯ್ಕೆಯಾಗಿದ್ದರು. ಕೊಂಚಾವರಮ್ ಜಿಲ್ಲಾ ಪಂಚಾಯತ ಕ್ಷೇತ್ರದಿಂದ ಮಾದೇವಿ ವಿಠ್ಠಲ ಚವ್ಹಾಣ ಅಖಿಲ ಭಾರತ ಪ್ರಗತಿಪರ ಜನತಾದಳ, ನಾಲವಾರ ಕ್ಷೇತ್ರದಿಂದ ಜನತಾದಳ(ಜಾತ್ಯಾತೀತ) ಅಭ್ಯರ್ಥಿಯಾಗಿ ಲಲಿತಾಬಾಯಿ ಪೋಮು ರಾಠೋಡ, ರಾಮಸಮುದ್ರ ಕ್ಷೇತ್ರದಿಂದ ಜನತಾದಳ(ಜಾತ್ಯಾತೀತ) ಪಕ್ಷದ ಚಿನ್ಹೆಯಡಿಯಲ್ಲಿ ಸಮಲಿಬಾಯಿ, ಗೋಗಿಕೋನಾ ಕ್ಷೇತ್ರದಿಂದ ಮಾನಸಿಂಗ ಬದ್ದುಸಿಂಗ ಜನತಾದಳ(ಜಾತ್ಯಾತೀತ), ರಾಜನಕೊಳ್ಳುರ ಕ್ಷೇತ್ರದಿಂದ ಅಖಿಲ ಭಾರತ ಪ್ರಗತಿಪರ ಜನತಾದಳದ ಚಿನ್ಹೆಯಡಿಯಲ್ಲಿ ಅನಸೂಬಾಯಿ ವೆಂಕಟೇಶರವರು ಆಯ್ಕೆಯಾಗಿದ್ದರು. ಹೀಗೆ ಜಿಲ್ಲಾ ಪಂಚಾಯತ ಚುನಾವಣೆಯಲ್ಲಿ ಪರಿಶಿಷ್ಟ ಜಾತಿಯ

ಮೀಸಲಾತಿಯಡಿಯಲ್ಲಿ ಒಟ್ಟು ಆರು ಜನ ಲಂಬಾಣಿಗರು ಆಯ್ಕೆಯಾಗಿದ್ದು, ಇವರಲ್ಲಿ ಇಬ್ಬರು ಪುರುಷರಾದರೆ, ನಾಲ್ಕು ಜನ ಮಹಿಳೆಯರಾಗಿದ್ದರು. ಪುರುಷರು ಮಾತ್ರ ಸ್ವತಂತ್ರ್ಯವಾಗಿ ಅಧಿಕಾರವನ್ನು ಅನುಭವಿಸಿದ್ದಾರೆ. ಆದರೆ ಮಹಿಳೆಯರ ವಿಚಾರವನ್ನು ಗಣನೆಗೆ ತೆಗೆದುಕೊಂಡಾಗ ಅವರಿಗೆ ಅಧಿಕಾರದ ವ್ಯಾಪ್ತಿಯ ಪರಿವೆಯೇ ಇರಲಿಲ್ಲ. ಮಹಿಳೆಯರ ಪರವಾಗಿ ಅವರ ಗಂಡಂದಿರು, ಅಣ್ಣತಮ್ಮಂದಿರು ಅಧಿಕಾರವನ್ನು ಅನುಭವಿಸುತ್ತಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯನ್ನು ಅನುಲಕ್ಷಿಸಿದಾಗ ಇಲ್ಲಿ ಜಿಲ್ಲಾ ಪಂಚಾಯತಿ ಯನ್ನು ಜಿಲ್ಲಾ ಪರಿಷದ ಎಂದು ಕರೆಯಲಾಗುತ್ತದೆ. ಈ ಜಿಲ್ಲಾ ಪರಿಷದನ ಹಿಂದಿನ ಚುನಾವಣೆ ೨೦೦೭ರಲ್ಲಿ ನಡೆದಿದ್ದು, ಅಧಿಕಾರವಧಿಯು ೨೦೦೭ ರಿಂದ ೨೦೧೨ರವರೆಗಿತ್ತು. ಈ ಅವಧಿಯಲ್ಲಿ ಆಯ್ಕೆಯಾದ ಒಟ್ಟು ಸದಸ್ಯರ ಸಂಖ್ಯೆ ೬೮ ಆಗಿದ್ದು, ಇದರಲ್ಲಿ ಸಾಮಾನ್ಯ ವರ್ಗದವರಿಗೆ ೩೯ ಸ್ಥಾನಗಳು, ಪರಿಶಿಷ್ಟ ಜಾತಿಗೆ ೦೯ ಸ್ಥಾನಗಳು, ಪರಿಶಿಷ್ಟ ಪಂಗಡಕ್ಕೆ ೦೨ ಸ್ಥಾನಗಳು ಇತರೆ ಹಿಂದುಳಿದ ವರ್ಗಗಳಿಗೆ ೧೮ ಸ್ಥಾನಗಳು ಮೀಸಲಿದ್ದವು. ಈ ಅವಧಿಯಲ್ಲಿ ಇತರೆ ಹಿಂದುಳಿದ ವರ್ಗದ ಮೀಸಲಾತಿಯಡಿಯಲ್ಲಿ ದಕ್ಷಿಣ ಸೋಲಾಪುರ ತಾಲೂಕಿನ, ಬೋರಾಮಣಿ ಕ್ಷೇತ್ರದಿಂದ ಭಾರತೀಯ ರಾಷ್ಟ್ರೀಯ ಕಾಗ್ರೇಸ್ ಪಕ್ಷದ ಉಮೇದುವಾರನಾಗಿ ಉಮಾಕಾಂತ ಕಿಶನ ರಾಠೋಡ ಎಂಬ ಏಕೈಕ ಲಂಬಾಣಿ ವ್ಯಕ್ತಿ ಜಿಲ್ಲಾ ಪರಿಷದ ಸದಸ್ಯನಾಗಿ ಆಯ್ಕೆಯಾಗಿದ್ದರು.

ಆಂಧ್ರ ಪ್ರದೇಶ ರಾಜ್ಯದಲ್ಲಿ ಜಿಲ್ಲಾ ಪಂಚಾಯತನ್ನು ZPTC ಎಂದು ಕರೆಯುತ್ತಾರೆ. ZPTC ಎಂದರೆ Zilla Parishad Territorial Constituency. ರಂಗಾರೆಡ್ಡಿ ಜಿಲ್ಲಾ ಪಂಚಾಯತನ ಹಿಂದಿನ ಅವಧಿಯ ಚುನಾವಣೆಯು ೨೦೦೧ರಲ್ಲಿ ಜರುಗಿದ್ದು, ಅಧಿಕಾರವಧಿಯು ೨೦೦೧ ಗಿಂದ ೨೦೦೬ರ ವರೆಗಿತ್ತು. ಈ ಅವಧಿಯಲ್ಲಿ ಆಯ್ಕೆಯಾದ ಒಟ್ಟು ಸದಸ್ಯರ ಸಂಖ್ಯೆ ೩೩. ಅದರಲ್ಲಿ ಸಾಮಾನ್ಯ ವರ್ಗದ ೧೦ ಜನ ಸದಸ್ಯರು, ಪರಿಶಿಷ್ಟ ಜಾತಿಗೆ ೭ ಸ್ಥಾನಗಳು, ಪರಿಶಿಷ್ಟ ಪಂಗಡಕ್ಕೆ ೨ ಸ್ಥಾನಗಳು ಇತರೆ ಹಿಂದುಳಿದ ವರ್ಗಗಳಿಗೆ ೧೪ ಸ್ಥಾನಗಳು ಮೀಸಲಾತಿಯ ಆಧಾರದ ಮೇಲೆ ಆಯ್ಕೆಯಾಗಿದ್ದವು. ಆಂಧ್ರ ಪ್ರದೇಶ ರಾಜ್ಯದಲ್ಲಿ ಲಂಬಾಣಿಗರು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಬರುತ್ತಿದ್ದು, ರಂಗಾರೆಡ್ಡಿ ಜಿಲ್ಲೆಯ ಒಟ್ಟು ಜಿಲ್ಲಾ ಪರಿಷದ ಸದಸ್ಯರಲ್ಲಿ ಲಂಬಾಣಿ ಸದಸ್ಯರ ಪ್ರಮಾಣವು ಶೇ. ೬.೦೬ ರಷ್ಟಿರುವದು ಗೋಚರಿಸುತ್ತದೆ. ಪರಿಶಿಷ್ಟ ಪಂಗಡಕ್ಕೆ ಎರಡು ಸ್ಥಾನಗಳನ್ನು ಮೀಸಲಿರಿಸಿದ್ದು, ಎರಡು ಸ್ಥಾನಗಳಲ್ಲಿ ಲಂಬಾಣಿ ಸಮುದಾಯದವರೇ ಆಯ್ಕೆಯಾಗಿರುವದು ಕಂಡುಬರುತ್ತದೆ. ಪೆದ್ದಮುಲಾ ಕ್ಷೇತ್ರದಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೇಸ್‌ನ ಧಾರಾಸಿಂಗ ನಾಯಕ ಹಾಗೂ ಬಸೀರಾಬಾದ ಕ್ಷೇತ್ರದಿಂದ ಲಕ್ಷ್ಮಿಬಾಯಿ ಎಂಬ ಉಮೇದುವಾರರು ಆಯ್ಕೆಯಾಗಿದ್ದರು. ಜಿಲ್ಲಾ ಪರಿಷದ ಸದಸ್ಯರಾಗಿ ಆಯ್ಕೆಗೊಂಡ ಮಹಿಳೆಯರ ಸ್ಥಾನಮಾನ ಮತ್ತು ಅಂತಸ್ತುಗಳನ್ನು ಅವರ ಪರವಾಗಿ ಅವರ ಸಂಬಂಧಿ ಪುರುಷರೇ ಅನುಭವಿಸುತ್ತಿರುವದು ಕಂಡುಬರುತ್ತದೆ.

ಮೂರು ಜಿಲ್ಲೆಗಳ ಜಿಲ್ಲಾ ಪಂಚಾಯತ ವ್ಯವಸ್ಥೆಯಲ್ಲಿ ಲಂಬಾಣಿಗರ ಭಾಗವಹಿಸುವಿಕೆಯನ್ನು ಗಣನೆಗೆ ತೆಗೆದುಕೊಂಡಾಗ ಗುಲಬರ್ಗಾ ಜಿಲ್ಲೆಯು ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಹೆಚ್ಚಿನ ಸಂಖ್ಯೆಯ ಜಿಲ್ಲಾ ಪಂಚಾಯತ ಸದಸ್ಯರನ್ನು ಹೊಂದಿರುವದು ಸ್ಪಷ್ಟವಾಗುತ್ತದೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡಕ್ಕೆ ನೀಡಿರುವ ಮೀಸಲಾತಿಯ ಸೌಲಭ್ಯವನ್ನು ಪರಿಪೂರ್ಣವಾಗಿ ಲಂಬಾಣಿಗರೇ ಪಡೆದುಕೊಂಡಿದ್ದಾರೆ. ಸೋಲಾಪುರ ಜಿಲ್ಲೆಯ ಲಂಬಾಣಿಗರು ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಅತಿ ಕಡಿಮೆ ಸಂಖ್ಯೆಯ ಎಂದರೆ ಕೇವಲ ಒಬ್ಬ ವ್ಯಕ್ತಿ ಮಾತ್ರ ಜಿಲ್ಲಾ ಪರಿಷದ ಸದಸ್ಯನಾಗಿರುವುದು ಕಂಡುಬರುತ್ತದೆ. ಮಹಿಳೆಯರ ಪ್ರಮಾಣವನ್ನು ಅನುಲಕ್ಷಿಸಿದಾಗ ಗುಲಬರ್ಗಾ ಜಿಲ್ಲೆಯ ಜಿಲ್ಲಾ ಪಂಚಾಯತನಲ್ಲಿ ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಹೆಚ್ಚಿನ ಪ್ರಮಾಣದ ಮಹಿಳೆಯರು ಜನಪ್ರತಿನಿಧಿಗಳಾಗಿ ಆಯ್ಕೆಯಾಗಿರುವುದು ಸ್ಪಷ್ಟವಾಗುತ್ತದೆ. ಆದರೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರ ಅಧಿಕಾರ ಹಾಗೂ ಸ್ಥಾನಮಾನಗಳನ್ನು ಪುರುಷರು ಅನುಭವಿಸುತ್ತಿರುವ ಸಂಗತಿ ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

**ಕೋಷ್ಟಕ ೪.೮.೨. ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲಾ ಪಂಚಾಯತಿಗಳ ಸದಸ್ಯರ ವಿವರ**

| ಜಿಲ್ಲೆಗಳು | ಅವಧಿ | ಒಟ್ಟು ಸದಸ್ಯರ ಸಂಖ್ಯೆ | ಸಾಮಾನ್ಯ ವರ್ಗದ ಸದಸ್ಯರ ಸಂಖ್ಯೆ | ಪ.ಜಾ. ಸದಸ್ಯರ ಸಂಖ್ಯೆ | ಪ.ಪಂ. ಸದಸ್ಯರ ಸಂಖ್ಯೆ | ಹಿಂದುಳಿದ ವರ್ಗದ ಸಂಖ್ಯೆ | ಲಂಬಾಣಿ ಸಮುದಾಯದ ಸದಸ್ಯರ ಸಂಖ್ಯೆ |
|---|---|---|---|---|---|---|---|
| ಗುಲಬರ್ಗಾ | ೨೦೦೬–೧೦ | ೪೩ | ೨೨ | ೧೧ | ೦೧ | ೦೯ | ೦೪ |
| ಸೋಲಾಪುರ | ೨೦೦೭–೧೨ | ೬೮ | ೩೯ | ೦೯ | ೦೨ | ೧೮ | ೦೧ |
| ರಂಗಾರೆಡ್ಡಿ | ೨೦೦೧–೦೬ | ೩೩ | ೧೦ | ೦೭ | ೦೨ | ೧೪ | ೦೨ |

(ಮೂಲ: ಕ್ಷೇತ್ರಾಧ್ಯಯನ)

ಅವಿಭಜಿತ ಗುಲಬರ್ಗಾ ಜಿಲ್ಲೆಯ ಜಿಲ್ಲಾ ಪಂಚಾಯತನಲ್ಲಿ ೨೦೦೬ ರಿಂದ ೨೦೧೦ರ ವರೆಗಿನ ಅಧಿಕಾರವಧಿಯಲ್ಲಿ ೬೫ ಜನ ಸದಸ್ಯರಿದ್ದರು. ಗುಲಬರ್ಗಾದ ಮೂರು ತಾಲೂಕುಗಳ ನ್ನೊಳಗೊಂಡು ಯಾದಗಿರಿ ಜಿಲ್ಲೆ ರಚನೆಯಾದ ನಂತರ ಮೊದಲ ಬಾರಿಗೆ ಗುಲಬರ್ಗಾ ಜಿಲ್ಲೆಯ

ಜಿಲ್ಲಾ ಪಂಚಾಯತಿಯ ೪೩ ಸದಸ್ಯರ ಸ್ಥಾನಗಳಿಗೆ ೨೦೧೧ರಲ್ಲಿ ಚುನಾವಣೆ ನಡೆದಿತ್ತು. ಇದರ ಅಧಿಕಾರವಧಿಯು ೨೦೧೧ ರಿಂದ ೨೦೧೫ ರವರೆಗಿದೆ. ಒಟ್ಟು ಸದಸ್ಯರ ಬಲದಲ್ಲಿ ಸಾಮಾನ್ಯ ವರ್ಗದವರಿಗೆ ೨೨, ಪರಿಶಿಷ್ಟ ಜಾತಿಗೆ ೧೧, ಪರಿಶಿಷ್ಟ ಪಂಗಡಕ್ಕೆ ೧, ಇತರೆ ಹಿಂದುಳಿದ ವರ್ಗಗಳಿಗೆ ೦೯ ಸದಸ್ಯರ ಬಲವಿರುವದು ಕಂಡುಬರುತ್ತದೆ. ಪರಿಶಿಷ್ಟ ಜಾತಿಗೆ ಮೀಸಲಿರಿಸಿದ ೧೧ ಸ್ಥಾನಗಳಲ್ಲಿ ಲಂಬಾಣಿ ಸಮುದಾಯದ ನಾಲ್ಕು ಜನ ಸದಸ್ಯರು ಆಯ್ಕೆಯಾಗಿರುತ್ತಾರೆ. ಅಂದರೆ ಪರಿಶಿಷ್ಟ ಜಾತಿಗೆ ಮೀಸಲಿರಿಸಿದ ಒಟ್ಟು ಸ್ಥಾನಗಳಲ್ಲಿ ಶೇ. ೩೬.೩೬ರಷ್ಟು ಲಂಬಾಣಿಗರು ಸಹಭಾಗಿತ್ವ ಹೊಂದಿರುವದು ಸ್ಪಷ್ಟವಾಗುತ್ತದೆ. ಭಾರತೀಯ ಜನತಾ ಪಕ್ಷದ ಉಮೇದುವಾರರಾಗಿ ಅವರಾದ ಕ್ಷೇತ್ರದಿಂದ ಗಣೇಶ ರೇವುನಾಯಕ, ಕೋಡ್ಲಿ ಕ್ಷೇತ್ರದಿಂದ ರೇಣುಕಾ ಗಂಗಾರಾಮ, ಭಂಕೂರ ಕ್ಷೇತ್ರದಿಂದ ಪಾರ್ವತಿಬಾಯಿ ಶಂಕರ ಚವ್ಹಾಣ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಅಭ್ಯರ್ಥಿಯಾಗಿ ಮುಧೋಳ ಕ್ಷೇತ್ರದಿಂದ ರೇಣುಕಾ ಹೇಮಲಾನಾಯ್ಕರವರು ಜಿಲ್ಲಾ ಪಂಚಾಯತನ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಇಲ್ಲಿ ಒಬ್ಬ ಪುರುಷ ಹಾಗೂ ಮೂರು ಜನ ಮಹಿಳೆಯರು ಜನಪ್ರತಿನಿಧಿ ಯಾಗಿರುವದು ಕಂಡುಬರುತ್ತಿದೆ.

ಸೋಲಾಪುರ ಜಿಲ್ಲೆಯನ್ನು ಅನುಲಕ್ಷಿಸಿದಾಗ ಪ್ರಸ್ತುತ ಚಾಲ್ತಿಯಲ್ಲಿರುವ ಜಿಲ್ಲಾ ಪರಿಷದನ ಆಡಳಿತದ ಅಧಿಕಾರವಧಿಯು ೨೦೧೨ ರಿಂದ ೨೦೧೭ರವರೆಗಿದೆ. ಒಟ್ಟು ೬೮ ಸದಸ್ಯರ ಬಲವಿರುವ ಜಿಲ್ಲಾ ಪರಿಷದನಲ್ಲಿ ಸಾಮಾನ್ಯ ವರ್ಗದವರ ೩೯ ಸ್ಥಾನಗಳು, ಪರಿಶಿಷ್ಟ ಜಾತಿಯ ೯, ಪರಿಶಿಷ್ಟ ಪಂಗಡದ ೨ ಹಾಗೂ ಇತರೆ ಹಿಂದುಳಿದ ವರ್ಗದವರ ೧೮ ಸದಸ್ಯರು ಅಧಿಕಾರದಲ್ಲಿದ್ದಾರೆ. ಇತರೆ ಹಿಂದುಳಿದ ವರ್ಗದವರ ಮೀಸಲಾತಿಯಡಿಯಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ ಪಕ್ಷದ ಅಭ್ಯರ್ಥಿಯಾಗಿ ಬೋರಾಮಣಿ ಕ್ಷೇತ್ರದಿಂದ ಲಂಬಾಣಿ ಸಮುದಾಯದ ಉಮಾಕಾಂತ ಕೇಶನ ರಾಠೋಡ ಎಂಬ ಏಕೈಕ ವ್ಯಕ್ತಿ ಜಿಲ್ಲಾ ಪರಿಷದನ ಸದಸ್ಯರಾಗಿ ಆಯ್ಕೆಯಾಗಿದ್ದಾರೆ.

ರಂಗಾರೆಡ್ಡಿ ಜಿಲ್ಲೆಯ ಜಿಲ್ಲಾ ಪರಿಷದನ ಅಧಿಕಾರವಧಿಯು ೨೦೦೬ ರಿಂದ ೨೦೧೧ರವರೆಗಿತ್ತು. ೨೦೧೧ ರಿಂದ ಮೀಸಲಾತಿ ವಿಷಯದ ಪ್ರಕರಣವು ಸರ್ವೋಚ್ಚ ನ್ಯಾಯಾಲಯದಲ್ಲಿರುವದರಿಂದ ೨೦೧೧ ರಿಂದ ಇಲ್ಲಿಯವರೆಗೆ ಗ್ರಾಮ, ಮಂಡಲ ಹಾಗೂ ಜಿಲ್ಲಾ ಪರಿಷದಗಳ ಚುನಾವಣೆ ನಡೆದಿರುವದಿಲ್ಲ. ೨೦೦೬ ರಿಂದ ೨೦೧೧ರ ಅಧಿಕಾರವಧಿಯಲ್ಲಿ ಜಿಲ್ಲಾ ಪರಿಷದನಲ್ಲಿ ಒಟ್ಟು ೩೩ ಸದಸ್ಯರಿದ್ದರು. ಇವರಲ್ಲಿ ೧೦ ಸ್ಥಾನಗಳು ಸಾಮಾನ್ಯ ವರ್ಗದವರಿಗೆ, ೭ ಸ್ಥಾನಗಳು ಪರಿಶಿಷ್ಟ ಜಾತಿಯವರಿಗೆ ೨ ಸ್ಥಾನಗಳು ಪರಿಶಿಷ್ಟ ಪಂಗಡದವರಿಗೆ ಹಾಗೂ ೧೪ ಸ್ಥಾನಗಳು ಹಿಂದುಳಿದ ವರ್ಗದವರಿಗೆ ಮೀಸಲಾಗಿದ್ದವು. ಪರಿಶಿಷ್ಟ ಪಂಗಡಕ್ಕೆ ಮೀಸಲಾಗಿದ್ದ ಎರಡು ಸ್ಥಾನಗಳಲ್ಲಿ ಲಂಬಾಣಿಗರೇ ಆಯ್ಕೆಯಾಗಿದ್ದು, ಮೀಸಲಾತಿಯ ಪರಿಪೂರ್ಣ ಸದುಪಯೋಗವನ್ನು ಪಡೆದುಕೊಂಡಿದ್ದಾರೆ. ಗಂಡೀಡ ಕ್ಷೇತ್ರದಿಂದ ತೆಲಗು ದೇಶಮ್ ಪಕ್ಷದ ನೆಹರೂ ಹಾಗೂ ಯಚಾರಾಮ ಕ್ಷೇತ್ರದಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ರಾಮಾವತ ಮಲ್ಲಮ್ಮಾ ಎಂಬ ಇಬ್ಬರು ಲಂಬಾಣಿಗರು ಆಯ್ಕೆಯಾಗಿದ್ದರು.

ಮೂರು ಜಿಲ್ಲೆಗಳ ಜಿಲ್ಲಾ ಪಂಚಾಯತನ ಚಿತ್ರಣವನ್ನು ಗಮನಿಸಿದಾಗ ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಗುಲಬರ್ಗಾ ಜಿಲ್ಲಾ ಪಂಚಾಯತನಲ್ಲಿ ಲಂಬಾಣಿ ಸದಸ್ಯರ ಸಂಖ್ಯೆ ಹೆಚ್ಚಾಗಿರುವದು ಕಂಡುಬರುತ್ತದೆ. ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಗಿಂತ ಸೋಲಾಪುರ ಜಿಲ್ಲಾ ಪಂಚಾಯತನಲ್ಲಿ ಒಟ್ಟು ಸದಸ್ಯರ ಸಂಖ್ಯೆ ಹೆಚ್ಚಾಗಿದ್ದರೂ ಮೀಸಲಾತಿಯ ಕೊರತೆಯಿಂದಾಗಿ ಕೇವಲ ಒಬ್ಬ ಲಂಬಾಣಿ ವ್ಯಕ್ತಿ ಮಾತ್ರ ಸದಸ್ಯನಾಗಿರುವದು ಕಂಡುಬರುತ್ತದೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡಕ್ಕೆ ನೀಡಿರುವ ಮೀಸಲಾತಿಯನ್ನು ಸಂಪೂರ್ಣವಾಗಿ ಲಂಬಾಣಿಗರೇ ಬಳಸಿ ಕೊಂಡಿರುವದು ಗೋಚರಿಸುತ್ತದೆ. ಸೋಲಾಪುರ ಜಿಲ್ಲಾ ಪರಿಷದ ಸದಸ್ಯರಲ್ಲಿ ಲಂಬಾಣಿ ಮಹಿಳೆಯರ ಪ್ರಮಾಣ ಶೂನ್ಯವಾಗಿದ್ದು, ಗುಲಬರ್ಗಾ ಜಿಲ್ಲಾ ಪಂಚಾಯತನಲ್ಲಿ ಲಂಬಾಣಿ ಮಹಿಳಾ ಸದಸ್ಯರ ಪ್ರಮಾಣ ರಂಗಾರೆಡ್ಡಿ ಜಿಲ್ಲೆಗಿಂತ ಹೆಚ್ಚಾಗಿರುವದು ಗೋಚರಿಸುತ್ತದೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಸ್ತ್ರೀ–ಪುರುಷ ಸದಸ್ಯರ ಪ್ರಮಾಣ ಸಮನಾಗಿರುವುದು ಕಂಡುಬರುತ್ತದೆ. ಎರಡು ಅವಧಿಯ ಜಿಲ್ಲಾ ಪಂಚಾಯತ ಸದಸ್ಯರನ್ನು ಪರಿಗಣಿಸಿ ನೋಡಿದಾಗ ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಎರಡು ಅವಧಿಗೆ ಬೇರೆ ಬೇರೆ ಸದಸ್ಯರಿಗೆ ಅವಕಾಶ ಸಿಕ್ಕಿರುವುದು ಸ್ಪಷ್ಟವಾಗುತ್ತದೆ. ಆದರೆ ಸೋಲಾಪುರ ಜಿಲ್ಲೆಯಲ್ಲಿ ಎರಡು ಅವಧಿಗೆ ಒಬ್ಬನೇ ವ್ಯಕ್ತಿ ಆಯ್ಕೆಯಾಗಿರುವುದು ಕಂಡುಬರುತ್ತದೆ. ಸೋಲಾಪುರ ಜಿಲ್ಲೆಯ ಲಂಬಾಣಿಗರು ಪರಿಶಿಷ್ಟರ ಪಟ್ಟಿಗೆ ಸೇರದೇ ಇರುವದರಿಂದ ಅವರು ರಾಜಕೀಯವಾಗಿ ಹಿಂದುಳಿದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

**ಕೋಷ್ಟಕ ೪.೮.೩ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳ ವಿಧಾನಸಭಾ ಸದಸ್ಯರ ವಿವರ**

| ಜಿಲ್ಲೆಗಳು | ಅವಧಿ | ಒಟ್ಟು ಸದಸ್ಯರ ಸಂಖ್ಯೆ | ಸಾಮಾನ್ಯ ವರ್ಗದ ಸದಸ್ಯರ | ಪ.ಜಾ. ಸದಸ್ಯರ ಸಂಖ್ಯೆ ಸಂಖ್ಯೆ | ಪ.ಪಂ. ಸದಸ್ಯರ ಸಂಖ್ಯೆ | ಲಂಬಾಣಿ ಸಮುದಾಯದ ಸದಸ್ಯರ ಸಂಖ್ಯೆ |
|---|---|---|---|---|---|---|
| ಕರ್ನಾಟಕ | ೨೦೦೮–೧೩ | ೨೨೪ | ೧೭೩ | ೩೬ | ೧೫ | ೦೭ |
| ಮಹಾರಾಷ್ಟ್ರ | ೨೦೦೪–೦೯ | ೨೮೮ | ೨೪೮ | ೧೮ | ೨೨ | ೦೩ |
| ಆಂಧ್ರ ಪ್ರದೇಶ | ೨೦೦೪–೦೯ | ೨೯೪ | ೨೪೦ | ೩೯ | ೧೫ | ೦೩ |

(ಮೂಲ: ಕ್ಷೇತ್ರಾಧ್ಯಯನ)

ಕರ್ನಾಟಕ ರಾಜ್ಯದ ಈ ಹಿಂದಿನ ವಿಧಾನಸಭೆಯ ಅಧಿಕಾರವಧಿಯು ೨೦೦೮ ರಿಂದ ೨೦೧೩ರವರೆಗಿತ್ತು. ಈ ಅವಧಿಯಲ್ಲಿ ವಿಧಾನಸಭಾ ಸದಸ್ಯರ ಸಂಖ್ಯೆ ಒಟ್ಟು ೨೨೪ ಅದರಲ್ಲಿ ಸಾಮಾನ್ಯ ವರ್ಗದ ೧೭೩, ಪರಿಶಿಷ್ಟ ಜಾತಿಯ ೩೬, ಹಾಗೂ ಪರಿಶಿಷ್ಟ ಪಂಗಡದ ೧೫ ಸದಸ್ಯರು

ಆಯ್ಕೆಯಾಗಿದ್ದರು. ಪರಿಶಿಷ್ಟ ಜಾತಿಗೆ ಮೀಸಲಾಗಿರುವ ಒಟ್ಟು ಸ್ಥಾನಗಳಲ್ಲಿ ಶೇ. ೧೯.೪೪ರಷ್ಟು ಲಂಬಾಣಿ ಸದಸ್ಯರು ಇರುವದು ಕಂಡುಬರುತ್ತದೆ. ಭಾರತೀಯ ಜನತಾ ಪಕ್ಷದ ಅಭ್ಯರ್ಥಿಗಳಾಗಿ ಚಿತ್ತಾಪುರ ಕ್ಷೇತ್ರದಿಂದ ವಾಲ್ಮೀಕಿ ನಾಯಕ, ಗುಲಬರ್ಗಾ ಗ್ರಾಮೀಣ ಕ್ಷೇತ್ರದಿಂದ ರೇವು ನಾಯಕ ಬೆಳಮಗಿ, ಔರಾದ ಕ್ಷೇತ್ರದಿಂದ ಪ್ರಭು ಚವ್ಹಾಣ, ಶಿರಹಟ್ಟಿ ಕ್ಷೇತ್ರದಿಂದ ರಾಮಣ್ಣ ಲಮಾಣಿ, ಹಡಗಲಿ ಕ್ಷೇತ್ರದಿಂದ ಬಿ ಚಂದ್ರನಾಯ್ಕ, ಹಗರಿಬೊಮ್ಮನಹಳ್ಳಿ ಕ್ಷೇತ್ರದಿಂದ ಕೆ ಹೇಮರಾಜ ನಾಯ್ಕ, ಮಾಯಕೊಂಡಾ ಕ್ಷೇತ್ರದಿಂದ ಎಮ್ ಬಸವರಾಜ ನಾಯ್ಕ ಹೀಗೆ ಒಟ್ಟು ಏಳು ಜನ ಲಂಬಾಣಿಗರು ವಿಧಾನಸಭೆಯ ಸದಸ್ಯರಾಗಿದ್ದರು.

ಮಹಾರಾಷ್ಟ್ರ ರಾಜ್ಯದಲ್ಲಿ ೨೦೦೪ ರಿಂದ ೨೦೦೯ರವರೆಗೆ ಅಧಿಕಾರದಲ್ಲಿದ್ದ ವಿಧಾನಸಭೆಯ ಒಟ್ಟು ಸದಸ್ಯರ ಸಂಖ್ಯೆ ೨೮೮, ಅದರಲ್ಲಿ ೨೪೮ ಸದಸ್ಯರು ಸಾಮಾನ್ಯ ವರ್ಗ, ೧೮ ಪರಿಶಿಷ್ಟ ಜಾತಿ, ೨೨ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದರು. ಮಹಾರಾಷ್ಟ್ರದ ಲಂಬಾಣಿ ಸಮುದಾಯವು ಸಾಮಾನ್ಯ ವರ್ಗದ ವಿಧಾನಸಭಾ ಸ್ಥಾನಗಳಿಗೆ ಸ್ಪರ್ಧಿಸಬೇಕಾಗುತ್ತದೆ. ಈ ಅವಧಿಯಲ್ಲಿಯ ಸಾಮಾನ್ಯ ವರ್ಗದ ಒಟ್ಟು ಸ್ಥಾನಗಳಲ್ಲಿ ಲಂಬಾಣಿ ಸಮುದಾಯದ ವಿಧಾನಸಭಾ ಸದಸ್ಯರ ಪ್ರಮಾಣ ಕೇವಲ ಶೇ. ೧.೨೦ರಷ್ಟಿರುವದು ಕಂಡುಬರುತ್ತದೆ. ಯವತಮಾಳ ಜಿಲ್ಲೆಯ ದಾರವಾ ಕ್ಷೇತ್ರದಿಂದ ಶಿವಸೇನಾ ಪಕ್ಷದ ಅಭ್ಯರ್ಥಿಯಾಗಿ ರಾಠೋಡ ಸಂಜಯಸಿಂಗ ದುಲಿಚಂದ, ನಾಂದೇಡ ಜಿಲ್ಲೆಯ ಕಿನವತ್ ಕ್ಷೇತ್ರದಿಂದ ರಾಷ್ಟ್ರೀಯವಾದಿ ಕಾಂಗ್ರೆಸ್ ಪಕ್ಷದ ಪ್ರದೀಪ ನಾಯ್ಕ ಹಾಗೂ ಯವತಮಾಳ ಜಿಲ್ಲೆಯ ಪುಸದ ಕ್ಷೇತ್ರದಿಂದ ನಾಯ್ಕ ಮನೋಹರ ರಾಜುಸಿಂಗ ರಾಷ್ಟ್ರೀಯವಾದಿ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಆಯ್ಕೆಯಾಗಿದ್ದರು.

ಆಂಧ್ರ ಪ್ರದೇಶ ರಾಜ್ಯದ ಹಿಂದಿನ ವಿಧಾನಸಭಾ ಸದಸ್ಯರ ಅಧಿಕಾರವಧಿಯು ೨೦೦೪ ರಿಂದ ೨೦೦೯ರವರೆಗಿತ್ತು. ಈ ಅವಧಿಯಲ್ಲಿಯ ಒಟ್ಟು ವಿಧಾನಸಭಾ ಸದಸ್ಯರ ಸಂಖ್ಯೆ ೨೯೪ ಅದರಲ್ಲಿ ಸಾಮಾನ್ಯ ವರ್ಗದ ೨೪೦, ಪರಿಶಿಷ್ಟ ಜಾತಿಯ ೩೯, ಪರಿಶಿಷ್ಟ ಪಂಗಡದ ೧೫ ಸದಸ್ಯರ ಸಂಖ್ಯೆಯಲ್ಲಿ ಲಂಬಾಣಿ ಸಮುದಾಯದ ಸದಸ್ಯರ ಪ್ರಮಾಣವು ಶೇ ೧೩.೩೩ರಷ್ಟಿರುವದು ಕಂಡುಬರುತ್ತದೆ. ಅದಿಲಾಬಾದ ಜಿಲ್ಲೆಯ ಖಾನಪುರ ಕ್ಷೇತ್ರದಿಂದ ತೆಲಂಗಾಣ ರಾಷ್ಟ್ರ ಸಮಿತಿ ಪಕ್ಷದ ಗೋವಿಂದ ನಾಯಕ ಅಜಿಮೇರಾ, ನಲಗೊಂಡ ಜಿಲ್ಲೆಯ ದೇವರಕೊಂಡಾ ಕ್ಷೇತ್ರದಿಂದ ಸಿ ಪಿ ಐ ಪಕ್ಷದ ರವೀಂದ್ರಕುಮಾರ ರಾಮಾವತರವರು ಸದಸ್ಯರಾಗಿ ಆಯ್ಕೆಯಾಗಿದ್ದರು. ದೋರನಕಲ ಕ್ಷೇತ್ರದಿಂದ ಧರ್ಮಸೋತ ರಡ್ಯಾನಾಯ್ಕರವರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದಿಂದ ಸಾಮಾನ್ಯ ವರ್ಗದ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾಗಿದ್ದರು ಎಂಬುದು ಕಂಡುಬರುತ್ತದೆ.

ಮೂರು ರಾಜ್ಯಗಳನ್ನು ಹೋಲಿಸಿ ನೋಡಿದಾಗ ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಿಗಿಂತ ಕರ್ನಾಟಕ ರಾಜ್ಯವು ಹೆಚ್ಚಿನ ಪ್ರಮಾಣದಲ್ಲಿ ಲಂಬಾಣಿ ಸಮುದಾಯದ ವಿಧಾನಸಭಾ ಸದಸ್ಯರನ್ನು ಹೊಂದಿರುವುದು ಕಂಡುಬರುತ್ತದೆ. ಅಲ್ಲದೇ ಕರ್ನಾಟಕದ ಲಂಬಾಣಿಗರು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿರುವುದರಿಂದ ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳಿಗಿಂತಲೂ ಅವರಿಗೆ ಹೆಚ್ಚಿನ ರಾಜಕೀಯ ಅವಕಾಶಗಳು ದೊರೆಯುತ್ತಿವೆ. ಮೂರು ರಾಜ್ಯಗಳಲ್ಲಿಯ ಲಂಬಾಣಿ

ವಿಧಾನಸಭಾ ಸದಸ್ಯರಲ್ಲಿ ಮಹಿಳೆಯರ ಪ್ರಮಾಣ ಶೂನ್ಯವಾಗಿರುವದು ಕಂಡುಬರುತ್ತದೆ.

**ಕೋಷ್ಟಕ ೪.೮.೪. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳ ವಿಧಾನಸಭಾ ಸದಸ್ಯರ ವಿವರ**

| ಜಿಲ್ಲೆಗಳು | ಅವಧಿ | ಒಟ್ಟು ಸದಸ್ಯರ ಸಂಖ್ಯೆ | ಸಾಮಾನ್ಯ ವರ್ಗದ ಸದಸ್ಯರ | ಪ.ಜಾ. ಸದಸ್ಯರ ಸಂಖ್ಯೆ ಸಂಖ್ಯೆ | ಪ.ಪಂ. ಸದಸ್ಯರ ಸಂಖ್ಯೆ | ಲಂಬಾಣಿ ಸಮುದಾಯದ ಸದಸ್ಯರ ಸಂಖ್ಯೆ |
|---|---|---|---|---|---|---|
| ಕರ್ನಾಟಕ | ೨೦೧೩–೧೮ | ೨೨೪ | ೧೭೩ | ೩೬ | ೧೫ | ೦೯ |
| ಮಹಾರಾಷ್ಟ್ರ | ೨೦೦೯–೧೪ | ೨೮೮ | ೨೩೫ | ೨೮ | ೨೫ | ೦೩ |
| ಆಂಧ್ರ ಪ್ರದೇಶ | ೨೦೦೯–೧೪ | ೨೯೪ | ೨೨೭ | ೪೮ | ೧೯ | ೦೫ |

ಕರ್ನಾಟಕ ರಾಜ್ಯದ ಪ್ರಸ್ತುತ ವಿಧಾನಸಭಾ ಸದಸ್ಯರ ಅಧಿಕಾರವಧಿಯು ೨೦೧೩ ರಿಂದ ೨೦೧೮ರವರೆಗಿದ್ದು, ಒಟ್ಟು ಸದಸ್ಯರ ಸಂಖ್ಯೆ ೨೨೪, ಅದರಲ್ಲಿ ಸಾಮಾನ್ಯ ವರ್ಗದ ೧೭೩, ಪರಿಶಿಷ್ಟ ಜಾತಿಯ ೩೬ ಹಾಗೂ ಪರಿಶಿಷ್ಟ ಪಂಗಡದ ೧೫ ಸದಸ್ಯರಿರುವುದು ಕಂಡುಬರುತ್ತದೆ. ಪರಿಶಿಷ್ಟ ಜಾತಿಯ ಒಟ್ಟು ಸದಸ್ಯರಲ್ಲಿ ಲಂಬಾಣಿ ವಿಧಾನಸಭಾ ಸದಸ್ಯರ ಪ್ರಮಾಣವು ಶೇ. ೨೫ರಷ್ಟಿರುವದು ಸ್ಪಷ್ಟವಾಗುತ್ತದೆ. ಈ ಅವಧಿಯಲ್ಲಿ ಪರಿಶಿಷ್ಟ ಜಾತಿಯ ಮೀಸಲು ಕ್ಷೇತ್ರಗಳಾದ ಕುಡಚಿಯಿಂದ ಬಿ ಎಸ್ ಆರ್ ಕಾಂಗ್ರೆಸ್ ಪಕ್ಷದ ಪಿ ರಾಜೀವ, ಚಿಂಚೋಳಿಯಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಉಮೇಶ ಜಾಧವ, ಔರಾದದಿಂದ ಭಾರತೀಯ ಜನತಾ ಪಕ್ಷದ ಪ್ರಭು ಚವ್ಹಾಣ, ಹಾವೇರಿಯಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ರುದ್ರಪ್ಪ ಮಾನಪ್ಪ ಲಮಾಣಿ, ಹಡಗಲಿ ಕ್ಷೇತ್ರದಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಪಿ ಟಿ ಪರಮೇಶ್ವರ ನಾಯ್ಕ, ಹಗರಿಬೊಮ್ಮನಹಳ್ಳಿ ಯಿಂದ ಜನತಾದಳ(ಜಾತ್ಯಾತೀತ)ದ ಭಿಮಾನಾಯ್ಕ, ಮಾಯಕೊಂಡದಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಕೆ ಶಿವಮೂರ್ತಿ, ಶಿವಮೊಗ್ಗ ಗ್ರಾಮೀಣದಿಂದ ಜನತಾದಳ(ಜಾತ್ಯಾತೀತ)ದ ಶಾರದಾ ಪೂರ್ರ್ಯಾನಾಯ್ಕ, ಕೊರಟಗೆರೆಯಿಂದ ಜನತಾದಳ(ಜಾತ್ಯಾತೀತ)ದ ಸುಧಾಕರಲಾಲ ಪಿ ಆರ್ ಹೀಗೆ ಒಟ್ಟು ೯ ಜನ ಲಂಬಾಣಿಗರು ವಿಧಾನಸಭಾ ಸದಸ್ಯರುಗಳಾಗಿ ಆಯ್ಕೆಯಾಗಿದ್ದಾರೆ.

ಮಹಾರಾಷ್ಟ್ರ ರಾಜ್ಯದ ಪ್ರಸ್ತುತ ವಿಧಾನಸಭಾ ಸದಸ್ಯರ ಅಧಿಕಾರವಧಿ ೨೦೦೯ ರಿಂದ ೨೦೧೪ರ ವರೆಗಿದೆ. ವಿಧಾನಸಭೆಯ ಒಟ್ಟು ಸದಸ್ಯರ ಸಂಖ್ಯೆ ೨೮೮, ಅದರಲ್ಲಿ ೧೭೩ ಸಾಮಾನ್ಯ ವರ್ಗ, ೩೬ ಪರಿಶಿಷ್ಟ ಜಾತಿ, ೧೫ ಪರಿಶಿಷ್ಟ ಪಂಗಡದ ಸದಸ್ಯರಿದ್ದಾರೆ. ಸಾಮಾನ್ಯ ವರ್ಗದ ಒಟ್ಟು ಸದಸ್ಯರ ಸಂಖ್ಯೆಯಲ್ಲಿ ಲಂಬಾಣಿ ಸದಸ್ಯರ ಪ್ರಮಾಣವು ಶೇ. ೧.೭೩ರಷ್ಟಿದೆ. ರಾಷ್ಟ್ರೀಯವಾದಿ ಕಾಂಗ್ರೆಸ್ ಪಕ್ಷದಿಂದ ಪುಸದ ಕ್ಷೇತ್ರದಲ್ಲಿ ಮನೋಹರ ನಾಯ್ಕ, ಕಿನವತ್ ಕೇತ್ರದಲ್ಲಿ ಜಾಧವ

ಪ್ರದೀಪ ಹೇಮಸಿಂಗ, ಶಿವಸೇನೆ ಪಕ್ಷದ ರಾಠೋಡ ಸಂಜಯ ದುಲಿಸಿಂಗ ದಿಗ್ರಾಸ ಕ್ಷೇತ್ರದಿಂದ ಒಟ್ಟು ಮೂರು ಜನ ಲಂಬಾಣಿಗರು ಆಯ್ಕೆಯಾಗಿರುವುದು ಕಂಡುಬರುತ್ತದೆ.

ಆಂಧ್ರ ಪ್ರದೇಶ ರಾಜ್ಯದ ವಿಧಾನಸಭಾ ಸದಸ್ಯರ ಅಧಿಕಾರಾವಧಿ ೨೦೦೯ ರಿಂದ ೨೦೧೪ರ ವರೆಗಿದ್ದು, ಒಟ್ಟು ಸದಸ್ಯರ ಸಂಖ್ಯೆ ೨೯೪ ಇದೆ. ಅದರಲ್ಲಿ ಸಾಮಾನ್ಯ ವರ್ಗಕ್ಕೆ ೨೨೭, ಪರಿಶಿಷ್ಟ ಜಾತಿಗೆ ೪೮, ಪರಿಶಿಷ್ಟ ಪಂಗಡಕ್ಕೆ ೧೯ ಸದಸ್ಯರ ಬಲವಿದೆ. ಪರಿಶಿಷ್ಟ ಪಂಗಡದ ಒಟ್ಟು ಸ್ಥಾನಗಳಲ್ಲಿ ಲಂಬಾಡಿ ಸದಸ್ಯರ ಪ್ರಮಾಣವು ಶೇ. ೨೬.೩೧ರಷ್ಟಿರುವುದು ಕಂಡುಬರುತ್ತದೆ. ಖಾನಾಪುರ ಕ್ಷೇತ್ರದಿಂದ ತೆಲಗುದೇಶಂ ಪಕ್ಷದ ಸುಮನ ರಾಠೋಡ, ದೇವರಕೊಂಡಾದಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಬಾಲುನಾಯ್ಕ ನೇಣಾವತ, ಡೋರಣಕಲ ಕ್ಷೇತ್ರದಿಂದ ತೆಲಗುದೇಶಂ ಪಕ್ಷದ ಸತ್ಯವತಿ ರಾಠೋಡ, ಮಹಬೂಬಾಬಾದ ಕ್ಷೇತ್ರದಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸನ ಕವಿತಾ ಮಾಳೋತ, ವ್ಯಾರಾ ಕ್ಷೇತ್ರದಿಂದ ಭಾರತೀಯ ಕಮ್ಯೂನಿಷ್ಟ ಪಕ್ಷ(ಸಿ ಪಿ ಐ)ದ ಚಂದ್ರವತಿ ಬಾಣೋತ ಹೀಗೆ ಒಟ್ಟು ೫ ಜನ ಲಂಬಾಣಿಗರು ವಿಧಾನಸಭಾ ಸದಸ್ಯರಾಗಿ ಆಯ್ಕೆಯಾಗಿರುತ್ತಾರೆ.

ಮೂರು ರಾಜ್ಯಗಳ ವಿಧಾನಸಭಾ ಸದಸ್ಯರನ್ನು ತುಲನೆ ಮಾಡಿದಾಗ ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಿಗಿಂತ ಕರ್ನಾಟಕ ರಾಜ್ಯದ ಲಂಬಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾಗಿರುವುದು ಕಂಡುಬರುತ್ತದೆ. ಕರ್ನಾಟಕ ರಾಜ್ಯದಲ್ಲಿ ಕೇವಲ ಒಬ್ಬ ಲಂಬಾಣಿ ಮಹಿಳಾ ಸದಸ್ಯಳಿದ್ದು, ಆಂಧ್ರ ಪ್ರದೇಶ ರಾಜ್ಯದಲ್ಲಿ ನಾಲ್ಕು ಲಂಬಾಣಿ ಮಹಿಳೆಯರು ಹಾಗೂ ಕೇವಲ ಒಬ್ಬ ಪುರುಷ ವಿಧಾನಸಭಾ ಸದಸ್ಯರಾಗಿರುವುದು ಕಂಡುಬರುತ್ತದೆ. ಮಹಾರಾಷ್ಟ್ರ ರಾಜ್ಯದಲ್ಲಿ ಲಂಬಾಣಿ ಮಹಿಳಾ ಸದಸ್ಯರ ಪ್ರಮಾಣ ಶೂನ್ಯವಾಗಿರುವದು ಗೋಚರಿಸುತ್ತದೆ.

ಮೂರು ರಾಜ್ಯಗಳ ಎರಡು ಅವಧಿಗಳ ವಿಧಾನಸಭಾ ಸದಸ್ಯರನ್ನು ಅನುಲಕ್ಷಿಸಿದಾಗ ಮಹಾರಾಷ್ಟ್ರ ರಾಜ್ಯದಲ್ಲಿ ಲಂಬಾಣಿ ಸದಸ್ಯರುಗಳ ಪ್ರಮಾಣವು ಸ್ಥಿರವಾಗಿದ್ದು, ಆಂಧ್ರ ಪ್ರದೇಶದಲ್ಲಿ ಲಂಬಾಣಿ ಸದಸ್ಯರ ಸಂಖ್ಯೆಯು ಮೂರರಿಂದ ಐದಕ್ಕೇರಿರುವದು ಕಂಡುಬರುತ್ತದೆ. ಅದರಂತೆ ಕರ್ನಾಟಕದಲ್ಲಿಯೂ ಸಹ ಇವರ ಸಂಖ್ಯೆ ಏಳರಿಂದ ಒಂಬತ್ತಕ್ಕೇರಿರುವದು ಸ್ಪಷ್ಟವಾಗುತ್ತದೆ. ಅಲ್ಲದೇ ಕರ್ನಾಟಕ ರಾಜ್ಯದ ಲಂಬಾಣಿಗರು ಎರಡು ಅವಧಿಯ ವಿಧಾನಸಭಾ ಸದಸ್ಯರಲ್ಲಿ ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಲಂಬಾಣಿ ಸಮುದಾಯದ ವಿಧಾನಸಭಾ ಸದಸ್ಯರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿರುವದು ಕಂಡುಬರುತ್ತಿದೆ.

ಲೋಕಸಭಾ ಸದಸ್ಯರನ್ನು ಪರಿಗಣಿಸಿದಾಗ ೨೦೦೪ ರಿಂದ ೨೦೦೯ರ ಅವಧಿಯ ಲೋಕಸಭೆಯಲ್ಲಿ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಲಂಬಾಣಿ ಸಮುದಾಯದ ಲೋಕಸಭಾ

ಸದಸ್ಯರ ಪ್ರಮಾಣವು ಶೂನ್ಯವಾಗಿರುವದು ಕಂಡುಬರುತ್ತದೆ. ೨೦೦೯ ರಿಂದ ೨೦೧೪ರವರೆಗೆ ಆಡಳಿತ ದಲ್ಲಿದ್ದ ಲೋಕಸಭೆಯಲ್ಲಿ ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಲಂಬಾಣಿ ಸಮುದಾಯದ ಲೋಕಸಭಾ ಸದಸ್ಯರ ಸಂಖ್ಯೆಯು ಶೂನ್ಯವಾಗಿದ್ದು, ಆಂಧ್ರ ಪ್ರದೇಶ ರಾಜ್ಯದಲ್ಲಿ ಮಾತ್ರ ಇಬ್ಬರು ಲಂಬಾಣಿಗರು ಪರಿಶಿಷ್ಟ ಪಂಗಡದ ಮೀಸಲಾತಿಯಡಿಯಲ್ಲಿ ಆಯ್ಕೆಯಾಗಿದ್ದರು. ಅದಿಲಾಬಾದ ಕ್ಷೇತ್ರದಿಂದ ತೆಲಗುದೇಶಮ್ ಪಕ್ಷದ ರಾಠೋಡ ರಮೇಶ ಹಾಗೂ ಮಹಬೂಬಾಬಾದ ಕ್ಷೇತ್ರದಿಂದ ಭಾರತೀಯ ಕಾಂಗ್ರೆಸ್‌ನ ಪಿ ಬಲರಾಮರವರು ಲೋಕಸಭಾ ಸದಸ್ಯರಾಗಿ ಆಯ್ಕೆಯಾಗಿ ರುವುದು ಕಂಡುಬರುತ್ತದೆ.

ಜಿಲ್ಲಾ ಪಂಚಾಯತ ಹಾಗೂ ವಿಧಾನಸಭಾ ಸದಸ್ಯರ ಸಂಖ್ಯೆಯನ್ನು ನೋಡಿದಾಗ ಮಹಾರಾಷ್ಟ್ರ ರಾಜ್ಯದ ಲಂಬಾಣಿಗರಿಗಿಂತಲೂ ಕರ್ನಾಟಕ ಮತ್ತು ಆಂಧ್ರ ಪ್ರದೇಶ ರಾಜ್ಯಗಳ ಲಂಬಾಣಿಗರು ರಾಜಕೀಯ ಕ್ಷೇತ್ರದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸಹಭಾಗಿತ್ವ ಹೊಂದಿರುವದು ಸ್ಪಷ್ಟವಾಗಿ ಕಂಡುಬರುತ್ತದೆ.

**ಆಧಾರ ಗ್ರಂಥಗಳು**


ಭೂಕ್ಯಾ ತಿರುಪತಿ, ಲಂಬಾಡಿ ಭಾಷಾ ಸಾಹಿತ್ಯಲಪ್ಯೆ ತೆಲಗು ಭಾಷಾ ಪ್ರಭಾವಂ(ಎಂ.ಫಿಲ್. ಸಂಶೋಧನಾ ಪ್ರಬಂಧ), ಹೈದ್ರಾಬಾದ ವಿಶ್ವವಿದ್ಯಾಲಯ, ೨೦೦೫.

ಚಿದಾನಂದಮೂರ್ತಿ ಎಂ., ಭಾಷಾ ವಿಜ್ಞಾನದ ಮೂಲ ತತ್ವಗಳು, ಡಿ ವಿ ಕೆ ಮೂರ್ತಿ ಪ್ರಕಾಶಕರು ಮೈಸೂರ, ೨೦೦೮.

ಗಂಗಾನಾಯಕ ಕೆ ಎನ್., ಲಂಬಾಣಿ ಇತಿಹಾಸ ಮತ್ತು ಸಂಸ್ಕೃತಿ, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು, ೨೦೦೭

ಹಿರೇಮಠ ಎಸ್ ಜಿ., ಭಾರತಿಯ ಸಮಾಜದ ಅಧ್ಯಯನ, ಪ್ರದೀಪ ಪ್ರಕಾಶನ ಸಿಂದಗಿ, ೨೦೦೭.

ಕಾಳೇಗೌಡ ನಾಗವಾರ ಮತ್ತು ಹುಚ್ಚಪ್ಪ ಮಾಸ್ತರ ಎಸ್, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು, ೨೦೦೦.

ಖಂಡೋಬಾ ಪಿ ಕೆ., ಕರ್ನಾಟಕ ಲಂಬಾಣಿಗರು, ದಿ. ತೇಜಸಿಂಗ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗಾ, ೧೯೯೧.

———, ಕರ್ನಾಟಕದ ಬುಡಕಟ್ಟಿನ ಲಂಬಾಣಿಗಳು, ಶ್ರೀ ಸಿದ್ದಲಿಂಗೇಶ್ವರ ಬುಕ್ ಡೀಪೋ ಮೇನ ರೋಡ ಗುಲ್ಬರ್ಗಾ, ೨೦೦೦.

ಕೋರನ ಸರಸ್ವತಿ ಪ್ರಕಾಶ, ಕೊಡಗು ಗೌಡ ಸಮುದಾಯ, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್-ಕೃಷ್ಣಾಪುರದೊಡ್ಡಿ, ಬೆಂಗಳೂರು, ೨೦೧೦.

ಕೃಷ್ಣ ಬಿ ಆರ್., ಮೂಲಭೂತ ಸಮಾಜಶಾಸ್ತ್ರ, ವಿದ್ಯಾನಿಧಿ ಪ್ರಕಾಶನ, ಧಾರವಾಡ, ೨೦೧೨.

ನಾಗೇಶ ಹೆಚ್ ಬಿ., ಬುಡಕಟ್ಟು ನ್ಯಾಯ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩.

ನಾಯಕ ಚೇನಿಯಾ ಬಿ., ಬಂಜಾರ ಚರಿತ್ರೆ, ಶ್ರೀಮತಿ ಬಿ ಲಕ್ಷ್ಮಿಬಾಯಿ ಚೇನಿಯಾ ನಾಯಕ ಹಾತಿರಾಮ ಬಾವಾಜಿ ಪಬ್ಲಿಕೇಶನ್, ಅನಂತಪುರಂ, ೧೯೯೮.

ನಾಯಕ ಡಿ ಬಿ., ಲಂಬಾಣಿ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ, ಬೆಂಗಳೂರು, ೧೯೯೪.

ಪ್ರಭಾಕರ ಎ ಎಸ್., ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬.

ರಾಜಶೇಖರಪ್ಪ ಎಮ್., ಚಿತ್ರದುರ್ಗ ಜಿಲ್ಲೆಯ ಗಾಣಿಗ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ (ಪಿಹೆಚ್ ಡಿ ಸಂಶೋಧನಾ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೯.

ರವಿ ವಿ, ಗಿರಿಜನುಲ ಜೀವಿತ ರೇಖಾ ಚಿತ್ರಾಲು-ಅನುಭವಗಾಥಲು, (ಎಂ.ಫಿಲ್. ಸಂಶೋಧನಾ ಪ್ರಬಂಧ), ಹೈದ್ರಾಬಾದ ವಿಶ್ವವಿದ್ಯಾಲಯ, ೨೦೦೨.

ಸಣ್ಣರಾಮ, ಲಂಬಾಣಿ ಸಂಸ್ಕೃತಿ, ಡಾ.ಸಣ್ಣರಾಮ ರೀಡರ್, ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾನಿಲಯ ಶಂಕರಘಟ್ಟ, ೧೯೯೯.

ಶ್ರೀನಿವಾಸ ಎಲ್, ಪರಿವರ್ತನೆಯ ಹಾದಿಯಲ್ಲಿ ಬುಡಕಟ್ಟು ಸಮಾಜಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಉಮೇಶ ಕೆ, ಕರ್ನಾಟಕ ಮೇದ ಬುಡಕಟ್ಟಿನ ಸಮಾಜಶಾಸ್ತ್ರೀಯ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೧

Hutton J H, Caste in India, Oxford University press Bombay, 1946.

Thurston E and Rangachari K: Caste and Tribe of Southern India, Vol-4 Asian Educational Services New Delhi, Madras, 1909.

ಅಧ್ಯಾಯ ಐದು

## ಲಂಬಾಣಿಗರ ಆರ್ಥಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು

೫.೧. ಲಂಬಾಣಿಗರ ಜನಸಂಖ್ಯೆ

೫.೨. ವಯೋಗುಂಪುವಾರು ಜನಸಂಖ್ಯಾ ವಿವರ

೫.೩. ಲಿಂಗಾನುಪಾತದ ವಿವರ

೫.೪. ಮನೆಗಳ ಮಾದರಿಗಳ ವಿವರ

೫.೫. ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳು

೫.೬. ಲಂಬಾಣಿಗರು ಹೊಂದಿರುವ ಪಶುಸಂಪತ್ತು

೫.೭. ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳು

೫.೮. ಲಂಬಾಣಿಗರ ಶೈಕ್ಷಣಿಕ ಸ್ಥಿತಿಗತಿ

### ಅಧ್ಯಾಯ - ೫

# ಲಂಬಾಣಿಗರ ಆರ್ಥಿಕ ಅಂಶಗಳ ತೌಲನಿಕ ಸ್ಥಿತಿಗತಿಗಳು

ಒಂದು ಪ್ರದೇಶದ ಆರ್ಥಿಕ ಪ್ರಗತಿಯನ್ನಾಗಲೀ, ಆರ್ಥಿಕ ಪ್ರವೃತ್ತಿಯನ್ನಾಗಲೀ ಅಧ್ಯಯನಿಸ ಬೇಕಾದಲ್ಲಿ "ಅಲ್ಲಿನ ನೈಸರ್ಗಿಕ ಮತ್ತು ಆರ್ಥಿಕ ಸಂಪನ್ಮೂಲಗಳು, ಮಾನವ ಶಕ್ತಿಯ ಬಳಕೆ, ಕೈಗಾರೀಕರಣದ ಸಾಧ್ಯತೆಗಳು, ವ್ಯಾಪಾರ ವಾಣಿಜ್ಯದ ಪ್ರಗತಿ, ಮಾರುಕಟ್ಟೆಗಳ ಸೌಲಭ್ಯ, ಆಮದು ರಫ್ತುಗಳು, ಉದ್ಯೋಗಾವಕಾಶಗಳು ಮೊದಲಾದವುಗಳ ಜೊತೆಗೆ ಸಂಘಟಿತ ಮತ್ತು ಅಸಂಘಟಿತ ಹಣಕಾಸು ಸಂಸ್ಥೆಗಳು, ಸಾರಿಗೆ ಸೌಲಭ್ಯ, ಸಂಪರ್ಕ ಸಾಧನಗಳು ಮುಂತಾದವುಗಳ ಸೌಲಭ್ಯಗಳನ್ನು ಅವಲೋಕಿಸಬೇಕಾಗುತ್ತದೆ"(ಪಾಟೀಲ ಎಮ್ ಬಿ: ೧೯೯೭:೩೫೦). ಆರ್ಥಿಕ ಬೆಳವಣಿಗೆಯು ಉತ್ಪಾದನೆಯ ಹೆಚ್ಚಳವನ್ನು ಸೂಚಿಸುತ್ತದೆ. ಸರಕು ಮತ್ತು ಸೇವೆಗಳ ಉತ್ಪಾದನೆಯು ವೇಗವಾಗಿ ಹೆಚ್ಚುವುದಕ್ಕೆ ಆರ್ಥಿಕ ಬೆಳವಣಿಗೆ ಎಂದು ಕರೆಯುತ್ತಾರೆ. "ದೀರ್ಘಕಾಲದವರೆಗೆ ನೈಜ ತಲಾದಾಯವು ಹೆಚ್ಚಾಗುವುದನ್ನು ಆರ್ಥಿಕ ಬೆಳವಣಿಗೆ ಎಂದು ಕರೆಯಲಾಗುತ್ತದೆ"(ಶಿಶಿಲ ಪ್ರಭಾಕರ: ೨೦೦೯:೦೧). ಹೀಗೆ ಆರ್ಥಿಕ ಬೆಳವಣಿಗೆಯನ್ನು ವ್ಯಾಖ್ಯಾನಿಸಲಾಗುತ್ತದೆ.

ಆರ್ಥಿಕ ಅಭಿವೃದ್ಧಿಯು ಜನರ ಜೀವನ ಮಟ್ಟದ ಉತ್ಕರ್ಷವನ್ನು ತಿಳಿಸುವ ಪರಿಕಲ್ಪನೆಯಾಗಿದೆ. ಆಹಾರ, ಉಡುಗೆ-ತೊಡುಗೆ ಮತ್ತು ವಸತಿ ಮಾನವನ ಮೂಲಭೂತ ಅವಶ್ಯಕತೆಗಳಾಗಿವೆ. ಹಿಂದುಳಿದ ಪ್ರದೇಶಗಳಲ್ಲಿ ಈ ಕನಿಷ್ಠ ಅಗತ್ಯಗಳನ್ನು ಈಡೇರಿಸುವುದು ಬಹುದೊಡ್ಡ ಸಮಸ್ಯೆಯಾಗಿರುತ್ತದೆ. ಈ ಮೂಲಭೂತ ಅವಶ್ಯಕತೆಗಳನ್ನು ಗುಣಮಟ್ಟದೊಂದಿಗೆ ಈಡೇರಿಸಿ, ಜೀವನಮಟ್ಟವನ್ನು ಹೆಚ್ಚಿಸುವುದೇ ಆರ್ಥಿಕ ಅಭಿವೃದ್ಧಿಯಾಗಿದೆ. "ವಿಶ್ವಸಂಸ್ಥೆಯ ತಜ್ಞರ ಸಮಿತಿಯ ಪ್ರಕಾರ ಅಭಿವೃದ್ಧಿಯು ಮಾನವನ

ಭೌತಿಕ ಅಗತ್ಯಗಳನ್ನು ಮಾತ್ರವಲ್ಲದೆ, ಅವನ ಸಾಮಾಜಿಕ ಜೀವನ ಸ್ಥಿತಿಯನ್ನೂ ಒಳಗೊಂಡಿರುತ್ತದೆ. ಹಾಗಾಗಿ ಅಭಿವೃದ್ಧಿ ಎಂದರೆ ಆರ್ಥಿಕ ಬೆಳವಣಿಗೆ ಮಾತ್ರವಾಗಿರುವುದಿಲ್ಲ, ಸಾಮಾಜಿಕ, ಸಾಂಸ್ಕೃತಿಕ, ಸಾಂಸ್ಥಿಕ ಮತ್ತು ಆರ್ಥಿಕ ಬದಲಾವಣೆಯೂ ಆಗಿರುತ್ತದೆ"(ಅದೇ ಪುಟ:೪). ಎಂದು ಅಭಿಪ್ರಾಯ ಪಟ್ಟಿದ್ದಾರೆ.

"ಆರ್ಥಿಕ ಬೆಳವಣಿಗೆಯು ಬಂಡವಾಳ, ಶ್ರಮಶಕ್ತಿ, ಉಳಿತಾಯ ಮತ್ತು ಹೂಟೆ, ಅನುಭೋಗ, ಉದ್ಯಮದ ಸ್ಥಿತಿಗತಿಗಳು ಮೊದಲಾದ ಪರಿಣಾಮಾತ್ಮಕ ಅಂಶಗಳತ್ತ ಬೆಳಕು ಚೆಲ್ಲುತ್ತದೆ" (ಕಿಷ್ಣಪ್ಪ ಬಿ:೨೦೦೭:೧೯). ಮಾನವನ ದೈನಂದಿನ ಚಟುವಟಿಕೆಗಳಲ್ಲಿ ಆರ್ಥಿಕ ಚಟುವಟಿಕೆಗಳು ಜೀವನದ ಇಂಧನವಾಗಿ ಕಾರ್ಯ ನಿರ್ವಹಿಸುತ್ತವೆ. ಆರ್ಥಿಕ ಬೆಳವಣಿಗೆ ಪ್ರಕ್ರಿಯೆಯಲ್ಲಿ ಉತ್ತಮ ಬೆಳವಣಿಗೆ ಸಾಧಿಸಲು ಸಮಾಜದ ಎಲ್ಲಾ ವರ್ಗದ ಜನರ ಶ್ರಮ ಪ್ರಮುಖವಾಗಿದೆ. ವಿಶೇಷವಾಗಿ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸಣ್ಣ ರೈತರು ಮತ್ತು ಸಮಾಜದ ತಳಮಟ್ಟದ ಸಮುದಾಯಗಳು ಆರ್ಥಿಕ ಚಟುವಟಿಕೆಗಳಿಂದ ದೂರವಿದ್ದರೆ ಅಂದರೆ ಪ್ರಗತಿಪರ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗದಿದ್ದರೆ ಅವರುಗಳ ಆರ್ಥಿಕ ಪ್ರಗತಿಯು ಕುಂಠಿತಗೊಳ್ಳುತ್ತದೆ. ಇದರಿಂದ ಬಂಡವಾಳ ಹೂಡಿಕೆ ಕಡಿಮೆಯಾಗಿ, ಸಮಾಜದ ಆಂತರಿಕ ಆರ್ಥಿಕ ಬೆಳವಣಿಗೆ ಪ್ರಕ್ರಿಯೆಯು ಕುಂಠಿತಗೊಳ್ಳುತ್ತದೆ. ಆದ್ದರಿಂದ ಆರ್ಥಿಕ ಅಭಿವೃದ್ಧಿಯಲ್ಲಿ ಸಮಾಜದ ಎಲ್ಲಾ ಜನರ ಪಾತ್ರ ವಿಶೇಷವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರ ಪಾತ್ರ ಪ್ರಮುಖವಾಗಿದೆ.

"ವಿಶ್ವಸಂಸ್ಥೆಯ ಸಹಸ್ರಮಾನದ ಅಭಿವೃದ್ಧಿಯ ಗುರಿ ಸಮಾನತೆಯೊಂದಿಗೆ ಬೆಳವಣಿಗೆಯನ್ನು ಸಾಧಿಸುವುದಾಗಿದೆ. ಇಂದಿಗೂ ಸಹ ಕೆಲವು ಜನರು ಮಾತ್ರ ಬೆಳವಣಿಗೆಯ ಲಾಭವನ್ನು ಅನುಭವಿಸುತ್ತಿದ್ದಾರೆ. ಪ್ರಪಂಚದಾದ್ಯಂತ ಇನ್ನೂ ಕೆಲವರು ಬಡತನದ ವಿಷವರ್ತುಲದಲ್ಲಿ ವಾಸಿಸುತ್ತಿದ್ದಾರೆ" (ರೀನಾ ಸೊನೊವಾಲ ಕೌಲಿ:೨೦೧೨:೮). ಜಾಗತೀಕರಣ ಮತ್ತು ಉದಾರೀಕರಣದ ನೀತಿ ಅಡಿಯಲ್ಲಿ ಕೆಲವರು ಆರ್ಥಿಕವಾಗಿ ಬಲಿಷ್ಠರಾದರೆ, ಮತ್ತೆ ಕೆಲವರು ದುರ್ಬಲರಾಗಿರುವಂತಹ ವಿರೋಧವಾದ ಸಂಗತಿಗಳು ಕಂಡುಬರುತ್ತವೆ. ಪ್ರಪಂಚದಾದ್ಯಂತ ವಂಚಿತ ಸಮುದಾಯದವರು, ವಿಶೇಷವಾಗಿ ಬುಡಕಟ್ಟು ಸಮುದಾಯಗಳು ಸಮಾಜದ ಮುಖ್ಯವಾಹಿನಿಗೆ ಬಂದಾಗ ಮಾತ್ರ ಸುಸ್ಥಿರ ಬೆಳವಣಿಗೆಯು ಸಾಧ್ಯವಾಗುತ್ತದೆ. ಏಕೆಂದರೆ ಈ ಸಮುದಾಯದವರ ಬಡತನ ಬೆಳವಣಿಗೆಗೆ ಮುಖ್ಯ ತೊಡಕಾಗಿದೆ. "ತೆಂಡೂಲ್ಕರ ಸಮಿತಿಯ ಪ್ರಕಾರ ಭಾರತದಲ್ಲಿ ಶೇ. ೩೭.೨ ರಷ್ಟು ಜನರು ಬಡತನದ ರೇಖೆಯಿಂದ ಕೆಳಗೆ ಜೀವಿಸುತ್ತಿದ್ದಾರೆ. ಭಾರತದ ರಿಸರ್ವ ಬ್ಯಾಂಕ ಪ್ರಕಾರ ಭಾರತದಲ್ಲಿ ಶೇ. ೪೧ ರಷ್ಟು ಜನರು ಬ್ಯಾಂಕಿನ ಸೇವೆಗಳನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಇವರ ಪ್ರಮಾಣ ಶೇ. ೬೧ ಮತ್ತು ಶೇ. ೪೧ ರಷ್ಟು ಕ್ರಮವಾಗಿ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ನೋಡಬಹುದು" (ಅದೇ: ಪುಟ: ೮). ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಸಮಾನತೆಯೊಂದಿಗೆ ಅಭಿವೃದ್ಧಿ ಸಾಧಿಸಲು ಸಮಾಜದ ಪ್ರತಿಯೊಂದು ತಳಮಟ್ಟದ ಸಮುದಾಯದ ಜನರು ಪಾಲ್ಗೊಳ್ಳಬೇಕು. ಬಡ ಮತ್ತು ತಳಮಟ್ಟದ

ಸಮುದಾಯಗಳು ಆರ್ಥಿಕ ಕಾರ್ಯಚಟುವಟಿಕೆಗಳಲ್ಲಿ ಹೆಚ್ಚಿನ ಪ್ರಮಾಣದ ಪಾಲ್ಗೊಳ್ಳುವಿಕೆಯು ಬಡತನ ನಿವಾರಣೆಯ ಜೊತೆಗೆ ಸಾಮಾಜಿಕ ಒಗ್ಗಟ್ಟನ್ನು ಸೂಚಿಸುತ್ತದೆ. ಈ ರೀತಿಯ ಪ್ರಯತ್ನಗಳು ಆರ್ಥಿಕ ಬೆಳವಣಿಗೆಯ ಅವಿಭಾಜ್ಯ ಅಂಗಗಳಾಗಿವೆ. ಇದು ಸಮಾಜದ ದುರ್ಬಲ ವರ್ಗದವರನ್ನು ಸಶಕ್ತೀಕರಣಗೊಳಿಸುತ್ತದೆ. ಈ ರೀತಿಯ ಬೆಳವಣಿಗೆಯು ಬಡ ಮತ್ತು ಶ್ರೀಮಂತ ವರ್ಗದವರ ಮಧ್ಯದ ಅಂತರವನ್ನು ಹೋಗಲಾಡಿಸುವುದರ ಜೊತೆಗೆ ಗ್ರಾಮ ಮತ್ತು ನಗರಗಳ ಮಧ್ಯೆ ಉತ್ತಮ ಸಂಪರ್ಕವನ್ನೇರ್ಪಡಿಸುತ್ತದೆ.

ತಳಮಟ್ಟದ ಸಮುದಾಯಗಳ ಆರ್ಥಿಕ ಅಭಿವೃದ್ಧಿಯಲ್ಲಿ ಹಣ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ಹಿಂದುಳಿದ ವರ್ಗದವರು, ಕಡಿಮೆ ಆದಾಯ ಹೊಂದಿರುವವರು ಮತ್ತು ಸಮಾಜದ ಮುಖ್ಯವಾಹಿನಿಯಿಂದ ಹೊರಗುಳಿದವರು ಆರ್ಥಿಕ ಪ್ರಾಮುಖ್ಯತೆಯನ್ನು ಪಡೆಯಲು ಅವರಿಗೆ ಹಣಕಾಸಿನ ಸೌಲಭ್ಯವನ್ನು ಒದಗಿಸುವುದು ಇಂದಿನ ತುರ್ತು ಅಗತ್ಯವಾಗಿದೆ.

ಪ್ರಪಂಚದಲ್ಲಿ ಭಾರತ ರಾಜಕೀಯ ದೃಷ್ಟಿಯಿಂದ ಅತಿ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವಾಗಿದೆ ಆದರೆ ಆರ್ಥಿಕವಾಗಿ ಹಿಂದುಳಿದ ರಾಷ್ಟ್ರವಾಗಿದೆ. ವಿಶೇಷ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಜೀವನವನ್ನಳವಡಿಸಿಕೊಂಡಿರುವ ಲಂಬಾಣಿಗರು ಆರ್ಥಿಕವಾಗಿ ತೀರಾ ಹಿಂದುಳಿದಿದ್ದಾರೆ. "ಸ್ವಾತಂತ್ರ್ಯ ನಂತರ ಲಂಬಾಣಿಗರಿಗೆ ರಾಜಕೀಯ ಸ್ವಾತಂತ್ರ್ಯ ದೊರೆತರೂ ಆರ್ಥಿಕ ಸ್ವಾತಂತ್ರ್ಯ ದೂರವಾಗಿಯೇ ಉಳಿದಿದೆ. ಆರ್ಥಿಕ ಸ್ವಾತಂತ್ರ್ಯವಿಲ್ಲದೇ ರಾಜಕೀಯ ಸ್ವಾತಂತ್ರ್ಯ ಫಲ ನೀಡಲಾರದು"(ನಾಯಕ ಡಿ ಬಿ:೨೦೦೦:೧೪). ಚಿಂತಕರ ಈ ಮಾತು ಲಂಬಾಣಿಗರ ಶೋಚನೀಯ ಆರ್ಥಿಕ ಸ್ಥಿತಿಯನ್ನು ಎತ್ತಿ ತೋರಿಸುತ್ತದೆ.

ಮೂಲತಃ ಒಂದು ಅಲೆಮಾರಿ ಸಮುದಾಯವಾಗಿದ್ದ ಲಂಬಾಣಿಗರು ಪ್ರಾರಂಭದಲ್ಲಿ ಪಶುಸಂಗೋಪನೆಯನ್ನೇ ತಮ್ಮ ಮೂಲವೃತ್ತಿಯನ್ನಾಗಿಸಿಕೊಂಡು ನಂತರ ಒಂದೆಡೆ ನೆಲೆನಿಂತು ವಾಸಿಸಲು ಪ್ರಾರಂಭಿಸಿದಾಗಿನಿಂದ ಪಶುಸಂಗೋಪನೆಯ ಜೊತೆಗೆ ವ್ಯವಸಾಯ ಮಾಡುವುದನ್ನು ರೂಢಿಸಿಕೊಂಡರು. ಪ್ರಸ್ತುತದಲ್ಲಿ ಬಹುತೇಕ ಲಂಬಾಣಿಗರು ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡುಬರುತ್ತದೆ. ಇವರು ಕಡಿಮೆ ಪ್ರಮಾಣದ ಜಮೀನನ್ನು ಹೊಂದಿರುವುದರ ಜೊತೆಗೆ ಕೃಷಿಯಲ್ಲಿ ವೈಜ್ಞಾನಿಕ ಸಾಧನ ಸಲಕರಣೆಗಳ ಬಳಕೆ ಮಾಡದಿರುವುದರಿಂದ ಕೃಷಿಯಿಂದ ಬರುವ ಅಲ್ಪ ಆದಾಯದಲ್ಲಿ ಕೌಟುಂಬಿಕ ಖರ್ಚುವೆಚ್ಚಗಳನ್ನು ನಿಭಾಯಿಸಲಾಗದೇ ತಾಂಡಾ ಸಮೀಪದ ಗ್ರಾಮಗಳ ಜಮೀನ್ದಾರರಲ್ಲಿ ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಈ ಸಮುದಾಯದ ಹೆಚ್ಚಿನ ಕುಟುಂಬಗಳು ಕೃಷಿ ಕಾರ್ಮಿಕತೆಯನ್ನೇ ಅವಲಂಬಿಸಿ ಜೀವನ ನಡೆಸುತ್ತಿದ್ದಾರೆ. ಹೆಚ್ಚಿನ ಲಂಬಾಣಿಗರು ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿದ್ದು, ಇವರಲ್ಲಿಯ ಆದಾಯ ಮತ್ತು ಸಂಪತ್ತುಗಳ ಅಸಮಾನ ಹಂಚಿಕೆಯು ಉಳ್ಳವರು ಇಲ್ಲದವರು ಎಂಬ ವರ್ಗವನ್ನು ಸೃಷ್ಟಿಸಿದೆ. ಇವರ ಬಡತನ ಮತ್ತು ಆರ್ಥಿಕ ಅಸಮಾನತೆಗಳು ಇವರ ಆರ್ಥಿಕ ಸ್ವಾತಂತ್ರ್ಯವನ್ನು ಕುಂಠಿತಗೊಳಿಸಿವೆ.

ಲಂಬಾಣಿಗರ ವಾಸಸ್ಥಾನಗಳಾದ ತಾಂಡಾಗಳು ಬೆಟ್ಟ, ಗುಡ್ಡ, ನದಿ, ಕಣಿವೆ, ಮತ್ತು ಅರಣ್ಯ ಪ್ರದೇಶಗಳಿಗೆ ಹತ್ತಿರವಾಗಿರುವುದರಿಂದ ಇವರ ಆರ್ಥಿಕ ಚಟುವಟಿಕೆಗಳು ಕೂಡ ಪ್ರಕೃತಿಯವಲಂಬಿತ ಚಟುವಟಿಕೆಗಳಾಗಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಅರಣ್ಯದಲ್ಲಿರುವ ಕಟ್ಟಿಗೆಗಳನ್ನು ಕಡಿದು ಸೌದೆಗಳಾಗಿ ಮಾರುವುದು, ಪ್ರಾಕೃತಿಕವಾಗಿ ದೊರೆಯುವ ಹಣ್ಣುಗಳಾದ ಬಾರಿಹಣ್ಣು, ಸೀತಾಫಲ, ಕ್ಯಾರಹಣ್ಣು ಮತ್ತು ಜೇನು ಮಾರಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಲಂಬಾಣಿಗರು ಪ್ರಾಚೀನ ಕಾಲದಿಂದಲೂ ಸ್ವತಂತ್ರ ಮತ್ತು ಸ್ವಯಂ ಪರಿಪೂರ್ಣ ಬದುಕನ್ನು ಕಟ್ಟಿಕೊಂಡಿದ್ದರು. ಬ್ರಿಟಿಷರ ಅಪರಾಧಿ ಬುಡಕಟ್ಟು ಕಾಯ್ದೆಯಿಂದಾಗಿ ಹಾಗೂ ಅವರು ಪ್ರಾರಂಭಿಸಿದ ರೈಲ್ವೆ ಮತ್ತು ಇತರ ಸಂಪರ್ಕ ಸಾಧನಗಳಿಂದಾಗಿ ತಮ್ಮ ವ್ಯಾಪಾರ ವೃತ್ತಿಯನ್ನು ತೊರೆದ ಪರಿಣಾಮವಾಗಿ ಬಡತನದ ಜೀವನವನ್ನು ಅನುಭವಿಸಬೇಕಾಯಿತು. ಪ್ರಸ್ತುತ ದಿನಗಳಲ್ಲಿ ಇವರು ತಮ್ಮ ಬಡತನದಿಂದ ಹೊರಬರಲು ಭಿನ್ನ ಭಿನ್ನ ರೀತಿಯ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿ ಕೊಂಡಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ತರಕಾರಿಗಳ ಮಾರಾಟ, ಕಿರಾಣಿ ಅಂಗಡಿ ಗಳನ್ನಿಡುವುದು, ಹಾಲು ಮತ್ತು ಹಾಲಿನ ಉತ್ಪನ್ನಗಳ ಮಾರಾಟ, ತಾಂಡಾಗಳಲ್ಲಿಯೇ ಹೋಟೆಲಗಳ ನಿರ್ವಹಣೆ, ತಾಂಡಾಗಳಿಂದ ಗ್ರಾಮ ಮತ್ತು ನಗರಗಳಿಗೆ ಸಂಪರ್ಕ ಕಲ್ಪಿಸಲು ಅಟೋರಿಕ್ಷಾಗಳ ಚಾಲನೆ, ರಸ್ತೆ ಡಾಂಬರೀಕರಣ, ಕಟ್ಟಡಗಳ ನಿರ್ಮಾಣದಲ್ಲಿ ಕೂಲಿ ಕಾರ್ಮಿಕರಾಗಿ ಹೀಗೆ ವಿವಿಧ ಬಗೆಯ ಕಾರ್ಯಗಳಲ್ಲಿ ತೊಡಗಿಕೊಂಡು ಬದಲಾದ ಆರ್ಥಿಕ ಪರಿಸ್ಥಿತಿಯೊಂದಿಗೆ ಇವರ ಜೀವನ ಕ್ರಮವೂ ಬದಲಾವಣೆಗೆ ಒಳಪಡುತ್ತಿದೆ. ಇಂದು ಸರ್ಕಾರದಿಂದ ನಿರ್ಮಿಸಿಕೊಡುತ್ತಿರುವ ಅಂಬೇಡ್ಕರ್ ಆಶ್ರಯ ಮನೆ, ಜನತಾ ಮನೆಗಳ ಫಲಾನುಭವಿಗಳಾದ ಇವರಲ್ಲಿ ಕೆಲವರು ಈ ಯೋಜನೆಯ ಲಾಭ ಪಡೆದು ಮನೆಗಳನ್ನು ಪಡೆದುಕೊಂಡಿದ್ದಾರೆ. ಇನ್ನೂ ಕೆಲವರು ಆರ್ ಸಿ ಸಿ ಮನೆಗಳನ್ನು ಕಟ್ಟಿಕೊಂಡಿದ್ದಾರೆ.

ತಾಂಡಾಗಳಲ್ಲಿ ಸಾಮಾನ್ಯವಾಗಿ ಈ ಹಿಂದೆ ಗುಡಿಸಲು ಮನೆಗಳಿದ್ದವು. ಇವರು ಮನೆ, ವೇಷ ಭೂಷಣ ಹಾಗೂ ಸಂಸ್ಕೃತಿಗಳೊಂದಿಗೆ ಸ್ವತಂತ್ರ ಜೀವನವನ್ನು ನಡೆಸುತ್ತಿದ್ದರು. ಆದರೆ ಬದಲಾದ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ ಇವರ ಉದ್ಯೋಗವನ್ನು ಕಸಿದುಕೊಂಡು ಜೀವನ ಕ್ರಮದಲ್ಲಿ ಬದಲಾವಣೆ ಮಾಡಿಕೊಳ್ಳುವ ಅನಿವಾರ್ಯತೆಯನ್ನು ಹುಟ್ಟುಹಾಕಿತು. ಜಾಗತೀಕರಣದ ಪ್ರಭಾವದಿಂದ ಹೊಸ ಬದುಕಿಗೆ ಹೊಂದಿಕೊಳ್ಳಬೇಕಾಗಿರುವುದು ಅನಿವಾರ್ಯವಾಗಿರುವುದರಿಂದ ತಮ್ಮ ಮೂಲ ಕಸುಬುಗಳ ಬದಲಾಗಿ ಆಧುನಿಕವಾದ ಹಲವು ಕಸುಬುಗಳನ್ನು ಅವಲಂಬಿಸಿದ್ದಾರೆ. ಶಿಕ್ಷಣವನ್ನು ಪಡೆದಿರುವ ಕೆಲವರು ಸರ್ಕಾರಿ ಉದ್ಯೋಗ ಮಾಡುತ್ತಿದ್ದಾರೆ. ಅಧ್ಯಯನ ಕ್ಷೇತ್ರಕ್ಕೆ ಒಳಪಟ್ಟ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ತಾಂಡಾಗಳಲ್ಲಿಯ ಲಂಬಾಣಿಗರಲ್ಲಿ ಬಹುಪಾಲು ಜನರು ಕೃಷಿ ಮತ್ತು ಕೃಷಿಕೂಲಿಯನ್ನೇ ತಮ್ಮ ಮುಖ್ಯ ಕಸುಬನ್ನಾಗಿಸಿಕೊಂಡು ಜೀವಿಸುತ್ತಿದ್ದಾರೆ. ವ್ಯವಸಾಯಗಾರರಲ್ಲಿ ಬಹುಪಾಲು ಜನರು ಒಣ ಬೇಸಾಯಗಾರರು ಮತ್ತು ಅತಿಸಣ್ಣ ಹಿಡುವಳಿದಾರ ರಾಗಿದ್ದಾರೆ. ಹೆಚ್ಚಿನ ಪ್ರಮಾಣದ ಲಂಬಾಣಿಗರು ಭೂರಹಿತ ಕಾರ್ಮಿಕರಾಗಿ ದುಡಿಯುತ್ತಿರುವುದು

ಕ್ಷೇತ್ರಾಧ್ಯಯನದಿಂದ ಕಂಡುಬಂದಿದೆ. ನೀರಾವರಿ ಜಮೀನು ಹೊಂದಿದವರು ಅತಿವಿರಳ. ಚಿಕ್ಕ ಹಿಡುವಳಿದಾರರಲ್ಲಿ ಕೆಲವರು ತಮ್ಮ ಭೂಮಿಯನ್ನು ಬೇರೆಯವರಿಗೆ ಗೇಣಿಗೆ ನೀಡಿದರೆ, ಕೆಲವು ಭೂರಹಿತರು ಪರರ ಜಮೀನನ್ನು ಗೇಣಿಗೆ ಪಡೆದು ಕೃಷಿ ಹಾಗೂ ಕೃಷಿಕೂಲಿಯನ್ನು ಮಾಡುತ್ತಾ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ.

ಕ್ಷೇತ್ರಾಧ್ಯಯನ ಮಾಡಿರುವ ರಿಮೋಟ್ ತಾಂಡಾ, ಗ್ರಾಮ ಹತ್ತಿರದ ತಾಂಡಾ ಹಾಗೂ ರಸ್ತೆ ಹತ್ತಿರದ ತಾಂಡಾಗಳಲ್ಲಿ ಕೆಲವರು ಮಾತ್ರ ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದು, ಬಹುಸಂಖ್ಯಾತರು ಆರ್ಥಿಕವಾಗಿ ಹಿಂದುಳಿದಿದ್ದಾರೆ. ಕುಟುಂಬದ ಸದಸ್ಯರೆಲ್ಲಾ ದುಡಿದರೂ ಸಾಕಾಗದ ಸಮಯದಲ್ಲಿ ದುಡಿದಿದ್ದನ್ನು ಹೆಚ್ಚಾಗಿ ಕುಡಿತಕ್ಕೆ ವ್ಯಯಮಾಡುವುದರಿಂದ ಇವರ ಆರ್ಥಿಕ ಸ್ಥಿತಿ ಶೋಚನೀಯವಾಗಿದೆ.

ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಹೆಚ್ಚಾಗಿ ಕೃಷಿ, ಕೃಷಿಕೂಲಿ, ಗಾರೆ ಕೆಲಸ, ಸರ್ಕಾರಿ ಕೆಲಸ, ಖಾಸಗಿ ಕೆಲಸ ಮುಂತಾದ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರೆ, ಸೋಲಾಪುರ ಜಿಲ್ಲೆಯ ಲಂಬಾಣಿಗರು ಕೃಷಿ, ಕೃಷಿಕೂಲಿ, ರಸ್ತೆ ಡಾಂಬರೀಕರಣ, ಇಟ್ಟಿಗೆ ತಯಾರಿಕೆ, ಗಾರೆ ಕೆಲಸ, ಸಿಮೆಂಟ್ ಕೆಲಸ, ಕಟ್ಟಡ ನಿರ್ಮಾಣಗಳಲ್ಲಿ ಕೂಲಿ ಕೆಲಸ, ಹಮಾಲಿ ಕೆಲಸ, ಗುತ್ತಿಗೆ ಕೆಲಸ, ಜೆಸಿಬಿ ಡ್ರೈವರಗಳಾಗಿ, ಕೈಗಾರಿಕೆಗಳಲ್ಲಿ ಕೂಲಿಗಳಾಗಿ, ಸರ್ಕಾರಿ ಕೆಲಸ, ಖಾಸಗಿ ಕೆಲಸ ಮತ್ತು ಇತರೆ ಕೆಲಸಗಳಲ್ಲಿ ಕೂಡಾ ತೊಡಗಿಕೊಂಡಿದ್ದಾರೆ. ಹಾಗೆಯೇ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಕೃಷಿ, ಕೃಷಿಕೂಲಿ, ರಸ್ತೆ ಡಾಂಬರೀಕರಣ, ಇಟ್ಟಿಗೆ, ಗಾರೆ ಕೆಲಸ, ಗಣಿಗಳಲ್ಲಿ ಕೋರೆ ಕೆಲಸ, ಸರ್ಕಾರಿ ಕೆಲಸ, ಖಾಸಗಿ ಕೆಲಸ ಮತ್ತು ಇತರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಹೀಗೆ ಒಟ್ಟಿನಲ್ಲಿ ಬುಡಕಟ್ಟು ಅಲೆಮಾರಿ ಸಮುದಾಯಗಳಲ್ಲೊಂದಾದ ಲಂಬಾಣಿಗರು ಒಂದಲ್ಲ ಒಂದು ಬಗೆಯಲ್ಲಿ ಆಧುನಿಕತೆಯ ಸುಳಿಗೆ ಸಿಕ್ಕು ಆರ್ಥಿಕ ರೂಪಾಂತರಗಳಿಗೆ ಒಳಗಾಗುತ್ತಿದ್ದಾರೆ.

### ೫.೧. ಲಂಬಾಣಿಗರ ಜನಸಂಖ್ಯೆ

ಆರ್ಥಿಕಾಭಿವೃದ್ಧಿಯನ್ನು ಕುರಿತ ವಿಶ್ಲೇಷಣೆಯಲ್ಲಿ ಜನಸಂಖ್ಯೆಯ ಅಧ್ಯಯನವು ಪ್ರಮುಖವಾಗಿದ್ದು. ಅಭಿವೃದ್ಧಿ ಸಾಧನೆಗೆ ಅವಶ್ಯಕವಾಗಿರುವ ಅನೇಕ ಅಂಶಗಳಲ್ಲಿ ಮಾನವ ಸಂಪನ್ಮೂಲ ಎನಿಸಿಕೊಂಡಿರುವ ಜನಸಂಖ್ಯೆಗೆ ಅಗ್ರಸ್ಥಾನವಿದೆ. ಜನಸಂಖ್ಯೆಯು ಮೂಲಭೂತ ಉತ್ಪಾದನಾ ಸಾಮಗ್ರಿಯಾದ ಶ್ರಮಬಲ ವನ್ನು ಒದಗಿಸುವುದರ ಮೂಲಕ ಎಲ್ಲ ರೀತಿಯ ಉತ್ಪಾದನಾ ಚಟುವಟಿಕೆಗಳಿಗೆ ನೆರವಾಗುತ್ತದೆ. ನೈಸರ್ಗಿಕ ಸಂಪತ್ಸಾಧನಗಳು ಹೇರಳವಾಗಿದ್ದು ಬಂಡವಾಳದ ಕೊರತೆಯಿಂದ ದೇಶದಲ್ಲಿ ಇದರ ಅವಶ್ಯಕತೆಯನ್ನು ಎಷ್ಟು ಹೇಳಿದರೂ ಕಡಿಮೆಯೇ. ಇಂತಹ ದೇಶದಲ್ಲಿ ಸಂಪತ್ಸಾಧನಗಳನ್ನು ಪರಿಣಾಮಕಾರಿಯಾಗಿ ಕಡಿಮೆ ಉತ್ಪಾದನಾ ವೆಚ್ಚದಲ್ಲಿ ಬಳಸಿಕೊಂಡು ಕೊರತೆಯಿಂದಿರುವ ಬಂಡವಾಳಕ್ಕೆ ಬದಲಿಯಾಗಿ ಉತ್ಪಾದನಾ ಕ್ರಿಯೆಯಲ್ಲಿ ಪಾಲ್ಗೊಳ್ಳಲು ಜನಸಂಖ್ಯೆಯು ಅತ್ಯಾವಶ್ಯಕವಾಗಿದೆ. ಸರಕುಗಳ ಉತ್ಪಾದನ ಕ್ರಿಯೆ, ಉದ್ಯಮ ಸಂಘಟನೆ, ವಿವಿಧ ವೃತ್ತಿಗಳನ್ನು ಕೈಗೊಳ್ಳುವಿಕೆ ಇವೆಲ್ಲವುಗಳಿಗೂ ಜನಸಂಖ್ಯೆಯೇ ಮೂಲಾಧಾರ. ದೃಢಕಾಯರೂ, ಕಷ್ಟ ಸಹಿಷ್ಣುಗಳೂ, ಕುಶಲಮತಿಗಳೂ, ನಿಪುಣರು

ಆದ ಜನತೆ ಬೆಲೆ ಕಟ್ಟಲಾಗದ ಸಂಪತ್ತು. ಭಾರತದ ಆರ್ಥಿಕಾಭಿವೃದ್ಧಿಗೆ ಜನಸಂಖ್ಯೆ ವಿಪುಲವಾಗಿ ನೆರವಾಗುತ್ತಿದೆಯಾದರೂ ಇತ್ತೀಚಿನ ದಶಕಗಳಲ್ಲಿ ಅದರ ತೀವ್ರ ಬೆಳೆವಣಿಗೆಯು ಹಲವಾರು ಸಮಸ್ಯೆಗಳ ಉಗಮಕ್ಕೆ ಕಾರಣವಾಗಿದೆ. ೨೦೧೧ರ ಜನಗಣತಿಯ ಪ್ರಕಾರ ಭಾರತದ ಜನಸಂಖ್ಯೆ ೧೨೧ ಕೋಟಿ ಆಗಿದೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಕರ್ನಾಟಕ ರಾಜ್ಯದ ಜನಸಂಖ್ಯೆ ೨೦೧೧ರ ಪ್ರಕಾರ ೬,೧೦,೯೫,೨೯೭ ಇದ್ದು ಅದರಲ್ಲಿ ೩,೦೯,೬೬,೬೫೭ ಪುರುಷರು ಮತ್ತು ೩,೦೧,೨೮,೬೪೦ರಷ್ಟು ಮಹಿಳೆಯರ ಪ್ರಮಾಣವಿದೆ. ಮಹಾರಾಷ್ಟ್ರ ರಾಜ್ಯದ ಜನಸಂಖ್ಯೆ ೧೧,೨೩,೭೪,೩೩೩ರಷ್ಟಿದ್ದು, ೫,೮೨,೪೩,೦೫೬ರಷ್ಟು ಪುರುಷರು ಮತ್ತು ೫,೪೧,೩೧,೨೭೭ರಷ್ಟು ಮಹಿಳೆಯರ ಪ್ರಮಾಣವಿದೆ. ಹಾಗೂ ಆಂಧ್ರ ಪ್ರದೇಶ ರಾಜ್ಯದ ಜನಸಂಖ್ಯೆಯ ೮,೪೫,೮೦,೭೭೭ ಇದ್ದು ಇದರಲ್ಲಿ ೪,೨೪,೪೨,೧೪೬ ಪುರುಷರು, ೪,೨೧,೩೮,೬೩೧ರಷ್ಟು ಮಹಿಳೆಯರ ಪ್ರಮಾಣವಿರುವುದು ಗೋಚರವಾಗುತ್ತದೆ.

**ಕೋಷ್ಟಕ ೫.೧.೧ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಜನಸಂಖ್ಯೆಯ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ಗುಲಬರ್ಗಾ | ಹಾಗರಗಾ ತಾಂಡಾ | ೩೮ | ೧೧೫ | ೧೦೮ | ೨೨೩ |
| | ತೆಂಗಳಿ ತಾಂಡಾ | ೫೧ | ೧೨೪ | ೧೪೨ | ೨೬೬ |
| | **ರಿಮೋಟ್ ತಾಂಡಾಗಳು** | **೮೯** | **೨೩೯** | **೨೫೦** | **೪೮೯** |
| | ಹಿರುನಾಯಕ ತಾಂಡಾ | ೩೫ | ೧೩೭ | ೧೨೦ | ೨೫೭ |
| | ಮಳಖೇಡ ತಾಂಡಾ | ೩೬ | ೯೫ | ೯೯ | ೧೯೪ |
| | **ಗ್ರಾಮ ಹತ್ತಿರದ ತಾಂಡಾಗಳು** | **೭೧** | **೨೨೭** | **೨೧೯** | **೪೪೬** |
| | ಸಿಟಿಫಾರ್ಮ ತಾಂಡಾ | ೨೮ | ೧೧೯ | ೧೦೧ | ೨೨೦ |
| | ಜೈನಾಪುರ ತಾಂಡಾ | ೨೭ | ೯೫ | ೮೪ | ೧೭೯ |
| | **ರಸ್ತೆ ಹತ್ತಿರದ ತಾಂಡಾಗಳು** | **೫೫** | **೨೧೪** | **೧೮೫** | **೩೯೯** |
| **ಕರ್ನಾಟಕ ಗುಲಬರ್ಗಾ** | | **೨೧೫** | **೬೮೦** | **೬೫೪** | **೧೩೩೪** |

(ಮೂಲ: ಕ್ಷೇತ್ರಾಧ್ಯಯನ)

ಗುಲಬರ್ಗಾ ಜಿಲ್ಲೆಯ ಮೂರು ಪ್ರಕಾರದ ತಾಂಡಾಗಳಲ್ಲಿ ಒಟ್ಟು ೨೧೫ ಕುಟುಂಬಗಳು ಕಂಡುಬರುತ್ತಿದ್ದು, ಈ ಮೂರು ಪ್ರಕಾರದ ತಾಂಡಾಗಳ ಒಟ್ಟು ಜನಸಂಖ್ಯೆ ೧೩೩೪ ಇದೆ. ಜಿಲ್ಲೆಯ ರಿಮೋಟ್ ತಾಂಡಾಗಳನ್ನು ವೀಕ್ಷಿಸಿದಾಗ ಈ ತಾಂಡಾಗಳಲ್ಲಿ ೮೯ ಕುಟುಂಬಗಳಿದ್ದು, ಒಟ್ಟು ಜನಸಂಖ್ಯೆಯಲ್ಲಿ ಪುರುಷರು ಶೇ. ೩೫.೧೪, ಸ್ತ್ರೀಯರು ಶೇ. ೩೮.೨೨ರಷ್ಟು ಅಂದರೆ ಒಟ್ಟಾರೆ ಶೇ. ೩೬.೬೬ರಷ್ಟು ಜನಸಂಖ್ಯೆ ಇದೆ. ಇದರಲ್ಲಿ ಹಾಗರಗಾ ತಾಂಡಾದಲ್ಲಿ ೩೮ ಕುಟುಂಬಗಳಿದ್ದು, ಒಟ್ಟು ಜನಸಂಖ್ಯೆಯಲ್ಲಿ ಈ ತಾಂಡಾದ ಪ್ರಮಾಣ ಶೇ. ೧೬.೭೧ ಇದೆ. ಇದರಲ್ಲಿ ಪುರುಷರ

ಸ್ತಂಭಚಿತ್ರ ೫.೧.೧ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ನೆಲೆಗಳವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ




ಪ್ರಮಾಣ ಶೇ. ೧೬.೯೧ರಷ್ಟಾದರೆ, ಸ್ತ್ರೀಯರ ಪ್ರಮಾಣ ಶೇ. ೧೬.೫೧ರಷ್ಟಿದೆ. ಹಾಗೂ ತೆಂಗಳಿ ತಾಂಡಾದಲ್ಲಿ ಒಟ್ಟು ೫೧ ಕುಟುಂಬಗಳಿದ್ದು, ಇವುಗಳಲ್ಲಿ ಶೇ. ೧೮.೨೩ ಪುರುಷರ ಪ್ರಮಾಣವಾದರೆ, ಶೇ. ೨೧.೭೧ ಸ್ತ್ರೀಯರ ಪ್ರಮಾಣವಿದೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಈ ತಾಂಡಾದ ಪ್ರಮಾಣ ಶೇ.೧೯.೯೪ ರಷ್ಟಿರುವದು ಕಂಡುಬರುತ್ತದೆ..

ಗ್ರಾಮ ಹತ್ತಿರದ ತಾಂಡಾಗಳಲ್ಲಿ ಒಟ್ಟು ೭೧ ಕುಟುಂಬಗಳಿದ್ದು, ಇದರಲ್ಲಿ ಹೀರುನಾಯಕ ತಾಂಡಾ ೩೫ ಕುಟುಂಬಗಳನ್ನು, ಮಳಖೇಡ ತಾಂಡಾ ೩೬ ಕುಟುಂಬಗಳನ್ನು ಹೊಂದಿದೆ. ಹೀರುನಾಯಕ ತಾಂಡಾದ ಒಟ್ಟಾರೆ ಜನಸಂಖ್ಯೆಯು ಶೇ. ೧೮.೮೯ರಷ್ಟಿದ್ದು, ಇದರಲ್ಲಿ ಶೇ. ೧೯.೪೧ರಷ್ಟು ಪುರುಷರು, ಶೇ. ೧೮.೩೪ರಷ್ಟು ಸ್ತ್ರೀಯರಿದ್ದಾರೆ. ಹಾಗೂ ಮಳಖೇಡ ತಾಂಡಾದ ಒಟ್ಟು ಜನಸಂಖ್ಯೆ ಶೇ.೧೪.೫೪ ಇದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೧೩.೯೭, ಸ್ತ್ರೀಯರ ಪ್ರಮಾಣ ಶೇ. ೧೫.೧೩ರಷ್ಟಿದೆ. ಒಟ್ಟು ಜನಸಂಖ್ಯೆಯಲ್ಲಿ ಗ್ರಾಮ ಹತ್ತಿರದ ತಾಂಡಾದ ಜನಸಂಖ್ಯೆಯ ಪಾಲುದಾರಿಕೆ ಶೇ. ೩೩.೪೩ರಷ್ಟಿದ್ದು, ಇದರಲ್ಲಿ ಶೇ. ೩೩.೩೮ ಪುರುಷರು, ಶೇ. ೩೩.೪೮ ಸ್ತ್ರೀಯರ ಪ್ರಮಾಣವಿದೆ.

ರಸ್ತೆ ಹತ್ತಿರದ ತಾಂಡಾಗಳಲ್ಲಿ ಒಟ್ಟು ೫೫ ಕುಟುಂಬಗಳಿದ್ದು, ಇದರಲ್ಲಿ ಸಿಟಿ ಫಾರ್ಮ ತಾಂಡಾವು ೨೮ ಕುಟುಂಬಗಳನ್ನು, ಜೈನಾಪುರ ತಾಂಡಾವು ೨೭ ಕುಟುಂಬಗಳನ್ನು ಹೊಂದಿದೆ. ಸಿಟಿ ಫಾರ್ಮ ತಾಂಡಾದ ಒಟ್ಟಾರೆ ಜನಸಂಖ್ಯೆಯು ಶೇ. ೧೬.೪೯ ಇದ್ದು, ಇದರಲ್ಲಿ ಶೇ. ೧೭.೦೫ ರಷ್ಟು ಪುರುಷರು, ಶೇ. ೧೫.೪೪ರಷ್ಟು ಸ್ತ್ರೀಯರು ಕಂಡುಬರುತ್ತಾರೆ. ಜೈನಾಪುರ ತಾಂಡಾವು ಶೇ. ೧೩.೪೧ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ಶೇ. ೧೩.೯೭ರಷ್ಟು ಪುರುಷರು, ಶೇ. ೧೨.೮೪

ರಷ್ಟು ಸ್ತ್ರೀಯರ ಪ್ರಮಾಣವಿದೆ. ಒಟ್ಟು ಜನಸಂಖ್ಯೆಯಲ್ಲಿ ಈ ತಾಂಡಾದ ಜನಸಂಖ್ಯೆಯ ಪಾಲು ಶೇ. ೨೯.೯೧ರಷ್ಟಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೩೧.೪೭, ಸ್ತ್ರೀಯರ ಪ್ರಮಾಣ ಶೇ. ೨೮.೨೮ರಷ್ಟು ಇದೆ.

ಗುಲಬರ್ಗಾ ಜಿಲ್ಲೆಯ ಈ ಮೂರು ಪ್ರಕಾರದ ತಾಂಡಾಗಳ ಜನಸಂಖ್ಯೆಯನ್ನು ತುಲನೆಮಾಡಿ ನೋಡಿದಾಗ, ಗ್ರಾಮ ಹಾಗೂ ರಸ್ತೆ ಹತ್ತಿರದ ತಾಂಡಾಗಳಿಗಿಂತ, ರಿಮೋಟ್ ತಾಂಡಾದಲ್ಲಿ ಅತೀ ಹೆಚ್ಚಿನ ಜನಸಂಖ್ಯೆಯಿರುವುದು ಸ್ಪಷ್ಟವಾಗುತ್ತದೆ. ಈ ಮೂರು ಪ್ರಕಾರದ ತಾಂಡಾಗಳ ಪುರುಷರ ಒಟ್ಟು ಪ್ರಮಾಣವು ಶೇ. ೫೦.೯೭ರಷ್ಟಿದ್ದರೆ, ಮಹಿಳೆಯರ ಪ್ರಮಾಣವು ಶೇ. ೪೯.೦೨ರಷ್ಟಿದೆ.

**ಕೋಷ್ಟಕ ೫.೧೨ ಸೋಲಾಪುರ ಜಿಲ್ಲೆಯ ಲಂಬಾಣಿಗರ ಜನಸಂಖ್ಯೆಯ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ಸೊಲ್ಲಾಪುರ | ಮೇತ್ರಿ ತಾಂಡಾ | ೩೦ | ೧೨೩ | ೧೦೫ | ೨೨೮ |
| | ಕಾಮತ್ತಿ ಪಟ್ಟಲ್ಯಾ ತಾಂಡಾ | ೩೯ | ೧೪೭ | ೧೩೩ | ೨೮೦ |
| | **ರಿಮೋಟ್ ತಾಂಡಾಗಳು** | **೬೯** | **೨೭೦** | **೨೩೮** | **೫೦೮** |
| | ಬನ್ನ ತಾಂಡಾ | ೩೫ | ೧೦೮ | ೧೦೮ | ೨೧೬ |
| | ಯಮ್ಮೆ ತಾಂಡಾ | ೩೦ | ೯೪ | ೯೦ | ೧೮೪ |
| | **ಗ್ರಾಮ ಹತ್ತಿರದ ತಾಂಡಾಗಳು** | **೬೫** | **೨೦೨** | **೧೯೮** | **೪೦೦** |
| | ಸಾವತಖೇಡ ತಾಂಡಾ | ೧೫ | ೪೬ | ೩೨ | ೭೮ |
| | ಕುಮಟಾ ತಾಂಡಾ | ೩೮ | ೧೩೪ | ೯೯ | ೨೩೩ |
| | **ರಸ್ತೆ ಹತ್ತಿರದ ತಾಂಡಾಗಳು** | **೫೩** | **೧೮೦** | **೧೩೧** | **೩೧೧** |
| **ಮಹಾರಾಷ್ಟ್ರ ಸೊಲ್ಲಾಪುರ** | | **೧೮೭** | **೬೫೨** | **೫೬೭** | **೧೨೧೯** |

**ಸ್ತಂಭಚಿತ್ರ ೫.೧೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ನೆಲೆಗಳವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ**



ಸೋಲಾಪುರ ಜಿಲ್ಲೆಯ ಮೂರು ತಾಂಡಾಗಳ ಜನಸಂಖ್ಯೆ ಹಾಗೂ ಕುಟುಂಬಗಳ ಬಗೆಗೆ ಈ ಕೋಷ್ಟಕವು ಮಾಹಿತಿ ನೀಡುತ್ತದೆ. ಇಲ್ಲಿ ಒಟ್ಟು ೧೮೭ ಕುಟುಂಬಗಳಿದ್ದು, ಅದರಲ್ಲಿ ರಿಮೋಟ್, ತಾಂಡಾವು ೬೯, ಗ್ರಾಮ ಹತ್ತಿರದ ತಾಂಡಾವು ೬೫ ಹಾಗೂ ರಸ್ತೆ ಹತ್ತಿರದ ತಾಂಡಾವು ೫೩ ಕುಟುಂಬಗಳನ್ನು ಹೊಂದಿದೆ. ಈ ಜಿಲ್ಲೆಯ ರಿಮೋಟ್ ತಾಂಡಾಗಳನ್ನು ಗಣನೆಗೆ ತೆಗೆದುಕೊಂಡಾಗ, ಒಟ್ಟು ೬೯ ಕುಟುಂಬಗಳಿದ್ದು, ಮೇತ್ರಿ ತಾಂಡಾ ೩೦, ಕಾಮತ್ತಿ ಪಟ್ಟಲ್ಯಾ ತಾಂಡಾ ೩೯ ಕುಟುಂಬಗಳನ್ನು ಹೊಂದಿವೆ. ಮೇತ್ರಿ ತಾಂಡಾದ ಒಟ್ಟು ಜನಸಂಖ್ಯೆಯು ೨೨೮ರಷ್ಟಿದ್ದು, ಒಟ್ಟು ಜನಸಂಖ್ಯೆಯಲ್ಲಿ ಶೇ. ೧೮.೭೦ರಷ್ಟು ಪ್ರಮಾಣವನ್ನು ಹೊಂದಿದೆ. ಇದರಲ್ಲಿ ಶೇ. ೧೮.೮೬ರಷ್ಟು ಪುರುಷರು, ಶೇ. ೧೮.೫೧ರಷ್ಟು ಸ್ತ್ರೀಯರಿದ್ದಾರೆ. ಹಾಗೂ ಕಾಮತ್ತಿ ಪಟ್ಟಲ್ಯಾ ತಾಂಡಾದ ಒಟ್ಟು ಜನಸಂಖ್ಯೆಯು ಶೇ. ೨೨.೯೬ ಇದ್ದು, ಇದರಲ್ಲಿ ಶೇ. ೨೨.೫೪ರಷ್ಟು ಪುರುಷರು, ಶೇ. ೨೩.೪೫ರಷ್ಟು ಸ್ತ್ರೀಯರು ಇರುವುದು ಕಂಡುಬರುತ್ತದೆ. ಹೀಗಾಗಿ ಒಟ್ಟಾರೆ ಜನಸಂಖ್ಯೆಯಲ್ಲಿ ಈ ತಾಂಡಾಗಳ ಜನಸಂಖ್ಯೆಯ ಪಾಲು ಶೇ. ೪೧.೬೭ರಷ್ಟಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೪೧.೪೧ ಹಾಗೂ ಸ್ತ್ರೀಯರ ಪ್ರಮಾಣ ಶೇ. ೪೧.೯೭ರಷ್ಟಿದೆ.

ಗ್ರಾಮ ಹತ್ತಿರದ ತಾಂಡಾವನ್ನು ಅನುಲಕ್ಷಿಸಿದಾಗ ಒಟ್ಟು ೬೫ ಕುಟುಂಬಗಳಿರುವುದು ಕಂಡುಬರುತ್ತದೆ. ಇದರಲ್ಲಿ ಬನ್ನ ತಾಂಡಾ ೩೫, ಯಮ್ಮೈ ತಾಂಡಾ ೩೦ ಕುಟುಂಬಗಳನ್ನು ಹೊಂದಿದೆ. ಬನ್ನ ತಾಂಡಾದ ಜನಸಂಖ್ಯೆಯು ೨೧೬ ಇದ್ದು, ಒಟ್ಟಾರೆ ಜನಸಂಖ್ಯೆಯಲ್ಲಿ ಶೇ. ೧೭.೭೨ರಷ್ಟು ಪ್ರಮಾಣ ಹೊಂದಿದೆ. ಇದರಲ್ಲಿ ಪುರುಷರ ಪ್ರಮಾಣ ಶೇ. ೧೬.೫೬ ಹಾಗೂ ಸ್ತ್ರೀಯರ ಪ್ರಮಾಣ ಶೇ. ೧೯.೦೪ರಷ್ಟಿದೆ. ಹಾಗೂ ಯಮ್ಮೈ ತಾಂಡಾದ ಜನಸಂಖ್ಯೆಯು ಶೇ. ೧೫.೦೯ ರಷ್ಟಿದ್ದು, ಇದರಲ್ಲಿ ಶೇ. ೧೪.೪೧ರಷ್ಟು ಪುರುಷರು, ಶೇ. ೧೫.೮೭ರಷ್ಟು ಸ್ತ್ರೀಯರಿರುವುದು ಕಂಡುಬರುತ್ತದೆ. ಒಟ್ಟು ಜನಸಂಖ್ಯೆಯಲ್ಲಿ ಈ ತಾಂಡಾದ ಜನಸಂಖ್ಯೆಯ ಪ್ರಮಾಣ ಶೇ. ೩೨.೮೧ ರಷ್ಟಿದ್ದು, ಶೇ. ೩೦.೯೮ರಷ್ಟು ಪುರುಷರು, ಶೇ. ೩೪.೯೨ ಸ್ತ್ರೀಯರ ಪಾಲುದಾರಿಕೆ ಇದೆ.

ರಸ್ತೆ ಹತ್ತಿರದ ತಾಂಡಾವನ್ನು ವೀಕ್ಷಿಸಿದಾಗ ಇಲ್ಲಿ ಒಟ್ಟು ೫೩ ಕುಟುಂಬಗಳಿದ್ದು, ಸಾವತ ಖೇಡ ತಾಂಡಾ ೧೫, ಕುಮಟಾ ತಾಂಡಾ ೩೮ ಕುಟುಂಬಗಳನ್ನು ಹೊಂದಿವೆ. ಸಾವತ ಖೇಡ ತಾಂಡಾದ ಒಟ್ಟು ಜನಸಂಖ್ಯೆಯು ಶೇ. ೬.೪೦ರಷ್ಟಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೭.೦೫ ಹಾಗೂ ಸ್ತ್ರೀಯರ ಪ್ರಮಾಣ ಶೇ. ೫.೬೪ರಷ್ಟಿದೆ. ಹಾಗೆಯೇ ಕುಮಟಾ ತಾಂಡಾದ ಒಟ್ಟು ಜನಸಂಖ್ಯೆಯು ಶೇ. ೧೯.೧೧ ಇದ್ದು, ಇದರಲ್ಲಿ ಶೇ. ೨೦.೫೫ ರಷ್ಟು ಪುರುಷರು, ಮತ್ತು ಶೇ. ೧೭.೪೬ರಷ್ಟು ಮಹಿಳೆಯರ ಪ್ರಮಾಣವಿದೆ. ಆದ್ದರಿಂದ ಒಟ್ಟಾರೆ ಜನಸಂಖ್ಯೆಯಲ್ಲಿ ಈ ತಾಂಡಾದ ಜನಸಂಖ್ಯೆಯ ಪಾಲುದಾರಿಕೆ ಶೇ. ೨೫.೫೧ರಷ್ಟಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೨೭.೬೦, ಹಾಗೂ ಸ್ತ್ರೀಯರ ಪ್ರಮಾಣ ೨೩.೧೦ರಷ್ಟಿದೆ.

ರಿಮೋಟ್ ತಾಂಡಾ, ಗ್ರಾಮ ಹತ್ತಿರದ ತಾಂಡಾ, ಮತ್ತು ರಸ್ತೆ ಹತ್ತಿರದ ತಾಂಡಾಗಳ ಜನಸಂಖ್ಯೆಯನ್ನು ಹೋಲಿಕೆ ಮಾಡಿದಾಗ, ಗ್ರಾಮ ಹಾಗೂ ರಸ್ತೆ ಹತ್ತಿರದ ತಾಂಡಾಗಳಿಗಿಂತಲೂ, ರಿಮೋಟ್ ತಾಂಡಾವು ಅತಿ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿದೆ. ಈ ಎಲ್ಲ ತಾಂಡಾಗಳ ಪುರುಷರ ಪ್ರಮಾಣ ಶೇ. ೫೩.೪೮ರಷ್ಟಿದ್ದರೆ, ಮಹಿಳೆಯರ ಪ್ರಮಾಣ ಶೇ. ೪೬.೫೧ರಷ್ಟಿರುವುದು ಈ ಮೇಲಿನ ಅಂಕಿ ಅಂಶಗಳಿಂದ ಸ್ಪಷ್ಟವಾಗುತ್ತದೆ.

**ಕೋಷ್ಟಕ ೫.೧.೩ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಜನಸಂಖ್ಯೆಯ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ರಂಗಾರೆಡ್ಡಿ | ತೆಕುಲಬಾದ ತಾಂಡಾ | ೪೨ | ೧೫೬ | ೧೪೬ | ೩೦೨ |
| | ಮೋಚಮ್ಮಾ ತಾಂಡಾ | ೩೨ | ೧೨೪ | ೧೧೨ | ೨೩೬ |
| | **ರಿಮೋಟ್ ತಾಂಡಾಗಳು** | **೭೪** | **೨೮೦** | **೨೫೮** | **೫೩೮** |
| | ರಾಂಪುರ ತಾಂಡಾ | ೩೪ | ೮೫ | ೬೯ | ೧೫೪ |
| | ರಾಕೊಂಡಾ ತಾಂಡಾ | ೩೯ | ೧೩೪ | ೧೧೫ | ೨೪೯ |
| | **ಗ್ರಾಮ ಹತ್ತಿರದ ತಾಂಡಾಗಳು** | **೭೩** | **೨೧೯** | **೧೮೪** | **೪೦೩** |
| | ಕೊರಮ ತಾಂಡಾ | ೪೪ | ೧೩೫ | ೧೧೮ | ೨೫೩ |
| | ಸುಕ್ರಾನಾಯಕ ತಾಂಡಾ | ೫೦ | ೨೦೬ | ೧೪೭ | ೩೫೩ |
| | **ರಸ್ತೆ ಹತ್ತಿರದ ತಾಂಡಾಗಳು** | **೯೪** | **೩೪೧** | **೨೬೫** | **೬೦೬** |
| ಆಂಧ್ರ ಪ್ರದೇಶ ರಂಗಾರೆಡ್ಡಿ | | ೨೪೧ | ೮೪೦ | ೭೦೭ | ೧೫೪೭ |

**ಸ್ತಂಭಚಿತ್ರ ೫.೧.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ನೆಲೆಗಳವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ**



ಕೋಷ್ಟಕ ೫.೧.೩ರಲ್ಲಿ ರಂಗಾರೆಡ್ಡಿ ಜಿಲ್ಲೆಯ ಮೂರು ಪ್ರಕಾರದ ತಾಂಡಾಗಳ ಜನಸಂಖ್ಯೆ ಹಾಗೂ ಕುಟುಂಬಗಳ ಬಗೆಗೆ ಮಾಹಿತಿ ನೀಡುತ್ತದೆ. ಇಲ್ಲಿ ಒಟ್ಟು ೨೪೧ ಕುಟುಂಬಗಳಿರುವುದು ಕಂಡುಬರುತ್ತದೆ. ಈ ಜಿಲ್ಲೆಯ ರಿಮೋಟ್ ತಾಂಡಾಗಳನ್ನು ಗಣನೆಗೆ ತೆಗೆದುಕೊಂಡಾಗ, ಒಟ್ಟು ೭೪ ಕುಟುಂಬಗಳಿದ್ದು, ಅದರಲ್ಲಿ ತೆಕುಲಬಾದ ತಾಂಡಾ ೪೨, ಪೊಚಮ್ಮ ತಾಂಡಾವು ೩೨ ಕುಟುಂಬಗಳನ್ನು ಹೊಂದಿವೆ. ತೆಕುಲಬಾದ ತಾಂಡಾದ ಒಟ್ಟು ಜನಸಂಖ್ಯೆಯು ಮೂರು ಪ್ರಕಾರದ ತಾಂಡಾಗಳ ಒಟ್ಟಾರೆ ಜನಸಂಖ್ಯೆಯಲ್ಲಿ ಶೇ.೧೯.೫೨ ಇದ್ದು, ಇದರಲ್ಲಿ ಶೇ. ೧೮.೫೭ರಷ್ಟು ಪುರುಷರು, ಶೇ. ೨೦.೬೫ರಷ್ಟು ಸ್ತ್ರೀಯರು ಇದ್ದಾರೆ. ಪೊಚಮ್ಮಾ ತಾಂಡಾವು ಒಟ್ಟು ಶೇ. ೧೫.೨೬ರಷ್ಟು ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ಶೇ. ೧೪.೭೬ರಷ್ಟು ಪುರುಷರು, ಶೇ. ೧೫.೮೪ರಷ್ಟು ಸ್ತ್ರೀಯರು ಇರುವುದನ್ನು ಕಾಣುತ್ತೇವೆ. ಒಟ್ಟು ಜನಸಂಖ್ಯೆಯಲ್ಲಿ ಈ ತಾಂಡಾದ ಪಾಲುದಾರಿಕೆ ಶೇ. ೩೪.೭೭ರಷ್ಟಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೩೩.೩೩ ಮತ್ತು ಶೇ. ೩೬.೪೯ರಷ್ಟು ಸ್ತ್ರೀಯರ ಪ್ರಮಾಣವಿದೆ.

ಗ್ರಾಮ ಹತ್ತಿರದ ತಾಂಡಾವು ಒಟ್ಟು ೭೩ ಕುಟುಂಬಗಳನ್ನು ಹೊಂದಿದ್ದು, ಇದರಲ್ಲಿ ರಾಂಪುರ ತಾಂಡಾ ೩೪, ರಾಕೊಂಡಾ ತಾಂಡಾ ೩೯ ಕುಟುಂಬಗಳನ್ನು ಹೊಂದಿವೆ. ರಾಂಪುರ ತಾಂಡಾ ಒಟ್ಟು ಶೇ. ೯.೯೫ ಪ್ರಮಾಣದ ಜನಸಂಖ್ಯೆ ಹೊಂದಿದ್ದು, ಇದರಲ್ಲಿ ಶೇ. ೧೦.೧೧ರಷ್ಟು ಪುರುಷರು, ಶೇ. ೯.೭೫ರಷ್ಟು ಮಹಿಳೆಯರು ಇದ್ದಾರೆ. ಮತ್ತು ರಾಕೊಂಡಾ ತಾಂಡಾ ಒಟ್ಟು ಶೇ. ೧೬.೧೦ ಜನಸಂಖ್ಯೆ ಹೊಂದಿದ್ದು, ಇದರಲ್ಲಿ ಶೇ. ೧೫.೯೫ರಷ್ಟು ಪುರುಷರು, ಶೇ. ೧೬.೨೬ರಷ್ಟು ಮಹಿಳೆಯರಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಈ ತಾಂಡಾದ ಪಾಲು ಶೇ. ೨೬.೦೫ರಷ್ಟಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೨೬.೦೭ರಷ್ಟಿದ್ದು, ಮಹಿಳೆಯರ ಪ್ರಮಾಣ ಶೇ. ೨೬.೦೨ರಷ್ಟಿದೆ.

ರಸ್ತೆ ಹತ್ತಿರದ ತಾಂಡಾವನ್ನು ಗಮನಿಸಿದಾಗ ಇಲ್ಲಿ ಒಟ್ಟು ೯೪ ಕುಟುಂಬಗಳಿದ್ದು, ಕೊರಮ ತಾಂಡಾ ೪೪, ಸೂಕ್ರಾನಾಯಕ ತಾಂಡಾ ೫೦ ಕುಟುಂಬಗಳನ್ನು ಹೊಂದಿವೆ. ಇದರಲ್ಲಿ ಕೊರಮ ತಾಂಡಾವು ಒಟ್ಟು ಶೇ. ೧೬.೩೫ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ಶೇ. ೧೬.೦೭ರಷ್ಟು ಪುರುಷರು, ಶೇ. ೧೬.೬೯ರಷ್ಟು ಸ್ತ್ರೀಯರಿದ್ದಾರೆ. ಸೂಕ್ರಾನಾಯಕ ತಾಂಡಾದಲ್ಲಿ ಒಟ್ಟು ಶೇ. ೨೨.೮೨ ಜನಸಂಖ್ಯೆಯಿದ್ದು, ಶೇ. ೨೪.೫೨ರಷ್ಟು ಪುರುಷರು, ಶೇ. ೨೦.೭೯ರಷ್ಟು ಸ್ತ್ರೀಯರಿರುವುದು ಗೋಚರವಾಗುತ್ತದೆ. ಒಟ್ಟು ಜನಸಂಖ್ಯೆಯಲ್ಲಿ ರಸ್ತೆ ಹತ್ತಿರದ ತಾಂಡಾದ ಜನಸಂಖ್ಯೆಯ ಪಾಲು ಶೇ. ೩೯.೧೭ರಷ್ಟಿದ್ದು, ಇದರಲ್ಲಿ ಶೇ. ೪೦.೫೯ರಷ್ಟು ಪುರುಷರು, ಶೇ. ೩೭.೪೮ರಷ್ಟು ಸ್ತ್ರೀಯರು ಇರುವುದನ್ನು ಕಾಣುತ್ತವೆ.

ಮೂರು ಪ್ರಕಾರ್ರದ ತಾಂಡಾಗಳ ಜನಸಂಖ್ಯೆಯನ್ನು ತುಲನೆ ಮಾಡಿ ನೋಡಿದಾಗ, ರಿಮೋಟ್ ಮತ್ತು ಗ್ರಾಮ ಹತ್ತಿರದ ತಾಂಡಾಗಳಿಗಿಂತಲೂ ರಸ್ತೆ ಹತ್ತಿರದ ತಾಂಡಾಗಳಲ್ಲಿ ಅತಿ ಹೆಚ್ಚಿನ ಜನಸಂಖ್ಯೆ ಇರುವುದನ್ನು ಕೊಷ್ಟಕದ ಅಂಕಿ ಅಂಶಗಳಿಂದ ಸ್ಪಷ್ಟವಾಗುತ್ತದೆ. ಈ ಮೂರು ಪ್ರಕಾರದ ತಾಂಡಾಗಳ ಪುರುಷರ ಒಟ್ಟು ಪ್ರಮಾಣವು ಶೇ. ೫೪.೩೦ ರಷ್ಟಿದ್ದರೆ, ಸ್ತ್ರೀಯರ ಪ್ರಮಾಣವು ಶೇ. ೪೫.೭೦ ರಷ್ಟಿದೆ.

**ಕೋಷ್ಟಕ ೫.೧.೪ ಮೂರು ಜಿಲ್ಲೆಗಳ ಲಂಬಾಣಿಗರ ಜನಸಂಖ್ಯೆಯ ವಿವರ**

| ಕ್ರಸಂ. | ರಾಜ್ಯಗಳು | ಜಿಲ್ಲೆಗಳು | ಕುಟುಂಬಗಳು | ಜನಸಂಖ್ಯೆ | | |
|---|---|---|---|---|---|---|
| | | | | ಗಂಡು | ಹೆಣ್ಣು | ಒಟ್ಟು |
| ೧ | ಕರ್ನಾಟಕ | ಗುಲಬರ್ಗಾ | ೨೧೫ | ೬೮೦ | ೬೫೪ | ೧೩೩೪ |
| ೨ | ಮಹಾರಾಷ್ಟ್ರ | ಸೋಲಾಪುರ | ೧೮೭ | ೬೫೨ | ೫೬೭ | ೧೨೧೯ |
| ೩ | ಆಂಧ್ರ ಪ್ರದೇಶ | ರಂಗಾರೆಡ್ಡಿ | ೨೪೧ | ೮೪೦ | ೭೦೭ | ೧೫೪೭ |
| | | ಒಟ್ಟು | ೬೪೩ | ೨೧೭೨ | ೧೯೨೮ | ೪೧೦೦ |

**ಸ್ತಂಭಚಿತ್ರ ೫.೧.೪. ಸಮೀಕ್ಷೆಗೊಳಪಟ್ಟ ಮೂರು ರಾಜ್ಯದ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಕುಟುಂಬವಾರು ಮತ್ತು ಲಿಂಗವಾರು ಜನಸಂಖ್ಯಾ ವಿವರ**




ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಸಮೀಕ್ಷೆಗೊಳಪಟ್ಟ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಆಯ್ಕೆ ಮಾಡಲಾದ ತಾಂಡಾವಾರು ಲಂಬಾಣಿಗರ ಜನಸಂಖ್ಯೆಯನ್ನು ಕುರಿತು ೫.೧.೪ರ ಕೋಷ್ಟಕ ಮತ್ತು ಸ್ತಂಭಚಿತ್ರವು ಮಾಹಿತಿಯನ್ನು ನೀಡುತ್ತದೆ. ಮೂರು ಜಿಲ್ಲೆಗಳ ಒಟ್ಟಾರೆ ಜನಸಂಖ್ಯೆ ೪೧೦೦ ಇದ್ದು, ಇದರಲ್ಲಿ ಶೇ. ೫೨.೯೮ರಷ್ಟು ಪುರುಷರು ಹಾಗೂ ಶೇ. ೪೭.೦೨ರಷ್ಟು ಮಹಿಳೆಯರ ಪ್ರಮಾಣವಿರುವುದು ಕಂಡುಬರುತ್ತದೆ. ಮೊದಲನೆಯದಾಗಿ ಗುಲಬರ್ಗಾ ಜಿಲ್ಲೆಯ ಲಂಬಾಣಿಗರನ್ನು ಪರಿಗಣಿಸಿದಾಗ ಇಲ್ಲಿಯ ತಾಂಡಾಗಳ ಒಟ್ಟು ಜನಸಂಖ್ಯೆ ೧೩೩೪ ಇದ್ದು, ಇದರಲ್ಲಿ ೬೮೦ ಪುರುಷರು, ೬೫೪ ಮಹಿಳೆಯರಿದ್ದಾರೆ, ಅಂದರೆ ಮೂರು ಜಿಲ್ಲೆಯ ಒಟ್ಟಾರೆ ಜನಸಂಖ್ಯೆಯಲ್ಲಿ ಇವರ ಪ್ರಮಾಣ ಶೇ. ೩೨.೫೩ರಷ್ಟಿದ್ದು, ಶೇ. ೩೧.೩೦ರಷ್ಟು ಪುರುಷರು, ಮತ್ತು ಶೇ. ೩೩.೯೨ರಷ್ಟು ಮಹಿಳೆಯರಿದ್ದಾರೆ. ಸೋಲಾಪುರ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ತಾಂಡಾಗಳ ಒಟ್ಟು ಜನಸಂಖ್ಯೆ ೧೨೧೯ ಇದ್ದು, ಒಟ್ಟಾರೆ ಜನಸಂಖ್ಯೆಯಲ್ಲಿ ಇವರ ಪ್ರಮಾಣ ಶೇ. ೨೯.೭೩. ಇದರಲ್ಲಿ ಶೇ. ೩೦.೦೧ರಷ್ಟು ಪುರುಷರು, ಹಾಗೂ ಶೇ.

೨೯.೪೦ ರಷ್ಟು ಮಹಿಳೆಯರಿದ್ದಾರೆ. ಹಾಗೆಯೇ ಆಂಧ್ರ ಪ್ರದೇಶದ ರಂಗಾರೆಡ್ಡಿ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ತಾಂಡಾಗಳ ಜನಸಂಖ್ಯೆ ೧೫೪೭ ಇದ್ದು, ಒಟ್ಟು ಜನಸಂಖ್ಯೆಯಲ್ಲಿ ಶೇ. ೩೭.೭೩ರಷ್ಟು ಪ್ರಮಾಣವಿದೆ. ಇದರಲ್ಲಿ ಶೇ. ೩೮.೬೭ರಷ್ಟು ಪುರುಷರು, ಮತ್ತು ಶೇ. ೩೬.೬೭ರಷ್ಟು ಮಹಿಳೆಯರಿದ್ದಾರೆ.

ಮೂರು ರಾಜ್ಯಗಳ ಮೂರು ಜಿಲ್ಲೆಗಳ ತಾಂಡಾವಾರು ಜನಸಂಖ್ಯೆಯನ್ನು ತುಲನೆ ಮಾಡಿದಾಗ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯಲ್ಲಿ ಹೆಚ್ಚಿನ ಲಂಬಾಣಿಗರು ಗೋಚರವಾಗುತ್ತಾರೆ. ಅತಿ ಕಡಿಮೆ ಜನಸಂಖ್ಯೆ ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಯ ತಾಂಡಾಗಳಲ್ಲಿ ಗೋಚರವಾಗುತ್ತಿದೆ. ಏಕೆಂದರೆ ಇಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕೈಗಾರಿಕೆಗಳು ನೆಲೆಗೊಂಡಿರುವುದರಿಂದ ಲಂಬಾಣಿಗರು ತಾಂಡಾಗಳನ್ನು ಬಿಟ್ಟು ಹೊರಗಡೆ ಕೆಲಸಕ್ಕೆ ಹೋಗುವುದರಿಂದ ಇತರ ಜನರೊಂದಿಗೆ ಸಂಪರ್ಕ ಬೆಳೆದು ವೈದ್ಯಕೀಯ ಸೌಲಭ್ಯಗಳು ಹಾಗೂ ಶಿಕ್ಷಣದ ಕುರಿತು ಮಾಹಿತಿ ತಿಳಿದುಕೊಂಡಿದ್ದಾರೆ. ಅಲ್ಲದೆ ಜನಸಂಖ್ಯೆಯಿಂದಾಗುವ ದುಷ್ಪರಿಣಾಮಗಳ ಬಗೆಗೆ ಅರಿವು ಮೂಡಿರುವುದರಿಂದ ಇಲ್ಲಿಯ ಜನರು ಹೆಚ್ಚಿನ ಮಕ್ಕಳನ್ನು ಹೊಂದಲು ಇಷ್ಟಪಡುವುದಿಲ್ಲ. ಇದರಿಂದಾಗಿ ಇಲ್ಲಿ ಜನಸಂಖ್ಯೆ ಕಡಿಮೆ ಪ್ರಮಾಣದಲ್ಲಿ ಗೋಚರವಾಗುತ್ತಿದೆ. ಸ್ತ್ರೀ ಪುರುಷರ ಜನಸಂಖ್ಯೆಯ ಸರಾಸರಿ ಪ್ರಮಾಣವನ್ನು ವೀಕ್ಷಿಸಿದಾಗ ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಿಗಿಂತ ಆರೋಗ್ಯಪೂರ್ಣವಾದ ಲಿಂಗಾನುಪಾತವನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ.

### ೫.೨. ವಯೋಗುಂಪುವಾರು ಜನಸಂಖ್ಯೆ

ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರನ್ನು ವಯಸ್ಸಿಗನುಗುಣವಾಗಿ ಐದು ಗುಂಪುಗಳನ್ನಾಗಿ ವಿಂಗಡಿಸಲಾಗಿದೆ. ಏಕೆಂದರೆ ಈ ಸಮುದಾಯದ ಆರ್ಥಿಕ ಹಾಗೂ ಸಾಮಾಜಿಕ ಅಂಶಗಳನ್ನು ಅರಿಯಬೇಕಾದರೆ, ಆ ಸಮುದಾಯದ ಶೈಕ್ಷಣಿಕ ಅಂಶಗಳನ್ನು ನೋಡುವುದು ಅಗತ್ಯವಾಗಿದೆ. ಆದ್ದರಿಂದ ಈ ಕೋಷ್ಟಕಗಳ ಮೂಲಕ ಕ್ರಮವಾಗಿ ಆಯಾ ಜಿಲ್ಲೆಗಳಲ್ಲಿ ವಯೋಗುಂಪು ವಾರು ಜನಸಂಖ್ಯೆ ಎಷ್ಟಿದೆ ಎಂಬುದನ್ನು ವಿವರಿಸಲಾಗಿದೆ.

**ಕೋಷ್ಟಕ ೫.೨.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ಜನಸಂಖ್ಯಾ ವಿವರ**

| ವಯೋಗುಂಪು | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೦–೫ | ೨೮ | ೩೦ | ೫೮ | ೧೮ | ೨೯ | ೪೭ | ೩೩ | ೨೪ | ೫೭ |
| ೬–೧೭ | ೭೯ | ೧೦೦ | ೧೭೯ | ೬೬ | ೭೨ | ೧೩೮ | ೫೭ | ೬೦ | ೧೧೭ |
| ೧೮–೪೦ | ೯೫ | ೭೮ | ೧೭೩ | ೧೦೬ | ೯೨ | ೧೯೮ | ೯೩ | ೭೩ | ೧೬೬ |
| ೪೧–೬೦ | ೧೯ | ೨೫ | ೪೪ | ೨೮ | ೧೯ | ೪೭ | ೨೦ | ೧೬ | ೩೬ |
| ೬೧ರ ಮೇಲ್ಪಟ್ಟು | ೧೮ | ೧೭ | ೩೫ | ೯ | ೭ | ೧೬ | ೧೧ | ೧೨ | ೨೩ |
| ಒಟ್ಟು | ೨೩೯ | ೨೫೦ | ೪೮೯ | ೨೨೭ | ೨೧೯ | ೪೪೬ | ೨೧೪ | ೧೮೫ | ೩೯೯ |

ಕೋಷ್ಟಕ ೫.೨.೧ರಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ರಿಮೋಟ್, ಗ್ರಾಮ ಹತ್ತಿರದ ಹಾಗೂ ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರ ವಯೋಗುಂಪುವಾರು ಜನಸಂಖ್ಯೆಯ ಕುರಿತಾಗಿ ಮಾಹಿತಿ ನೀಡುತ್ತದೆ. ಈ ಅಂಶಗಳನ್ನು ಅರಿಯಲು ೦-೫ರ ವಯೋಮಾನದ ಮಕ್ಕಳ ಅಂಕಿ ಅಂಶಗಳನ್ನು ಸಂಗ್ರಹಿಸಲಾಗಿದೆ. ಈ ವಯೋಗುಂಪನ್ನು ಹೊರಗಿಟ್ಟು ಸಾಕ್ಷರತೆ ಪ್ರಮಾಣ ಅರಿಯಲು ಪ್ರಯತ್ನಿಸಲಾಗಿದೆ. ೦-೫ ವಯೋಮಾನದ ಮಕ್ಕಳ ಪ್ರಮಾಣ ರಿಮೋಟ್ ತಾಂಡಾದಲ್ಲಿ ಒಟ್ಟು ಶೇ. ೧೧.೮೬ರಷ್ಟಿದ್ದು, ಗ್ರಾಮ ಹತ್ತಿರದ ತಾಂಡಾದಲ್ಲಿ ಶೇ. ೧೦.೫೩ ಹಾಗೂ ರಸ್ತೆ ಹತ್ತಿರದ ತಾಂಡಾದಲ್ಲಿ ಶೇ. ೧೪.೨೮ರಷ್ಟಿರುವುದು ಕಂಡುಬರುತ್ತದೆ. ೬ ರಿಂದ ೧೭ರ ವಯೋಮಾನದವರನ್ನು ಸಾಕ್ಷರತೆಗೆ ಒಳಪಡುವ, ಆದರೆ ಉದ್ಯೋಗಕ್ಕೆ ಅರ್ಹವಲ್ಲದ ಗುಂಪೆಂದು ಪರಿಗಣಿಸಲಾಗಿದೆ. ಇವರ ಪ್ರಮಾಣವು ರಿಮೋಟ್ ತಾಂಡಾದಲ್ಲಿ ಶೇ. ೩೬.೬೦ ಇದ್ದು, ಅದರಲ್ಲಿ ಗಂಡು ಮಕ್ಕಳ ಪ್ರಮಾಣ ಶೇ. ೩೩.೦೫ ಹಾಗೂ ಹೆಣ್ಣು ಮಕ್ಕಳ ಪ್ರಮಾಣ ಶೇ. ೪೦ರಷ್ಟಿದೆ. ಅದರಂತೆ ಗ್ರಾಮ ಹತ್ತಿರದ ತಾಂಡಾದಲ್ಲಿ ಒಟ್ಟು ಶೇ. ೩೦.೯೪ರಷ್ಟಿದ್ದು, ಶೇ. ೨೯.೦೭ರಷ್ಟು ಗಂಡು, ಶೇ. ೩೨.೮೭ರಷ್ಟು ಹೆಣ್ಣು ಮಕ್ಕಳ ಪ್ರಮಾಣವಿದೆ. ಹಾಗೆಯೇ ರಸ್ತೆ ಹತ್ತಿರದ ತಾಂಡಾವು ಈ ವಯೋಮಾನ ಗುಂಪಿನ ಜನರನ್ನು ಶೇ. ೨೯.೩೨ರಷ್ಟು ಹೊಂದಿದ್ದು, ಇದರಲ್ಲಿ ಶೇ. ೨೬.೬೩ ಗಂಡು ಶೇ. ೩೨.೪೩ರಷ್ಟು ಹೆಣ್ಣು ಮಕ್ಕಳ ಜನಸಂಖ್ಯೆಯಿದೆ, ೧೮ ರಿಂದ ೪೦ರ ವಯೋ ಗುಂಪನ್ನು ಸಂತಾನರ್ಹ, ಕಾಯಕಾರ್ಹ ಗುಂಪೆಂದು ಪರಿಗಣಿಸಲಾಗಿದೆ. ಈ ವಯೋಗುಂಪಿನವರ ಪ್ರಮಾಣ ರಿಮೋಟ್ ತಾಂಡಾದಲ್ಲಿ ಶೇ. ೩೫.೩೭ರಷ್ಟಿದ್ದು, ಅದರಲ್ಲಿ ಶೇ. ೩೯.೭೫ ಗಂಡು, ಶೇ. ೩೧.೨ ರಷ್ಟು ಹೆಣ್ಣು ಮಕ್ಕಳ ಪ್ರಮಾಣವಿದೆ. ಗ್ರಾಮ ಹತ್ತಿರದ ತಾಂಡಾದಲ್ಲಿ ಶೇ. ೪೪.೩೯ರಷ್ಟಿದ್ದು, ಇದರಲ್ಲಿ ಪ್ರತಿಶತ ೪೬.೬೯ರಷ್ಟು ಗಂಡು ಹಾಗೂ ಪ್ರತಿಶತ ೪೨ರಷ್ಟು ಹೆಣ್ಣು ಮಕ್ಕಳ ಪ್ರಮಾಣ ಕಂಡುಬರುತ್ತದೆ. ಹಾಗೆಯೇ ರಸ್ತೆ ಹತ್ತಿರದ ತಾಂಡಾವು ಒಟ್ಟು ಶೇ. ೪೧.೬೦ರಷ್ಟು ಜನಸಂಖ್ಯೆ ಹೊಂದಿದ್ದು, ಅದರಲ್ಲಿ ಈ ವಯೋಗುಂಪಿನ ಗಂಡು ಮಕ್ಕಳ ಪ್ರಮಾಣ ಶೇ. ೪೩.೪೫ರಷ್ಟಿದ್ದು, ಹೆಣ್ಣು ಮಕ್ಕಳ ಪ್ರಮಾಣ ಶೇ. ೩೯.೪೫ರಷ್ಟಿದೆ. ೪೧ ರಿಂದ ೬೦ರ ವಯೋಗುಂಪನ್ನು ಅನುಭವಿ ಗುಂಪು ಎನ್ನಬಹುದು. ಈ ಗುಂಪಿನವರ ಪ್ರಮಾಣ ರಿಮೋಟ್ ತಾಂಡಾದಲ್ಲಿ ಶೇ. ೮.೯೯ರಷ್ಟಿದ್ದು, ಗ್ರಾಮ ಹತ್ತಿರದ ತಾಂಡಾದಲ್ಲಿ ಶೇ. ೧೦.೫೩ ಹಾಗೂ ರಸ್ತೆ ಹತ್ತಿರದ ತಾಂಡಾದಲ್ಲಿ ಶೇ. ೯.೦೨ ರಷ್ಟಿದೆ. ಹಾಗೂ ೬೦ ವರ್ಷ ಮೇಲ್ಪಟ್ಟ ವಯೋಮಾನದವರನ್ನು ಅವಲಂಬಿತ ಗುಂಪೆಂದು ಭಾವಿಸಲಾಗಿದೆ. ಇದರ ಪ್ರಮಾಣವು ರಿಮೋಟ್ ತಾಂಡಾದಲ್ಲಿ ಶೇ. ೭.೧೫, ಗ್ರಾಮ ಹತ್ತಿರದ ತಾಂಡಾದಲ್ಲಿ ಶೇ. ೩.೫೮ರಷ್ಟು ಹಾಗೂ ರಸ್ತೆ ಹತ್ತಿರದ ತಾಂಡಾದಲ್ಲಿ ಶೇ. ೫.೭೬ರಷ್ಟಿರುವುದು ಗೋಚರವಾಗುತ್ತದೆ.

ವಯೋಗುಂಪು ಆಧಾರಿತವಾಗಿ ಐದು ಹಂತದ ಲಂಬಾಣಿಗರ ಜನಸಂಖ್ಯೆಯನ್ನು ಗಮನಿಸಿದಾಗ ಈ ಮೂರು ಪ್ರಕಾರದ ತಾಂಡಾಗಳಲ್ಲಿ ೧೮-೪೦ರ ವಯೋಮಾನದ ಸಂತಾನರ್ಹ, ಕಾಯಕರ್ಹರೆನಿಸಿ ಕೊಂಡ ಜನಸಂಖ್ಯೆ ಅಧಿಕವಾಗಿದ್ದು, ಅದರಲ್ಲಿಯೂ ಕೂಡಾ ರಿಮೋಟ್ ಮತ್ತು ರಸ್ತೆ ಹತ್ತಿರದ

ತಾಂಡಾಗಳಿಗೆ ಹೋಲಿಸಿದಾಗ ೧೮–೪೦ರ ವಯೋಗುಂಪಿನ ಜನಸಂಖ್ಯೆ ಗ್ರಾಮ ಹತ್ತಿರದ ತಾಂಡಾಗಳಲ್ಲಿ ಹೆಚ್ಚಾಗಿರುವುದು ಗೋಚರವಾಗುತ್ತದೆ.

**ಕೋಷ್ಟಕ ೫.೨.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ಜನಸಂಖ್ಯಾ ವಿವರ**

| ವಯೋಗುಂಪು | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೦–೫ | ೨೯ | ೨೪ | ೫೩ | ೨೨ | ೧೯ | ೪೧ | ೧೧ | ೭ | ೧೮ |
| ೬–೧೭ | ೭೮ | ೮೨ | ೧೬೦ | ೬೫ | ೬೮ | ೧೩೩ | ೬೪ | ೪೨ | ೧೦೬ |
| ೧೮–೪೦ | ೧೧೪ | ೮೭ | ೨೦೧ | ೭೯ | ೭೦ | ೧೪೯ | ೭೩ | ೫೫ | ೧೨೮ |
| ೪೧–೬೦ | ೩೬ | ೩೧ | ೬೭ | ೨೭ | ೨೮ | ೫೫ | ೧೭ | ೧೪ | ೩೧ |
| ೬೧ರ ಮೇಲ್ಪಟ್ಟು | ೧೩ | ೧೪ | ೨೭ | ೯ | ೧೩ | ೨೨ | ೧೫ | ೧೩ | ೨೮ |
| ಒಟ್ಟು | ೨೭೦ | ೨೩೮ | ೫೦೮ | ೨೦೨ | ೧೯೮ | ೪೦೦ | ೧೮೦ | ೧೩೧ | ೩೧೧ |

ಕೋಷ್ಟಕ ೫.೨.೨ ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯಲ್ಲಿ ಸಮೀಕ್ಷೆಗೊಳ ಪಟ್ಟ ರಿಮೋಟ್, ಗ್ರಾಮ ಹತ್ತಿರದ ಹಾಗೂ ರಸ್ತೆ ಹತ್ತಿರದ ತಾಂಡಾಗಳಲ್ಲಿಯ ಜನಸಂಖ್ಯೆಯ ವಯೋಗುಂಪನ್ನು ಸೂಚಿಸುತ್ತದೆ. ೦–೫ರ ವಯೋಮಾನದ ಮಕ್ಕಳ ಪ್ರಮಾಣ ರಿಮೋಟ್ ತಾಂಡಾದಲ್ಲಿ ಶೇ. ೧೦.೪೩, ಗ್ರಾಮ ಹತ್ತಿರದ ತಾಂಡಾದಲ್ಲಿ ಶೇ. ೧೦.೨೫ರಷ್ಟು ಮತ್ತು ರಸ್ತೆ ಹತ್ತಿರದ ತಾಂಡಾಗಳಲ್ಲಿ ಶೇ. ೫.೭೮ರಷ್ಟಿದೆ. ೬ ರಿಂದ ೧೭ರ ವಯೋಮಾನದವರ ಜನಸಂಖ್ಯೆ ಪ್ರಮಾಣ ಶೇ. ೩೧.೪೯ರಷ್ಟು ರಿಮೋಟ್ ತಾಂಡಾದಲ್ಲಿದ್ದು, ಇದರಲ್ಲಿ ಶೇ. ೨೮.೮೮ರಷ್ಟು ಗಂಡು ಮಕ್ಕಳು, ಶೇ. ೩೪.೪೫ರಷ್ಟು ಹೆಣ್ಣು ಮಕ್ಕಳ ಪ್ರಮಾಣವಿದೆ. ಹಾಗೆಯೇ ಗ್ರಾಮ ಹತ್ತಿರದ ತಾಂಡಾದ ಒಟ್ಟು ಜನಸಂಖ್ಯೆಯಲ್ಲಿ ಈ ವಯೋಗುಂಪಿನವರ ಪ್ರಮಾಣ ಶೇ. ೩೩.೨೫ರಷ್ಟಿದ್ದು, ಶೇ. ೩೨.೧೭ ಪುರುಷರು, ಶೇ. ೩೪.೩೪ರಷ್ಟು ಸ್ತ್ರೀಯರ ಜನಸಂಖ್ಯೆ ಇದೆ. ಅದರಂತೆ ರಸ್ತೆ ಹತ್ತಿರದ ತಾಂಡಾಗಳಲ್ಲಿ ಒಟ್ಟು ಶೇ. ೩೪.೦೮ರಷ್ಟು ಜನಸಂಖ್ಯೆ ಇದ್ದು, ಇದರಲ್ಲಿ ಶೇ. ೩೫.೫೫ರಷ್ಟು ಗಂಡು, ಶೇ. ೩೨.೦೬ರಷ್ಟು ಹೆಣ್ಣು ಮಕ್ಕಳ ಪ್ರಮಾಣವಿದೆ. ಅದರಂತೆ ೧೮ ರಿಂದ ೪೦ ವಯೋಗುಂಪಿನವರ ಪ್ರಮಾಣ ರಿಮೋಟ್ ತಾಂಡಾದಲ್ಲಿ ೩೯.೫೬ ಪ್ರತಿಶತದಷ್ಟು ಇದೆ. ಇದರಲ್ಲಿ ಶೇ.೪೨.೨೨ ಮತ್ತು ಶೇ. ೩೬.೫೫ ರಷ್ಟು ಕ್ರಮವಾಗಿ ಗಂಡು–ಹೆಣ್ಣಿನ ಜನಸಂಖ್ಯೆಯ ಪ್ರಮಾಣವಿದೆ. ಗ್ರಾಮ ಹತ್ತಿರದ ತಾಂಡಾಗಳಲ್ಲಿ ಒಟ್ಟು ಶೇ. ೩೭.೨೫ರಷ್ಟು ಜನಸಂಖ್ಯೆಯಿದ್ದು, ಕ್ರಮವಾಗಿ ಗಂಡು–ಹೆಣ್ಣಿನ ಜನಸಂಖ್ಯೆಯು ಶೇ. ೩೯.೧೦ ಮತ್ತು ಶೇ. ೩೫.೩೫ರಷ್ಟಿದೆ. ಹಾಗೆಯೇ ರಸ್ತೆ ಹತ್ತಿರದ ತಾಂಡಾಗಳಲ್ಲಿ ಶೇ. ೪೧.೧೫ರಷ್ಟು

ಜನಸಂಖ್ಯೆಯಿದ್ದು, ಇದರಲ್ಲಿ ಶೇ. ೪೦.೫೫ರಷ್ಟು ಗಂಡು, ಶೇ. ೪೧.೯೮ರಷ್ಟು ಹೆಣ್ಣು ಮಕ್ಕಳ ಪ್ರಮಾಣವಿದೆ. ೪೧ ರಿಂದ ೬೦ರ ವಯೋಗುಂಪನ್ನು ಗಣನೆಗೆ ತೆಗೆದುಕೊಂಡಾಗ ರಿಮೋಟ್ ತಾಂಡಾವು ಶೇ. ೧೩.೧೮ರಷ್ಟು ಗ್ರಾಮ ಹತ್ತಿರದ ತಾಂಡಾವು ಶೇ. ೧೩.೭೫ರಷ್ಟು ಹಾಗೂ ರಸ್ತೆ ಹತ್ತಿರದ ತಾಂಡಾವು ಶೇ. ೯.೯೬ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಅದರಂತೆಯೇ ೬೧ ವರ್ಷ ಮೇಲ್ಪಟ್ಟವರನ್ನು ಪರಿಗಣಿಸಿದಾಗ ರಿಮೋಟ್ ತಾಂಡಾದಲ್ಲಿ ಕೇವಲ ಶೇ. ೫.೩೧ರಷ್ಟು, ಗ್ರಾಮ ಹತ್ತಿರದ ತಾಂಡಾಗಳಲ್ಲಿ ಶೇ. ೫.೫ರಷ್ಟು, ಹಾಗೂ ರಸ್ತೆ ಹತ್ತಿರದ ತಾಂಡಾಗಳಲ್ಲಿ ಶೇ. ೯ರಷ್ಟು ಪ್ರಮಾಣದಲ್ಲಿ ಈ ವಯೋಗುಂಪಿನ ಜನಸಂಖ್ಯೆ ಇರುವುದು ಕೋಷ್ಟಕದಿಂದ ಗೋಚರವಾಗುತ್ತದೆ.

ಮೂರೂ ತಾಂಡಾಗಳ ಲಂಬಾಣಿಗರ ವಯೋಗುಂಪಿನ ಜನಸಂಖ್ಯೆಯನ್ನು ಗಮನಿಸಿದಾಗ ೧೮ ರಿಂದ ೪೦ರ ವಯೋಮಾನದವರು ಮೂರು ತಾಂಡಾಗಳಲ್ಲಿ ಹೆಚ್ಚಾಗಿ ಗೋಚರವಾಗುತ್ತಿದ್ದು, ಈ ವಯೋಮಾನದವರ ಜನಸಂಖ್ಯೆಯು ರಿಮೋಟ್ ಮತ್ತು ಗ್ರಾಮ ಹತ್ತಿರದ ತಾಂಡಾಗಳಿಗಿಂತ, ರಸ್ತೆ ಹತ್ತಿರದ ತಾಂಡಾಗಳಲ್ಲಿ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಅಲ್ಲದೇ ೫ ರಿಂದ ೧೭ರ ವಯೋಮಾನದ ಗುಂಪಿನ ಜನಸಂಖ್ಯೆಯನ್ನು ಗಮನಿಸಿದಾಗ, ೧೮ ರಿಂದ ೪೦ರ ವಯೋಮಾನದ ಜನಸಂಖ್ಯೆಯ ನಂತರದ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಈ ವಯೋಮಾನದ ಜನಸಂಖ್ಯೆಯಲ್ಲಿಯೂ ಕೂಡಾ ರಸ್ತೆ ಹತ್ತಿರದ ತಾಂಡಾಗಳು ರಿಮೋಟ್ ಹಾಗೂ ಗ್ರಾಮ ಹತ್ತಿರದ ತಾಂಡಾಗಳಿಗಿಂತ ಮೊದಲ ಸ್ಥಾನದಲ್ಲಿರುವುದು ಸ್ಪಷ್ಟವಾಗುತ್ತದೆ.

**ಕೋಷ್ಟಕ ೫.೨.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ಜನಸಂಖ್ಯೆ**

| ವಯೋಗುಂಪು | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೦-೫ | ೩೩ | ೩೫ | ೬೮ | ೨೧ | ೧೭ | ೩೮ | ೪೩ | ೨೬ | ೬೯ |
| ೬-೧೭ | ೧೦೧ | ೭೭ | ೧೭೮ | ೭೯ | ೬೧ | ೧೪೦ | ೧೧೮ | ೯೩ | ೨೧೧ |
| ೧೮-೪೦ | ೧೧೨ | ೧೦೧ | ೨೧೩ | ೮೪ | ೭೫ | ೧೫೯ | ೧೩೪ | ೧೦೩ | ೨೩೭ |
| ೪೧-೬೦ | ೨೬ | ೩೮ | ೬೪ | ೨೩ | ೨೨ | ೪೫ | ೨೭ | ೩೦ | ೫೭ |
| ೬೧ರ ಮೇಲ್ಪಟ್ಟು | ೮ | ೭ | ೧೫ | ೧೨ | ೯ | ೨೧ | ೧೯ | ೧೩ | ೩೨ |
| **ಒಟ್ಟು** | ೨೮೦ | ೨೫೮ | ೫೩೮ | ೨೧೯ | ೧೮೪ | ೪೦೩ | ೩೪೧ | ೨೬೫ | ೬೦೬ |

೫.೨.೩ರಲ್ಲಿ ಕೋಷ್ಟಕವು ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯಲ್ಲಿ ಸಮೀಕ್ಷೆಗೊಳಪಟ್ಟ ಲಂಬಾಣಿಗರ ವಯೋಗುಂಪುವಾರು ಜನಸಂಖ್ಯಾ ವಿವರವನ್ನು ನೀಡುತ್ತದೆ. ೦-೫ರ ವಯೋಮಾನದ ಮಕ್ಕಳ ಪ್ರಮಾಣ ರಿಮೋಟ್ ತಾಂಡಾಗಳಲ್ಲಿ ಶೇ. ೧೨.೬೩ರಷ್ಟಿದ್ದು, ಇದರಲ್ಲಿ ಶೇ. ೧೧.೭೮ ಗಂಡು, ಶೇ. ೧೩.೫೬ರಷ್ಟು ಹೆಣ್ಣು ಮಕ್ಕಳ ಜನಸಂಖ್ಯೆಯ ಪ್ರಮಾಣವಿದೆ. ಅದರಂತೆ ಗ್ರಾಮ ಹತ್ತಿರದ ತಾಂಡಾಗಳಲ್ಲಿ ಒಟ್ಟು ಶೇ. ೯.೪೨ರಷ್ಟು ಜನಸಂಖ್ಯೆಯಿದೆ. ಹಾಗೂ ರಸ್ತೆ ಹತ್ತಿರದ ತಾಂಡಾದಲ್ಲಿ ಈ ಮಕ್ಕಳ ಪ್ರಮಾಣ ಶೇ. ೧೧.೩೮ರಷ್ಟಿರುವುದು ಕಂಡುಬರುತ್ತದೆ. ೬ ರಿಂದ ೧೭ರ ವಯೋಮಾನದವರ ಜನಸಂಖ್ಯೆಯ ಪ್ರಮಾಣ ರಿಮೋಟ್ ತಾಂಡಾಗಳಲ್ಲಿ ಶೇ. ೩೩.೦೮ರಷ್ಟಿದ್ದು, ಇದರಲ್ಲಿ ಶೇ. ೩೬.೦೭ರಷ್ಟು ಗಂಡು, ಶೇ. ೨೯.೮೪ರಷ್ಟು ಪ್ರಮಾಣದಲ್ಲಿ ಹೆಣ್ಣು ಮಕ್ಕಳ ಜನಸಂಖ್ಯೆಯಿದೆ. ಗ್ರಾಮ ಹತ್ತಿರದ ತಾಂಡಾಗಳಲ್ಲಿ ಒಟ್ಟು ಶೇ. ೩೪.೭೩ರಷ್ಟು ಜನಸಂಖ್ಯೆಯಿದ್ದು, ಕ್ರಮವಾಗಿ ಶೇ. ೩೬.೦೭ ಮತ್ತು ಶೇ. ೩೩.೧೫ರಷ್ಟು ಗಂಡು-ಹೆಣ್ಣಿನ ಪ್ರಮಾಣವಿದೆ. ಹಾಗೆಯೇ ರಸ್ತೆ ಹತ್ತಿರದ ತಾಂಡಾಗಳಲ್ಲಿ ಶೇ. ೩೪.೮೧ರಷ್ಟು ಜನಸಂಖ್ಯೆಯಿದ್ದು, ಅದರಲ್ಲಿ ಕ್ರಮವಾಗಿ ಶೇ. ೩೪.೬೦ ಮತ್ತು ಶೇ. ೩೫.೦೯ರಷ್ಟು ಗಂಡು-ಹೆಣ್ಣಿನ ಜನಸಂಖ್ಯೆಯ ಪ್ರಮಾಣವಿದೆ. ಅದರಂತೆ ೧೮ ರಿಂದ ೪೦ರ ವಯೋಗುಂಪನ್ನು ಗಣನೆಗೆ ತೆಗೆದುಕೊಂಡಾಗ ರಿಮೋಟ್ ತಾಂಡಾವು ಒಟ್ಟು ಶೇ. ೩೯.೫೯ರಷ್ಟು ಜನಸಂಖ್ಯೆ ಹೊಂದಿದ್ದು, ಅದರಲ್ಲಿ ಕ್ರಮವಾಗಿ ಶೇ. ೪೦ರಷ್ಟು ಪುರುಷರು ಹಾಗೂ ಶೇ. ೩೯.೧೪ರಷ್ಟು ಹೆಣ್ಣು ಮಕ್ಕಳ ಪ್ರಮಾಣವಿದೆ. ಗ್ರಾಮ ಹತ್ತಿರದ ತಾಂಡಾವು ಶೇ. ೩೯.೪೫ರಷ್ಟು ಜನಸಂಖ್ಯೆಯನ್ನು ಹೊಂದಿದ್ದು, ಕ್ರಮವಾಗಿ ಗಂಡು-ಹೆಣ್ಣಿನ ಪ್ರಮಾಣ ಶೇ. ೩೮.೩೫ ಮತ್ತು ಶೇ. ೪೦.೭೬ರಷ್ಟಿದೆ. ರಸ್ತೆ ಹತ್ತಿರದ ತಾಂಡಾವು ಶೇ. ೩೯.೧೦ರಷ್ಟು ಜನಸಂಖ್ಯೆಯನ್ನು ಹೊಂದಿದ್ದು, ಶೇ. ೩೯.೨೯ ಮತ್ತು ಶೇ. ೩೮.೮೬ ರಷ್ಟು ಪ್ರಮಾಣದಲ್ಲಿ ಗಂಡು-ಹೆಣ್ಣಿನ ಜನಸಂಖ್ಯೆಯಿದೆ. ೪೧ ರಿಂದ ೬೦ ರ ವಯೋಮಾನ ಗುಂಪನ್ನು ವೀಕ್ಷಿಸಿದಾಗ ರಿಮೋಟ್ ತಾಂಡಾವು ಶೇ. ೧೧.೮೯ರಷ್ಟು, ಗ್ರಾಮ ಹತ್ತಿರದ ತಾಂಡಾವು ಶೇ. ೧೧.೧೬ರಷ್ಟು, ರಸ್ತೆ ಹತ್ತಿರದ ತಾಂಡಾವು ಶೇ. ೯.೪೦ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಹಾಗೆಯೇ ೬೧ ವರ್ಷ ಮೇಲ್ಪಟ್ಟವರನ್ನು ಗಣನೆಗೆ ತೆಗೆದುಕೊಂಡಾಗ ಕ್ರಮವಾಗಿ ಮೂರು ತಾಂಡಾಗಳು ಶೇ. ೨.೭೮, ಶೇ. ೫.೨೧ ಮತ್ತು ಶೇ. ೫.೨೮ರಷ್ಟು ಪ್ರಮಾಣದ ಜನಸಂಖ್ಯೆಯನ್ನು ಹೊಂದಿದೆ.

ಮೂರು ತಾಂಡಾಗಳನ್ನು ಗಮನಿಸಿದಾಗ ೧೮ ರಿಂದ ೪೦ರ ವಯೋಮಾನದ ಗುಂಪಿನ ಜನಸಂಖ್ಯೆಯು ಹೆಚ್ಚಾಗಿರುವುದು ಕಂಡುಬರುತ್ತಿದ್ದು, ಮೂರು ತಾಂಡಾಗಳಲ್ಲಿ ಈ ವಯೋಮಾನದ ಜನಸಂಖ್ಯೆ ಪ್ರಮಾಣವು ಸಮನಾಗಿರುವುದು ಗೋಚರವಾಗುತ್ತದೆ.

**ಕೋಷ್ಟಕ ೫.೨.೪. ಮೂರೂ ಜಿಲ್ಲೆಗಳ ಸಮೀಕ್ಷೆಗೊಳಪಟ್ಟ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ಜನಸಂಖ್ಯಾ ವಿವರ**

| ವಯೋಗುಂಪು | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೦–೫ | ೭೯ | ೮೩ | ೧೬೨ | ೬೨ | ೫೦ | ೧೧೨ | ೯೭ | ೭೮ | ೧೭೫ |
| ೬–೧೭ | ೨೦೨ | ೨೩೨ | ೨೩೪ | ೨೦೭ | ೧೯೨ | ೩೯೯ | ೨೯೮ | ೨೩೧ | ೫೨೯ |
| ೧೮–೪೦ | ೨೯೪ | ೨೪೩ | ೫೩೭ | ೨೬೬ | ೨೧೨ | ೪೭೮ | ೩೩೦ | ೨೭೯ | ೬೦೯ |
| ೪೧–೬೦ | ೬೭ | ೬೦ | ೧೨೭ | ೮೦ | ೭೩ | ೧೫೩ | ೭೬ | ೯೦ | ೧೬೬ |
| ೬೧ರ ಮೇಲ್ಪಟ್ಟು | ೩೮ | ೩೬ | ೭೪ | ೩೭ | ೪೦ | ೭೭ | ೩೯ | ೨೯ | ೬೮ |
| | ೬೮೦ | ೬೫೪ | ೧೩೩೪ | ೬೫೨ | ೫೬೭ | ೧೨೧೯ | ೮೪೦ | ೭೦೭ | ೧೫೪೭ |

**ಸ್ತಂಭಚಿತ್ರ ೫.೨.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯದ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಲಿಂಗವಾರು ಮತ್ತು ವಯೋಗುಂಪುವಾರು ವಿವರ**




೫.೨.೪ರ ಕೋಷ್ಟಕ ಮತ್ತು ೫.೨.೧ರ ಸ್ತಂಭಚಿತ್ರವು ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ತಾಂಡಾವಾರು ಲಂಬಾಣಿಗರ

ವಯೋಗುಂಪುವಾರು ಜನಸಂಖ್ಯೆಯನ್ನು ಕುರಿತು ವಿವರಿಸುತ್ತದೆ. ಮೊದಲನೆಯದಾಗಿ ಗುಲಬರ್ಗಾ ಲಂಬಾಣಿಗರ ಎಲ್ಲಾ ವಯೋಗುಂಪುವಾರು ಒಟ್ಟು ಜನಸಂಖ್ಯೆಯು ೧೩೩೪ ಇದ್ದು, ಇದರಲ್ಲಿ ೦–೫ ವಯೋಗುಂಪಿನವರ ಪ್ರಮಾಣ ಶೇ. ೧೨.೧೪ ಇದ್ದು, ಇದರಲ್ಲಿ ಶೇ. ೧೧.೬೧ ಗಂಡುಮಕ್ಕಳು, ಶೇ. ೧೨.೬೯ ಹೆಣ್ಣುಮಕ್ಕಳಿದ್ದಾರೆ. ೬–೧೭ರ ವಯೋಗುಂಪಿನ ಜನಸಂಖ್ಯೆಯು ಶೇ. ೧೭.೫೪ರಷ್ಟಿದ್ದು, ಇದರಲ್ಲಿ ಶೇ. ೨೯.೭೦ ಪುರುಷರು, ಶೇ. ೩೫.೪೭ ಮಹಿಳೆಯರಿದ್ದಾರೆ. ೧೮–೪೦ರ ವಯೋಮಾನದವರ ಪ್ರಮಾಣ ಒಟ್ಟು ಜನಸಂಖ್ಯೆಯಲ್ಲಿ ಶೇ. ೪೦.೨೫ರಷ್ಟಿದೆ. ಹಾಗೂ ೪೧ ರಿಂದ ೬೦ರ ವಯೋಮಾನವರು ಶೇ. ೯.೫೨ರಷ್ಟಿದ್ದು, ಇದರಲ್ಲಿ ಶೇ. ೯.೮೫ ಪುರುಷರು, ಶೇ. ೯.೧೭ ಮಹಿಳೆಯರಿದ್ದಾರೆ. ೬೧ರ ವಯಸ್ಸಿನ ಮೇಲ್ಪಟ್ಟವರು ಶೇ. ೫.೫೪ ಇದ್ದು, ಇದರಲ್ಲಿ ಶೇ. ೫.೫೮ ಪುರುಷರು, ಶೇ. ೫.೫೦ ಮಹಿಳೆಯರಿದ್ದಾರೆ.

ಸೋಲಾಪುರ ಜಿಲ್ಲೆಯ ಲಂಬಾಣಿಗರನ್ನು ವೀಕ್ಷಿಸಿದಾಗ ಒಟ್ಟು ಜನಸಂಖ್ಯೆಯು ೧೨೧೯ ಇದ್ದು, ಇದರಲ್ಲಿ ೦–೫ ವಯೋಗುಂಪಿನವರ ಪ್ರಮಾಣ ಶೇ. ೯.೧೮ ಇದ್ದು, ಇದರಲ್ಲಿ ಶೇ. ೯.೫೦ ಗಂಡು ಮಕ್ಕಳು, ಶೇ. ೮.೮೧ ಹೆಣ್ಣು ಮಕ್ಕಳಿದ್ದಾರೆ. ೬–೧೭ರ ವಯೋಮಾನ ಗುಂಪಿನವರು ಶೇ. ೩೨.೭೩ ಇದ್ದು, ಶೇ. ೩೧.೭೪ ಪುರುಷರು, ಶೇ. ೩೩.೮೬ ಮಹಿಳೆಯರಿದ್ದಾರೆ. ೧೮–೪೦ರ ವಯೋಗುಂಪಿನವರ ಪ್ರಮಾಣ ಶೇ. ೩೯.೨೧ ಇದ್ದು, ಇದರಲ್ಲಿ ಶೇ. ೪೦.೭೯ ಪುರುಷರು, ಶೇ. ೩೭.೩೮ರಷ್ಟು ಮಹಿಳೆಯರಿದ್ದಾರೆ. ೪೧–೬೦ರ ವಯೋಮಾನ ಗುಂಪಿನವರು ಶೇ. ೧೨.೫೫ರಷ್ಟಿದ್ದು, ಇದರಲ್ಲಿ ಶೇ. ೧೨.೨೬ ಪುರುಷರು, ಶೇ. ೧೨.೮೭ ಮಹಿಳೆಯರಿದ್ದಾರೆ. ಹಾಗೂ ೬೧ ವಯಸ್ಸಿನ ಮೇಲ್ಪಟ್ಟವರ ಪ್ರಮಾಣ ಶೇ. ೬.೩೧ ಇದ್ದು, ಇದರಲ್ಲಿ ಶೇ. ೫.೬೭ ಪುರುಷರು, ಶೇ. ೭.೦೫ ಮಹಿಳೆಯರಿದ್ದಾರೆ.

ರಂಗಾರೆಡ್ಡಿ ಜಿಲ್ಲೆಯಲ್ಲಿನ ಲಂಬಾಣಿಗರ ವಯೋಗುಂಪುವಾರು ಜನಸಂಖ್ಯೆಯನ್ನು ವೀಕ್ಷಿಸಿದಾಗ ಇಲ್ಲಿಯ ಒಟ್ಟು ಜನಸಂಖ್ಯೆ ೧೫೪೭ ಇದ್ದು, ಇದರಲ್ಲಿ ೦–೫ರ ವಯೋಗುಂಪಿನ ಮಕ್ಕಳ ಪ್ರಮಾಣ ೧೧.೩೧ ಇದೆ. ಇದರಲ್ಲಿ ಶೇ. ೧೧.೫೪ ಗಂಡು ಮಕ್ಕಳು, ಶೇ. ೧೧.೦೩ ಹೆಣ್ಣುಮಕ್ಕಳಿದ್ದಾರೆ. ೬–೧೭ರ ವಯೋಮಾನ ಗುಂಪಿನವರ ಪ್ರಮಾಣ ಶೇ. ೩೪.೧೯ ಇದ್ದು, ಇದರಲ್ಲಿ ಶೇ. ೩೫.೪೭ ಪುರುಷರು, ಶೇ. ೩೨.೬೭ರಷ್ಟು ಮಹಿಳೆಯರಿದ್ದಾರೆ. ಹಾಗೂ ೧೮–೪೦ ವಯೋಗುಂಪಿನವರ ಪ್ರಮಾಣ ಶೇ. ೩೯.೩೬ರಷ್ಟಿದ್ದು, ಇದರಲ್ಲಿ ಶೇ. ೩೯.೨೮ ಪುರುಷರು ಶೇ. ೩೯.೪೬ ಸ್ತ್ರೀಯರ ಪ್ರಮಾಣ ಕಂಡುಬರುತ್ತದೆ. ೪೧ ರಿಂದ ೬೦ರ ವಯೋಮಾನದವರ ಪ್ರಮಾಣ ಶೇ. ೧೦.೭೩ ಇದ್ದು, ಶೇ. ೯.೦೪ ಪುರುಷರು, ಶೇ. ೧೨.೨೨ ಮಹಿಳೆಯರಿದ್ದಾರೆ. ಮತ್ತು ೬೧ರ ವಯಸ್ಸಿನ ಮೇಲ್ಪಟ್ಟವರ ಪ್ರಮಾಣ ಶೇ. ೪.೩೯ರಷ್ಟಿದ್ದು, ಇದರಲ್ಲಿ ಶೇ. ೪.೬೪ ಪುರುಷರು, ಶೇ. ೪.೧೦ ಮಹಿಳೆಯರಿದ್ದಾರೆ.

### ೫.೩. ಲಿಂಗಾನುಪಾತದ ವಿವರ

ಒಂದು ದೇಶದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀ–ಪುರುಷರ ಪ್ರಮಾಣವನ್ನು ಲಿಂಗ ಪ್ರಮಾಣವೆಂದು ಕರೆಯಲಾಗುತ್ತದೆ. ಜನಸಂಖ್ಯಾ ಸಂಯೋಜನದಲ್ಲಿ ಇದೊಂದು ಅತಿ ಮುಖ್ಯ ಸಂಗತಿಯಾಗಿದೆ. ಜನಸಂಖ್ಯೆಯ ಲಿಂಗಾನುಪಾತವನ್ನು ಪ್ರತಿ ೧೦೦ ಮಹಿಳೆಯರಿಗೆ ಎಷ್ಟು ಜನ ಪುರುಷರಿದ್ದಾರೆ ಅಥವಾ ಪ್ರತಿ ೧೦೦ ಪುರುಷರಿಗೆ ಎಷ್ಟು ಜನ ಮಹಿಳೆಯರಿದ್ದಾರೆ ಎಂದು ಈ ಎರಡು ರೀತಿಯಲ್ಲಿ ವಿವರಿಸಬಹುದು. ಅದೇ ರೀತಿ ಪ್ರತಿ ೧೦೦೦ ಪುರಷ ಅಥವಾ ಮಹಿಳೆಯರಿಗೆ ಎಷ್ಟು ಜನ ಮಹಿಳೆ ಅಥವಾ ಪುರುಷರು ಎಂಬ ಅರ್ಥದಲ್ಲಿಯೂ ಲಿಂಗಾನುಪಾತವನ್ನು ಸೂಚಿಸಬಹುದು. ಪ್ರತಿ ೧೦೦೦ ಪುರುಷರಿಗೆ ಎಷ್ಟು ಜನ ಮಹಿಳೆಯರು ಎಂಬ ಅರ್ಥದ ಲಿಂಗಾನುಪಾತವೆ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮ. ವಿಶ್ವಸಂಸ್ಥೆಯು ತನ್ನ ಕೆಲವು ಪ್ರಕಟಣೆಗಳಲ್ಲಿ ಲಿಂಗಾನುಪಾತವನ್ನು ಪ್ರತಿ ೧೦೦ ಮಹಿಳೆಯರಿಗೆ ಪುರುಷರ ಸಂಖ್ಯೆ ಎಂಬ ಅರ್ಥದಲ್ಲಿ ಬಳಸಿದ್ದರೂ, ಪಾಪುಲೇಷನ ರೆಫರೆನ್ಸ ಬ್ಯೂರೊ ಸಂಸ್ಥೆಯು ಲಿಂಗಾನುಪಾತವನ್ನು ಪ್ರತಿ ೧೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಂಬ ಅರ್ಥದಲ್ಲಿ ಅದನ್ನು ಬಳಸುತ್ತಿದೆ. ಭಾರತದ ಜನಗಣತಿಯು ಪ್ರತಿ ೧೦೦೦ ಪುರುಷರ ಸಂಖ್ಯೆಗೆ ಮಹಿಳೆಯರ ಸಂಖ್ಯೆ ಎಷ್ಟು ಎಂಬ ಅರ್ಥದಲ್ಲಿ ಲಿಂಗಾನುಪಾತಕ್ಕೆ ವ್ಯಾಖ್ಯೆಯನ್ನು ಕೊಟ್ಟಿದೆ. ಅಂತೆಯೇ ಲಿಂಗಾನುಪಾತಕ್ಕೆ ಭಾರತದ ಜನಗಣತಿಯು ಕೊಟ್ಟಿರುವ ವ್ಯಾಖ್ಯೆಯ ಹಿನ್ನಲೆಯಲ್ಲಿ ಲಿಂಗಾನುಪಾತವನ್ನು ಇಲ್ಲಿಯೂ ಬಳಸಲಾಗುತ್ತಿದೆ. ಅದ್ದರಿಂದ ಲಿಂಗಾನುಪಾತ ಎಂದರೆ, ಯಾವುದೇ ಜನಸಂಖ್ಯೆಯಲ್ಲಿ ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟಿದೆ ಎಂಬುದನ್ನು ಸೂಚಿಸುತ್ತದೆ. ಒಟ್ಟು ಮಹಿಳೆಯರ ಸಂಖ್ಯೆಯನ್ನು, ಒಟ್ಟು ಪುರುಷರ ಸಂಖ್ಯೆಯಿಂದ ವಿಭಾಗಿಸಿ, ನಂತರ ೧೦೦೦ ರಿಂದ ಗುಣಿಸುವ ಮೂಲಕ ಲಿಂಗಾನುಪಾತವನ್ನು ಕಂಡುಕೊಳ್ಳಬಹುದು.

"ಲಿಂಗ ಅನುಪಾತವೆಂದರೆ, ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟು ಎಂಬ ಅರ್ಥದಲ್ಲಿ ಬಳಸಿದಾಗ, ೧೦೦೦ಕ್ಕೂ ಹೆಚ್ಚಿನ ಲಿಂಗ ಅನುಪಾತ, ಅಧಿಕ ಲಿಂಗಾನುಪಾತವನ್ನು ಸೂಚಿಸಿತ್ತದೆ. ಒಂದು ನಿರ್ದಿಷ್ಟ ಅವಧಿಯಲ್ಲಿನ ಒಟ್ಟು ಜನಸಂಖ್ಯೆಯ ಲಿಂಗ ಅನುಪಾತವನ್ನು ಸಮಸ್ತ ಲಿಂಗಾನುಪಾತ ಎಂದು ಕರೆಯಲಾಗುತ್ತದೆ" (ರಾಜಶೇಖರ ಎಸ್, ರಾಜೇಶ್ ಆರ್: ೨೦೦೯: ೨೧೮). ೧೯೮೧ರ ಜನಗಣತಿಯ ಮೇರೆಗೆ ಭಾರತದಲ್ಲಿ ೩೫,೩೩,೪೭,೨೪೯ ಪುರುಷರು ಮತ್ತು ೩೦,೦೪,೬೨,೮೦೨ ಸ್ತ್ರೀಯರಿದ್ದರು. ೧೦೦೦ ಪುರುಷರ ಸಂಖ್ಯೆಗೆ ಸ್ತ್ರೀಯರ ಸಂಖ್ಯೆ ಎಷ್ಟಿರುತ್ತದೆಯೋ ಅದನ್ನು ಲಿಂಗ ಪ್ರಮಾಣವೆಂದು ಕರೆಯುವುದು ರೂಢಿಯಾಗಿದೆ. ೧೯೮೧ರಲ್ಲಿ ಲಿಂಗ ಪ್ರಮಾಣ ೯೩೫ ಇದೆ. ಅದೇ ರೀತಿ ೨೦೦೧ರಲ್ಲಿ ಭಾರತದಲ್ಲಿದ್ದ ಒಟ್ಟು ೧೦೨,೭೦,೧೫,೨೪೭ ಜನಸಂಖ್ಯೆಯಲ್ಲಿ ೫೩,೧೨,೭೭,೦೭೮ ಪುರುಷರು ಮತ್ತು ೪೯,೬೫,೭೩,೮೧೯ ಮಹಿಳೆಯರಿದ್ದರು. ೨೦೧೧ರಲ್ಲಿ ಭಾರತ ೧೨೧,೦೭,೨೬,೯೩೨ ಜನಸಂಖ್ಯೆಯನ್ನು ಹೊಂದಿದೆ. ೨೦೦೧ರಲ್ಲಿ ೧೦೦೦

ಪುರುಷರಿಗೆ ೯೩೩ ಮಹಿಳೆಯರಿದ್ದ ಲಿಂಗಾನುಪಾತವು, ೨೦೧೧ರಲ್ಲಿ ೧೦೦೦ ಪುರುಷರಿಗೆ ೯೪೩ ಮಹಿಳೆಯರಿಗೆ ಏರಿಕೆಯಾಗಿದೆ. ೨೦೧೧ರ ಜನಗಣತಿಯಂತೆ ಈ ಪ್ರಮಾಣವು ಕರ್ನಾಟಕದಲ್ಲಿ ೯೭೩, ಮಹಾರಾಷ್ಟ್ರದಲ್ಲಿ ೯೨೯, ಆಂಧ್ರ ಪ್ರದೇಶದಲ್ಲಿ ೯೯೩ ಇದ್ದು, ಅಧ್ಯಯನಕ್ಕೆ ಆಯ್ಕೆ ಮಾಡಲಾದ ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯ ಲಿಂಗ ಪ್ರಮಾಣ ೯೭೧, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯ ಲಿಂಗ ಪ್ರಮಾಣ ೯೩೮ ಹಾಗೂ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಿಂಗ ಪ್ರಮಾಣ ೯೬೧ ಆಗಿದೆ.

**ಕೋಷ್ಟಕ ೫.೩.೧ ಸಮೀಕ್ಷೆಗೊಳಪಟ್ಟ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತದ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಜನಸಂಖ್ಯೆ | | | ಲಿಂಗ |
|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಪ್ರಮಾಣ |
| ಗುಲಬರ್ಗಾ | ರಿಮೋಟ್ ತಾಂಡಾ | ೮೯ | ೨೩೯ | ೨೫೦ | ೪೮೯ | ೧೦೪೬ |
| | ಗ್ರಾಮ ಹತ್ತಿರದ ತಾಂಡಾ | ೭೧ | ೨೨೭ | ೨೧೯ | ೪೪೬ | ೯೬೫ |
| | ರಸ್ತೆ ಹತ್ತಿರದ ತಾಂಡಾ | ೫೫ | ೨೧೪ | ೧೮೫ | ೩೯೯ | ೮೬೪ |
| | **ಒಟ್ಟು** | **೨೧೫** | **೬೮೦** | **೬೫೪** | **೧೩೩೪** | **೯೬೨** |

ಕೋಷ್ಟಕ ೫.೩.೧ರಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಸಮೀಕ್ಷೆಗೊಳಪಟ್ಟ ಲಂಬಾಣಿಗರ ಲಿಂಗಾನುಪಾತ ಕುರಿತ ವಿವರವಿದೆ. ಮೊದಲನೆಯದಾಗಿ ರಿಮೋಟ್ ತಾಂಡಾದ ಒಟ್ಟು ಜನಸಂಖ್ಯೆಯ ೪೮೯ ಇದ್ದು, ೨೩೯ ಗಂಡು ೨೫೦ ಹೆಣ್ಣುಮಕ್ಕಳ ಸಂಖ್ಯೆ ಇದೆ. ಈ ತಾಂಡಾದ ಲಿಂಗಾನುಪಾತವು ೧೦೦೦ ಪುರುಷರಿಗೆ ೧೦೪೬ ಮಹಿಳೆಯರಿದ್ದಾರೆ. ಅದೇ ರೀತಿ ಗ್ರಾಮ ಹತ್ತಿರದ ತಾಂಡಾದ ಜನಸಂಖ್ಯೆಯ ೪೪೬ ಇದ್ದು, ಇದರಲ್ಲಿ ೨೨೭ ಗಂಡು ೨೧೯ ಹೆಣ್ಣುಮಕ್ಕಳ ಪ್ರಮಾಣವಿದೆ. ಇಲ್ಲಿ ೧೦೦೦ ಪುರುಷರಿಗೆ ೯೬೫ ಮಹಿಳೆಯರ ಪ್ರಮಾಣವಿದೆ. ಹಾಗೂ ರಸ್ತೆ ಹತ್ತಿರದ ತಾಂಡಾದ ಒಟ್ಟು ಜನಸಂಖ್ಯೆಯು ೩೯೯ ಇದ್ದು, ಇದರಲ್ಲಿ ೨೧೪ ಗಂಡು, ೧೮೫ ಹೆಣ್ಣುಮಕ್ಕಳ ಜನಸಂಖ್ಯೆಯಿದೆ. ಇದನ್ನು ಲಿಂಗಾನುಪಾತಕ್ಕೆ ಪರಿಗಣಿಸಿದಾಗ ಇಲ್ಲಿ ೧೦೦೦ ಪುರುಷರಿಗೆ ೮೬೪ ಮಹಿಳೆಯರಿರುವುದು ಗೋಚರವಾಗುತ್ತದೆ.

ಮೂರು ತಾಂಡಾಗಳ ಲಿಂಗಾನುಪಾತವನ್ನು ತುಲನೆ ಮಾಡಿ ನೋಡಿದಾಗ ಅಧಿಕ ಲಿಂಗಾನುಪಾತ ರಿಮೋಟ್ ತಾಂಡಾಗಳಲ್ಲಿ ಕಂಡುಬರುತ್ತದೆ. ಏಕೆಂದರೆ ಈ ತಾಂಡಾಗಳು ಗ್ರಾಮ ಹಾಗೂ ಜನ ವಸತಿ ಪ್ರದೇಶಗಳಿಂದ ದೂರ ಉಳಿದಿರುವುದರಿಂದ ಈ ಪ್ರದೇಶಗಳಲ್ಲಿ ವಾಸಿಸುವ ಲಂಬಾಣಿಗರು ಶಿಕ್ಷಣ ಪಡೆಯದೆ ಹಿಂದುಳಿದಿರುವುದರಿಂದ ಇಲ್ಲಿ ವೈದ್ಯಕೀಯ ಅಂಶಗಳ ಪ್ರಭಾವಕ್ಕಿಂತ ನಿಸರ್ಗವೇ ತನ್ನ ಹೆಚ್ಚಿನ ಪಾಲನ್ನು ಹೊಂದಿದೆ. ಆದರೆ ರಸ್ತೆ ಹತ್ತಿರದ ತಾಂಡಾಗಳಲ್ಲಿ ಮಹಿಳೆಯರ ಪ್ರಮಾಣ

ತುಂಬಾ ಕಡಿಮೆ ಇದೆ. ಏಕೆಂದರೆ ಈ ತಾಂಡಾಗಳು ರಸ್ತೆಗಳಿಗೆ ಹೊಂದಿಕೊಂಡಿರುವುದರಿಂದ, ಅಲ್ಲದೇ ಇಲ್ಲಿಯ ಲಂಬಾಣಿಗರಲ್ಲಿ ಶಿಕ್ಷಣ ಮತ್ತು ವೈದ್ಯಕೀಯ ಸೌಲಭ್ಯಗಳ ಬಗ್ಗೆ ತಿಳುವಳಿಕೆ ಇರುವುದರಿಂದ ಸಾಮಾನ್ಯವಾಗಿ ಹೆಣ್ಣು ಭ್ರೂಣ ಹತ್ಯೆ ಮಾಡಿಸಿಕೊಳ್ಳುವುದರಿಂದ ಹೆಣ್ಣು ಮಕ್ಕಳ ಪ್ರಮಾಣ ಕಡಿಮೆ ಇದೆ. ಆದರೆ ಗ್ರಾಮ ಹತ್ತಿರದ ತಾಂಡಾಗಳಲ್ಲಿ ಲಿಂಗಾನುಪಾತವು ಆರೋಗ್ಯ ಪೂರ್ಣವಾಗಿರುವದು ಕಂಡುಬರುತ್ತದೆ.

**ಕೋಷ್ಟಕ ೫.೩.೨. ಸಮೀಕ್ಷೆಗೊಳಪಟ್ಟ ಸೋಲಾಪುರ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಜನಸಂಖ್ಯೆ | | | ಲಿಂಗ ಪ್ರಮಾಣ |
|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | |
| ಸೋಲಾಪುರ | ರಿಮೋಟ್ ತಾಂಡಾ | ೬೯ | ೨೭೦ | ೨೩೮ | ೫೦೮ | ೮೮೧ |
| | ಗ್ರಾಮ ಹತ್ತಿರದ ತಾಂಡಾ | ೬೫ | ೨೦೨ | ೧೯೮ | ೪೦೦ | ೯೮೦ |
| | ರಸ್ತೆ ಹತ್ತಿರದ ತಾಂಡಾ | ೫೩ | ೧೮೦ | ೧೩೧ | ೩೧೧ | ೭೨೮ |
| | **ಒಟ್ಟು** | **೧೮೭** | **೬೫೨** | **೫೬೭** | **೧೨೧೯** | **೮೭೦** |

ಈ ಮೇಲಿನ ೫.೧೦ರ ಕೋಷ್ಟಕವು ಸೋಲಾಪುರ ಜಿಲ್ಲೆಯಲ್ಲಿ ಸಮೀಕ್ಷೆಗೊಳಪಟ್ಟ ಲಂಬಾಣಿಗರ ಲಿಂಗಾನುಪಾತವನ್ನು ಕುರಿತು ವಿವರಿಸುತ್ತದೆ. ಈ ಜಿಲ್ಲೆಯ ರಿಮೋಟ್ ತಾಂಡಾಗಳನ್ನು ವೀಕ್ಷಿಸಿದಾಗ ಇಲ್ಲಿಯ ಒಟ್ಟು ಜನಸಂಖ್ಯೆ ೫೦೮ ಇದ್ದು, ೨೭೦ ಗಂಡು ಹಾಗೂ ೨೩೮ ಹೆಣ್ಣುಮಕ್ಕಳಿದ್ದಾರೆ. ಇಲ್ಲಿ ೧೦೦೦ ಪುರುಷರಿಗೆ ೮೮೧ ಮಹಿಳೆಯರ ಸಂಖ್ಯೆ ಇದೆ. ಅದೇ ರೀತಿ ಗ್ರಾಮ ಹತ್ತಿರದ ತಾಂಡಾಗಳ ಜನಸಂಖ್ಯೆಯು ೪೦೦ ಇದೆ. ಇದರಲ್ಲಿ ೨೦೨ ಗಂಡು, ೧೯೮ ಹೆಣ್ಣುಮಕ್ಕಳಿದ್ದು, ೧೦೦೦ ಪುರುಷರಿಗೆ ೯೮೦ ಮಹಿಳೆಯರ ಲಿಂಗ ಪ್ರಮಾಣವಿದೆ. ಹಾಗೂ ರಸ್ತೆ ಹತ್ತಿರದ ತಾಂಡಾಗಳ ಜನಸಂಖ್ಯೆಯು ೩೧೧ ಇದ್ದು, ಇದರಲ್ಲಿ ೧೮೦ ಗಂಡು, ೧೩೧ ಹೆಣ್ಣುಮಕ್ಕಳ ಪ್ರಮಾಣವಿದೆ. ಇಲ್ಲಿ ೧೦೦೦ ಪುರುಷರಿಗೆ ೭೨೮ ಮಹಿಳೆಯರ ಪ್ರಮಾಣವಿರುವುದು ಸ್ಪಷ್ಟವಾಗುತ್ತದೆ.

ಮೂರು ತಾಂಡಾಗಳ ಲಿಂಗಾನುಪಾತವನ್ನು ಹೋಲಿಕ ಮಾಡಿದಾಗ ಹೆಚ್ಚಿನ ಮಹಿಳೆಯರು ಗ್ರಾಮ ಹತ್ತಿರದ ತಾಂಡಾಗಳಲ್ಲಿ, ಕಡಿಮೆ ಪ್ರಮಾಣದಲ್ಲಿ ಮಹಿಳೆಯರು ರಸ್ತೆ ಹತ್ತಿರದ ತಾಂಡಾಗಳಲ್ಲಿ ಗೋಚರಿಸುತ್ತಾರೆ. ರಿಮೋಟ್ ಮತ್ತು ರಸ್ತೆ ಹತ್ತಿರ ತಾಂಡಾಗಳಿಗಿಂತ ಗ್ರಾಮ ಹತ್ತಿರದ ತಾಂಡಾಗಳಲ್ಲಿ ಹೆಚ್ಚಿನ ಲಿಂಗಾನುಪಾತದ ಪ್ರಮಾಣ ಕಂಡುಬರುತ್ತದೆ.

**ಕೋಷ್ಟಕ ೫.೩.೩. ಸಮೀಕ್ಷೆಗೊಳಪಟ್ಟ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತದ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಜನಸಂಖ್ಯೆ | | | ಲಿಂಗ ಪ್ರಮಾಣ |
|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | |
| ರಂಗಾರೆಡ್ಡಿ | ರಿಮೋಟ್ ತಾಂಡಾ | ೭೪ | ೨೮೦ | ೨೫೮ | ೫೩೮ | ೯೨೧ |
| | ಗ್ರಾಮ ಹತ್ತಿರದ ತಾಂಡಾ | ೭೩ | ೨೧೯ | ೧೮೪ | ೪೦೩ | ೮೪೦ |
| | ರಸ್ತೆ ಹತ್ತಿರದ ತಾಂಡಾ | ೯೪ | ೩೪೧ | ೨೬೫ | ೬೦೬ | ೭೭೭ |
| | **ಒಟ್ಟು** | **೨೪೧** | **೮೪೦** | **೭೦೭** | **೧೫೪೭** | **೮೪೨** |

ಕೋಷ್ಟಕ ೫.೩.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಲಿಂಗ ಪ್ರಮಾಣವನ್ನು ತೋರಿಸುತ್ತದೆ. ಈ ಜಿಲ್ಲೆಯ ರಿಮೋಟ್ ತಾಂಡಾಗಳನ್ನು ಗಮನಿಸಿದಾಗ ಇಲ್ಲಿಯ ಒಟ್ಟು ಜನಸಂಖ್ಯೆ ೫೩೮ ಇದ್ದು, ೨೮೦ ಗಂಡು, ೨೫೮ ಹೆಣ್ಣುಮಕ್ಕಳಿದ್ದಾರೆ, ಅಂದರೆ ಇಲ್ಲಿಯ ಲಿಂಗಾನುಪಾತ ಪ್ರತಿ ೧೦೦೦ ಪುರುಷರಿಗೆ ೯೨೧ ಮಹಿಳೆಯರಿದ್ದಾರೆ. ಹಾಗೆಯೇ ಗ್ರಾಮ ಹತ್ತಿರದ ತಾಂಡಾಗಳ ಒಟ್ಟು ಜನಸಂಖ್ಯೆಯು ೪೦೩ ಇದ್ದು, ಇದರಲ್ಲಿ ೨೧೯ ಗಂಡು, ೧೮೪ ಹೆಣ್ಣುಮಕ್ಕಳಿದ್ದಾರೆ. ಈ ತಾಂಡಾಗಳಲ್ಲಿ ೧೦೦೦ ಪುರುಷರಿಗೆ ೮೪೦ ಮಹಿಳೆಯರಿದ್ದಾರೆ. ಅದೇ ರೀತಿ ರಸ್ತೆ ಹತ್ತಿರದ ತಾಂಡಾಗಳಲ್ಲಿ ಒಟ್ಟು ೬೦೬ ಜನಸಂಖ್ಯೆ ಇದ್ದು, ಇದರಲ್ಲಿ ೩೪೧ ಗಂಡು, ೨೬೫ ಹೆಣ್ಣುಮಕ್ಕಳಿದ್ದಾರೆ. ಇಲ್ಲಿಯ ಲಿಂಗಾನುಪಾತ ೧೦೦೦ ಪುರುಷರಿಗೆ ೭೭೭ ಮಹಿಳೆಯರಿದ್ದಾರೆ.

ಮೂರು ತಾಂಡಾಗಳ ಲಂಬಾಣಿಗರ ಲಿಂಗಾನುಪಾತವನ್ನು ತುಲನೆ ಮಾಡಿ ನೋಡಿದಾಗ, ಮೂರು ತಾಂಡಾಗಳಲ್ಲಿ ಮಹಿಳೆಯರ ಪ್ರಮಾಣ ಪುರುಷರಿಗಿಂತಲೂ ಕಡಿಮೆಯಿದ್ದರೂ ಕೂಡಾ ರಿಮೋಟ್ ತಾಂಡಾವು ಸ್ವಲ್ಪಮಟ್ಟಿಗೆ ಹೆಚ್ಚಿನ ಮಹಿಳೆಯರನ್ನು ಹೊಂದಿದೆ. ಇದರಿಂದ ಗ್ರಾಮ ಮತ್ತು ರಸ್ತೆ ಹತ್ತಿರ ತಾಂಡಾಗಳಿಗಿಂತ ರಿಮೋಟ್ ತಾಂಡಾಗಳು ಹೆಚ್ಚಿನ ಲಿಂಗಾನುಪಾತದ ಪ್ರಮಾಣವನ್ನು ಹೊಂದಿದೆ.

**ಕೋಷ್ಟಕ ೫.೩.೪. ಮೂರು ಜಿಲ್ಲೆಗಳ ಲಂಬಾಣಿಗರ ಲಿಂಗಾನುಪಾತದ ವಿವರ**

| ರಾಜ್ಯಗಳು | ಜಿಲ್ಲೆಗಳು | ಜನಸಂಖ್ಯೆ | | | ಲಿಂಗ ಪ್ರಮಾಣ |
|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | |
| ಕರ್ನಾಟಕ | ಗುಲಬರ್ಗಾ | ೬೮೦ | ೬೫೪ | ೧೩೩೪ | ೯೬೨ |
| ಮಹಾರಾಷ್ಟ್ರ | ಸೋಲಾಪುರ | ೬೫೨ | ೫೬೭ | ೧೨೧೯ | ೮೭೦ |
| ಆಂಧ್ರ ಪ್ರದೇಶ | ರಂಗಾರೆಡ್ಡಿ | ೮೪೦ | ೭೦೭ | ೧೫೪೭ | ೮೪೨ |

**ಸ್ತಂಭಚಿತ್ರ ೫.೩.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯದ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಲಿಂಗಾನುಪಾತದ ವಿವರ**




ಕೋಷ್ಟಕ ೫.೩.೪ ಮತ್ತು ೫.೩.೧ರ ಸ್ತಂಭಚಿತ್ರದಂತೆ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಸಮೀಕ್ಷೆಗೊಳಪಡಿಸಿದ ಲಂಬಾಣಿಗರ ಜನಸಂಖ್ಯೆಯ ಲಿಂಗಾನುಪಾತವನ್ನು ಗಣನೆಗೆ ತೆಗೆದುಕೊಂಡಾಗ, ಸಮೀಕ್ಷೆಗೊಳಪಡಿಸಿದ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಒಟ್ಟು ಜನಸಂಖ್ಯೆ ೧೩೩೪ ಇದ್ದು, ಇದರಲ್ಲಿ ೬೮೦ ಗಂಡು, ೬೫೪ ಹೆಣ್ಣು ಮಕ್ಕಳಿದ್ದಾರೆ. ಇಲ್ಲಿಯ ಸಮಸ್ತ ಲಿಂಗಾನುಪಾತ ಪ್ರತಿ ೧೦೦೦ ಪುರುಷರಿಗೆ ೯೬೨ ಹೆಣ್ಣು ಮಕ್ಕಳಿದ್ದಾರೆ. ಅದೇ ರೀತಿ ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಒಳಪಟ್ಟ ಲಂಬಾಣಿಗರ ಒಟ್ಟು ಸಂಖ್ಯೆ ೧೨೧೯ ಇದ್ದು, ಇದರಲ್ಲಿ ಗಂಡು ೬೫೨, ಹೆಣ್ಣು ೫೬೭ ಇದ್ದಾರೆ. ಅಂದರೆ ಈ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತ ಪ್ರತಿ ೧೦೦೦ ಪುರುಷರಿಗೆ ೮೭೦ ಮಹಿಳೆಯರಿದ್ದಾರೆ, ಹಾಗೆಯೇ ಆಂಧ್ರ ಪ್ರದೇಶದ ರಂಗಾರೆಡ್ಡಿ ಜಿಲ್ಲೆಯನ್ನು ಗಣನೆಗೆ ತೆಗೆದುಕೊಂಡಾಗ ಇಲ್ಲಿನ ಲಂಬಾಣಿಗರ ಒಟ್ಟು ಸಂಖ್ಯೆ ೧೫೪೭ ಇದ್ದು, ಇದರಲ್ಲಿ ೮೪೦ ಗಂಡು, ೭೦೭ ಹೆಣ್ಣು ಮಕ್ಕಳಿದ್ದಾರೆ. ಇಲ್ಲಿಯ ಸಮಸ್ತ ಲಿಂಗಾನುಪಾತ ೧೦೦೦ ಪುರುಷರಿಗೆ ೮೪೨ ಹೆಣ್ಣುಮಕ್ಕಳಿದ್ದಾರೆ.

ಮೂರು ರಾಜ್ಯಗಳ ಮೂರು ಜಿಲ್ಲೆಗಳಲ್ಲಿನ ಲಂಬಾಣಿಗರ ಲಿಂಗಾನುಪಾತವನ್ನು ಹೋಲಿಕೆ ಮಾಡಿದಾಗ ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತಲೂ ಗುಲಬರ್ಗಾ ಜಿಲ್ಲೆಯು ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರನ್ನು ಹೊಂದಿದೆ. ಎರಡನೇ ಸ್ಥಾನದಲ್ಲಿ ಸೋಲಾಪುರ, ಹಾಗೂ ಮೂರನೇ ಸ್ಥಾನದಲ್ಲಿ ರಂಗಾರೆಡ್ಡಿ ಜಿಲ್ಲೆಯು ಕಡಿಮೆ ಸಂಖ್ಯೆಯ ಮಹಿಳೆಯರನ್ನು ಹೊಂದಿದೆ. ಸಾಂಪ್ರದಾಯಿಕ ಕುಟುಂಬದ ಲಕ್ಷಣವಾದ ಪುತ್ರ ವ್ಯಾಮೋಹದಿಂದಾಗಿ ಲಿಂಗ ಪ್ರಮಾಣವು ಕಡಿಮೆಯಾಗಲು ಕಾರಣವಾಗಿದೆ.

## ೫.೪. ಮನೆಗಳ ಮಾದರಿ

ಆಧುನೀಕರಣಗೊಂಡ ಇಂದಿನ ಸಮಾಜದಲ್ಲಿ ಆರ್ಥಿಕತೆಗೆ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಲಾಗುತ್ತಿದೆ. ಲಂಬಾಣಿಗರು ಇಂದು ಆರ್ಥಿಕ ಬದಲಾವಣೆಗಳಿಗೆ ಒಳಗಾಗಿದ್ದಾರೆ. ಕಳೆದ ೨೦-೨೫ ವರ್ಷಗಳ ಹಿಂದೆ ಇವರ ಆರ್ಥಿಕ ಸ್ಥಿತಿ ತುಂಬಾ ಹಿಂದುಳಿದಿತ್ತು. ಅಂದು ಅವರಿಗೆ ಹೆಚ್ಚಿನ ಜಮೀನು, ಸುಸಜ್ಜಿತ ಮನೆಗಳಾವವೂ ಇರಲಿಲ್ಲ. ಇವರು ಅವುಗಳನ್ನು ಪಡೆಯುವ ಒಲವನ್ನು ಕೂಡಾ ಹೊಂದಿರಲಿಲ್ಲ. ಮೂಲತಃ ಪಶುಪಾಲನೆ ಹಾಗೂ ವ್ಯಾಪಾರ ಮಾಡುತ್ತಿದ್ದ ಲಂಬಾಣಿಗರು ಕ್ರಮೇಣ ತಮ್ಮ ಪಾರಂಪರಿಕ ವೃತ್ತಿಯನ್ನು ತೊರೆಯುತ್ತಾ ಕೃಷಿ ಇಲ್ಲವೇ ಕೃಷಿ ಸಂಬಂಧಿ ಉಪಕಸುಬುಗಳಲ್ಲಿ ತೊಡಗಿಕೊಂಡು ಒಂದೆಡೆ ನೆಲೆಯೂರಿದ್ದಾರೆ. "ಆಹಾರ, ಆಶ್ರಯ ಮತ್ತು ಅರಿವೆ ಇವು ಮೂರು ಜೀವನಾಧಾರಕ್ಕೆ ಅಗತ್ಯವಾದ ಮೂಲಭೂತ ಅಂಶಗಳಾಗಿವೆ. ವಸತಿ ಆಶ್ರಯವನ್ನು ನೀಡುತ್ತದೆ ಎಂಬಷ್ಟಕ್ಕೆ ಮಾತ್ರ ಮುಖ್ಯವಲ್ಲ, ವ್ಯಕ್ತಿಯ ಗುರುತಿಗೆ ಮತ್ತು ವಿಳಾಸಕ್ಕೆ ವಸತಿ ಮುಖ್ಯವೆನಿಸುತ್ತದೆ. ಅಲ್ಲದೇ ವಸತಿಯೊಂದಿಗೆ ಇತರೆ ಅನುಕೂಲಗಳು ಸಹ ಸಂಬಂಧ ಕಲ್ಪಿಸಿಕೊಂಡಿವೆ" (ಗುಲಬರ್ಗಾ ಜಿಲ್ಲೆ ಮಾನವ ಅಭಿವೃದ್ಧಿ ವರದಿ:೨೦೦೮:೧೧೫). ಬಡತನದ ಬೇಗೆಯಲ್ಲಿ ಜೀವನ ಸಾಗಿಸುತ್ತಿದ್ದ ಲಂಬಾಣಿಗರು ಆಶ್ರಯಕ್ಕಾಗಿ ಗುಡಿಸಲುಗಳನ್ನು ನಿರ್ಮಿಸಿಕೊಂಡು ಬದುಕನ್ನು ಕಟ್ಟಿಕೊಂಡಿದ್ದರು. ಕ್ರಮೇಣ ತಾಂಡಾಗಳ ಜನರು ವಿವಿಧ ಕಸುಬುಗಳಲ್ಲಿ ತೊಡಗಿಕೊಂಡಿರುವದರಿಂದ ಲಂಬಾಣಿಗರ ಆರ್ಥಿಕ ಸ್ಥಿತಿಗತಿ ಉತ್ತಮಗೊಳ್ಳುತ್ತಿದೆ. ಆದ್ದರಿಂದ ಲಂಬಾಣಿಗರು ತಮ್ಮ ಅನುಕೂಲಕ್ಕೆ ತಕ್ಕಂತೆ ತಮಗೆ ಬೇಕಾದ ಹಾಗೆ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಇಷ್ಟೇ ಅಲ್ಲದೇ ಭೂ ರಹಿತ, ಅತ್ಯಂತ ಕೆಳವರ್ಗದ, ಪರಿಶಿಷ್ಟ ಜಾತಿ ಮತ್ತು ಪಂಗಡ, ಅಲ್ಪ ಆದಾಯುವುಳ್ಳ ಸಮಾಜದ ಮಧ್ಯಮ ವರ್ಗದವರಿಗೆ ಸರಕಾರ ಇಂದಿರಾಗಾಂಧಿ ಮತ್ತು ರಾಜೀವ್ ಗಾಂಧಿ ವಸತಿ ಯೋಜನೆ, ಅಂಬೇಡ್ಕರ ಆಶ್ರಯ ಮನೆ ಯೋಜನೆಯಡಿಯಲ್ಲಿ ಆರ್ಥಿಕವಾಗಿ ಹಿಂದುಳಿದವರಿಗೆ ಜನತಾ ಮನೆಗಳನ್ನು ನಿರ್ಮಿಸಿಕೊಡುತ್ತಿದೆ. ಹೀಗಾಗಿ ತಾಂಡಾಗಳಲ್ಲಿ ಕೆಲವರು ಜನತಾ ಮನೆಗಳನ್ನು ಪಡೆದುಕೊಂಡಿದ್ದಾರೆ. ಉತ್ತಮ ಆರ್ಥಿಕ ಸ್ಥಿತಿಯಲ್ಲಿದ್ದ ಲಂಬಾಣಿಗರು ಆರ್ ಸಿ ಸಿ ಮನೆಗಳನ್ನು ಹೊಂದಿದ್ದಾರೆ. ಬಡವರು ಗುಡಿಸಲು, ಟಿನ್, ಹೆಂಚಿನ, ಮತ್ತು ಮಾಳಿಗೆ ಮನೆಗಳನ್ನು ಆಶ್ರಯಿಸಿಕೊಂಡಿದ್ದಾರೆ. ಆದ್ದರಿಂದ ಈ ಸಂದರ್ಭದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳನ್ನು ಒಂದೊಂದಾಗಿ ವಿವರಿಸಲಾಗಿದೆ.

**ಕೋಷ್ಟಕ ೫.೪.೧. ಗುಲಬರ್ಗಾ ಜಿಲ್ಲೆಯ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ವಿವರ**

| ಜಿಲ್ಲೆ | ನೆಲೆಗಳು | ಮನೆಗಳ ಮಾದರಿ | | | | | | |
|---|---|---|---|---|---|---|---|---|
| | | ಗುಡಿಸಲು | ಟಿನ್ | ಮಾಳಿಗೆ | ಆರ್.ಸಿ.ಸಿ | ಹೆಂಚಿನ | ಜನತಾ | ಒಟ್ಟು |
| ಗುಲಬರ್ಗಾ | ರಿಮೋಟ್ ತಾಂಡಾ | – | ೧೧ | ೬೭ | ೩ | – | ೮ | ೮೯ |
| | ಗ್ರಾಮ ಹತ್ತಿರದ ತಾಂಡಾ | – | ೮ | ೪೭ | ೧೬ | – | – | ೭೧ |
| | ರಸ್ತೆ ಹತ್ತಿರದ ತಾಂಡಾ | – | ೨ | ೩೮ | ೧೨ | – | ೩ | ೫೫ |
| | ಒಟ್ಟು | – | ೨೧ | ೧೫೨ | ೩೧ | – | ೧೧ | ೨೧೫ |

ಕೋಷ್ಟಕ ೫.೪.೧. ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ರಿಮೋಟ್, ಗ್ರಾಮ ಹತ್ತಿರದ ಮತ್ತು ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ಕುರಿತಾಗಿ ಮಾಹಿತಿಯನ್ನು ನೀಡುತ್ತದೆ. ಈ ಜಿಲ್ಲೆಯ ಮೂರು ಪ್ರಕಾರದ ತಾಂಡಾಗಳಲ್ಲಿ ಒಟ್ಟು ೨೧೫ ಮನೆಗಳಿದ್ದು ಇದರಲ್ಲಿ ಮಾಳಿಗೆ ಮನೆಗಳು ೧೫೨, ಟಿನ್ ಮನೆಗಳು ೨೧, ಆರ್ ಸಿ ಸಿ ಮನೆಗಳು ೩೧ ಹಾಗೂ ಜನತಾ ಮನೆಗಳು ೧೧ ಇರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ರಿಮೋಟ್ ತಾಂಡಾಗಳಲ್ಲಿ ಒಟ್ಟು ೮೯ ಮನೆಗಳಿದ್ದು ಅದರಲ್ಲಿ ಶೇ. ೧೨.೩೬ ಟಿನ್ ಮನೆ, ಶೇ. ೭೫.೨೮ರಷ್ಟು ಮಾಳಿಗೆ ಮನೆಗಳನ್ನು, ಶೇ. ೩.೩೭ ಆರ್ ಸಿ ಸಿ ಹಾಗೂ ಶೇ. ೮.೯೮ ಜನತಾ ಮನೆಗಳಿವೆ. ಗ್ರಾಮ ಹತ್ತಿರದ ತಾಂಡಾಗಲ್ಲಿ ಒಟ್ಟು ೭೧ ಕುಟುಂಬಗಳಿದ್ದು ಅವುಗಳಲ್ಲಿ ಶೇ. ೧೧.೨೭ ರಷ್ಟು ಟಿನ್ ಮನೆಗಳು, ಶೇ. ೬೬.೨೦ ಮಾಳಿಗೆ ಮನೆ, ಶೇ. ೨೨.೫೪ ರಷ್ಟು ಆರ್ ಸಿ ಸಿ ಮನೆಗಳನ್ನು ಈ ತಾಂಡಾದ ಲಂಬಾಣಿಗರು ಹೊಂದಿದ್ದಾರೆ. ರಸ್ತೆ ಹತ್ತಿರದ ತಾಂಡಾಗಳಲ್ಲಿ ಒಟ್ಟು ೫೫ ಮನೆಗಳಿದ್ದು, ಅದರಲ್ಲಿ ಶೇ. ೩.೬೪ ಟಿನ್, ಶೇ. ೬೯.೦೯ ಮಾಳಿಗೆ, ಶೇ. ೨೧.೮೧ರಷ್ಟು ಆರ್ ಸಿ ಸಿ ಹಾಗೂ ಶೇ. ೫.೪೫ರಷ್ಟು ಜನತಾ ಮನೆಗಳು ಕಂಡುಬರುತ್ತದೆ.

ಮೂರು ತಾಂಡಾಗಳು ಹೊಂದಿರುವ ಮನೆಗಳ ಮಾದರಿಗಳನ್ನು ತುಲನೆ ಮಾಡಿದಾಗ ತಿಳಿಯುವುದೇನೆಂದರೆ ಲಂಬಾಣಿಗರ ಆರ್ಥಿಕ ಸ್ಥಿತಿ ಮೊದಲಿಗಿಂತಲೂ ಇಂದು ಉತ್ತಮಗೊಳ್ಳುತ್ತಿರುವುದರಿಂದ ಅವರು ಟಿನ್, ಆರ್.ಸಿ.ಸಿ, ಮಾಳಿಗೆ ಮನೆಗಳನ್ನು ಕಟ್ಟಿಕೊಂಡಿರುವದು ಗೋಚರಿಸುತ್ತದೆ. ಆದರೂ ಕೂಡಾ ಸರಕಾರಿ ಸೌಲಭ್ಯಗಳಿಂದ ವಂಚಿತರಾಗಿದ್ದಾರೆಂದು ಹೇಳಬಹುದು. ಏಕೆಂದರೆ ತಾಂಡಾಗಳಲ್ಲಿನ ಇತರ ಪ್ರಕಾರದ ಮನೆಗಳ ಮಾದರಿಗೆ ಹೋಲಿಸಿದಾಗ ಜನತಾ ಮನೆಗಳ ಪ್ರಮಾಣ ಕಡಿಮೆಯಿರುವುದನ್ನು ನೋಡುತ್ತೇವೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಮೂರು ತಾಂಡಾಗಳಲ್ಲಿ ಬಾಡಿಗೆ ಮನೆಗಳು ಗೋಚರಿಸುವುದಿಲ್ಲ. ಏಕೆಂದರೆ ಎಷ್ಟೇ ಆರ್ಥಿಕ ಪರಿಸ್ಥಿತಿ ಸುಧಾರಿಸಿದರೂ, ಅದು ಕೇವಲ ಹೊಟ್ಟೆ ಬಟ್ಟೆಗೆ ಸಾಕಾಗುವುದಿಲ್ಲ. ಇದರಿಂದಾಗಿ ಮನೆಗೆ

ಬಾಡಿಗೆ ಕೊಡುವ ಸಾಮರ್ಥ್ಯವಿಲ್ಲದಿರುವುದರಿಂದ ಬಯಲು ಜಾಗದಲ್ಲಿಯೇ ಚಿಕ್ಕ ಚಿಕ್ಕ ಟಿನ್ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಹೀಗಾಗಿ ಈ ತಾಂಡಾಗಳ ಲಂಬಾಣಿಗರು ಬಾಡಿಗೆ ಮನೆಗಳಲ್ಲಿ ವಾಸಿಸುತ್ತಿಲ್ಲ ಎಂಬ ಅಂಶ ಸ್ಪಷ್ಟವಾಗಿ ಗೊತ್ತಾಗುತ್ತದೆ. ಗ್ರಾಮ ಹತ್ತಿರದ ಹಾಗೂ ರಸ್ತೆ ಹತ್ತಿರದ ತಾಂಡಾಗಳಿಗೆ ಹೋಲಿಸಿದಾಗ ರಿಮೋಟ್ ತಾಂಡಾಗಳಲ್ಲಿ ಆರ್ ಸಿ ಸಿ ಮನೆಗಳ ಸಂಖ್ಯೆ ಕಡಿಮೆ ಇದ್ದು, ಮಾಳಿಗೆ ಮನೆಗಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬರುತ್ತದೆ.

**ಕೋಷ್ಟಕ ೫.೪.೨. ಸೋಲಾಪುರ ಜಿಲ್ಲೆಯ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ವಿವರ**

| ಜಿಲ್ಲೆ | ನೆಲೆಗಳು | ಮನೆಗಳ ಮಾದರಿ | | | | | | |
|---|---|---|---|---|---|---|---|---|
| | | ಗುಡಿಸಲು | ಟಿನ್ | ಮಾಳಿಗೆ | ಆರ್.ಸಿ.ಸಿ | ಹೆಂಚಿನ | ಜನತಾ | ಒಟ್ಟು |
| ಸೋಲಾಪುರ | ರಿಮೋಟ್ ತಾಂಡಾ | - | ೯ | ೩೮ | ೧೭ | - | ೫ | ೬೯ |
| | ಗ್ರಾಮ ಹತ್ತಿರದ ತಾಂಡಾ | - | ೪ | ೩೩ | ೧೪ | - | ೧೪ | ೬೫ |
| | ರಸ್ತೆ ಹತ್ತಿರದ ತಾಂಡಾ | - | ೪ | ೬ | ೨೧ | ೧೦ | ೧೨ | ೫೩ |
| | **ಒಟ್ಟು** | - | ೧೭ | ೭೭ | ೫೨ | ೧೦ | ೩೧ | ೨೮೭ |

ಕೋಷ್ಟಕ ೫.೪.೨ರಲ್ಲಿ ಸೋಲಾಪುರ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಮೂರು ಪ್ರಕಾರದ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳನ್ನು ಕುರಿತ ವಿವರವಿದೆ. ಈ ಜಿಲ್ಲೆಯ ಮೂರು ತಾಂಡಾಗಳಲ್ಲಿ ಒಟ್ಟು ೧೮೭ ಮನೆಗಳಿದ್ದು ಅದರಲ್ಲಿ ೧೭ ಟಿನ್, ೭೭ ಮಾಳಿಗೆ, ೫೨ ಆರ್ ಸಿ ಸಿ, ೧೦ ಹೆಂಚಿನ ಮತ್ತು ೩೧ ಜನತಾ ಮನೆಗಳಿರುವುದು ಕಂಡುಬರುತ್ತದೆ. ರಿಮೋಟ್ ತಾಂಡಾಗಳು ಒಟ್ಟು ೬೯ ಮನೆಗಳನ್ನು ಹೊಂದಿದ್ದು, ಅವುಗಳಲ್ಲಿ ಶೇ. ೧೩.೦೪ ಟಿನ್, ಶೇ. ೫೫.೦೭ ಮಾಳಿಗೆ, ಶೇ. ೨೪.೬೩ ಆರ್.ಸಿ.ಸಿ ಹಾಗೂ ಶೇ. ೭.೨೪ರಷ್ಟು ಜನತಾ ಮನೆಗಳಿವೆ. ಗ್ರಾಮ ಹತ್ತಿರದ ತಾಂಡಾಗಳು ಒಟ್ಟು ೬೫ ಮನೆಗಳನ್ನು ಹೊಂದಿದ್ದು,ಅದರಲ್ಲಿ ಶೇ. ೬.೧೫ ಟಿನ್, ಶೇ. ೫೦.೭೬ ಮಾಳಿಗೆ, ಶೇ. ೨೧.೫೩ ಆರ್ ಸಿ ಸಿ, ಶೇ. ೨೧.೫೩ ಜನತಾ ಮನೆಗಳ ಸೌಲಭ್ಯವನ್ನು ಪಡೆದುಕೊಂಡಿದ್ದಾರೆ. ರಸ್ತೆ ಹತ್ತಿರದ ತಾಂಡಾಗಳು ಒಟ್ಟು ೫೩ ಮನೆಗಳನ್ನು ಹೊಂದಿದ್ದು, ಅವುಗಳಲ್ಲಿ ಶೇ. ೭.೫೪ ಟಿನ್, ಶೆ. ೧೧.೩೨ ಮಾಳಿಗೆ, ಶೇ. ೩೯.೬೨ ಆರ್ ಸಿ ಸಿ ಶೇ. ೧೮.೮೬ ಹೆಂಚಿನ ಮನೆಗಳು ಹಾಗೂ ಶೇ. ೨೨.೬೪ರಷ್ಟು ಜನತಾ ಮನೆಗಳಿರುವುದು ಕಂಡುಬರುತ್ತದೆ

ಮೂರು ತಾಂಡಾಗಳು ಹೊಂದಿರುವ ಮನೆಗಳ ಮಾದರಿಗಳನ್ನು ತುಲನೆಮಾಡಿ ನೋಡಿದಾಗ, ಮೂರು ತಾಂಡಾಗಳಲ್ಲಿ ಗುಡಾರ, ಗುಡಿಸಲು ಮತ್ತು ಬಾಡಿಗೆ ಮನೆಗಳು ಕಂಡುಬರುವುದಿಲ್ಲ.

ರಿಮೋಟ್ ತಾಂಡಾಗಳಲ್ಲಿ ಮಾಳಿಗೆ ಮನೆಗಳು ಹೆಚ್ಚಾಗಿ ಕಂಡುಬಂದರೆ, ರಸ್ತೆ ಹತ್ತಿರದ ತಾಂಡಾಗಳಲ್ಲಿ ಆರ್ ಸಿ ಸಿ ಮನೆಗಳು ಹೆಚ್ಚಾಗಿ ಗೋಚರವಾಗುತ್ತವೆ. ಹಾಗೂ ರಸ್ತೆ ಹತ್ತಿರದ ತಾಂಡಾಗಳಲ್ಲಿ ಹೆಂಚಿನ ಮನೆಗಳು ಸಹ ಕಾಣಸಿಗುತ್ತವೆ. ಈ ಜಿಲ್ಲೆಯ ತಾಂಡಾಗಳಲ್ಲಿಯ ಲಂಬಾಣಿಗರು ಜನತಾ ಮನೆಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ ಎಂದು ಹೇಳಬಹುದು. ಇದರಿಂದ ಇವರಿಗೆ ಸರಕಾರದ ವಸತಿ ಯೋಜನೆಗಳ ಕುರಿತಾಗಿ ಸ್ಪಷ್ಟ ಅರಿವು ಇದೆ ಎಂಬುದು ವೇದ್ಯವಾಗುತ್ತದೆ.

**ಕೋಷ್ಟಕ ೫.೪.೩. ರಂಗಾರೆಡ್ಡಿ ಜಿಲ್ಲೆಯ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ವಿವರ**

| ಜಿಲ್ಲೆ | ನೆಲೆಗಳು | ಮನೆಗಳ ಮಾದರಿ | | | | | | |
|---|---|---|---|---|---|---|---|---|
| | | ಗುಡಿಸಲು | ಟಿನ್ | ಮಾಳಿಗೆ | ಆರ್.ಸಿ.ಸಿ | ಹೆಂಚಿನ | ಜನತಾ | ಒಟ್ಟು |
| ರಂಗಾರೆಡ್ಡಿ | ರಿಮೋಟ್ ತಾಂಡಾ | ೯ | ೧೩ | ೨೩ | ೨ | ೬ | ೨೧ | ೭೪ |
| | ಗ್ರಾಮ ಹತ್ತಿರದ ತಾಂಡಾ | – | ೪ | ೩೦ | ೧೫ | ೩ | ೨೧ | ೭೩ |
| | ರಸ್ತೆ ಹತ್ತಿರದ ತಾಂಡಾ | – | ೬ | ೪೧ | ೨೩ | ೫ | ೧೯ | ೯೪ |
| | **ಒಟ್ಟು** | **೯** | **೨೩** | **೯೪** | **೪೦** | **೧೪** | **೬೧** | **೨೪೧** |

ಕೋಷ್ಟಕ ೫.೪.೩ ಆಂಧ್ರ ಪ್ರದೇಶದ ರಂಗಾರೆಡ್ಡಿ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳ ಸ್ವರೂಪವನ್ನು ತಿಳಿಸುತ್ತದೆ. ಈ ಜಿಲ್ಲೆಯ ಮೂರು ತಾಂಡಾಗಳಲ್ಲಿ ಒಟ್ಟು ೯ ಗುಡಿಸಲುಗಳು, ೨೩ ಟಿನ್, ೯೪ ಮಾಳಿಗೆ, ೪೦ ಆರ್ ಸಿ ಸಿ, ೧೪ ಹೆಂಚಿನ ಹಾಗೂ ೬೧ ಜನತಾ ಮನೆಗಳಿವೆ. ರಿಮೋಟ್ ತಾಂಡಾಗಳಲ್ಲಿ ಒಟ್ಟು ೭೪ ಕುಟುಂಬಗಳು ವಾಸಿಸುತ್ತಿದ್ದು, ಅವುಗಳಲ್ಲಿ ಶೇ. ೧೨.೧೬ ಗುಡಿಸಲು, ಶೇ. ೧೭.೫೬ ಟಿನ್, ಶೆ. ೩೧.೦೮ ಮಾಳಿಗೆ, ಶೇ. ೨.೭೦ ಆರ್.ಸಿ.ಸಿ, ಶೇ. ೮.೧೦ ಹೆಂಚಿನ ಹಾಗೂ ಶೇ. ೨೮.೩೭ ರಷ್ಟು ಜನತಾ ಮನೆಗಳು ಕಂಡುಬರುತ್ತವೆ. ಗ್ರಾಮ ಹತ್ತಿರದ ತಾಂಡಾಗಳಲ್ಲಿ ಒಟ್ಟು ೭೩ ಮನೆಗಳಿದ್ದು ಶೇ. ೫.೪೭ ಟಿನ್, ಶೇ. ೪೧.೦೯ ಮಾಳಿಗೆ ಶೇ. ೨೦.೫೪ ಆರ್ ಸಿ ಸಿ, ಶೇ. ೪.೧೦ ಹೆಂಚಿನ ಹಾಗೂ ಶೇ. ೨೮.೭೬ರಷ್ಟು ಜನತಾ ಮನೆಗಳಿವೆ. ರಸ್ತೆ ಹತ್ತಿರದ ತಾಂಡಾಗಳಲ್ಲಿ ಒಟ್ಟು ೯೪ ಮನೆಗಳಿದ್ದು ಶೇ. ೬.೩೮ ಟಿನ್, ಶೇ. ೪೩.೬೧ ಮಾಳಿಗೆ ಶೇ. ೨೪.೪೬ ಆರ್.ಸಿ.ಸಿ, ಶೇ. ೫.೩ ಹೆಂಚಿನ, ಮತ್ತು ಶೇ. ೨೦.೨೧ರಷ್ಟು ಜನತಾ ಮನೆಗಳಿವೆ.

ಮೂರು ತಾಂಡಾಗಳು ಹೊಂದಿರುವ ಮನೆಗಳ ಮಾದರಿಗಳನ್ನು ತುಲನೆ ಮಾಡಿದಾಗ ಮೂರು ತಾಂಡಾಗಳಲ್ಲಿ ಬಾಡಿಗೆ ಮನೆಗಳು ಕಂಡುಬರುವುದಿಲ್ಲ. ಕೇವಲ ರಿಮೋಟ್ ತಾಂಡಾದಲ್ಲಿ ಮಾತ್ರ ೯ ಗುಡಿಸಲು ಮನೆಗಳು ಕಂಡುಬರುತ್ತವೆ. ಇತರ ಪ್ರಕಾರದ ಮನೆಗಳನ್ನು ಗಣನೆಗೆ ತೆಗೆದುಕೊಂಡಾಗ ಮಾಳಿಗೆ ಮನೆಗಳ ಪ್ರಮಾಣ ಹೆಚ್ಚಿರುವುದು ಕಂಡುಬರುತ್ತದೆ. ರಿಮೋಟ್

ತಾಂಡಾಕ್ಕಿಂತ ಉಳಿದೆರಡು ತಾಂಡಾಗಳಲ್ಲಿ ಆರ್ ಸಿ ಸಿ ಮನೆಗಳ ಸಂಖ್ಯೆ ಹೆಚ್ಚಾಗಿದೆ. ಸರಕಾರ ಒದಗಿಸುವ ಜನತಾ ಮನೆಗಳ ಸೌಲಭ್ಯವನ್ನು ಕೂಡಾ ಮೂರು ತಾಂಡಾಗಳ ಲಂಬಾಣಿಗರು ಪಡೆದುಕೊಂಡಿದ್ದಾರೆ.

**ಕೋಷ್ಟಕ ೫.೪.೪. ಮೂರು ಜಿಲ್ಲೆಗಳ ತಾಂಡಾಗಳು ಹೊಂದಿರುವ ಮನೆಗಳ ಮಾದರಿಗಳ ವಿವರ**

| ರಾಜ್ಯಗಳು | ಜಿಲ್ಲೆಗಳು | ಮನೆಗಳ ಮಾದರಿ | | | | | | |
|---|---|---|---|---|---|---|---|---|
| | | ಗುಡಿಸಲು | ಟಿನ್ | ಮಾಳಿಗೆ | ಆರ್.ಸಿ.ಸಿ | ಹೆಂಚಿನ | ಜನತಾ | ಒಟ್ಟು |
| ಕರ್ನಾಟಕ | ಗುಲಬರ್ಗಾ | - | ೨೧ | ೧೫೨ | ೩೧ | - | ೧೧ | ೨೧೫ |
| ಮಹಾರಾಷ್ಟ್ರ | ಸೋಲಾಪುರ | - | ೧೭ | ೭೭ | ೫೨ | ೧೦ | ೩೧ | ೧೮೭ |
| ಆಂಧ್ರ ಪ್ರದೇಶ | ರಂಗಾರೆಡ್ಡಿ | ೯ | ೨೩ | ೯೪ | ೪೦ | ೧೪ | ೬೧ | ೨೪೧ |
| | ಒಟ್ಟು | ೯ | ೬೧ | ೩೨೩ | ೧೨೩ | ೨೪ | ೧೦೩ | ೬೪೩ |

**ಸ್ತಂಭಚಿತ್ರ ೫.೪.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯದ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಮನೆಗಳ ಮಾದರಿಗಳ ವಿವರ**




೫.೪.೪ರ ಕೋಷ್ಟಕ ಮತ್ತು ೫.೪.೧ರ ಸ್ತಂಭಚಿತ್ರವು ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶ ರಾಜ್ಯಗಳ ಮೂರು ಜಿಲ್ಲೆಗಳಾದ ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ರಿಮೋಟ್, ಗ್ರಾಮ ಹತ್ತಿರದ ಮತ್ತು ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಯ ಕುರಿತಾಗಿ ವಿವರಿಸುತ್ತದೆ. ಈ ಮೂರು ರಾಜ್ಯಗಳ ಮೂರು ಜಿಲ್ಲೆಗಳಲ್ಲಿ ಒಟ್ಟು ೯ ಗುಡಿಸಲು, ೬೧ ಟಿನ್, ೩೨೩ ಮಾಳಿಗೆ,

೧೨೩ ಆರ್.ಸಿ.ಸಿ, ೨೪ ಹೆಂಚಿನ ಹಾಗೂ ೧೦೩ ಜನತಾ ಮನೆಗಳಿರುವದು ಗೋಚರವಾಗುತ್ತದೆ. ಗುಲಬರ್ಗಾ ಜಿಲ್ಲೆಯ ತಾಂಡಾಗಳನ್ನು ಗಮನಿಸಿದಾಗ ಇಲ್ಲಿ ಒಟ್ಟು ೨೧೫ ಮನೆಗಳಿದ್ದು, ಅವುಗಳಲ್ಲಿ ಶೇ. ೯.೭೬ ಟಿನ್, ಶೇ. ೭೦.೬೯ ಮಾಳಿಗೆ, ಶೇ. ೧೪.೪೧ ಆರ್.ಸಿ.ಸಿ, ಮತ್ತು ಶೇ. ೫.೧೧ರಷ್ಟು ಜನತಾ ಮನೆಗಳು ಕಂಡುಬಂದಿವೆ. ಸೋಲಾಪುರ ಜಿಲ್ಲೆಯ ತಾಂಡಾಗಳಲ್ಲಿ ಒಟ್ಟು ೧೮೭ ಮನೆಗಳಿದ್ದು, ಅವುಗಳಲ್ಲಿ ಶೇ. ೯.೦೯ ಟಿನ್, ಶೇ. ೪೧.೧೭ ಮಾಳಿಗೆ, ಶೇ. ೨೭.೮೦ ಆರ್.ಸಿ.ಸಿ., ಶೇ. ೫.೩೪ ಹೆಂಚಿನ ಹಾಗೂ ಶೇ. ೧೬.೫೭ರಷ್ಟು ಜನತಾ ಮನೆಗಳನ್ನು ಹೊಂದಿದ್ದಾರೆ, ರಂಗಾರೆಡ್ಡಿ ಜಿಲ್ಲೆಯ ತಾಂಡಾಗಳಲ್ಲಿ ಒಟ್ಟು ೨೪೧ ಮನೆಗಳಿದ್ದು ಅವುಗಳಲ್ಲಿ ಶೇ. ೩.೭೩ ಗುಡಿಸಲು ಶೇ. ೯.೫೪ ಟಿನ್, ಶೇ. ೩೯.೦೦ ಮಾಳಿಗೆ, ಶೇ. ೧೬.೫೯ ಆರ್.ಸಿ.ಸಿ, ಶೇ. ೫.೮೦ ಹೆಂಚಿನ ಹಾಗೂ ಶೇ. ೨೫.೩೧ರಷ್ಟು ಜನತಾ ಮನೆಗಳನ್ನು ಹೊಂದಿದ್ದಾರೆ.

ಮೂರು ಜಿಲ್ಲೆಗಳ ಲಂಬಾಣಿಗರು ಹೊಂದಿರುವ ಮನೆಗಳ ಮಾದರಿಗಳನ್ನು ಗಮನಿಸಿದಾಗ ರಂಗಾರೆಡ್ಡಿ ಜಿಲ್ಲೆಯಲ್ಲಿ ಮಾತ್ರ ಗುಡಿಸಲುಗಳು ಕಂಡುಬರುತ್ತವೆ. ಸೋಲಾಪುರ ಜಿಲ್ಲೆಯ ಲಂಬಾಣಿಗರು ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರಿಗಿಂತ ಹೆಚ್ಚಿನ ಆರ್ ಸಿ ಸಿ ಮನೆಗಳನ್ನು ಹೊಂದಿದ್ದಾರೆ. ಗುಲಬರ್ಗಾ ಜಿಲ್ಲೆಯ ತಾಂಡಾಗಳಲ್ಲಿ ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಿಗಿಂತ ಹೆಚ್ಚಿನ ಪ್ರಮಾಣದ ಮಾಳಿಗೆ ಮನೆಗಳು ಗೋಚರಿಸುತ್ತವೆ. ಮೂರು ಜಿಲ್ಲೆಗಳ ಲಂಬಾಣಿಗರಲ್ಲಿ ಸೋಲಾಪುರ ಜಿಲ್ಲೆಯ ಲಂಬಾಣಿಗರು ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರಿಗಿಂತ ಉತ್ತಮವಾದ ಹಾಗೂ ಸುಸಜ್ಜಿತ ವಸತಿ ಸೌಕರ್ಯಗಳನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ.

**೫.೫. ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳು**

ಯಾವುದೇ ಒಬ್ಬ ವ್ಯಕ್ತಿ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಆರ್ಥಿಕ ಚಟುವಟಿಕೆಗಳು ಮುಖ್ಯ ಪಾತ್ರವಹಿಸುತ್ತವೆ. ಸಮಾಜದಲ್ಲಿ ಉಳ್ಳವರು ಇಲ್ಲದವರು, ಮೇಲು–ಕೀಳು, ಬಡವ–ಬಲ್ಲಿದ ಎಂಬ ಶ್ರೇಣೀಕರಣ ಇರುವುದನ್ನು ಕಾಣುತ್ತೇವೆ. "ಲಂಬಾಣಿಗರು ಶತಮಾನಗಳಿಂದ ಅಲೆಮಾರಿಗಳಾಗಿದ್ದರು. ಆಹಾರ ಸಾಮಗ್ರಿ, ದವಸಧಾನ್ಯ, ಲವಣ, ಮುಂತಾದ ಅತ್ಯವಶ್ಯಕ ಸರಕುಗಳನ್ನು ದನಕರುಗಳ ಮೇಲೆ ಹೇರಿಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆಯುತ್ತಾ ವ್ಯಾಪಾರ ಮಾಡುತ್ತಿದ್ದರು. ಸಾವಿರಾರು ಸಂಖ್ಯೆಯಲ್ಲಿ ದನಕರುಗಳನ್ನು ಹೊಂದಿ ಆರ್ಥಿಕ ಸ್ವಾವಲಂಬಿಗಳಾಗಿದ್ದರು" (ವಿಜಯಲಕ್ಷ್ಮೀ ಆರ್ :೨೦೦೪:೪೬). ಆದರೆ ಕಾಲಕ್ರಮೇಣ ಲಂಬಾಣಿಗರು ಅಲೆಮಾರಿತನವನ್ನು ತಾವು ಅನುಸರಿಸಿದ ಆರ್ಥಿಕ ಚಟುವಟಿಕೆ ಅಥವಾ ಉದ್ಯೋಗದ ಕಾರಣದಿಂದ ತೊರೆಯುತ್ತಾ ಬಂದು ಆಧುನೀಕರಣದ ಪ್ರಭಾವಕ್ಕೆ ಒಳಗಾಗಿ ಆರ್ಥಿಕ ಬದಲಾವಣೆ ಗಳಿಗೂ ಒಳಪಟ್ಟಿದ್ದಾರೆ.

ಕೈಗಾರೀಕರಣದಡಿ ಪ್ರಪಂಚದಾದ್ಯಂತ ೧೭ ಮತ್ತು ೧೮ನೇ ಶತಮಾನಗಳಲ್ಲಿ ಯುರೋಪಿನಲ್ಲುಂಟಾದ ಕೈಗಾರಿಕಾ ಕ್ರಾಂತಿಯಿಂದಾಗಿ ಬದಲಾವಣೆಯ ಪ್ರಕ್ರಿಯೆ ಹೆಚ್ಚಾಗುತ್ತಾ ಬಂದಿತು.

ಹೊಸ ಹೊಸ ಉದ್ಯೋಗಗಳ ಸ್ಥಾಪನೆ ಒಂದೆಡೆಯಾದರೆ, ಮತ್ತೊಂದೆಡೆ ಪಾರಂಪರಿಕ ವೃತ್ತಿಗಳು ನಾಶವಾಗುತ್ತಾ ಬಂದವು. ಶ್ರಮ ವಿಭಜನೆಯು ಸೂಕ್ಷ್ಮಗೊಂಡು ಹೊಸ ಆರ್ಥಿಕ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದಿತು. ಕೈಗಾರೀಕರಣದಿಂದ ಗ್ರಾಮೀಣ ಜನರ ನಗರಾಭಿಮುಖ ವಲಸೆಯು ಹೆಚ್ಚಾಯಿತು. ಇಂದು ತಾಂಡಾಗಳಲ್ಲಿ ಆಧುನಿಕತೆ ಮತ್ತು ಕೈಗಾರೀಕರಣದಿಂದ ನಗರಾಭಿಮುಖ ವಲಸೆಯು ಹೆಚ್ಚಾಗುತ್ತಿದ್ದು, ಹೊಸ ಹೊಸ ಉದ್ಯೋಗ ಹೊಂದಲು ಪ್ರಯತ್ನಿಸಿದರು. ವೃತ್ತಿಹೀನರಾಗಿ ಪರ್ಯಾಯ ವೃತ್ತಿಗಾಗಿ ವ್ಯಾಪಾರ ನಿಮಿತ್ತ ತೆರಳಿದ್ದ ಪ್ರದೇಶದಲ್ಲಿ ನೆಲೆಯನ್ನು ಕಂಡುಕೊಳ್ಳುತ್ತಾ ಬಂದರು. ಹೀಗೆ ನೆಲೆನಿಂತಾಗ ಲಂಬಾಣಿಗರು ಕಂಡುಕೊಂಡ ಉದ್ಯೋಗವೆಂದರೆ ಕೂಲಿ, ತದನಂತರ ಕಾಲಕ್ರಮೇಣ ಜಮೀನು ಹೊಂದಿದ ಕೆಲ ಕುಟುಂಬಗಳು ಮಾತ್ರ ವ್ಯವಸಾಯವನ್ನು ಅವಲಂಬಿಸಿದರು. ಅಧ್ಯಯನ ಕ್ಕೊಳಪಟ್ಟ ಮೂರು ಜಿಲ್ಲೆಗಳಾದ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿಯಲ್ಲಿ ವಾಸಿಸುತ್ತಿರುವ ಬಹುಪಾಲು ಲಂಬಾಣಿಗರು ಇಂದಿಗೂ ಕೃಷಿ ಕಾರ್ಮಿಕರಾಗಿ ದುಡಿದು ಕೂಲಿಯನ್ನು ಪಡೆಯುತ್ತಿದ್ದಾರೆ. "ಕೂಲಿ ಎಂದರೆ ಬೇರೆಯವರ ಜಮೀನಿನಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣ ಇಲ್ಲವೆ ಧಾನ್ಯಗಳನ್ನು ಪಡೆಯುವ ಕ್ರಮವಾಗಿದೆ"(ಅದೇ:ಪು:೬೦). ಸ್ತ್ರೀ ಪುರುಷರೀರ್ವರೂ ಲಿಂಗಭೇದವಿಲ್ಲದೇ ಕೃಷಿ ಕೂಲಿಯನ್ನು ಮಾಡುತ್ತಾರೆ. ಕೃಷಿ ಕೂಲಿಯು ಅರೆಕಾಲಿಕ ಉದ್ಯೋಗವಾಗಿದ್ದು ವರ್ಷವಿಡಿ ದೊರೆಯುವುದಿಲ್ಲ. ಲಂಬಾಣಿಗರಿಗೆ ತಾವು ವಾಸಿಸುವ ತಾಂಡಾಗಳಲ್ಲಿ ಕೃಷಿ ಕೂಲಿ ಸಿಗುವುದು ತುಂಬಾ ಕಡಿಮೆ, ಹಾಗಾಗಿ ಅವರು ಸಮೀಪದ ಊರುಗಳಿಗೆ ಕೂಲಿ ಮಾಡಲು ತೆರಳುತ್ತಾರೆ. ಕೂಲಿಯಿಂದ ಬರುವ ಆದಾಯವೇ ಇವರ ಜೀವನೋಪಾಯದ ಆಧಾರವಾಗಿದೆ. ಲಂಬಾಣಿಗರು ಕಷ್ಟಸಹಿಷ್ಣುಗಳಾಗಿರುವದರಿಂದ ಕೃಷಿ ಕೂಲಿಗಾಗಿ ಇವರಿಗೆ ಹೆಚ್ಚಿನ ಬೇಡಿಕೆಯಿದೆ. ಭೂ ಮಾಲಿಕರು ಕೂಲಿಯಾಳುಗಳನ್ನು ಕರೆದುಕೊಂಡು ಹೋಗಲು ತಾಂಡಾಗಳಿಗೆ ಟ್ರಾಕ್ಟರ್ ಮತ್ತಿತರ ವಾಹನಗಳ ವ್ಯವಸ್ಥೆಯನ್ನು ಮಾಡುವುದು ಗೋಚರಿಸುತ್ತದೆ.

ಕೃಷಿ ಕೂಲಿಯಲ್ಲಿ ಸ್ತ್ರೀ ಪುರುಷರ ನಡುವೆ ಸಾಕಷ್ಟು ತಾರತಮ್ಯವಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಪುರುಷರ ಶ್ರಮಕ್ಕೆ ಹೆಚ್ಚಿನ ಕೂಲಿಯ ದರವನ್ನು ನೀಡಿ, ಸ್ತ್ರೀಯರ ಶ್ರಮಕ್ಕೆ ಕಡಿಮೆ ಬೆಲೆಯನ್ನು ನಿಗದಿಪಡಿಸುವುದು ಮೂರು ಜಿಲ್ಲೆಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಕೃಷಿ ಕೂಲಿಯು ಸಂದರ್ಭ ಹಾಗೂ ಪ್ರದೇಶಗಳಿಗೆ ತಕ್ಕಂತೆ ವಿಭಿನ್ನವಾಗಿರುತ್ತದೆ. ಕರ್ನಾಟಕದ ಗುಲಬರ್ಗಾ ಜಿಲ್ಲೆಯಲ್ಲಿ ದುಡಿಯುವ ಪುರುಷ ಕೂಲಿಕಾರರಿಗೆ ಒಂದು ದಿನದ ಶ್ರಮಕ್ಕೆ ೧೪೦ ರಿಂದ ೧೬೦ ರೂಪಾಯಿಗಳಾದರೆ, ಮಹಿಳೆಯರಿಗೆ ೬೦ ರಿಂದ ೮೦ ರೂ.ಗಳನ್ನು ನೀಡಲಾಗುತ್ತಿದೆ. ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಯಲ್ಲಿ ಪುರುಷರಿಗೆ ೨೦೦ ರಿಂದ ೨೫೦, ಮಹಿಳೆಯರಿಗೆ ೧೦೦ ರಿಂದ ೧೫೦, ಹಾಗೂ ಆಂಧ್ರ ಪ್ರದೇಶದ ರಂಗಾರೆಡ್ಡಿ ಜಿಲ್ಲೆಯಲ್ಲಿ ಪುರುಷರಿಗೆ ೧೩೦ ರಿಂದ ೧೫೦, ಮಹಿಳೆಯರಿಗೆ ೫೦ ರಿಂದ ೭೦ ರೂಪಾಯಿಗಳಷ್ಟು ಕೂಲಿಯ ದರವಿರುವುದು ಕಂಡುಬರುತ್ತದೆ. ಮೂರು ಜಿಲ್ಲೆಗಳಲ್ಲಿಯ ಕೂಲಿಯನ್ನು ತುಲನೆ ಮಾಡಿದಾಗ ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಸೋಲಾಪುರ ಜಿಲ್ಲೆಯಲ್ಲಿ ಕೂಲಿಯ ದರ ಹೆಚ್ಚಾಗಿದೆ.

ಸುಶಿಕ್ಷಿತರು ಆಧುನಿಕತೆಗೆ, ಬದಲಾವಣೆ ಪ್ರಕ್ರಿಯೆಗೆ ಒಳಗಾಗಿ ಹೊಸ ಹೊಸ ಆಧುನಿಕ ವೃತ್ತಿಗಳಾದ ಅಂಗಡಿ, ಹೋಟೆಲ್ ಇತ್ಯಾದಿ ಕೆಲಸಗಳನ್ನು ಮಾಡುತ್ತಾರೆ. ಇನ್ನುಳಿದ ಕೆಲವರು ಉನ್ನತ ಶಿಕ್ಷಣವನ್ನು ಪಡೆದು ಸರಕಾರಿ ಉದ್ಯೋಗವನ್ನು ಪಡೆದುಕೊಂಡಿದ್ದಾರೆ. ಈ ಸಂದರ್ಭದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಅಧ್ಯಯಿನಿಸಲಾದ ರಿಮೋಟ್, ಗ್ರಾಮ ಮತ್ತು ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಅವಲಂಬಿಸಿರುವ ಕಸುಬು ಅಥವಾ ಉದ್ಯೋಗಗಳ ಬಗೆಗೆ ಕ್ರಮವಾಗಿ ವಿವರಿಸಲಾಗಿದೆ.

**ಕೋಷ್ಟಕ ೫.೫.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ**

| ಕಸಬುಗಳು | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಕೃಷಿ | ೧೯ | ೧೭ | ೩೬ | ೪೪ | ೫೦ | ೯೪ | ೩೩ | ೩೯ | ೭೨ |
| ಕೃಷಿ ಕೂಲಿ | ೧೨೪ | ೧೧೧ | ೨೩೫ | ೫೯ | ೫೭ | ೧೧೬ | ೬೭ | ೫೫ | ೧೨೨ |
| ಗಾರೆ ಕೆಲಸ | – | – | – | ೩ | ೧ | ೪ | – | – | – |
| ಸರ್ಕಾರಿ | ೨ | – | ೨ | ೧೯ | ೧ | ೨೦ | ೧೩ | ೨ | ೧೫ |
| ಖಾಸಗಿ | – | – | – | ೩ | ೨ | ೫ | ೧ | – | ೧ |
| ಇತರೆ | ೨ | – | ೨ | ೮ | ೪ | ೧೨ | ೧೦ | – | ೧೦ |
| **ಒಟ್ಟು** | **೧೪೭** | **೧೨೮** | **೨೭೫** | **೧೩೬** | **೧೧೫** | **೨೫೧** | **೧೨೪** | **೯೬** | **೨೨೦** |

ಕೋಷ್ಟಕ ೫.೫.೧. ಬದಲಾಗುತ್ತಿರುವ ಸಮಾಜದಲ್ಲಿ ಲಂಬಾಣಿಗರು ಅನುಸರಿಸುತ್ತಿರುವ ಅನೇಕ ವಿಧವಾದ ವೃತ್ತಿಗಳ ಪ್ರಮಾಣವೆಷ್ಟು ಎಂಬುದನ್ನು ಸೂಚಿಸುತ್ತದೆ. ಗುಲಬರ್ಗಾ ಜಿಲ್ಲೆಯ ರಿಮೋಟ್ ತಾಂಡಾಗಳನ್ನು ಗಮನಿಸಿದಾಗ, ಒಟ್ಟು ಕೆಲಸ ಮಾಡುವವರ ಸಂಖ್ಯೆಯಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೧೩.೦೯ ಇದ್ದು, ಇದರಲ್ಲಿ ಶೇ.೧೨.೯೨ ಪುರುಷರು, ಶೇ. ೧೩.೨೮ ಮಹಿಳೆಯರು ಹಾಗೂ ಕೃಷಿ ಕೂಲಿ ಮಾಡುತ್ತಿರುವವರ ಒಟ್ಟು ಪ್ರಮಾಣವು ಶೇ. ೮೫.೪೫ ಇದ್ದು, ಇದರಲ್ಲಿ ಶೇ. ೮೪.೩೫ ಪುರುಷರು, ಶೇ. ೮೬.೭೧ ಮಹಿಳೆಯರು ಕೃಷಿ ಕೂಲಿಯನ್ನು ಮಾಡುತ್ತಿದ್ದಾರೆ. ಕೃಷಿ ಮತ್ತು ಕೃಷಿ ಕೂಲಿ ಕೆಲಸವನ್ನು ಗಣನೆಗೆ ತೆಗೆದುಕೊಂಡಾಗ ಎರಡರಲ್ಲೂ ಪುರುಷರಿಗಿಂತ ಮಹಿಳೆಯರ ಪ್ರಮಾಣ ಹೆಚ್ಚಾಗಿದೆ. ಅದೇ ರೀತಿ ಸರ್ಕಾರಿ ಮತ್ತು ಇತರೆ ಕೆಲಸಗಳನ್ನು ಪರಿಗಣಿಸಿದಾಗ ಕೇವಲ ಶೇ. ೧.೩೬ರಷ್ಟು ಪ್ರಮಾಣದ ಪುರುಷರು ಕ್ರಮವಾಗಿ ಈ ಎರಡು ಕೆಲಸಗಳನ್ನು ಮಾಡುತ್ತಿದ್ದು, ಈ ಕೆಲಸಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಇಲ್ಲದಿರುವುದನ್ನು ನೋಡುತ್ತೇವೆ. ಈ ತಾಂಡಾಗಳ ಲಂಬಾಣಿಗರು ಗಾರೆ ಕೆಲಸ ಮತ್ತು ಖಾಸಗಿ ಕೆಲಸದಲ್ಲಿ ತೊಡಗಿಲ್ಲದಿರುವುದು ಮೇಲಿನ ಅಂಕಿ ಸಂಖ್ಯೆಗಳಿಂದ ವ್ಯಕ್ತವಾಗುತ್ತದೆ.

ಗ್ರಾಮ ಹತ್ತಿರದ ತಾಂಡಾವನ್ನು ವೀಕ್ಷಿಸಿದಾಗ, ಇಲ್ಲಿ ಒಟ್ಟು ಕೆಲಸಮಾಡುವವರ ಸಂಖ್ಯೆ ೨೫೧ ಇದ್ದು, ಇದರಲ್ಲಿ ಶೇ. ೫೪.೧೮ರಷ್ಟು ಪುರುಷರು, ಶೇ. ೪೫.೮೨ರಷ್ಟು ಮಹಿಳೆಯರಿದ್ದಾರೆ. ಹೀಗೆ ಒಟ್ಟು ಕೆಲಸ ಮಾಡುವವರ ಪ್ರಮಾಣದಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೩೭.೪೫ ಇದ್ದು, ಶೇ. ೩೨.೩೫ ಪುರುಷರು, ಶೇ. ೪೩.೪೭ರಷ್ಟು ಮಹಿಳೆಯರು. ಕೃಷಿ ಕೂಲಿ ಕೆಲಸ ಮಾಡುವವರ ಪ್ರಮಾಣ ಶೇ. ೪೬.೨೧ರಷ್ಟಿದ್ದು, ಇದರಲ್ಲಿ ಶೇ. ೪೩.೩೮ ಪುರುಷರು, ಶೇ. ೪೯.೫೬ ಮಹಿಳೆಯರು ಕೃಷಿ ಕೂಲಿ ಕೆಲಸವನ್ನು ಮಾಡುತ್ತಿದ್ದಾರೆ. ಗಾರೆಕೆಲಸ ಮಾಡುತ್ತಿರುವವರ ಪ್ರಮಾಣ ಶೇ. ೧.೫೯ ಆಗಿದ್ದು, ಶೇ. ೨.೨೦ ಪುರುಷರು, ಶೇ. ೦.೮೬ರಷ್ಟು ಮಹಿಳೆಯರಿದ್ದಾರೆ. ಸರ್ಕಾರಿ ಕೆಲಸವನ್ನು ಪರಿಗಣಿಸಿದಾಗ ಕೆಲಸ ಮಾಡುವವರ ಪ್ರಮಾಣ ಶೇ. ೭.೯೬ ಇದ್ದು, ಶೇ. ೧೩.೯೭ ಪುರುಷರು, ಶೇ. ೦.೮೬ ಸ್ತ್ರೀಯರು ಇರುವುದನ್ನು ಕಾಣುತ್ತೇವೆ. ಖಾಸಗಿ ಕೆಲಸ ಮಾಡುವವರ ಪ್ರಮಾಣ ತುಂಬಾ ಕಡಿಮೆಯಿದ್ದು ಅಂದರೆ ಶೇ. ೧.೯೯ ಇದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೨.೨೦, ಸ್ತ್ರೀಯರ ಪ್ರಮಾಣ ಶೇ. ೧.೭೪ ಆಗಿದೆ. ಹಾಗೂ ಇತರೆ ಕೆಲಸಗಳಲ್ಲಿ ತೊಡಗಿದವರ ಪ್ರಮಾಣ ಶೇ. ೪.೭೮ ಆಗಿದ್ದು, ಇದರಲ್ಲಿ ಶೇ. ೫.೮೮ರಷ್ಟು ಪುರುಷರು, ಶೇ. ೩.೪೭ರಷ್ಟು ಮಹಿಳೆಯರು ಕಂಡುಬರುತ್ತಾರೆ.

ರಸ್ತೆ ಹತ್ತಿರದ ತಾಂಡಾಗಳನ್ನು ಗಮನಿಸಿದಾಗ ಇಲ್ಲಿ ಕೆಲಸ ಮಾಡುವವರ ಒಟ್ಟು ಸಂಖ್ಯೆ ೨೨೦, ಇದರಲ್ಲಿ ಶೇ. ೫೬.೩೬ ಪುರುಷರು ಹಾಗೂ ಶೇ. ೪೩.೬೪ರಷ್ಟು ಸ್ತ್ರೀಯರ ಪ್ರಮಾಣವಿದೆ. ಹೀಗೆ ಎಲ್ಲ ಕೆಲಸಗಳನ್ನು ಮಾಡುತ್ತಿರುವವರಲ್ಲಿ ಕೃಷಿ ಕೆಲಸ ಮಾಡುತ್ತಿರುವವರ ಪ್ರಮಾಣ ಶೇ. ೩೨.೭೨ ಇದ್ದು, ಶೇ. ೨೬.೬೧ ಪುರುಷರು, ಶೇ. ೪೦.೬೨ ಮಹಿಳೆಯರು. ಕೃಷಿಕೂಲಿ ಕೆಲಸ ಮಾಡುವವರ ಪ್ರಮಾಣ ಶೇ. ೫೫.೪೫ರಷ್ಟಿದ್ದು ಇದರಲ್ಲಿ ಶೇ. ೫೪.೦೩ ಪುರುಷರು, ಶೇ. ೫೭.೨೯ ಮಹಿಳೆಯರಿದ್ದಾರೆ. ಅದರಂತೆ ಸರಕಾರಿ ಕೆಲಸ ಮಾಡುತ್ತಿರುವವರ ಪ್ರಮಾಣ ಶೇ. ೬.೮೧ ಆಗಿದ್ದು, ಶೇ. ೧೦.೪೮ ಪುರುಷರು, ಶೇ. ೨.೦೮ ಸ್ತ್ರೀಯರು ಹಾಗೂ ಖಾಸಗಿಯಲ್ಲಿ ಶೇ. ೦.೪೫ರಷ್ಟು ಪುರುಷರು ಮತ್ತು ಇತರೆ ಕೆಲಸಗಳಲ್ಲಿ ಒಟ್ಟು ಶೇ. ೪.೫೪ರಷ್ಟು ಪುರುಷರು ಕೆಲಸ ಮಾಡುತ್ತಿದ್ದಾರೆ. ಖಾಸಗಿ ಮತ್ತು ಇತರೆ ಕೆಲಸಗಳಲ್ಲಿ ರಸ್ತೆ ಹತ್ತಿರದ ತಾಂಡಾದ ಲಂಬಾಣಿ ಮಹಿಳೆಯರು ಕಂಡು ಬರುವುದಿಲ್ಲ.

ಮೂರು ತಾಂಡಾಗಳನ್ನು ಅನುಲಕ್ಷಿಸಿ ಇಲ್ಲಿಯ ಲಂಬಾಣಿಗರು ಮಾಡುತ್ತಿರುವ ಕಸುಬುಗಳನ್ನು ತುಲನೆ ಮಾಡಿ ನೋಡಿದಾಗ ಮೂರು ತಾಂಡಾಗಳಲ್ಲಿ ಕೃಷಿ ಹಾಗೂ ಕೂಲಿ ಕೆಲಸಗಳಲ್ಲಿ ಪುರುಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಏಕೆಂದರೆ ಪುರುಷರು ಅಲ್ಪ ಮಟ್ಟಿಗೆ ಶಿಕ್ಷಣವನ್ನು ಪಡೆದು ಸರ್ಕಾರಿ ಖಾಸಗಿ ಹಾಗೂ ಇತರೆ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಆದರೆ ಹೆಚ್ಚಿನ ಸಂಖ್ಯೆಯ ಲಂಬಾಣಿ ಮಹಿಳೆಯರು ಅನಕ್ಷರಸ್ಥರಾಗಿರುವುದರಿಂದ ಅವರು ಅನಿವಾರ್ಯವಾಗಿ ಕೃಷಿಯನ್ನು ಹಾಗೂ ಅದಕ್ಕೆ ಪೂರಕವಾದ ಕೃಷಿ ಕೂಲಿ ಚಟುವಟಿಕೆಗಳಲ್ಲಿ

ತೊಡಗಿರುವುದು ಅಂಕಿ-ಅಂಶಗಳಿಂದ ಸ್ಪಷ್ಟವಾಗುತ್ತದೆ. ಹಾಗೆಯೇ ರಿಮೋಟ್ ಮತ್ತು ರಸ್ತೆ ಹತ್ತಿರದ ತಾಂಡಾಗಳಲ್ಲಿ ಗಾರೆ ಕೆಲಸ ಮಾಡುವವರ ಪ್ರಮಾಣ ಶೂನ್ಯವಾಗಿದ್ದು, ಕೇವಲ ಗ್ರಾಮ ಹತ್ತಿರದ ತಾಂಡಾಗಳಲ್ಲಿ ಮಾತ್ರ ಸ್ವಲ್ಪ ಪ್ರಮಾಣದಲ್ಲಿ ಅಂದರೆ ಶೇ. ೧.೫೯ರಷ್ಟು ಲಂಬಾಣಿಗರು ಗೋಚರಿಸುತ್ತಾರೆ.

**ಕೋಷ್ಟಕ ೫.೫.೨. ಸೋಲಾಪುರ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ**

| ಕಸುಬುಗಳು | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಕೃಷಿ | ೩೯ | ೫೦ | ೮೯ | ೨೩ | ೨೭ | ೫೦ | ೭ | ೫ | ೧೨ |
| ಕೃಷಿ ಕೂಲಿ | ೩೯ | ೪೯ | ೮೮ | ೨೪ | ೪೨ | ೬೬ | ೨೩ | ೪೧ | ೬೪ |
| ರಸ್ತೆ ಡಾಂಬರೀಕರಣ | – | – | – | – | – | – | ೪ | ೨ | ೬ |
| ಗಾರೆ ಕೆಲಸ | ೩೬ | ೩೦ | ೬೬ | ೧೧ | ೧೧ | ೨೨ | ೧೪ | ೨೧ | ೩೫ |
| ಇಟ್ಟಿಗೆ | ೮ | ೧ | ೯ | ೩ | ೮ | ೧೧ | ೧೩ | ೯ | ೨೨ |
| ಸಿಮೆಂಟ | ೩ | – | ೩ | ೨ | – | ೨ | ೯ | – | ೯ |
| ಗುತ್ತಿಗೆ ಕೆಲಸ | – | – | – | – | – | – | ೨ | – | ೨ |
| ಸರ್ಕಾರಿ | ೧೦ | ೧ | ೧೧ | ೫ | – | ೫ | ೨ | – | ೨ |
| ಖಾಸಗಿ | ೧೭ | ೧ | ೧೮ | ೨೦ | ೩ | ೨೩ | ೨ | ೧ | ೩ |
| ಇತರೆ | ೧೩ | – | ೧೩ | ೨೭ | – | ೨೭ | ೨೦ | ೧ | ೨೧ |
| **ಒಟ್ಟು** | **೧೬೫** | **೧೩೨** | **೨೯೭** | **೧೧೫** | **೯೧** | **೨೦೬** | **೯೬** | **೮೦** | **೧೭೬** |

ಕೋಷ್ಟಕವು ಸೋಲಾಪುರ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಲಂಬಾಣಿಗರು ಅನುಸರಿಸುವ ಕಸುಬುಗಳನ್ನು ಕುರಿತಾಗಿ ವಿವರಿಸುತ್ತದೆ. ಇಲ್ಲಿಯ ರಿಮೋಟ್ ತಾಂಡಾವನ್ನು ಗಮನಿಸಿದಾಗ ಎಲ್ಲ ಕೆಲಸಗಳನ್ನು ಮಾಡುವವರ ಒಟ್ಟು ಸಂಖ್ಯೆ ೨೯೭ ಇದ್ದು, ಇದರಲ್ಲಿ ಶೇ. ೫೫.೫೫ರಷ್ಟು ಪುರುಷರು, ಶೇ. ೪೪.೪೪ ಮಹಿಳೆಯರು ವಿವಿಧ ಕೆಲಸಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ಇದರಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೨೯.೯೬ ಇದ್ದು, ಶೇ. ೨೩.೬೩ ಪುರುಷರು, ಶೇ. ೩೭.೮೭ರಷ್ಟು ಮಹಿಳೆಯರು, ಕೃಷಿಕೂಲಿ ಕೆಲಸ ಮಾಡುವವರ ಪ್ರಮಾಣ ಶೇ. ೨೯.೬೨ರಷ್ಟಿದ್ದು, ಶೇ. ೨೩.೬೩ ಪುರುಷರು ಶೇ. ೩೭.೧೨ ಮಹಿಳೆಯರು ಹಾಗೂ ಗಾರೆಕೆಲಸ ಮಾಡುವವರ ಪ್ರಮಾಣ ಶೇ. ೨೨.೨೨ ಇದ್ದು, ಇದರಲ್ಲಿ ಶೇ. ೨೧.೮೧ರಷ್ಟು ಪುರುಷರು, ಶೇ.

೨೨.೭೨ ಮಹಿಳೆಯರು ಕಂಡು ಬರುತ್ತಾರೆ. ಕೃಷಿ, ಕೃಷಿಕೂಲಿ ಮತ್ತು ಗಾರೆಕೆಲಸಗಳಲ್ಲಿ ಪುರುಷರಿಗಿಂತ ಮಹಿಳೆಯರು ಹೆಚ್ಚಾಗಿ ತೊಡಗಿರುವುದನ್ನು ಗಮನಿಸುತ್ತೇವೆ. ಇಟ್ಟಿಗೆ ಕೆಲಸದಲ್ಲಿಯೂ ಲಂಬಾಣಿಗರು ತಮ್ಮನ್ನು ತೊಡಗಿಸಿಕೊಂಡಿದ್ದು ಇದರ ಪ್ರಮಾಣ ಶೇ. ೩.೦೩ ಇದ್ದು, ಶೇ. ೪.೮೪ ಪುರುಷರು, ಶೇ. ೦.೭೫ ಮಹಿಳೆಯರು. ಸಿಮೆಂಟ್ ಕೆಲಸದಲ್ಲಿ ಶೇ. ೧.೮೧ರಷ್ಟು ಪುರುಷರು ಕಂಡುಬರುತ್ತಿದ್ದು ಮಹಿಳೆಯರ ಪ್ರಮಾಣ ಶೂನ್ಯವಾಗಿದೆ. ಸರ್ಕಾರಿ ಮತ್ತು ಖಾಸಗಿ ಕೆಲಸಗಳಲ್ಲಿ ಕ್ರಮವಾಗಿ ಶೇ. ೬.೦೬ ಮತ್ತು ಶೇ. ೧೦.೩೦ರಷ್ಟು ಪುರುಷರು, ಕೇವಲ ಶೇ. ೦.೭೫ರಷ್ಟು ಮಹಿಳೆಯರು ಸರಕಾರಿ ಮತ್ತು ಖಾಸಗಿ ಕೆಲಸಗಳಲ್ಲಿ ತೊಡಗಿರುವುದನ್ನು ಕಾಣಬಹುದು. ಹಾಗೇ ಇತರೆ ಕೆಲಸಗಳಲ್ಲಿ ಕೇವಲ ಶೇ. ೭.೮೭ ಪುರುಷರು ಮಾತ್ರ ದುಡಿಯುವುದನ್ನು ನೋಡುತ್ತೇವೆ.

ಗ್ರಾಮ ಹತ್ತಿರದ ತಾಂಡಾವನ್ನು ಅನುಲಕ್ಷಿಸಿದಾಗ ಕೆಲಸ ಮಾಡುವವರ ಒಟ್ಟು ಸಂಖ್ಯೆ ೨೦೬ ಇದ್ದು, ಇದರಲ್ಲಿ ಶೇ. ೫೫.೮೨ ಪುರುಷರು, ಶೇ. ೪೪.೧೮ರಷ್ಟು ಮಹಿಳೆಯರ ಪ್ರಮಾಣವಿದೆ. ಇದರಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೨೪.೨೭ ಇದ್ದು, ಶೇ. ೨೦ ಪುರುಷರು, ಶೇ. ೨೯.೬೭ ಮಹಿಳೆಯರು, ಕೃಷಿ ಕೂಲಿ ಮಾಡುವವರ ಪ್ರಮಾಣ ಶೇ. ೩೨.೦೩ ಇದ್ದು, ಇದರಲ್ಲಿ ಶೇ. ೨೦.೮೬ ಪುರುಷರು, ಶೇ. ೪೬.೧೫ರಷ್ಟು ಮಹಿಳೆಯರು ಹಾಗೂ ಗಾರೆಕೆಲಸ ಮಾಡುವವರ ಪ್ರಮಾಣ ಶೇ. ೧೦.೬೭ ಇದ್ದು, ಇದರಲ್ಲಿ ಶೇ. ೯.೫೬ ಪುರುಷರು, ಶೇ. ೧೨.೦೮ ರಷ್ಟು ಮಹಿಳೆಯರ ಪ್ರಮಾಣವಿದೆ. ಇಟ್ಟಿಗೆ ಕೆಲಸ ಮಾಡುವವರ ಪ್ರಮಾಣ ಶೇ. ೫.೩೩ ಇದ್ದು, ಇದರಲ್ಲಿ ಶೇ. ೨.೬೦ ಪುರುಷರು, ಶೇ. ೮.೭೯ ಮಹಿಳೆಯರು. ಸಿಮೆಂಟ್ ಮತ್ತು ಸರಕಾರಿ ಕೆಲಸಗಳಲ್ಲಿ ಕ್ರಮವಾಗಿ ಶೇ. ೧.೭೩ ಮತ್ತು ಶೇ. ೪.೩೪ರಷ್ಟು ಪುರುಷರು ಮಾತ್ರ ಕೆಲಸದಲ್ಲಿ ತೊಡಗಿರುವುದನ್ನು ನೋಡುತ್ತೇವೆ. ಖಾಸಗಿ ಕೆಲಸ ಮಾಡುವ ಲಂಬಾಣಿಗರ ಪ್ರಮಾಣ ಶೇ. ೧೧.೧೬ ಇದ್ದು, ಇದರಲ್ಲಿ ಶೇ. ೧೭.೩೯ ಪುರುಷರು, ಶೇ. ೩.೨೯ ಮಹಿಳೆಯರು ಹಾಗೂ ಇತರೆ ಕೆಲಸಗಳಲ್ಲಿ ಶೇ. ೨೩.೪೭ರಷ್ಟು ಪುರುಷರು ಮಾತ್ರ ಕೆಲಸದಲ್ಲಿ ತೊಡಗಿರುವುದನ್ನು ನೋಡುತ್ತೇವೆ.

ರಸ್ತೆ ಹತ್ತಿರದ ತಾಂಡಾವನ್ನು ಗಮನಿಸಿದಾಗ ಕೆಲಸ ಮಾಡುವವರ ಒಟ್ಟು ಸಂಖ್ಯೆ ೧೭೬ ಇದ್ದು, ಇದರಲ್ಲಿ ಶೇ. ೫೪.೫೪ರಷ್ಟು ಪುರುಷರು, ಶೇ. ೪೫.೪೬ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೬.೮೧ ಇದ್ದು, ಶೇ. ೭.೨೯ ಪುರುಷರು, ಹಾಗೂ ಶೇ. ೬.೨೫ ಮಹಿಳೆಯರಿದ್ದಾರೆ. ಕೃಷಿಕೂಲಿ ಕೆಲಸ ಮಾಡುವವರ ಪ್ರಮಾಣ ಶೇ. ೩೬.೩೬ ಇದ್ದು, ಶೇ. ೨೩.೯೫ ಪುರುಷರು, ಶೇ. ೫೧.೨೫ರಷ್ಟು ಮಹಿಳೆಯರ ಪ್ರಮಾಣವಿದೆ. ಹಾಗೆಯೇ ರಸ್ತೆ ಡಾಂಬರೀಕರಣ ಕೆಲಸದಲ್ಲಿ ತೊಡಗಿರುವವರ ಪ್ರಮಾಣ ಶೇ. ೩.೪೦ ಇದ್ದು, ಶೇ. ೪.೧೬ರಷ್ಟು ಪುರುಷರು, ಶೇ. ೨.೫ರಷ್ಟು ಮಹಿಳೆಯರಿದ್ದಾರೆ. ಗಾರೆ ಕೆಲಸದಲ್ಲಿ ತೊಡಗಿರುವವರ ಪ್ರಮಾಣ ಶೇ. ೧೯.೮೮ರಷ್ಟಿದ್ದು, ಇದರಲ್ಲಿ ಶೇ. ೧೪.೫೮ರಷ್ಟು ಪುರುಷರು, ಶೇ. ೨೬.೨೫ರಷ್ಟು ಮಹಿಳೆಯರಿದ್ದಾರೆ. ಇಟ್ಟಿಗೆ ಕೆಲಸ ಮಾಡುವವರ ಪ್ರಮಾಣ ಶೇ. ೧೨.೫ ಇದ್ದು, ಶೇ. ೧೩.೫೪ ಪುರುಷರು, ಶೇ.

೧೧.೨೫ರಷ್ಟು ಮಹಿಳೆಯರು, ಮತ್ತು ಸಿಮೆಂಟ್ ಕೆಲಸದಲ್ಲಿ ೯.೩೭ರಷ್ಟು ಪುರುಷರು ಮಾತ್ರ ತೊಡಗಿದ್ದಾರೆ. ಗುತ್ತಿಗೆ ಕೆಲಸ, ಸರಕಾರಿ ಕೆಲಸಗಳಲ್ಲಿ ಕೇವಲ ಶೇ. ೨.೦೮ರಷ್ಟು ಪುರುಷರು ಮಾತ್ರ ಕೆಲಸ ಮಾಡುತ್ತಿರುವುದನ್ನು ನೋಡುತ್ತೇವೆ. ಖಾಸಗಿ ಕೆಲಸ ಮಾಡುವವರ ಪ್ರಮಾಣ ಶೇ. ೧.೭೦ ರಷ್ಟಿದ್ದು, ಶೇ. ೨.೮ ಪುರುಷರು, ಶೇ. ೧.೨೫ರಷ್ಟು ಮಹಿಳೆಯರಿದ್ದಾರೆ. ಇತರೆ ಕೆಲಸಗಳಲ್ಲಿ ತೊಡಗಿರುವವರ ಪ್ರಮಾಣ ಶೇ. ೧೧.೯೩ ಇದ್ದು, ಶೇ. ೨೦.೮೩ ಪುರುಷರು, ಶೇ. ೧.೨೫ ಸ್ತ್ರೀಯರು ಇರುವುದನ್ನು ಕಾಣುತ್ತೇವೆ.

ಮೂರು ತಾಂಡಾಗಳನ್ನು ಅಭ್ಯಸಿಸಿದಾಗ ಇಲ್ಲಿಯೂ ಕೂಡಾ ಮೂರು ತಾಂಡಾಗಳಲ್ಲಿ ಕೃಷಿ, ಕೃಷಿ ಕೂಲಿ ಕೆಲಸ ಮಾಡುವವರ ಪ್ರಮಾಣದಲ್ಲಿ ಪುರುಷರಿಗಿಂತ ಸ್ತ್ರೀಯರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಗಾರೆ ಕೆಲಸದಲ್ಲಿಯೂ ಕೂಡಾ ಸ್ತ್ರೀಯರು ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಸರ್ಕಾರಿ, ಖಾಸಗಿ ಹಾಗೂ ಇತರೆ ಕೆಲಸಗಳಲ್ಲಿ ಪುರುಷರ ಸಂಖ್ಯೆ ಹೆಚ್ಚಾಗಿರುವುದನ್ನು ನೋಡುತ್ತೇವೆ. ರಸ್ತೆ ಹತ್ತಿರದ ತಾಂಡಾದಲ್ಲಿ ಮಾತ್ರ ಗುತ್ತಿಗೆ ಕೆಲಸ ಮಾಡುವವರ ಸಂಖ್ಯೆ ಕಂಡು ಬರುತ್ತಿದ್ದು, ಅದು ರಿಮೋಟ್ ಮತ್ತು ಗ್ರಾಮ ಹತ್ತಿರದ ತಾಂಡಾಗಳಲ್ಲಿ ಶೂನ್ಯವಾಗಿರುವುದನ್ನು ನೋಡುತ್ತೇವೆ.

**ಕೋಷ್ಟಕ ೫.೫.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ**

| ಕಸುಬುಗಳು | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಕೃಷಿ | ೧೧ | ೧೨ | ೨೩ | ೧೨ | ೧೧ | ೨೩ | ೨೪ | ೨೧ | ೪೫ |
| ಕೃಷಿ ಕೂಲಿ | ೫೧ | ೫೯ | ೧೧೦ | ೫೦ | ೬೮ | ೧೧೮ | ೫೭ | ೭೬ | ೧೩೩ |
| ರಸ್ತೆ ಡಾಂಬರೀಕರಣ | ೨೬ | ೨೬ | ೫೨ | – | – | – | ೨೪ | ೯ | ೩೩ |
| ಗಾರೆಕೆಲಸ | ೧೬ | ೧೫ | ೩೧ | ೧೧ | ೧೩ | ೨೪ | ೪ | ೩ | ೭ |
| ಇಟ್ಟಿಗೆ | ೬ | ೨ | ೮ | ೬ | ೧ | ೭ | – | – | – |
| ಕೊರೆ ಕೆಲಸ | ೧೨ | ೧೩ | ೨೫ | ೩ | ೬ | ೯ | ೧೬ | ೧೯ | ೩೫ |
| ಗುತ್ತಿಗೆ ಕೆಲಸ | – | – | – | ೧ | – | ೧ | ೩ | – | ೩ |
| ಗಣಿ ಕೆಲಸ | ೨೭ | ೨೬ | ೫೩ | ೬ | ೯ | ೧೫ | ೨೩ | ೨೦ | ೪೩ |
| ಸರ್ಕಾರಿ | ೫ | – | ೫ | ೧೦ | – | ೧೦ | ೧೧ | – | ೧೧ |
| ಖಾಸಗಿ | – | – | – | ೧ | – | ೧ | ೫ | ೩ | ೮ |
| ಇತರೆ | ೧೫ | ೨ | ೧೭ | ೧೫ | – | ೧೫ | ೧೫ | – | ೧೫ |
| ಒಟ್ಟು | ೧೬೯ | ೧೫೫ | ೩೨೪ | ೧೧೫ | ೧೦೮ | ೨೨೩ | ೧೮೨ | ೧೫೧ | ೩೩೩ |

೫.೫.೨.ರ ಕೋಷ್ಟಕವು ಆಂಧ್ರ ಪ್ರದೇಶದ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ವಿವಿಧ ಕಸುಬುಗಳನ್ನು ಕುರಿತು ವಿವರಣೆ ನೀಡುತ್ತದೆ. ಈ ಜಿಲ್ಲೆಯ ರಿಮೋಟ್ ತಾಂಡಾಗಳನ್ನು ವೀಕ್ಷಿಸಿದಾಗ ಒಟ್ಟು ಕೆಲಸ ಮಾಡುವರ ಸಂಖ್ಯೆ ೩೨೪ ಇರುವುದು ಕಂಡುಬರುತ್ತದೆ. ಇದರಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೭.೦೯ ಇದ್ದು, ಶೇ. ೬.೫೦ ಪುರುಷರು, ಶೇ. ೭.೭೪ ಸ್ತ್ರೀಯರು. ಕೃಷಿಕೂಲಿ ಕೆಲಸ ಮಾಡುವವರ ಪ್ರಮಾಣ ಶೇ. ೩೩.೯೫ ರಷ್ಟಿದ್ದು, ಶೇ. ೩೦.೧೭ ಪುರುಷರು, ಶೇ. ೩೮.೦೬ರಷ್ಟು ಸ್ತ್ರೀಯರು, ಹಾಗೂ ರಸ್ತೆ ಡಾಂಬರೀಕರಣ ಕೆಲಸ ಮಾಡುವವರ ಪ್ರಮಾಣ ಶೇ. ೧೬.೦೪ ಇದ್ದು, ಶೇ. ೧೫.೩೮ ಪುರುಷರು, ಶೇ. ೧೬.೭೭ರಷ್ಟು ಸ್ತ್ರೀಯರು ಇರುವುದನ್ನು ಕಾಣುತ್ತೇವೆ. ಗಾರೆ ಕೆಲಸ ಮಾಡುವವರ ಪ್ರಮಾಣ ಶೇ. ೯.೫೬ರಷ್ಟಿದ್ದು, ಶೇ. ೯.೪೬ ಪುರುಷರು, ಶೇ. ೯.೬೭ರಷ್ಟು ಸ್ತ್ರೀಯರು. ಇಟ್ಟಿಗೆ ಕೆಲಸದವರ ಪ್ರಮಾಣ ಶೇ. ೨.೪೬ ಇದ್ದು, ಪುರುಷರು ಶೇ. ೩.೫೫, ಸ್ತ್ರೀಯರು ಶೇ. ೧.೨೯ರಷ್ಟು ಮತ್ತು ಕೊರೆ ಕೆಲಸದವರ ಪ್ರಮಾಣ ಶೇ. ೭.೭೧ ಇದ್ದು, ಶೇ. ೭.೧೦ ಪುರುಷರು, ಶೇ. ೮.೩೮ರಷ್ಟು ಸ್ತ್ರೀಯರು, ಅದರಂತೆ ಗಣಿ ಕೆಲಸದವರ ಪ್ರಮಾಣ ಶೇ. ೧೬.೩೫ ಇದ್ದು, ಇದರಲ್ಲಿ ಶೇ. ೧೫.೯೭ ಪುರುಷರು ಶೇ. ೧೬.೭೭ ಸ್ತ್ರೀಯರು ಹಾಗೂ ಸರಕಾರಿ ಕೆಲಸದಲ್ಲಿ ಶೇ. ೨.೯೫ರಷ್ಟು ಪುರುಷರು ಕಾರ್ಯ ನಿರ್ವಹಿಸುತಿದ್ದಾರೆ. ಸರಕಾರಿ ಕೆಲಸಗಳಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಇಲ್ಲದಿರುವುದನ್ನು ಗಮನಿಸಬಹುದು. ಇತರೆ ಕೆಲಸ ಮಾಡುವವರ ಪ್ರಮಾಣ ಶೇ. ೫.೨೪ರಷ್ಟಿದ್ದು ಶೇ. ೮.೮೭ ಪುರುಷರು ಹಾಗೂ ಶೇ. ೧.೨೯ ರಷ್ಟು ಸ್ತ್ರಿಯರು ಕಾರ್ಯನಿರ್ವಹಿಸುತ್ತಿರುವದು ಗೋಚರಿಸುತ್ತದೆ.

ಗ್ರಾಮ ಹತ್ತಿರದ ತಾಂಡಾಗಳನ್ನು ಅನುಲಕ್ಷಿಸಿದಾಗ ಇಲ್ಲಿ ಕೆಲಸ ಮಾಡುವವರ ಸಂಖ್ಯೆ ೨೨೩ ಇದ್ದು, ಇದರಲ್ಲಿ ಕೃಷಿ ಕೆಲಸದವರ ಪ್ರಮಾಣ ಶೇ. ೧೦.೩೧ ಇದ್ದು, ಶೇ. ೧೦.೪೩ ಪುರುಷರು, ಶೇ. ೧೦.೧೮ ಸ್ತ್ರೀಯರು, ಕೃಷಿಕೂಲಿ ಕೆಲಸ ಮಾಡುವವರ ಪ್ರಮಾಣ ಶೇ. ೫೨.೯೧ ರಷ್ಟಿದ್ದು, ಶೇ. ೪೩.೪೭ ಪುರುಷರು, ಶೇ. ೬೨.೯೬ ಸ್ತ್ರೀಯರು, ಗಾರೆ ಕೆಲಸದವರ ಪ್ರಮಾಣ ಶೇ. ೧೦.೭೬ ಇದ್ದು, ಇದರಲ್ಲಿ ಶೇ. ೯.೫೬ ಪುರುಷರು, ಶೇ. ೧೨.೦೩ರಷ್ಟು ಮಹಿಳೆಯರು, ಹಾಗೂ ಇಟ್ಟಿಗೆ ಕೆಲಸದವರ ಪ್ರಮಾಣ ಶೇ. ೩.೧೩ ಇದ್ದು, ಶೇ. ೫.೨೧ ಪುರುಷರು, ಶೇ. ೦.೯೨ ಸ್ತ್ರೀಯರು ಗೋಚರಿಸುತ್ತಾರೆ. ಕೊರೆ ಕೆಲಸದವರ ಪ್ರಮಾಣ ಶೇ. ೪.೦೩ರಷ್ಟಿದ್ದು, ಪುರುಷರು ಶೇ. ೨.೬೦, ಸ್ತ್ರೀಯರು ಶೇ. ೫.೫೫ರಷ್ಟು ಕಂಡುಬರುತ್ತಾರೆ. ಗಣಿ ಕೆಲಸ ಮಾಡುವವರ ಪ್ರಮಾಣ ಶೇ.೬.೭೨ ಇದ್ದು, ಇದರಲ್ಲಿ ಶೇ. ೫.೨೧ ಪುರುಷರು, ಶೇ. ೮.೩೩ ಸ್ತ್ರೀಯರು, ಆದರೆ ಗುತ್ತಿಗೆ, ಸರ್ಕಾರಿ, ಖಾಸಗಿ ಹಾಗೂ ಇತರೆ ಕೆಲಸಗಳಲ್ಲಿ ಕೇವಲ ಪುರುಷರು ಮಾತ್ರ ಕೆಲಸ ಮಾಡುತ್ತಿದ್ದು, ಸ್ತ್ರೀಯರ ಭಾಗವಹಿಸುವಿಕೆ ಇಲ್ಲದಿರುವುದು ಕಂಡುಬರುತ್ತದೆ.

ರಂಗಾರೆಡ್ಡಿ ಜಿಲ್ಲೆಯ ರಸ್ತೆ ಹತ್ತಿರದ ತಾಂಡಾವನ್ನು ನೋಡಿದಾಗ ಇಲ್ಲಿ ಕೆಲಸ ಮಾಡುವವರ ಒಟ್ಟು ಸಂಖ್ಯೆ ೩೩೩ ಇದ್ದು, ಇದರಲ್ಲಿ ಕೃಷಿ ಕೆಲಸದವರ ಪ್ರಮಾಣ ಶೇ. ೧೩.೫೧ ಇದ್ದು, ಶೇ.

೧೩.೧೮ ಪುರುಷರು, ಶೇ. ೧೩.೯೦ ಮಹಿಳೆಯರು, ಕೃಷಿಕೂಲಿ ಕೆಲಸ ಮಾಡುವವರ ಪ್ರಮಾಣ ಶೇ. ೩೯.೯೩ ಇದ್ದು, ಶೇ. ೩೧.೩೧ರಷ್ಟು ಪುರುಷರು, ಶೇ. ೫೦.೩೩ ಸ್ತ್ರೀಯರು ಹಾಗೂ ರಸ್ತೆಗಳ ಡಾಂಬರೀಕರಣ ಕೆಲಸದವರ ಪ್ರಮಾಣ ಶೇ. ೯.೯೦ ಇದ್ದು, ಪುರುಷರು ಶೇ. ೧೩.೧೮ರಷ್ಟಾದರೆ ಮಹಿಳೆಯರು ಶೇ. ೫.೯೬ರಷ್ಟು ಪ್ರಮಾಣದಲ್ಲಿ ಕಂಡುಬರುತ್ತಾರೆ. ಗಾರೆಕೆಲಸದಲ್ಲಿ ತೊಡಗಿರುವವರ ಪ್ರಮಾಣ ಶೇ. ೨.೧೦ ಇದ್ದು, ಪುರುಷರು ಶೇ. ೨.೧೯ರಷ್ಟಾದರೆ ಮಹಿಳೆಯರು ಶೇ. ೧.೯೮ ರಷ್ಟು ಮತ್ತು ಕೊರೆ ಕೆಲಸದಲ್ಲಿ ತೊಡಗಿರುವವರ ಪ್ರಮಾಣ ಶೇ. ೧೦.೫೧ ಇದ್ದು, ಶೇ. ೮.೭೯ ಪುರುಷರು, ಶೇ. ೧೨.೫೮ರಷ್ಟು ಸ್ತ್ರೀಯರು. ಗಣಿ ಕೆಲಸದವರ ಪ್ರಮಾಣ ಶೇ. ೧೨.೯೧ ಇದ್ದು, ಪುರುಷರು ಶೇ. ೧೨.೬೩, ಸ್ತ್ರೀಯರು ಶೇ. ೧೩.೨೪ರಷ್ಟಿದ್ದಾರೆ. ಆದರೆ ಗುತ್ತಿಗೆ, ಸರಕಾರಿ ಹಾಗೂ ಇತರೆ ಕೆಲಸಗಳಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಇಲ್ಲದಿರುವುದನ್ನು ಹಾಗೂ ಖಾಸಗಿ ಕೆಲಸದಲ್ಲಿ ಸ್ವಲ್ಪ ಪ್ರಮಾಣದಲ್ಲಿ ಅಂದರೆ ಶೇ. ೧.೯೮ರಷ್ಟು ಸ್ತ್ರೀಯರು ಮಾತ್ರ ಕೆಲಸ ಮಾಡುತ್ತಿರುವುದನ್ನು ಗಮನಿಸುತ್ತೇವೆ.

ಮೂರು ತಾಂಡಾಗಳನ್ನು ಹೋಲಿಕೆ ಮಾಡಿ ನೋಡಿದಾಗ ಮೂರು ತಾಂಡಾಗಳಲ್ಲಿಯೂ ಕೃಷಿ, ಕೃಷಿಕೂಲಿ, ಹಾಗೂ ಗಾರೆಕೆಲಸಗಳಲ್ಲಿ ಪುರುಷರಿಗಿಂತ ಮಹಿಳೆಯರ ಪಾಲ್ಗೊಳ್ಳುವಿಕೆ ಪ್ರಮಾಣ ಹೆಚ್ಚಾಗಿರುವುದನ್ನು ನೋಡುತ್ತೇವೆ. ಕೊರೆ ಕೆಲಸದಲ್ಲಿ ರಸ್ತೆ ಹತ್ತಿರದ ತಾಂಡಾದ ಲಂಬಾಣಿಗರು ಹಾಗೂ ಗಣಿ ಕೆಲಸದಲ್ಲಿ ರಿಮೋಟ್ ತಾಂಡಾದ ಲಂಬಾಣಿಗರು ಹೆಚ್ಚಿನ ಪ್ರಮಾಣದಲ್ಲಿ ತೊಡಗಿದ್ದಾರೆ. ರಸ್ತೆಗಳ ಡಾಂಬರೀಕರಣ ಕೆಲಸಕ್ಕೆ ಬಂದಾಗ ರಿಮೋಟ್ ಮತ್ತು ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಮಾತ್ರ ಆ ಕೆಲಸಗಳಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಸರಕಾರಿ ಉದ್ಯೋಗದಲ್ಲಿ ಕೇವಲ ಪುರುಷರು ಮಾತ್ರ ಕಂಡುಬರುತ್ತಿದ್ದು ಮಹಿಳೆಯರ ಪ್ರಮಾಣ ಶೂನ್ಯವಾಗಿರುವದು ಸ್ಪಷ್ಟವಾಗಿ ಗೋಚರಿಸುತ್ತದೆ.

**ಕೋಷ್ಟಕ ೫.೫.೪. ಮೂರು ಜಿಲ್ಲೆಗಳ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ**

| ಕಸುಬುಗಳು | ಗುಲಬರ್ಗಾ (ಕರ್ನಾಟಕ) | | | ಸೋಲಾಪುರ (ಮಹಾರಾಷ್ಟ್ರ) | | | ರಂಗಾರೆಡ್ಡಿ (ಆಂಧ್ರ ಪ್ರದೇಶ) | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಕೃಷಿ | ೯೬ | ೧೦೬ | ೨೦೨ | ೬೯ | ೮೨ | ೧೫೧ | ೪೭ | ೪೪ | ೯೧ |
| ಕೃಷಿ ಕೂಲಿ | ೨೫೦ | ೨೨೩ | ೪೭೩ | ೮೬ | ೧೩೨ | ೨೧೮ | ೧೫೮ | ೨೦೩ | ೩೬೧ |
| ರಸ್ತೆ ಡಾಂಬರೀಕರಣ | – | – | – | ೪ | ೨ | ೬ | ೫೦ | ೩೫ | ೮೫ |
| ಗಾರೆಕೆಲಸ | ೩ | ೧ | ೪ | ೬೧ | ೬೨ | ೧೨೩ | ೩೧ | ೩೧ | ೬೨ |
| ಇಟ್ಟಿಗೆ | – | – | – | ೨೪ | ೧೮ | ೪೨ | ೧೨ | ೩ | ೧೫ |

| | | | | | | | | | |
|---|---|---|---|---|---|---|---|---|---|
| ಸಿಮೆಂಟ್ | – | – | – | ೧೪ | – | ೧೪ | – | – | – |
| ಕೊರೆ ಕೆಲಸ | – | – | – | – | – | – | ೩೧ | ೩೮ | ೬೯ |
| ಗುತ್ತಿಗೆ | – | – | – | ೨ | – | ೨ | ೪ | – | ೪ |
| ಗಣಿ | – | – | – | – | – | – | ೫೬ | ೫೫ | ೧೧೧ |
| ಸರ್ಕಾರಿ | ೩೪ | ೩ | ೩೭ | ೧೭ | ೧ | ೧೮ | ೨೬ | – | ೨೬ |
| ಖಾಸಗಿ | ೪ | ೨ | ೬ | ೩೯ | ೫ | ೪೪ | ೬ | ೩ | ೯ |
| ಇತರೆ | ೨೦ | ೪ | ೨೪ | ೬೦ | ೧ | ೬೧ | ೪೫ | ೨ | ೪೭ |
| **ಒಟ್ಟು** | **೪೦೭** | **೩೩೯** | **೭೪೬** | **೩೭೬** | **೩೦೩** | **೬೭೯** | **೪೬೬** | **೪೧೪** | **೮೮೦** |

**ಸ್ತಂಭಚಿತ್ರ ೫.೫.೧. ಸಮೀಕ್ಷೆಗೊಳಪಟ್ಟ ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ**




ಕೋಷ್ಟಕ ೫.೫.೧ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿ ಸಮೀಕ್ಷೆಗೊಳಪಟ್ಟ ಲಂಬಾಣಿಗರು ಅನುಸರಿಸುವ ವಿವಿಧ ಕಸುಬುಗಳು ಅಥವಾ ವೃತ್ತಿಗಳನ್ನು ಕುರಿತು ವಿವರಿಸುತ್ತದೆ. ಮೊದಲನೆಯದಾಗಿ ಕರ್ನಾಟಕದ ಗುಲಬರ್ಗಾ ಜಿಲ್ಲೆಯನ್ನು ವೀಕ್ಷಿಸಿದಾಗ ಒಟ್ಟು ಕೆಲಸ ಮಾಡುವವರ ಸಂಖ್ಯೆಯಲ್ಲಿ ಕೃಷಿಕೆಲಸ ಮಾಡುವವರ ಪ್ರಮಾಣ ಶೇ. ೨೭.೦೭ರಷ್ಟಿದ್ದು, ಇದರಲ್ಲಿ ಶೇ. ೨೩.೫೮ ಪುರುಷರು, ಶೇ.೩೧.೨೬ ಮಹಿಳೆಯರು, ಹಾಗೂ ಕೃಷಿಕೂಲಿ ಮಾಡುತ್ತಿರುವವರ ಪ್ರಮಾಣವು ಶೇ. ೬೩.೪೦ ಇದ್ದು, ಶೇ. ೬೧.೪೨ ಪುರುಷರು, ಶೇ. ೬೫.೭೮ ಮಹಿಳೆಯರು ಕಂಡುಬರುತ್ತಾರೆ.

ಗಾರೆ ಕೆಲಸ ಮಾಡುವವರ ಪ್ರಮಾಣ ಶೇ. ೦.೫೩ರಷ್ಟಿದ್ದು, ಶೇ. ೦.೭೩ ಪುರುಷರು, ಶೇ. ೦.೨೯ ಮಹಿಳೆಯರು ತೊಡಗಿಕೊಂಡಿದ್ದಾರೆ. ಸರಕಾರಿ ಕೆಲಸ ಮಾಡುವವರ ಪ್ರಮಾಣ ಶೇ. ೪.೯೫ರಷ್ಟಿದ್ದು, ಇದರಲ್ಲಿ ಶೇ. ೮.೩೫ ಪುರುಷರು ಶೇ. ೦.೮೮ ಮಹಿಳೆಯರಿದ್ದಾರೆ. ಸರಕಾರಿ ಕೆಲಸಗಳಲ್ಲಿ ಮಹಿಳೆಯರ ಪ್ರಮಾಣವು ತೀರಾ ಕಡಿಮೆ ಇರುವುದು ಗೋಚರಿಸುತ್ತದೆ. ಇತರೆ ಕೆಲಸಗಳನ್ನು ಮಾಡುವವರ ಪ್ರಮಾಣ ಶೇ. ೩.೨೧ ಆಗಿದ್ದು, ಇದರಲ್ಲಿ ಶೇ. ೪.೯೧ ಪುರುಷರು, ಶೇ. ೧.೧೭ ಮಹಿಳೆಯರ ಪ್ರಮಾಣವಿದೆ.

**ಸ್ತಂಭಚಿತ್ರ ೫.೫.೨. ಸಮೀಕ್ಷೆಗೊಳಪಟ್ಟ ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ**




ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯನ್ನು ನೋಡಿದಾಗ ಇಲ್ಲಿ ಒಟ್ಟು ಕೆಲಸ ಮಾಡುವವರ ಸಂಖ್ಯೆ ೬೭೯ ಇದ್ದು, ಇದರಲ್ಲಿ ಶೇ. ೫೫.೩೭ ಪುರುಷರು, ಶೇ. ೪೪.೬೨ ಮಹಿಳೆಯರು ಕಂಡುಬರುತ್ತಾರೆ. ಒಟ್ಟು ಕೆಲಸ ಮಾಡುವವರ ಪ್ರಮಾಣದಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೨೨.೨೩ರಷ್ಟಿದ್ದು, ಶೇ. ೧೮.೩೫ ಪುರುಷರು ಶೇ. ೨೭.೦೬ ಮಹಿಳೆಯರು, ಕೃಷಿಕೂಲಿ ಮಾಡುವವರ ಪ್ರಮಾಣ ಶೇ. ೩೨.೧೧ರಷ್ಟಿದ್ದು, ಇದರಲ್ಲಿ ಶೇ. ೨೨.೮೭ ಪುರುಷರು, ಶೇ. ೪೩.೫೬ ಮಹಿಳೆಯರಿದ್ದಾರೆ. ರಸ್ತೆ ಡಾಂಬರೀಕರಣ ಕೆಲಸ ಮಾಡುವವರ ಪ್ರಮಾಣ ಶೇ. ೦.೮೮ ಇದ್ದು, ಪುರುಷರು ಶೇ. ೧.೦೬ ಮಹಿಳೆಯರು ಶೇ. ೦.೬೬, ಹಾಗೂ ಗಾರೆಕೆಲಸದವರ ಪ್ರಮಾಣ ಶೇ. ೧೮.೧೧ ಇದ್ದು, ಪುರುಷರು ಶೇ. ೧೬.೨೨, ಮಹಿಳೆಯರ ಪ್ರಮಾಣ ಶೇ. ೨೦.೪೬ರಷ್ಟಿದೆ. ಇಟ್ಟಿಗೆ ಮಾಡುವವರು ಶೇ. ೬.೧೮ರಷ್ಟಿದ್ದು, ಇದರಲ್ಲಿ ಪುರುಷರು ಶೇ. ೬.೩೮, ಮಹಿಳೆಯರು ಶೇ. ೫.೯೪. ಸಿಮೆಂಟ್ ಮತ್ತು ಗುತ್ತಿಗೆ ಕೆಲಸ ಮಾಡುವ ಪುರುಷರ ಪ್ರಮಾಣ ಕ್ರಮವಾಗಿ ಶೇ. ೩.೭೨ ಮತ್ತು ಶೇ. ೦.೫೩ರಷ್ಟಿದೆ. ಈ ಕೆಲಸಗಳಲ್ಲಿ ಮಹಿಳೆಯರ

ಭಾಗವಹಿಸುವಿಕೆ ಕಂಡುಬರುವುದಿಲ್ಲ. ಸರಕಾರಿ ಕೆಲಸ ಮಾಡುವವರ ಪ್ರಮಾಣ ಶೇ. ೨.೬೫ ಇದ್ದು, ಇದರಲ್ಲಿ ಶೇ. ೪.೫೨ ಪುರುಷರು, ಶೇ. ೦.೩೩ ಮಹಿಳೆಯರು ಇದ್ದಾರೆ. ಖಾಸಗಿ ಮತ್ತು ಇತರೆ ಕೆಲಸಗಳನ್ನು ಮಾಡುವವರ ಪ್ರಮಾಣ ಕ್ರಮವಾಗಿ ಶೇ. ೬.೪೮ ಮತ್ತು ೮.೯೮ರಷ್ಟಿರುವುದು ಕೋಷ್ಟಕದ ಮೂಲಕ ವ್ಯಕ್ತವಾಗುತ್ತದೆ.

**ಸ್ತಂಭಚಿತ್ರ ೫.೫.೩. ಸಮೀಕ್ಷೆಗೊಳಪಟ್ಟ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಅನುಸರಿಸುತ್ತಿರುವ ಕಸುಬುಗಳ ವಿವರ**




ಆಂಧ್ರ ಪ್ರದೇಶದ ರಂಗಾರೆಡ್ಡಿ ಜಿಲ್ಲೆಯನ್ನು ಅನುಲಕ್ಷಿಸಿದಾಗ ಇಲ್ಲಿ ಒಟ್ಟು ಕೆಲಸ ಮಾಡುವವರ ಸಂಖ್ಯೆ ೮೮೦ ಇದ್ದು, ಇದರಲ್ಲಿ ಶೇ. ೫೨.೯೫ ಪುರುಷರು, ಶೇ. ೪೭.೦೫ ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ ಕೃಷಿ ಕೆಲಸ ಮಾಡುವವರ ಪ್ರಮಾಣ ಶೇ. ೧೦.೩೪ ರಷ್ಟಿದ್ದು, ಶೇ. ೧೦.೦೮ ಪುರುಷರು, ಶೇ. ೧೦.೬೨ ರಷ್ಟು ಮಹಿಳೆಯರು. ಕೃಷಿಕೂಲಿ ಮಾಡುವವರ ಪ್ರಮಾಣ ಶೇ. ೪೧.೦೨ ಇದ್ದು, ಶೇ. ೩೩.೯೦ ಪುರುಷರು, ಶೇ. ೪೯.೦೩ ಮಹಿಳೆಯರ ಪ್ರಮಾಣ ಕಂಡುಬರುತ್ತದೆ. ರಸ್ತೆಗಳ ಡಾಂಬರೀಕರಣ ಮಾಡುವವರ ಪ್ರಮಾಣ ಶೇ. ೯.೬೫ ಇದ್ದು, ಇದರಲ್ಲಿ ಶೇ. ೧೦.೭೨ ಪುರುಷರು, ಶೇ. ೮.೪೫ ಮಹಿಳೆಯರಿದ್ದಾರೆ. ಗಾರೆ ಕೆಲಸದವರ ಪ್ರಮಾಣ ಶೇ. ೭.೦೪ ಇದ್ದು, ಶೇ. ೬.೬೫ ಪುರುಷರು, ಶೇ. ೭.೪೮ ಮಹಿಳೆಯರಿದ್ದಾರೆ. ಇಟ್ಟಿಗೆ ಕೆಲಸದವರು ಶೇ. ೧.೭೦ರಷ್ಟಿದ್ದು, ಶೇ. ೨.೫೭ ಪುರುಷರು, ಶೇ. ೦.೭೨ ಮಹಿಳೆಯರು ಹಾಗೂ ಕೋರೆ ಕೆಲಸವನ್ನು ಮಾಡುವವರ ಪ್ರಮಾಣ ಶೇ. ೭.೮೪ ಇದ್ದು, ಶೇ. ೬.೬೫ ಪುರುಷರು, ಶೇ. ೯.೧೭ ಮಹಿಳೆಯರು ಇರುವುದು ವ್ಯಕ್ತವಾಗುತ್ತದೆ.

ಗುತ್ತಿಗೆ ಹಾಗೂ ಸರಕಾರಿ ಕೆಲಸದಲ್ಲಿ ಪುರುಷರು ಮಾತ್ರ ಗೋಚರವಾಗುತ್ತಿದ್ದು ಅವರ ಪ್ರಮಾಣ ಕ್ರಮವಾಗಿ ಶೇ. ೦.೮೫ ಮತ್ತು ಶೇ. ೫.೫೭ರಷ್ಟಿದೆ. ಈ ಜಿಲ್ಲೆಯಲ್ಲಿನ ಲಂಬಾಣಿಗರು ಗಣಿ ಕೆಲಸವನ್ನು ಮಾಡುತ್ತಿದ್ದು, ಅವರ ಪ್ರಮಾಣ ಒಟ್ಟು ಶೇ. ೧೨.೬೧ರಷ್ಟಿದ್ದು, ಶೇ. ೧೨.೦೧ರಷ್ಟು ಪುರುಷರು, ಶೇ. ೧೩.೨೮ ಮಹಿಳೆಯರು. ಖಾಸಗಿ ಕೆಲಸ ಮಾಡುವವರ ಪ್ರಮಾಣ ಕೇವಲ ಶೇ. ೧.೦೨ ರಷ್ಟಿದ್ದು ಇದರಲ್ಲಿ ಶೇ. ೧.೨೮ ಪುರುಷರು, ಶೇ. ೦.೭೨ ಮಹಿಳೆಯರಿದ್ದಾರೆ. ಇತರೆ ಕೆಲಸಗಳನ್ನು ಮಾಡುತ್ತಿರುವವರ ಪ್ರಮಾಣ ಶೇ. ೫.೩೪ರಷ್ಟಿದ್ದು, ಶೇ. ೯.೬೫ ಪುರುಷರು ಶೇ. ೦.೪೮ರಷ್ಟು ಮಹಿಳೆಯರು ಗೋಚರವಾಗುತ್ತಾರೆ. ಸರಕಾರಿ ಮತ್ತು ಗುತ್ತಿಗೆ ಕೆಲಸಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಇಲ್ಲದಿರುವುದು ಕಂಡುಬರುತ್ತದೆ.

ಮೂರು ಜಿಲ್ಲೆಗಳಲ್ಲಿನ ಲಂಬಾಣಿಗರು ಅನುಸರಿಸುವ ಕಸುಬುಗಳನ್ನು ತುಲನೆ ಮಾಡಿ ನೋಡಿದಾಗ ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತಲೂ ಗುಲಬರ್ಗಾದಲ್ಲಿ ಕೃಷಿ ಮತ್ತು ಕೃಷಿ ಕೂಲಿ ಕೆಲಸ ಮಾಡುವ ಲಂಬಾಣಿಗರ ಸಂಖ್ಯೆ ಅಥವಾ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಸೋಲಾಪುರ ಜಿಲ್ಲೆಯಲ್ಲಿ ಕೈಗಾರಿಕೆಗಳು ನೆಲೆಯಾಗಿರುವುದರಿಂದ ಇಲ್ಲಿನ ಜನರು ಕೇವಲ ಕೃಷಿ ಮತ್ತು ಕೃಷಿ ಸಂಬಂಧಿತ ಕೆಲಸಗಳನ್ನು ಅವಲಂಬಿಸದೆ ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ರಂಗಾರೆಡ್ಡಿ ಜಿಲ್ಲೆಯಲ್ಲಿ ಹಾಸುಗಲ್ಲಿನ ಮತ್ತು ಗಣಿಗಾರಿಕೆ ಕೆಲಸಗಳು ಲಭ್ಯವಿರುವುದರಿಂದ ಕೃಷಿ ಮತ್ತು ಕೃಷಿ ಕೂಲಿ ಕೆಲಸ ಮಾಡುವವರ ಪ್ರಮಾಣ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಿಗಿಂತಲೂ ಕಡಿಮೆಯಿರುವುದು ಕಂಡುಬರುತ್ತದೆ. ಗುಲಬರ್ಗಾದಲ್ಲಿನ ಲಂಬಾಣಿಗರು ಕೃಷಿ ಸಂಬಂಧಿತ ಕೆಲಸಗಳನ್ನೇ ಹೆಚ್ಚಾಗಿ ಅವಲಂಬಿಸಿದ್ದಾರೆ. ಸೋಲಾಪುರ ಮತ್ತು ರಂಗಾರೆಡ್ಡಿಗಳಲ್ಲಿ ಮಾತ್ರ ಗಾರೆ ಕೆಲಸ, ರಸ್ತೆಗಳ ಡಾಂಬರೀಕರಣ, ಇಟ್ಟಿಗೆ, ಸಿಮೆಂಟ್, ಗುತ್ತಿಗೆ, ಗಣಿ ಮತ್ತು ಕೊರೆ ಕೆಲಸಗಳಲ್ಲಿ ಲಂಬಾಣಿಗರು ತೊಡಗಿ ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. ಆದರೆ ಈ ಚಿತ್ರಣ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಲ್ಲಿ ಗೋಚರವಾಗುತ್ತಿಲ್ಲ. ಹಾಗೆಯೇ ಸರಕಾರಿ ಕೆಲಸವನ್ನು ಗಮನಿಸಿದಾಗ ಕರ್ನಾಟಕದ ಲಂಬಾಣಿಗರು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಬರುವುದರಿಂದ ಹಾಗೂ ಪರಿಶಿಷ್ಟ ಜಾತಿಗೆ ಸರಕಾರಿ ಉದ್ಯೋಗದಲ್ಲಿ ಶೇ. ೧೫ರಷ್ಟು ಮೀಸಲಾತಿ ಪ್ರಮಾಣವಿದ್ದು, ಗುಲಬರ್ಗಾ ಜಿಲ್ಲೆಯ ೩೭ ಜನ ಲಂಬಾಣಿಗರು ಬೇರೆ ಬೇರೆ ಸರಕಾರಿ ಉದ್ಯೋಗಗಳಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಆಂಧ್ರ ಪ್ರದೇಶದ ಲಂಬಾಣಿಗರು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ರುವುದರಿಂದ ಶೇ. ೬ ರಷ್ಟು ಮೀಸಲಾತಿಯಿದ್ದು, ರಂಗಾರೆಡ್ಡಿ ಜಿಲ್ಲೆಯ ೨೬ ಜನ ಲಂಬಾಣಿಗರು ಸರಕಾರಿ ಉದ್ಯೋಗದಲ್ಲಿರುವುದು ಗೋಚರವಾಗುತ್ತದೆ. ಮಹಾರಾಷ್ಟ್ರ ರಾಜ್ಯದ ಲಂಬಾಣಿಗರು ವಿಮುಕ್ತ ಜಾತಿಯ ಪಟ್ಟಿಯಲ್ಲಿರುವುದರಿಂದ, ವಿಮುಕ್ತ ಜಾತಿಯವರಿಗೆ ಶೇ. ೩ರಷ್ಟು ಮೀಸಲಾತಿಯಿದ್ದು, ಸೋಲಾಪುರ ಜಿಲ್ಲೆಯ ೧೮ ಜನ ಲಂಬಾಣಿಗರು ಮಾತ್ರ ಸರಕಾರಿ ಉದ್ಯೋಗವನ್ನು ಪಡೆದು ಕೊಂಡಿದ್ದಾರೆ. ಸರಕಾರಿ ಉದ್ಯೋಗದಲ್ಲಿ ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರಿಗಿಂತ

ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಪ್ರಮಾಣ ಹೆಚ್ಚಾಗಿರುವುದು ಸ್ಪಷ್ಟವಾಗುತ್ತದೆ ಅಲ್ಲದೇ ಮಹಿಳಾ ಭಾಗವಹಿಸುವಿಕೆಯ ಪ್ರಮಾಣವು ಗುಲಬರ್ಗಾ ಮತು ಸೋಲಾಪುರ ಜಿಲ್ಲೆಗಳಲ್ಲಿ ತೀರಾ ಕಡಿಮೆಯಿದ್ದು, ರಂಗಾರೆಡ್ಡಿ ಜಿಲ್ಲೆಯಲ್ಲಿ ಈ ಪ್ರಮಾಣ ಶೂನ್ಯವಾಗಿದೆ. ಖಾಸಗಿ ಉದ್ಯೋಗವನ್ನು ಅನುಲಕ್ಷಿಸಿದಾಗ ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತಲೂ ಸೋಲಾಪುರದಲ್ಲಿ ಮೊದಲೇ ಹೇಳಿದಂತೆ ಹೆಚ್ಚಿನ ಕೈಗಾರಿಕೆಗಳು ನೆಲೆಸಿರುವುದರಿಂದ ಇಲ್ಲಿನ ಲಂಬಾಣಿಗರು ಖಾಸಗಿ ಕೆಲಸದಲ್ಲಿ ಹೆಚ್ಚಾಗಿ ತೊಡಗಿದ್ದಾರೆ.

**೫.೬. ಲಂಬಾಣಿಗರು ಹೊಂದಿರುವ ಪಶುಸಂಪತ್ತು**

ಪಶುಸಂಗೋಪನೆಯು ಗ್ರಾಮೀಣ ಆರ್ಥಿಕತೆಯ ಅತಿ ಮುಖ್ಯ ಚಟುವಟಿಕೆಗಳಲ್ಲೊಂದಾಗಿದೆ. ಅದು ವಿಸ್ತರಿಸುತ್ತಿರುವ ಮತ್ತು ವೈವಿದ್ಯಗೊಳ್ಳುತ್ತಿರುವ ಕೃಷಿಯ ಒಂದು ಅವಶ್ಯಕ ಭಾಗವಾಗಿದೆ. "ಗ್ರಾಮೀಣ ಜನರು ಬೇಸಾಯದೊಡನೆಯೇ ಪಶುಸಂಗೋಪನೆಯನ್ನು ಮಾಡುವುದರಿಂದ ಉದ್ಯೋಗಾವಕಾಶಗಳನ್ನು, ಅವರ ಆದಾಯವನ್ನು ಮತ್ತು ಜೀವನ ಮಟ್ಟವನ್ನು ಹೆಚ್ಚಿಸಕೊಳ್ಳಬಹುದು. ಇದು ಕುಟುಂಬಕ್ಕೆ ಪೂರಕ ಆದಾಯವನ್ನು ಒದಗಿಸುವುದರಿಂದ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಒಂದು ಉಪಯುಕ್ತ ಕಸುಬಾಗಿದೆ"(ಕೃಷ್ಣಯ್ಯಗೌಡ ಎಚ್ ಆರ್: ೨೦೧೨:೩೦೭). ಏಕೆಂದರೆ "ಪಶು ಪಾಲನೆ ವ್ಯವಸಾಯಕ್ಕಿಂತ ಮುಂಚೆ ಮತ್ತು ನಂತರವೂ ಸಹ ಸಂಪತ್ತು ಆಸ್ತಿ ಎಂಬ ಪರಿಗಣನೆ ಪಡೆದಿದೆ. ಗ್ರಾಮೀಣ ಬದುಕಿನ ಅವಿಭಾಜ್ಯ ಅಂಗವಾಗಿರುವ ದನ, ಕೋಳಿ, ಕುರಿ, ಮೊದಲಾದ ಪ್ರಾಣಿಗಳ ಸಾಕುವ, ಬೆಳೆಸುವ, ಅವುಗಳ ಆರೋಗ್ಯ ಪಾಲನೆ ರೋಗೋಪಚಾರ ಹಾಗೂ ತಳಿ ಅಭಿವೃದ್ಧಿ ಮಾಡುವ ತಮ್ಮದೇ ಆದ ವಿಧಾನಗಳನ್ನು ತಲಾಂತರದಿಂದ ರೂಢಿಸಿಕೊಂಡು ಬರುತ್ತಿದ್ದಾರೆ" (ಹಕಾರಿ ದೇವೆಂದ್ರಕುಮಾರ. ಸಂಧ್ಯಾರೆಡ್ಡಿ ಕೆ. ಎಸ್:೨೦೦೨:೧). ಅದರಲ್ಲೂ ಲಂಬಾಣಿಗರಲ್ಲಿ ಪಶುಪಾಲನಾ ವೃತ್ತಿಯ ಹಿಂದಿನಿಂದಲೂ ಇರುವುದನ್ನು ಕಾಣುತ್ತೇವೆ. ಇವರು ಪಶುಪಾಲಕರಾಗಿ ತಮ್ಮ ದನಕರುಗಳ ಮೇಲೆ ಆಹಾರ, ಖಾದ್ಯ ಸಾಮಗ್ರಿಗಳನ್ನು ಸಾಗಿಸುತ್ತಿದ್ದರು. ಪಶುಪಾಲನೆಯನ್ನು ವೃತ್ತಿಯನ್ನಾಗಿ ಹೊಂದಿರುವ ಲಂಬಾಣಿಗರು ತಾಂಡಾದಲ್ಲಿ ದನ, ಕರು, ಎತ್ತು, ಕುರಿ, ಮೇಕೆ, ಎಮ್ಮೆ ಇತ್ಯಾದಿ ಸಾಕು ಪ್ರಾಣಿಗಳನ್ನು ಸಾಕುತ್ತಿದ್ದಾರೆ. ಹಲವು ಕುಟುಂಬಗಳು ಇವುಗಳಿಂದ ಬರುವ ಹೈನು ಹಾಗೂ ಅವುಗಳ ಉತ್ಪನ್ನದಿಂದ ಜೀವನ ಸಾಗಿಸುತ್ತಿದ್ದಾರೆ. ಪಶುಪಾಲನೆಯೇ ಇವರಿಗೆ ಜೀವನಾಧಾರವಾಗಿದೆ. ಈ ಸಂದರ್ಭದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ಪ್ರಮಾಣವನ್ನು ಕ್ರಮವಾಗಿ ಒಂದೊಂದಾಗಿ ವಿವರಿಸಲಾಗಿದೆ.

**ಕೋಷ್ಟಕ ೫.೬.೧. ಗುಲಬರ್ಗಾ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಪಶುಸಂಪತ್ತು | | | | | |
|---|---|---|---|---|---|---|---|---|
| | | | ಎತ್ತು | ಆಕಳು | ಎಮ್ಮೆ | ಕುರಿ | ಮೇಕೆ | ಕೋಳಿ |
| ಗುಲಬರ್ಗಾ | ರಿಮೋಟ್ ತಾಂಡಾ | ೮೯ | ೯೦ | ೧೦೩ | ೨೪ | ೨೫ | ೨೭೩ | ೨೫೨ |
| | ಗ್ರಾಮ ಹತ್ತಿರದ ತಾಂಡಾ | ೭೧ | ೬೦ | ೬೩ | ೯ | – | ೪೧ | ೧೭೩ |
| | ರಸ್ತೆ ಹತ್ತಿರದ ತಾಂಡಾ | ೫೫ | ೫೨ | ೪೭ | – | – | ೪೫ | ೧೬೫ |
| | **ಕರ್ನಾಟಕ** | ೨೧೫ | ೨೦೨ | ೨೧೩ | ೩೩ | ೨೫ | ೩೫೯ | ೫೯೦ |

೫.೬.೧.ರ ಕೋಷ್ಟಕವು ಗುಲಬರ್ಗಾ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ರಿಮೋಟ್, ಗ್ರಾಮ ಹತ್ತಿರ ಹಾಗೂ ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಹೊಂದಿರುವ ಪಶುಸಂಗೋಪನೆ ಕುರಿತಾಗಿ ಮಾಹಿತಿ ನೀಡುತ್ತಿದೆ. ಈ ಜಿಲ್ಲೆಯ ರಿಮೋಟ್ ತಾಂಡಾವನ್ನು ವೀಕ್ಷಿಸಿದಾಗ ಈ ತಾಂಡಾದ ಲಂಬಾಣಿಗರು ಶೇ. ೪೪.೫೫ರಷ್ಟು ಎತ್ತುಗಳನ್ನು ಶೇ. ೪೮.೩೫ ಆಕಳುಗಳು. ಶೇ. ೭೨.೭೨ರಷ್ಟು ಎಮ್ಮೆಗಳನ್ನು, ಶೇ. ೧೦೦ರಷ್ಟು ಕುರಿಗಳನ್ನು ಹಾಗೂ ಶೇ. ೭೬.೦೪ ರಷ್ಟು ಮೇಕೆ, ಶೇ. ೪೨.೭೧ ರಷ್ಟು ಕೋಳಿಗಳನ್ನು ಸಾಕಣೆ ಮಾಡುತ್ತಿದ್ದಾರೆ. ಹಾಗೆಯೇ ಗ್ರಾಮ ಹತ್ತಿರದ ತಾಂಡಾಗಳ ಲಂಬಾಣಿಗರು ಶೇ. ೨೯.೭೦ರಷ್ಟು ಎತ್ತುಗಳು, ಶೇ. ೨೯.೫೭ರಷ್ಟು ಆಕಳುಗಳು, ಶೇ. ೨೭.೨೭ರಷ್ಟು ಎಮ್ಮೆಗಳು, ಶೇ. ೧೧.೪೨ ರಷ್ಟು ಮೇಕೆಗಳು, ಶೇ. ೨೯.೩೩ ರಷ್ಟು ಪ್ರಮಾಣದ ಕೋಳಿಗಳನ್ನು ಹೊಂದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಅದರಂತೆ ರಸ್ತೆ ಹತ್ತಿರದ ತಾಂಡಾಗಳಲ್ಲಿ ಶೇ. ೨೫.೭೪ ಎತ್ತು, ಶೇ. ೨೨.೦೭ರಷ್ಟು ಆಕಳು ಶೇ. ೧೨.೫೩ರಷ್ಟು ಮೇಕೆಗಳನ್ನು ಹಾಗೂ ಶೇ. ೨೭.೯೬ರಷ್ಟು ಕೋಳಿಗಳನ್ನು ಹೊಂದಿದ್ದಾರೆ.

ಮೂರು ತಾಂಡಾಗಳನ್ನು ತುಲನೆ ಮಾಡಿ ನೋಡಿದಾಗ ರಸ್ತೆ ಮತ್ತು ಗ್ರಾಮ ಹತ್ತಿರದ ತಾಂಡಾಗಳಿಗಿಂತಲೂ ರಿಮೋಟ್ ತಾಂಡಾದ ಲಂಬಾಣಿಗರು ಎತ್ತು, ಆಕಳು, ಎಮ್ಮೆ, ಕುರಿ, ಮೇಕೆ, ಕೋಳಿಗಳು ಹೀಗೆ ಹೆಚ್ಚಿನ ಪಶುಸಂಪತ್ತನ್ನು ಹೊಂದಿದ್ದಾರೆ. ಏಕೆಂದರೆ ಇವರು ಹೆಚ್ಚಾಗಿ ಗುಡ್ಡುಗಾಡು, ಬಯಲು ಪ್ರದೇಶಗಳಲ್ಲಿ ನೆಲೆಸಿರುವುದರಿಂದ ಎತ್ತು, ಆಕಳು, ಎಮ್ಮೆ, ಕುರಿ, ಮೇಕೆಗಳನ್ನು ಸಾಕಲು ಸಾಕಷ್ಟು ಮೇವು ಸಿಗುತ್ತಿರುತ್ತದೆ, ಅಲ್ಲದೇ ಇವರು ಕೃಷಿಯನ್ನು ನಂಬಿಕೊಂಡಿದ್ದರಿಂದ ಪಶುಪಾಲನೆಯನ್ನು ಮುಂದುವರೆಸುತ್ತಿದ್ದಾರೆ. ಪಶುಸಂಗೋಪನೆಯ ಪ್ರಮಾಣ ಗ್ರಾಮ ಮತ್ತು ರಸ್ತೆ ಹತ್ತಿರದ ತಾಂಡಾಗಳಲ್ಲಿ ಕಡಿಮೆಯಿರುವುದು ಗೋಚರವಾಗುತ್ತದೆ. ಏಕೆಂದರೆ ಇಲ್ಲಿನ ಜನರು ನಗರಗಳೊಂದಿಗೆ ಸಂಪರ್ಕ ಹೊಂದಿರುವುದರಿಂದ ಪಶುಸಂಗೋಪನೆಯನ್ನು ಕಡಿಮೆ ಮಾಡಿ, ಬೇರೆ ಬೇರೆ ಉದ್ಯೋಗಗಳನ್ನು ಅವಲಂಬಿಸಿರುವದು ಸ್ಪಷ್ಟವಾಗುತ್ತದೆ.

**ಕೋಷ್ಟಕ ೫.೬.೨. ಸೋಲಾಪುರ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಪಶುಸಂಪತ್ತು | | | | | |
|---|---|---|---|---|---|---|---|---|
| | | | ಎತ್ತು | ಆಕಳು | ಎಮ್ಮೆ | ಕುರಿ | ಮೇಕೆ | ಕೋಳಿ |
| ಸೋಲಾಪುರ | ರಿಮೋಟ್ ತಾಂಡಾ | ೬೯ | ೬೦ | ೩೮ | ೩ | – | ೭೫ | ೨೪೯ |
| | ಗ್ರಾಮ ಹತ್ತಿರದ ತಾಂಡಾ | ೬೫ | ೪೦ | ೨೭ | ೨ | – | ೨೬ | ೧೪೮ |
| | ರಸ್ತೆ ಹತ್ತಿರದ ತಾಂಡಾ | ೫೩ | ೧೮ | ೧೯ | ೧ | ೩೭ | ೫೭ | ೧೯೭ |
| | **ಮಹಾರಾಷ್ಟ್ರ** | **೧೮೭** | **೧೧೮** | **೮೪** | **೬** | **೩೭** | **೧೫೮** | **೫೯೪** |

೫.೬.೨.ರ ಕೋಷ್ಟಕವು ಸೋಲಾಪುರ ಜಿಲ್ಲೆಯ ರಿಮೋಟ್, ಗ್ರಾಮ ಹತ್ತಿರ ಮತ್ತು ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಹೊಂದಿರುವ ಪಶುಸಂಗೋಪನೆಯ ಕುರಿತಾಗಿ ಮಾಹಿತಿ ನೀಡುತ್ತದೆ. ಇಲ್ಲಿಯ ರಿಮೋಟ್ ತಾಂಡಾವನ್ನು ನೋಡಿದಾಗ ಶೇ. ೫೦.೮೫ ಎತ್ತು, ಶೇ. ೪೫.೨೩ ಆಕಳು, ಶೇ. ೫೦ ಎಮ್ಮೆ, ಶೇ. ೪೭.೪೬ ರಷ್ಟು ಮೇಕೆ ಹಾಗೂ ಶೇ. ೪೧.೯೧ ರಷ್ಟು ಪ್ರಮಾಣದ ಕೋಳಿಗಳನ್ನು ಹೊಂದಿದ್ದಾರೆ. ಅದೇ ರೀತಿ ಗ್ರಾಮ ಹತ್ತಿರದ ತಾಂಡಾವು ಶೇ. ೩೩.೮೯ ಎತ್ತು, ಶೇ. ೩೨.೧೪ ಆಕಳು, ಶೇ. ೩೩.೩೩ ಎಮ್ಮೆ, ಶೇ. ೧೬.೪೫ ಮೇಕೆ ಹಾಗೂ ಶೇ. ೨೪.೯೧ ರಷ್ಟು ಕೋಳಿಗಳನ್ನು ಹೊಂದಿದ್ದಾರೆ. ಅದರಂತೆ ರಸ್ತೆ ಹತ್ತಿರದ ತಾಂಡಾದ ಲಂಬಾಣಿಗರು ಶೆ. ೧೫.೨೫ ರಷ್ಟು ಎತ್ತುಗಳು, ಶೇ. ೨೨.೬೨ ಆಕಳುಗಳು, ಶೇ. ೧೬.೬೭ ಎಮ್ಮೆಗಳು ಶೇ. ೧೦೦ ರಷ್ಟು ಕುರಿಗಳು, ಶೇ. ೩೬.೦೮ ಮೇಕೆಗಳು ಮತ್ತು ಶೇ. ೩೩.೧೬ ರಷ್ಟು ಕೋಳಿಗಳನ್ನು ಹೊಂದಿರುವುದು ಕಂಡುಬರುತ್ತದೆ.

ಮೂರು ತಾಂಡಾಗಳ ಅಂಕಿ ಸಂಖ್ಯೆಗಳನ್ನು ಗಮನಿಸಿ ತುಲನೆ ಮಾಡಿದಾಗ ಗ್ರಾಮ ಹತ್ತಿರ ಮತ್ತು ರಸ್ತೆ ಹತ್ತಿರದ ತಾಂಡಾಗಳಿಗಿಂತಲೂ ರಿಮೋಟ್ ತಾಂಡಾಗಳು ಹೆಚ್ಚಿನ ಪಶುಸಂಪತ್ತನ್ನು ಹೊಂದಿವೆ. ಕೋಳಿ, ಮೇಕೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಸಾಕಿ ಸಲಹುತ್ತಿದ್ದಾರೆ ಆದರೆ ಕುರಿಗಳ ಪ್ರಮಾಣ ಶೂನ್ಯವಾಗಿದೆ. ಗ್ರಾಮ ಮತ್ತು ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿ ತಮ್ಮ ಮೂಲ ವೃತ್ತಿಯಾದ ಪಶುಸಂಗೋಪನೆಯನ್ನು ಹಂತ ಹಂತವಾಗಿ ಅಂದರೆ ಕ್ರಮೇಣವಾಗಿ ಬಿಡುತ್ತಿರುವುದನ್ನು ನೋಡುತ್ತೇವೆ.

**ಕೋಷ್ಟಕ ೫.೬.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ**

| ಜಿಲ್ಲೆ | ನೆಲೆಗಳು | ಕುಟುಂಬಗಳು | ಪಶುಸಂಪತ್ತು | | | | | |
|---|---|---|---|---|---|---|---|---|
| | | | ಎತ್ತು | ಆಕಳು | ಎಮ್ಮೆ | ಕುರಿ | ಮೇಕೆ | ಕೋಳಿ |
| ರಂಗಾರೆಡ್ಡಿ | ರಿಮೋಟ್ ತಾಂಡಾ | ೭೪ | ೫೪ | ೯೨ | ೧೨ | ೨೯ | ೧೨೬ | ೩೪೮ |
| | ಗ್ರಾಮ ಹತ್ತಿರದ ತಾಂಡಾ | ೭೩ | ೮೫ | ೬೬ | ೪ | – | ೧೬೭ | ೨೧೯ |
| | ರಸ್ತೆ ಹತ್ತಿರದ ತಾಂಡಾ | ೯೪ | ೭೪ | ೫೯ | ೯ | – | ೧೫೧ | ೨೫೯ |
| | **ಆಂಧ್ರ ಪ್ರದೇಶ** | **೨೧೪** | **೨೧೩** | **೨೧೭** | **೨೫** | **೨೯** | **೪೪೪** | **೮೨೬** |

ಕೋಷ್ಟಕ ೫.೬.೩. ರಂಗಾರೆಡ್ಡಿ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆಮಾಡಲಾದ ರಿಮೋಟ್, ಗ್ರಾಮ ಹತ್ತಿರದ ಮತ್ತು ರಸ್ತೆ ಹತ್ತಿರದ ತಾಂಡಾಗಳ ಜನರು ಹೊಂದಿರುವ ಪಶುಸಂಪತ್ತನ್ನು ಕುರಿತು ವಿವರಿಸುತ್ತದೆ. ಈ ಜಿಲ್ಲೆಯ ರಿಮೋಟ್ ತಾಂಡಾವನ್ನು ಅನುಲಕ್ಷಿಸಿದಾಗ ಶೆ. ೨೫.೩೫ ಎತ್ತುಗಳನ್ನು ಶೇ. ೪೨.೩೯ ಆಕಳುಗಳನ್ನು, ಶೇ. ೪೮ ಎಮ್ಮೆಗಳು ಶೇ. ೧೦೦ರಷ್ಟು ಕುರಿಗಳು, ಶೇ. ೨೮.೩೭ ಮೇಕೆಗಳನ್ನು ಹಾಗೂ ಶೇ. ೪೨.೧೩ರಷ್ಟು ಕೋಳಿಗಳನ್ನು ಹೊಂದಿದೆ. ಅದೇ ರೀತಿ ಗ್ರಾಮ ಹತ್ತಿರದ ತಾಂಡಾದ ಲಂಬಾಣಿಗರು ಶೇ. ೩೯.೯೦ ಎತ್ತುಗಳು, ಶೇ. ೩೦.೪೧ ಆಕಳುಗಳು, ಶೇ. ೧೬ ಎಮ್ಮೆಗಳು, ಶೇ. ೩೭.೬೧ ಮೇಕೆಗಳನ್ನು ಹಾಗೂ ಶೇ. ೨೬.೫೧ರಷ್ಟು ಕೋಳಿಗಳನ್ನು ಹೊಂದಿದ್ದಾರೆ. ಅದರಂತೆ ರಸ್ತೆ ಹತ್ತಿರದ ತಾಂಡಾದ ಲಂಬಾಣಿಗರು ಎತ್ತುಗಳನ್ನು ಶೇ. ೩೪.೭೪, ಶೇ. ೨೭.೧೮ರಷ್ಟು ಆಕಳುಗಳು, ಶೇ. ೩೬ ಎಮ್ಮೆಗಳು, ಶೇ. ೩೪ರಷ್ಟು ಮೇಕೆಗಳು ಹಾಗೂ ಶೇ. ೩೧.೩೫ರಷ್ಟು ಪ್ರಮಾಣದ ಕೋಳಿಗಳನ್ನು ಈ ತಾಂಡಾದ ಲಂಬಾಣಿಗರು ಸಾಕುತ್ತಿದ್ದಾರೆ.

ಮೂರು ತಾಂಡಾಗಳು ಹೊಂದಿರುವ ಪಶುಸಂಪತ್ತನ್ನು ತುಲನೆ ಮಾಡಿದಾಗ ಗ್ರಾಮ ಮತ್ತು ರಸ್ತೆ ಹತ್ತಿರದ ತಾಂಡಾಗಳಿಗಿಂತಲೂ ಶೇ. ೧೦೦ಕ್ಕೆ ೧೦೦ರಷ್ಟು ಕುರಿಗಳನ್ನು ರಿಮೋಟ್ ತಾಂಡಾಗಳು ಮಾತ್ರ ಹೊಂದಿವೆ. ಅಲ್ಲದೇ ಕೋಳಿಗಳನ್ನು ಕೂಡಾ ಹೆಚ್ಚಿನ ಪ್ರಮಾಣದಲ್ಲಿ ರಿಮೋಟ್ ತಾಂಡಾಗಳು ಹೊಂದಿವೆ. ಉಳಿದ ಪಶುಸಂಪತ್ತನ್ನು ಗಮನಿಸಿದಾಗ ಹೆಚ್ಚು ಕಡಿಮೆ ಮೂರು ತಾಂಡಾಗಳು ಸಮ ಪ್ರಮಾಣದ ಪಶುಸಂಪತ್ತನ್ನು ಹೊಂದಿರುವುದು ಕಂಡುಬರುತ್ತದೆ.

**ಕೋಷ್ಟಕ ೫.೬.೪. ಮೂರು ಜಿಲ್ಲೆಗಳ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ**

| ರಾಜ್ಯಗಳು | ಜಿಲ್ಲೆಗಳು | ಕುಟುಂಬಗಳು | ಪಶುಸಂಪತ್ತು | | | | | |
|---|---|---|---|---|---|---|---|---|
| | | | ಎತ್ತು | ಆಕಳು | ಎಮ್ಮೆ | ಕುರಿ | ಮೇಕೆ | ಕೋಳಿ |
| ಕರ್ನಾಟಕ | ಗುಲಬರ್ಗಾ | ೨೧೫ | ೨೦೨ | ೨೧೩ | ೩೩ | ೨೫ | ೩೫೯ | ೫೯೦ |
| ಮಹಾರಾಷ್ಟ್ರ | ಸೋಲಾಪುರ | ೧೮೭ | ೧೧೮ | ೮೪ | ೬ | ೩೭ | ೧೫೮ | ೫೯೪ |
| ಆಂಧ್ರ ಪ್ರದೇಶ | ರಂಗಾರೆಡ್ಡಿ | ೨೪೧ | ೨೧೩ | ೨೧೭ | ೨೫ | ೨೯ | ೪೪೪ | ೮೨೬ |
| | **ಒಟ್ಟು** | **೬೪೩** | **೫೩೩** | **೫೧೪** | **೬೪** | **೯೧** | **೯೬೧** | **೨೦೧೦** |

ಕೋಷ್ಟಕ ೫.೬.೪. ಮೂರು ರಾಜ್ಯಗಳ ಮೂರು ಜಿಲ್ಲೆಗಳಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ತಾಂಡಾಗಳ ಜನರು ಹೊಂದಿರುವ ಪಶುಸಂಪತ್ತನ್ನು ಕುರಿತು ಮಾಹಿತಿ ಒದಗಿಸುತ್ತದೆ. ಗುಲಬರ್ಗಾ ಜಿಲ್ಲೆಯ ತಾಂಡಾಗಳನ್ನು ಗಮನಿಸಿದಾಗ ಮೂರು ಜಿಲ್ಲೆಯ ತಾಂಡಾಗಳ ಒಟ್ಟು ಪಶುಸಂಪತ್ತಿನ ಪ್ರಮಾಣದಲ್ಲಿ ಇಲ್ಲಿಯ ತಾಂಡಾಗಳಲ್ಲಿ ಒಟ್ಟು ಶೇ. ೩೭.೮೯ ಎತ್ತುಗಳು, ಶೇ. ೪೧.೪೩ ಆಕಳುಗಳು, ಶೇ. ೫೧.೫೬ ಎಮ್ಮೆಗಳು, ಶೇ. ೨೭.೪೭ ಕುರಿಗಳನ್ನು, ಶೇ. ೩೭.೩೫ ಮೇಕೆಗಳು ಹಾಗೂ ಶೇ. ೨೯.೩೫ ರಷ್ಟು ಕೋಳಿಗಳನ್ನು ಹೊಂದಿರುವುದು ಕಂಡುಬರುತ್ತದೆ. ಅದೇ ರೀತಿ ಸೋಲಾಪುರದ ತಾಂಡಾಗಳನ್ನು ಗಮನಿಸಿದಾಗ ಶೇ. ೨೨.೧೩ ಎತ್ತುಗಳು, ಶೇ. ೧೬.೩೪ ಆಕಳುಗಳು, ಶೇ. ೯.೩೭ ಎಮ್ಮೆಗಳು, ಶೇ. ೪೦.೬೫ ಕುರಿಗಳು, ಶೇ. ೧೬.೪೪ ಮೇಕೆಗಳನ್ನು ಮತ್ತು ಶೇ. ೨೯.೫೫ರಷ್ಟು ಪ್ರಮಾಣದ ಕೋಳಿಗಳನ್ನು ಹೊಂದಿವೆ. ಅದರಂತೆ ರಂಗಾರೆಡ್ಡಿ ಜಿಲ್ಲೆಯ ತಾಂಡಾಗಳನ್ನು ವೀಕ್ಷಿಸಿದಾಗ

**ಸ್ತಂಭಚಿತ್ರ ೫.೬.೧. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರು ಹೊಂದಿರುವ ಪಶುಸಂಪತ್ತಿನ ವಿವರ**



ಶೇ. ೩೯.೯೬ ಎತ್ತುಗಳು, ಶೇ. ೪೨.೨೧ ಆಕಳುಗಳು, ಶೇ. ೩೯.೦೬ ಎಮ್ಮೆಗಳು, ಶೇ. ೩೧.೮೬ ಕುರಿಗಳು, ಶೇ. ೪೬.೨೦ ಮೇಕೆಗಳನ್ನು ಹಾಗೂ ಶೇ. ೪೧.೦೯ರಷ್ಟು ಕೋಳಿಗಳನ್ನು ಹೊಂದಿದೆ.

ಮೂರು ಜಿಲ್ಲೆಗಳ ಎಲ್ಲಾ ತಾಂಡಾಗಳು ಹೊಂದಿರುವ ಪಶುಸಂಪತ್ತನ್ನು ಹೋಲಿಕೆಮಾಡಿ ನೋಡಿದಾಗ ಉಳಿದೆರೆಡು ಜಿಲ್ಲೆಗಳಿಗಿಂತ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಪಶುಸಂಪತ್ತಿಗೆ ಹೆಚ್ಚಿನ ಆದ್ಯತೆ ನೀಡಿದ್ದಾರೆ ಎಂಬ ಅಂಶ ಸ್ಪಷ್ಟವಾಗಿ ಗೊತ್ತಾಗುತ್ತದೆ. ಮೂರು ಜಿಲ್ಲೆಗಳ ಲಂಬಾಣಿಗರು ಪಶುಸಂಪತ್ತಿನಲ್ಲಿ ಹೆಚ್ಚಾಗಿ ಹಾಲು ಕರೆಯುವ ಜಾನುವಾರುಗಳಾದ ಆಕಳು, ಎಮ್ಮೆ, ಕುರಿ, ಮೇಕೆ ಗಳನ್ನು ಹೊಂದಿ ಅವುಗಳ ಪೋಷಣೆ ಮಾಡುತ್ತಿರುವುದು ಕಂಡುಬರುತ್ತದೆ. ಲಂಬಾಣಿಗರು ಮೊದಲಿ ನಿಂದಲೂ ಹಾಲು ಹಾಗೂ ಹಾಲಿನ ಉತ್ಪನ್ನಗಳನ್ನು ಮಾರಾಟ ಮಾಡುತ್ತಾ ತಮ್ಮ ತಕ್ಷಣದ ಬೇಡಿಕೆಗಳನ್ನು ಪೂರೈಸಿಕೊಳ್ಳುತಿದ್ದಾರೆ. ಅಲ್ಲದೇ ಮೂರು ಜಿಲ್ಲೆಗಳ ಲಂಬಾಣಿಗರು ಕೋಳಿ ಸಾಕಾಣಿಕೆಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಕೋಳಿಗಳನ್ನು ತಕ್ಷಣದ ಆದಾಯದ ಮೂಲವಾಗಿ ಲಂಬಾಣಿಗರು ಬಳಸಿಕೊಳ್ಳುತ್ತಾರೆ. ತಮಗೆ ಹಣದ ಅವಶ್ಯಕತೆಗೆ ಇದ್ದಾಗ ಕುರಿ, ಕೋಳಿಗಳನ್ನು ಸಂತೆಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡಿ ತಮಗೆ ಬೇಕಾದ ವಸ್ತುಗಳನ್ನು ಖರೀದಿಸಿಕೊಂಡು ಬರುತ್ತಾರೆ. ಲಂಬಾಣಿಗರು ಸಂತೆಗೆ ಹೋಗುವಾಗ ಚೀಲದಲ್ಲಿ ಒಂದೆರೆಡು ಕೋಳಿಗಳನ್ನು ಹಾಕಿಕೊಂಡು ಹೋಗಿ, ಅವುಗಳನ್ನು ಮಾರಾಟ ಮಾಡಿ ಬಂದ ಹಣದಲ್ಲಿ ಸಂತೆಯನ್ನು ಮಾಡುತ್ತಾರೆ. ಈ ಕ್ರಮವು ಮೂರು ಜಿಲ್ಲೆಗಳಲ್ಲಿ ಕಂಡುಬಂದರೂ ಹೆಚ್ಚಿನ ಪ್ರಮಾಣದಲ್ಲಿ ರಂಗಾರೆಡ್ಡಿ ಜಿಲ್ಲೆಯಲ್ಲಿ ಗೋಚರಿಸುತ್ತದೆ. ಮಾಂಸಹಾರಿಗಳಾದ ಲಂಬಾಣಿಗರು ಮನೆಗೆ ಅತಿಥಿಗಳು ಬಂದಾಗ ತಾವು ಸಾಕಿರುವ ಕೋಳಿಯನ್ನು ಕೊಯ್ದು ಮಾಂಸದೂಟದ ಮೂಲಕ ಅತಿಥಿಗಳನ್ನು ಉಪಚರಿಸುತ್ತಾರೆ.

ಲಂಬಾಣಿಗರು ತಮ್ಮ ಮನೆಯಲ್ಲಿ ಯಾವುದೇ ಕಾರ್ಯಕ್ರಮಗಳಿದ್ದಾಗ ಕುರಿ, ಮೇಕೆಗಳನ್ನು ಮಾರಿ ಕಾರ್ಯಕ್ರಮಗಳನ್ನು ಆಚರಿಸುತ್ತಾರೆ. ಈ ಕ್ರಮವು ಗುಲಬರ್ಗಾ ಮತ್ತು ಸೋಲಾಪುರಗಳಿಗಿಂತ ರಂಗಾರೆಡ್ಡಿ ಜಿಲ್ಲೆಯ ತಾಂಡಾಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಗೋಚರಿಸುತ್ತದೆ.

### ೫.೭. ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳು

ಭೂ ಹಿಡುವಳಿಯ ವಿಸ್ತೀರ್ಣ ಅಥವಾ ಆಕಾರವು ಬೇಸಾಯೋತ್ಪಾದನಾ ಸಾಮರ್ಥ್ಯವನ್ನು ನಿರ್ಧರಿಸುವ ಮುಖ್ಯವಾದ ಅಂಶವಾಗಿದೆ. "ಸಾಗುವಳಿ ಜಮೀನು ಕಿರಿದಾಗಿದ್ದರೆ ಅಲ್ಲಿ ಮಿತವ್ಯಯದಿಂದ ಕೂಡಿದ ಶಾಸ್ತ್ರೀಯವಾದ ಬೇಸಾಯ ನಡೆಸಲು ಸಾಧ್ಯವಿಲ್ಲ. ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿಯಿಂದ ಸಾಗುವಳಿ ಭೂಮಿಯ ವಿಸ್ತೀರ್ಣ ಅಥವಾ ಆಕಾರವನ್ನು ಗಣನೆಗೆ ತೆಗೆದುಕೊಳ್ಳಬೇಕೆ ಹೊರತು ಭೂ ಸ್ವಾಮ್ಯದ ಹಕ್ಕನ್ನಲ್ಲ. ಭೂಮಿಯು ವಿಸ್ತಾರವಾಗಿರಬಹುದು. ಅಲ್ಲಿ ರೈತರು ಬೇಸಾಯದ ಕೆಲಸ ಮಾಡುತ್ತಿರಬಹುದು ಆಗಲೂ ಪ್ರತಿಯೊಬ್ಬನ ಪಾಲಿಗೆ ಅತಿ ಚಿಕ್ಕದಾದ ಸಾಗುವಳಿ ಜಮೀನು ಬರುತ್ತದೆ. ಇದರ ಫಲವಾಗಿ ಹೆಚ್ಚು ಉತ್ಪಾದನೆ ಸಾಧ್ಯವಾಗಲಾರದು. ಒಬ್ಬನೇ ರೈತ ಸ್ವಲ್ಪ ವಿಶಾಲವಾದ ಭೂಮಿಯನ್ನು ಸಾಗುವಳಿ ಮಾಡುವುದಾದರೆ ಅವನು ಉತ್ಪಾದನೆಯನ್ನು ಹೆಚ್ಚಿಸಿ

ಕೊಳ್ಳಬಲ್ಲ. ಇದರಿಂದ ವರಮಾನವು ವೃದ್ಧಿಯಾಗುತ್ತದೆ. ಅಂದರೆ ರೈತನಿಗೆ ತನ್ನ ಹಾಗೂ ತನ್ನ ಕುಟುಂಬದವರ ದುಡಿಮೆಯನ್ನು ಬಳಸಿಕೊಳ್ಳುವಷ್ಟು ಅವಕಾಶವಿರುವ ಜಮೀನಿರಬೇಕಾದುದ್ದು ಅಗತ್ಯ. ಆದರೆ ಭಾರತದಲ್ಲಿ ಇಂತಹ ಆರ್ಥಿಕ ಸಾಗುವಳಿ ಭೂಮಿಯ ಕೊರತೆ ತುಂಬಾ ಇದೆ. ಇದರಿಂದಲೇ ರೈತನು ತನ್ನ ದುಡಿಮೆಯ ಶಕ್ತಿಯ ಪೂರ್ಣ ಲಾಭ ಪಡೆಯಲು ಸಾಧ್ಯವಾಗಿಲ್ಲ. ಸಾಕಷ್ಟು ವಿಸ್ತಾರವಾದ ಹೊಲದ ಅಭಾವ ಉತ್ಪಾದನಾ ಪ್ರಮಾಣ ಕುಗ್ಗಲು ಬಹುಮಟ್ಟಿಗೆ ಕಾರಣವಾಗಿದೆ. ಭೂ ಹಿಡುವಳಿ ಎಂದರೆ ಒಬ್ಬ ರೈತ ಹೊಂದಿರುವ ಭೂಮಿಯ ಪ್ರಮಾಣವಾಗಿದೆ" (ಸೋಮಶೇಖರ್ ನೇ ತಿ:೨೦೧೧:೨೪೫). ಭಾರತದಲ್ಲಿ ಭೂ ಹಿಡುವಳಿಗಳ ಗಾತ್ರ ತೀರಾ ಚಿಕ್ಕದಿದ್ದು ಹಿಡುವಳಿಗಳು ಅನಾರ್ಥಿಕ ಎನಿಸಿವೆ. ಇಂತಹ ಅನಾರ್ಥಿಕ ಹಿಡುವಳಿಗಳನ್ನು ಆರ್ಥಿಕ ಹಿಡುವಳಿಗಳನ್ನಾಗಿ ಸ್ಥಾಪಿಸುವುದರ ಮೂಲಕ ಭೂ ವಿಭಜನೆ ಮತ್ತು ಛಿದ್ರೀಕರಣವನ್ನು ತಡೆಗಟ್ಟಬಹುದು.

"ಸಾಮಾನ್ಯವಾಗಿ ಹೆಚ್ಚಿನ ಪ್ರಮಾಣದಲ್ಲಿ ರೈತರು ೫ ಎಕರೆ ಅಥವಾ ಅದಕ್ಕಿಂತ ಕಡಿಮೆ ಜಮೀನನ್ನು ಹೊಂದಿದವರೇ ಆಗಿದ್ದಾರೆ" (ಅದೇ:ಪು: ೨೫೭). ಇಂತಹ ರೈತರ ಸಮುದಾಯದಲ್ಲಿ ಲಂಬಾಣಿ ರೈತ ಸಮುದಾಯವು ಕೂಡಾ ಒಂದಾಗಿದೆ. ಏಕೆಂದರೆ ಮೂಲತಃ ಒಂದೂರಿಂದ ಇನ್ನೊಂದೂರಿಗೆ ಹೋಗಿ ಹೊಟ್ಟೆಪಾಡನ್ನು ನಿರ್ವಹಿಸುವ ಲಂಬಾಣಿಗರು ವಲಸೆ ಪ್ರವೃತ್ತಿಯನ್ನು ಹೊಂದಿದವರಾಗಿದ್ದಾರೆ. ಇದರಿಂದಾಗಿ ಇವರು ಹೆಚ್ಚಾಗಿ ಕೃಷಿಯನ್ನು ಅವಲಂಬಿಸದೇ ಬೇರೆ ಬೇರೆ ವೃತ್ತಿಯಲ್ಲಿ ನಿರತರಾಗಿದ್ದಾರೆ. ಲಂಬಾಣಿಗರ ಚಾರಿತ್ರಿಕ ಹಿನ್ನೆಲೆಯನ್ನು ನೋಡಿದಾಗ ಇವರು ಮೂಲತಃ ವ್ಯಾಪಾರಿಗಳಾಗಿದ್ದು ತಮ್ಮ ರಾಸುಗಳ ಮೇಲೆ ಖ್ಯಾದ್ಯ ಪದಾರ್ಥವನ್ನು ಹೇರಿಕೊಂಡು ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುತ್ತಾ ವ್ಯಾಪಾರ ಮಾಡುತ್ತಿದ್ದರು. ಕಾಲಕ್ರಮೇಣ ಒಂದೆಡೆ ನೆಲೆನಿಂತು ವ್ಯವಸಾಯವನ್ನು ಮಾಡಲು ಪ್ರಾರಂಭಿಸಿದರು. ಇವರು ಕೃಷಿ ಭೂ ಹಿಡುವಳಿಗಳನ್ನು ಹೊಂದಿದ್ದರೂ ಕೂಡಾ ಇವರಲ್ಲಿರುವ ಅನಕ್ಷರತೆ, ಅಜ್ಞಾನ, ಬಡತನ ಹಾಗೂ ಅನಾರ್ಥಿಕ ಹಿಡುವಳಿಗಳಿಂದಾಗಿ ಇಂದಿಗೂ ವೈಜ್ಞಾನಿಕ ಬೇಸಾಯ ಪದ್ಧತಿಯನ್ನು ಅಳವಡಿಸಿಕೊಳ್ಳದೇ ಹಳೆಯ ಪದ್ಧತಿಯನ್ನೇ ಅನುಸರಿಸುತ್ತಿದ್ದಾರೆ. ಈ ಪದ್ಧತಿಯಿಂದಾಗಿ ಕೃಷಿಯಿಂದ ಬರುವ ಉತ್ಪನ್ನ ಹಾಗೂ ಉತ್ಪನ್ನದಿಂದ ಬರುವ ಆದಾಯ ತುಂಬಾ ಕಡಿಮೆಯಿರುವುದರಿಂದಾಗಿ ತಮ್ಮ ಜೀವನವನ್ನು ಕಟ್ಟಿಕೊಳ್ಳಲು ಸಾಧ್ಯವಾಗದೇ ತಮ್ಮ ಹಿಡುವಳಿಯನ್ನು ಇತರೆ ರೈತರಿಗೆ ಗೇಣಿಯಾಗಿ ಕೊಟ್ಟು ತಾವುಗಳು ಕೃಷಿ ಕಾರ್ಮಿಕರಾಗಿ ಹಾಗೂ ದೂರದ ನಗರಗಳಿಗೆ ವಲಸೆ ಹೋಗಿ ಒಂದಿಲ್ಲೊಂದು ಉದ್ಯೋಗದಲ್ಲಿ ನಿರತರಾಗಿ ತಮ್ಮ ಹೊಟ್ಟಪಾಡನ್ನು ನಿರ್ವಹಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಸಂಶೋಧನಾ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ, ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಲ್ಲಿನ ರಿಮೋಟ್, ಗ್ರಾಮ ಹತ್ತಿರದ ಹಾಗೂ ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳ ಕುರಿತಾಗಿ ಕೋಷ್ಟಕಗಳಲ್ಲಿ ಕ್ರಮವಾಗಿ ವಿವರಿಸಲಾಗಿದೆ.

## ಕೋಷ್ಟಕ ೫.೭೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ

| ಜಿಲ್ಲೆ | ನೆಲೆಗಳು | ಕುಟುಂಬಗಳು | ಭೂ ಹಿಡುವಳಿ (ಎಕರೆಗಳಲ್ಲಿ) | | | ೨೫ರ ಮೇಲ್ಪಟ್ಟು | ೧೦.೧-೨೫ | ೫.೧-೧೦ | ೨.೫೧-೫ | ೦.೫-೨.೫೦ | ಭೂರಹಿತ |
|---|---|---|---|---|---|---|---|---|---|---|---|
| | | | ಒಣಭೂಮಿ | ನೀರಾವರಿ | ಒಟ್ಟು | ಎ | ಬಿ | ಸಿ | ಡಿ | ಇ | ಎಫ್ |
| ಗುಲಬರ್ಗಾ | ರಿಮೋಟ್ ತಾಂಡಾ | ೮೯ | ೧೫೬ | ೨ | ೧೫೮ | | ೦ | ೧೦ | ೧೯ | ೧೪ | ೪೬ |
| | ಗ್ರಾಮ ಪತ್ತಿರದ ತಾಂಡಾ | ೭೧ | ೨೬೧ | ೧೮ | ೨೭೯ | | ೩ | ೨೦ | ೧೭ | ೧೫ | ೧೬ |
| | ರಸ್ತೆ ಪತ್ತಿರದ ತಾಂಡಾ | ೫೫ | ೧೮೫ | ೫ | ೧೯೦ | | ೨ | ೧೨ | ೮ | ೧೪ | ೧೯ |
| | ಕರ್ನಾಟಕ | ೨೧೫ | ೬೦೨ | ೨೫ | ೬೨೭ | | ೫ | ೪೨ | ೪೪ | ೪೩ | ೮೧ |






ಕೋಷ್ಟಕ ೫.೭.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳ ಗಾತ್ರ ಮತ್ತು ಸ್ವರೂಪವನ್ನು ಹೇಳುತ್ತದೆ. ಸಂಶೋಧನಾ ಅಧ್ಯಯನಕ್ಕೆ ಒಳಪಟ್ಟ ಈ ಜಿಲ್ಲೆಯ ಎಲ್ಲ ತಾಂಡಾಗಳು ಒಟ್ಟು ೬೨೭ ಎಕರೆ ಜಮೀನನ್ನು ಹೊಂದಿವೆ. ಇದರಲ್ಲಿ ೬೦೨ ಎಕರೆ ಜಮೀನು ಒಣ ಭೂಮಿಯಾಗಿದ್ದು, ಉಳಿದ ಕೇವಲ ೨೫ ಎಕರೆ ಜಮೀನು ಮಾತ್ರ ನೀರಾವರಿ ಪ್ರದೇಶಕ್ಕೆ ಒಳಪಟ್ಟಿದೆ. ರಿಮೋಟ್ ತಾಂಡಾವು ೮೯ ಕುಟುಂಬಗಳನ್ನು ಹೊಂದಿದ್ದು ಒಟ್ಟು ೧೫೮ ಎಕರೆ ಜಮೀನು ಹೊಂದಿದೆ. ಇಲ್ಲಿಯ ಶೇ. ೧೫.೭೩ರಷ್ಟು ಕುಟುಂಬಗಳು ೦.೫ ರಿಂದ ೨.೫೦ ಎಕರೆಗಳಷ್ಟು ಜಮೀನನ್ನು ಹೊಂದಿ ಅತಿ ಚಿಕ್ಕ ಹಿಡುವಳಿದಾರರಾಗಿದ್ದಾರೆ. ಶೇ. ೨೧.೩೫ರಷ್ಟು ಕುಟುಂಬಗಳು ೨.೫೧ ರಿಂದ ೫ ಎಕರೆಗಳಷ್ಟು ಜಮೀನು ಉಳ್ಳವರಾಗಿದ್ದು ಚಿಕ್ಕ ಹಿಡುವಳಿದಾರರಾಗಿದ್ದಾರೆ. ಶೇ. ೧೧.೨೪ರಷ್ಟು ಕುಟುಂಬಗಳು ೫.೧ ರಿಂದ ೧೦ ಎಕರೆಗಳಷ್ಟು ಭೂಮಿಯನ್ನು ಹೊಂದಿದ್ದು ಮಧ್ಯಮ ಹಿಡುವಳಿದಾರರಾಗಿದ್ದಾರೆ. ೧೦.೧ ರಿಂದ ೨೫ ಎಕರೆಗಳಷ್ಟು ಭೂಮಿಯನ್ನು ಹೊಂದಿರುವ ದೊಡ್ಡ ಹಿಡುವಳಿದಾರರು ಕಂಡುಬರುವುದಿಲ್ಲ. ಆದರೆ ಈ ರಿಮೋಟ್ ತಾಂಡಾಗಳಲ್ಲಿ ವಾಸಿಸುವ ಕುಟುಂಬಗಳಲ್ಲಿ ಶೇ. ೫೧.೬೯ರಷ್ಟು ಅಂದರೆ ಅರ್ಧಕ್ಕಿಂತಲೂ ಹೆಚ್ಚಿನ ಕುಟುಂಬಗಳು ಭೂ ರಹಿತ ಕುಟುಂಬಗಳಾಗಿವೆ.

ಗ್ರಾಮ ಹತ್ತಿರದ ತಾಂಡಾಗಳನ್ನು ಗಣನೆಗೆ ತೆಗೆದುಕೊಂಡಾಗ ಇವುಗಳು ೭೧ ಕುಟುಂಬಗಳನ್ನು ಹೊಂದಿದ್ದು, ಶೇ. ೨೧.೧೩ರಷ್ಟು ಕುಟುಂಬಗಳು ಅತಿಸಣ್ಣ ಹಿಡುವಳಿ ದಾರರಾಗಿದ್ದು, ಶೇ. ೨೩.೯೪ರಷ್ಟು ಕುಟುಂಬಗಳು ಸಣ್ಣ ಹಿಡುವಳಿದಾರರಾಗಿದ್ದಾರೆ. ಶೇ. ೨೮.೧೭ರಷ್ಟು ಕುಟುಂಬಗಳು ಮಧ್ಯಮ ಹಾಗೂ ಶೇ. ೪.೨೩ರಷ್ಟು ಕುಟುಂಬಗಳು ದೊಡ್ಡ ಹಿಡುವಳಿದಾರರಾಗಿದ್ದಾರೆ. ಗ್ರಾಮ ಹತ್ತಿರದ ತಾಂಡಾಗಳ ಒಟ್ಟು ಕುಟುಂಬಗಳಲ್ಲಿ ಶೇ. ೨೨.೫೩ ಕುಟುಂಬಗಳು ಭೂ ರಹಿತ ಕುಟುಂಬ ಗಳಿರುವುದು ಕಂಡುಬರುತ್ತದೆ.

ರಸ್ತೆ ಹತ್ತಿರದ ತಾಂಡಾಗಳನ್ನು ಅನುಲಕ್ಷಿಸಿದಾಗ ಈ ತಾಂಡಾಗಳು ೫೫ ಕುಟುಂಬಗಳನ್ನು ಹೊಂದಿದ್ದು, ಶೇ. ೨೪.೪೫ರಷ್ಟು ಅತಿ ಚಿಕ್ಕ ಹಿಡುವಳಿದಾರರಾಗಿದ್ದು, ಶೇ. ೧೪.೫೪ರಷ್ಟು ಚಿಕ್ಕ ರೈತರಿರುವುದು ಕಂಡುಬರುತ್ತದೆ. ಶೇ. ೨೧.೮೨ರಷ್ಟು ಕುಟುಂಬಗಳು ಮತ್ತು ಶೇ. ೩.೬೩ರಷ್ಟು ಕುಟುಂಬಗಳು ಕ್ರಮವಾಗಿ ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರಾಗಿದ್ದಾರೆ. ಇಲ್ಲಿ ಒಟ್ಟು ಶೇ. ೩೪.೫೪ರಷ್ಟು ಭೂ ರಹಿತ ಕುಟುಂಬಗಳಿವೆ.

ಈ ಮೂರು ಪ್ರಕಾರದ ತಾಂಡಾಗಳನ್ನು ಹೋಲಿಸಿ ನೋಡಿದಾಗ ರಿಮೋಟ್ ತಾಂಡಾಗಳಿಗಿಂತ ಗ್ರಾಮ ಹತ್ತಿರದ ಮತ್ತು ರಸ್ತೆ ಹತ್ತಿರದ ತಾಂಡಾಗಳ ಹೆಚ್ಚಿನ ಕುಟುಂಬಗಳು ಕೃಷಿ ಜಮೀನು ಹೊಂದಿರುವುದು ಸ್ಪಷ್ಟವಾಗುತ್ತದೆ. ಎಲ್ಲದಕ್ಕಿಂತ ಮುಖ್ಯವಾಗಿ ಶೇ. ೯೬.೦೧ರಷ್ಟು ಜಮೀನು ಒಣ ಭೂಮಿಯಾಗಿದ್ದು, ಶೇ. ೩.೯೯ ಎಕರೆ ಜಮೀನು ನೀರಾವರಿಗೆ ಒಳಪಟ್ಟಿರುವುದನ್ನು ಗಮನಿಸಬಹುದು ಏಕೆಂದರೆ ಲಂಬಾಣಿಗರ ಆರ್ಥಿಕ ಮಟ್ಟವು ಕೆಳಸ್ತರದಲ್ಲಿರುವುದರಿಂದ ಅವರು ತಮ್ಮ ಜಮೀನುಗಳಲ್ಲಿ ಬಾವಿ ತೊಡಿಸುವುದಾಗಲೀ ಇಲ್ಲವೇ ಬೋರವೆಲ್ ಹಾಕಿಸುವುದಾಗಲೀ ಯಾವುದೇ ಪ್ರಯತ್ನ

ಮಾಡಿಲ್ಲ. ಆದ್ದರಿಂದ ಸರಕಾರ ಇಂತಹ ಸಣ್ಣ ಹಾಗೂ ಅತಿ ಸಣ್ಣ ಹಿಡುವಳಿದಾರರ ಸ್ಥಿತಿಯನ್ನು ಸುಧಾರಿಸಲು ಅವರಿಗೆ ಬ್ಯಾಂಕಿನಿಂದ ಸಾಲ ಪೂರೈಕೆಯ ವ್ಯವಸ್ಥೆ ಮತ್ತು ಕಾಲುವೆಗಳ ಮೂಲಕ ನೀರಿನ ಪೂರೈಕೆಯ ವ್ಯವಸ್ಥೆ ಮಾಡಬೇಕು. ಅಂದಾಗ ಮಾತ್ರ ಸ್ವಲ್ಪ ಮಟ್ಟಿಗಾದರೂ ಜಮೀನು ನೀರಾವರಿಗೆ ಒಳಪಟ್ಟು, ಇವರು ವಿವಿಧ ವಾಣಿಜ್ಯ ಬೆಳೆಗಳನ್ನು ಬೆಳೆಯಬಹುದಾಗಿದೆ.

ಕೋಷ್ಟಕ ೫.೭.೨.ರಲ್ಲಿ ಸೋಲಾಪುರ ಜಿಲ್ಲೆಯ ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳ ಗಾತ್ರ ಮತ್ತು ಸ್ವರೂಪವನ್ನು ಕುರಿತು ವಿವರಿಸುತ್ತದೆ. ಈ ಜಿಲ್ಲೆಯ ಮೂರು ತಾಂಡಾಗಳು ಒಟ್ಟು ೫೬೯ ಎಕರೆ ಜಮೀನನ್ನು ಹೊಂದಿದ್ದು, ಇದರಲ್ಲಿ ೪೬೦ ಎಕರೆ ಒಣ ಭೂಮಿ, ೧೦೯ ಎಕರೆ ನೀರಾವರಿ ಭೂಮಿಯಾಗಿದೆ. ಈ ಒಟ್ಟು ಜಮೀನಿನಲ್ಲಿ ರಿಮೋಟ್ ತಾಂಡಾದ ಪಾಲುಗಾರಿಕೆಯನ್ನು ಗಮನಿಸಿದಾಗ ರಿಮೋಟ್ ತಾಂಡಾವು ಒಟ್ಟು ೨೫೮.೫ ಎಕರೆ ಜಮೀನನ್ನು ಹೊಂದಿದ್ದು, ಇದರಲ್ಲಿ ಶೇ. ೮೬.೦೭ ರಷ್ಟು ಒಣ ಭೂಮಿ ಹಾಗೂ ಶೇ. ೧೩.೯೩ರಷ್ಟು ನೀರಾವರಿ ಭೂಮಿಯಾಗಿದೆ. ಈ ತಾಂಡಾಗಳಲ್ಲಿ ಒಟ್ಟು ೬೯ ಕುಟುಂಬಗಳಿದ್ದು, ಶೇ. ೩೪.೭೮ ರಷ್ಟು ಕುಟುಂಬಗಳು ಭೂ ರಹಿತ, ಶೇ. ೧೫.೯೪ ರಷ್ಟು ಅತಿ ಸಣ್ಣ, ಶೇ. ೨೮.೨೮ರಷ್ಟು ಸಣ್ಣ ಹಿಡುವಳಿದಾರರು, ಶೇ. ೧೧.೫೯ ಮತ್ತು ಶೇ. ೭.೨೫ ರಷ್ಟು ಕುಟುಂಬಗಳು ಕ್ರಮವಾಗಿ ಮಧ್ಯಮ ಹಾಗೂ ದೊಡ್ಡ ಹಿಡುವಳಿದಾರರಾಗಿದ್ದಾರೆ. ಕೇವಲ ಶೇ. ೧.೪೪ರಷ್ಟು ಕುಟುಂಬಗಳು ಮಾತ್ರ ೨೫ ಎಕರೆಗಿಂತ ಮೇಲ್ಪಟ್ಟ ಜಮೀನನ್ನು ಹೊಂದಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

ಗ್ರಾಮ ಹತ್ತಿರದ ತಾಂಡಾಗಳಲ್ಲಿ ಒಟ್ಟು ೧೮೦ ಎಕರೆ ಜಮೀನು ಇದ್ದು, ಇದರಲ್ಲಿ ಶೇ. ೬೮.೩೩ ರಷ್ಟು ಒಣ ಭೂಮಿ, ಶೇ. ೩೧.೬೭ರಷ್ಟು ನೀರಾವರಿ ಭೂಮಿಯಾಗಿದೆ. ಈ ತಾಂಡಾಗಳಲ್ಲಿ ೬೫ ಕುಟುಂಬಗಳಿದ್ದು, ಇಲ್ಲಿ ಶೇ. ೨೭.೭೦ರಷ್ಟು ಕುಟುಂಬಗಳು ಭೂ ರಹಿತರು, ಶೇ. ೨೦ ಕುಟುಂಬಗಳು ಅತಿ ಸಣ್ಣ, ಶೇ. ೪೦ರಷ್ಟು ಕುಟುಂಬಗಳು ಸಣ್ಣ ಹಿಡುವಳಿದಾರರಾಗಿದ್ದಾರೆ. ಕೇವಲ ಶೇ. ೧೨.೩೦ರಷ್ಟು ಕುಟುಂಬಗಳು ಮಧ್ಯಮ ಹಿಡುವಳಿಯನ್ನು ಹೊಂದಿದ್ದಾರೆ. ಆದರೆ ಈ ತಾಂಡಾದಲ್ಲಿನ ಲಂಬಾಣಿಗರು ೧೦ ರಿಂದ ೨೫ ಎಕರೆ ಜಮೀನು ಹೊಂದಿಲ್ಲದಿರುವುದು ಕೋಷ್ಟಕದಿಂದ ಕಂಡುಬರುತ್ತದೆ.

ರಸ್ತೆ ಹತ್ತಿರದ ತಾಂಡಾಗಳಲ್ಲಿ ೫೩ ಕುಟುಂಬಗಳಿದ್ದು, ಒಟ್ಟು ೧೩೦.೫ ಎಕರೆ ಜಮೀನನ್ನು ಹೊಂದಿದ್ದಾರೆ. ಅದರಲ್ಲಿ ಶೇ. ೮೭.೭೩ ಎಕರೆ ಜಮೀನು ಒಣ ಭೂಮಿಯಾಗಿದ್ದು, ಶೇ. ೧೨.೨೭ ಎಕರೆ ಜಮೀನು ನೀರಾವರಿಗೆ ಒಳಪಟ್ಟಿದೆ. ಈ ತಾಂಡಾದಲ್ಲಿಯೂ ಕೂಡ ದೊಡ್ಡ ಹಿಡುವಳಿದಾರರು ಕಂಡುಬರುವುದಿಲ್ಲ. ಅಂದರೆ ಯಾವೊಬ್ಬ ಲಂಬಾಣಿಗನು ೧೦ ರಿಂದ ೨೫ ಎಕರೆ ಮೇಲ್ಪಟ್ಟು ಜಮೀನನ್ನು ಹೊಂದಿಲ್ಲ. ಆದರೆ ಈ ತಾಂಡಾದ ಕುಟುಂಬಗಳಲ್ಲಿ ಶೇ. ೯.೪೩ರಷ್ಟು ಮಧ್ಯಮ, ಶೇ. ೩೫.೮೪ರಷ್ಟು ಸಣ್ಣ ಹಾಗೂ ಶೇ. ೧೫.೧೦ರಷ್ಟು ಅತಿ ಸಣ್ಣ ಹಿಡುವಳಿದಾರರಾಗಿದ್ದು, ಶೇ. ೩೯.೬೨ ರಷ್ಟು ಕುಟುಂಬಗಳು ಭೂರಹಿತ ಕೃಷಿ ಕಾರ್ಮಿಕರಾಗಿರುವುದು ಕಂಡುಬರುತ್ತದೆ.

ಮೂರು ತಾಂಡಾಗಳನ್ನು ತುಲನೆಮಾಡಿ ನೋಡಿದಾಗ ಹೆಚ್ಚಿನ ಒಣ ಭೂಮಿಯು ರಿಮೋಟ್ ತಾಂಡಾಗಳಲ್ಲಿ, ಹೆಚ್ಚಿನ ನೀರಾವರಿ ಜಮೀನು ಗ್ರಾಮ ಹತ್ತಿರದ ತಾಂಡಾಗಳಲ್ಲಿ ಕಾಣಬರುತ್ತಿವೆ.

## ಕೋಷ್ಟಕ ೫.೭.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ

| ಜಿಲ್ಲೆ | ನೆಲೆಗಳು | ಕುಟುಂಬಗಳು | ಭೂ ಹಿಡುವಳಿ (ಎಕರೆಗಳಲ್ಲಿ) | | | ೨೫ರ ಮೇಲ್ಪಟ್ಟು | ೧೦.೧–೨೫ | ೫.೧–೧೦ | ೨.೫೧–೫ | ೦.೫–೨.೫೦ | ಭೂರಹಿತ |
|---|---|---|---|---|---|---|---|---|---|---|---|
| | | | ಒಣಭೂಮಿ | ನೀರಾವರಿ | ಒಟ್ಟು | ಎ | ಬಿ | ಸಿ | ಡಿ | ಇ | ಎಫ್ |
| ಸೋಲಾಪುರ | ರಿಮೋಟ್ ತಾಂಡಾ | ೬೯ | ೨೨೨.೫ | ೩೬ | ೨೫೮.೫ | ೧ | ೫ | ೮ | ೨೦ | ೧೧ | ೨೪ |
| | ಗ್ರಾಮ ಹತ್ತಿರದ ತಾಂಡಾ | ೬೫ | ೧೨೩ | ೫೭ | ೧೮೦ | – | – | ೮ | ೨೬ | ೧೩ | ೧೮ |
| | ರಸ್ತೆ ಹತ್ತಿರದ ತಾಂಡಾ | ೫೩ | ೧೧೪.೫ | ೧೬ | ೧೩೦.೫ | – | – | ೫ | ೧೯ | ೮ | ೨೧ |
| | ಮಹಾರಾಷ್ಟ್ರ | ೧೮೭ | ೪೬೦ | ೧೦೯ | ೫೬೯ | ೧ | ೫ | ೨೧ | ೬೫ | ೩೨ | ೬೩ |

ಒಣಭೂಮಿ ೮೧%

ನೀರಾವರಿ ೧೯%



## ಕೋಷ್ಟಕ ೫.೭.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಭೂ ಹಿಡುವಳಿಗಳ ವಿವರ

| ಜಿಲ್ಲೆ | ನೆಲೆಗಳು | ಕುಟುಂಬಗಳು | ಭೂ ಹಿಡುವಳಿ (ಎಕರೆಗಳಲ್ಲಿ) | | | ೨೫ರ ಮೇಲ್ಪಟ್ಟು | ೧೦.೧–೨೫ | ೫.೧–೧೦ | ೨.೫೧–೫ | ೦.೫–೨.೫೦ | ಭೂರಹಿತ |
|---|---|---|---|---|---|---|---|---|---|---|---|
| | | | ಒಣಭೂಮಿ | ನೀರಾವರಿ | ಒಟ್ಟು | ಎ | ಬಿ | ಸಿ | ಡಿ | ಇ | ಎಫ್ |
| ರಂಗಾರೆಡ್ಡಿ | ರಿಮೋಟ್ ತಾಂಡಾ | ೭೪ | ೧೧೫ | ೩೫ | ೧೫೦ | – | ೧ | ೭ | ೨೨ | ೩ | ೪೧ |
| | ಗ್ರಾಮ ಹತ್ತಿರದ ತಾಂಡಾ | ೭೩ | ೧೩೪ | ೨೯ | ೧೬೩ | – | | ೪ | ೨೮ | ೧೪ | ೨೭ |
| | ರಸ್ತೆ ಹತ್ತಿರದ ತಾಂಡಾ | ೯೪ | ೧೫೫ | ೭೧ | ೨೨೬ | – | | ೯ | ೩೩ | ೨೧ | ೩೧ |
| | ಆಂಧ್ರಪ್ರದೇಶ | ೨೪೧ | ೪೦೪ | ೧೩೫ | ೫೩೯ | – | ೧ | ೨೦ | ೮೩ | ೩೮ | ೯೯ |






ಕೋಷ್ಟಕ ೫.೭.೩.ರಲ್ಲಿ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳ ಗಾತ್ರ ಮತ್ತು ಸ್ವರೂಪವನ್ನು ಕುರಿತು ಹೇಳುತ್ತದೆ. ಈ ಜಿಲ್ಲೆಯ ಮೂರು ತಾಂಡಾಗಳು ಒಟ್ಟು ೫೩೯ ಎಕರೆ ಜಮೀನನ್ನು ಹೊಂದಿದ್ದು, ಇದರಲ್ಲಿ ೪೦೪ (ಶೇ. ೭೪.೯೫) ಎಕರೆ ಜಮೀನು ಒಣ ಭೂಮಿಯಾಗಿದ್ದು, ೧೩೭ ಎಂದರೆ ಶೇ. ೨೫.೦೫ ಎಕರೆ ನೀರಾವರಿ ಭೂಮಿಯಾಗಿರುವುದು ಕೋಷ್ಟಕದಿಂದ ಕಂಡುಬರುತ್ತದೆ. ರಿಮೋಟ್ ತಾಂಡಾಗಳು ಒಟ್ಟು ೧೫೦ ಎಕರೆ ಭೂ ಹಿಡುವಳಿಯನ್ನು ಹೊಂದಿದ್ದು, ಇದರಲ್ಲಿ ಶೇ. ೭೬.೬೬ ಒಣ ಭೂಮಿ, ಶೇ. ೨೩.೨೪ರಷ್ಟು ಭೂಮಿ ನೀರಾವರಿಗೆ ಒಳಪಟ್ಟಿದೆ. ಈ ತಾಂಡಾಗಳಲ್ಲಿ ಶೇ. ೫೫.೪೦ರಷ್ಟು ಅಂದರೆ ಅರ್ಧಕ್ಕಿಂತಲೂ ಹೆಚ್ಚಿನ ಕುಟುಂಬಗಳು ಭೂ ರಹಿತ ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ರಿಮೋಟ್ ತಾಂಡಾಗಳಲ್ಲಿ ೭೪ ಕುಟುಂಬಗಳಿದ್ದು, ಶೇ. ೪.೦೫ ಅತಿ ಸಣ್ಣ, ಶೇ. ೨೯.೭೨ರಷ್ಟು ಸಣ್ಣ, ಶೇ. ೯.೪೫ ಮಧ್ಯಮ ಹಾಗೂ ಕೇವಲ ಶೇ. ೧.೩೫ರಷ್ಟು ಕುಟುಂಬಗಳು ದೊಡ್ಡ ಹಿಡುವಳಿದಾರರಾಗಿದ್ದಾರೆ.

ಗ್ರಾಮ ಹತ್ತಿರದ ತಾಂಡಾಗಳಲ್ಲಿ ಒಟ್ಟು ೧೬೩ ಎಕರೆ ಜಮೀನು ಗೋಚರವಾಗುತ್ತಿದ್ದು, ಇದರಲ್ಲಿ ಶೇ. ೮೨.೨೦ ಹಾಗೂ ಶೇ. ೧೭.೮೦ರಷ್ಟು ಕ್ರಮವಾಗಿ ಒಣ ಭೂಮಿ ಮತ್ತು ನೀರಾವರಿ ಭೂಮಿಯಾಗಿವೆ. ಇಲ್ಲಿ ಒಟ್ಟು ೭೩ ಕುಟುಂಬಗಳಿದ್ದು, ಶೇ. ೩೬.೯೮ರಷ್ಟು ಭೂ ರಹಿತ ಕುಟುಂಬಗಳು ಶೇ. ೫.೪೭ರಷ್ಟು ಕುಟುಂಬಗಳು ಮಧ್ಯಮ ಹಿಡುವಳಿದಾರರನ್ನು ಹೊಂದಿವೆ. ಆದರೆ ಈ ತಾಂಡಾಗಳ ಲಂಬಾಣಿಗರು ೧೦ ಎಕರೆಗಿಂತ ಮೇಲ್ಪಟ್ಟ ಜಮೀನನ್ನು ಹೊಂದಿಲ್ಲ. ಹಾಗೆಯೇ ರಸ್ತೆ ಹತ್ತಿರದ ತಾಂಡಾಗಳನ್ನು ಗಮನಿಸಿದಾಗ ಇಲ್ಲಿ ಒಟ್ಟು ೨೨೬ ಎಕರೆ ಜಮೀನು ಕಂಡುಬರುತ್ತಿದ್ದು, ಇದರಲ್ಲಿ ಶೇ. ೬೮.೫೮ ರಷ್ಟು ಎಕರೆ ಒಣ ಭೂಮಿಯನ್ನು ಹಾಗೂ ಶೇ. ೩೧.೪೨ ಎಕರೆ ನೀರಾವರಿ ಜಮೀನನ್ನು ಹೊಂದಿದೆ. ಇಲ್ಲಿರುವ ೯೪ ಕುಟುಂಬಗಳಲ್ಲಿ ಕ್ರಮವಾಗಿ ಶೇ. ೩೨.೯೭, ಶೇ. ೨೨.೩೪, ಶೇ. ೩೫.೧೦ ಹಾಗೂ ಶೇ. ೯.೫೭ರಷ್ಟು ಪ್ರಮಾಣದಲ್ಲಿ ಕ್ರಮವಾಗಿ ಭೂ ರಹಿತರು, ಅತಿ ಸಣ್ಣ, ಸಣ್ಣ ಹಾಗೂ ಮಧ್ಯಮ ಹಿಡುವಳಿದಾರರ ಕುಟುಂಬಗಳಿರುವುದು ಕಂಡುಬರುತ್ತದೆ. ಇಲ್ಲಿಯೂ ಕೂಡಾ ಗ್ರಾಮ ಹತ್ತಿರದ ತಾಂಡಾಗಳಲ್ಲಿರುವಂತೆ ದೊಡ್ಡ ಹಿಡುವಳಿದಾರರ ಕುಟುಂಬಗಳು ಕಂಡುಬರುವುದಿಲ್ಲ.

ಮೂರು ತಾಂಡಾಗಳನ್ನು ಹೋಲಿಕೆ ಮಾಡಿ ನೋಡಿದಾಗ ರಸ್ತೆ ಹತ್ತಿರದ ತಾಂಡಾಗಳು ರಿಮೋಟ್ ಮತ್ತು ಗ್ರಾಮ ಹತ್ತಿರದ ತಾಂಡಾಗಳಿಗಿಂತಲೂ ಹೆಚ್ಚಿನ ಒಣ ಭೂಮಿ ಮತ್ತು ನೀರಾವರಿ ಪ್ರದೇಶವನ್ನು ಹೊಂದಿದೆ.

### ಕೋಷ್ಟಕ ೫.೭.೪. ಸಮೀಕ್ಷೆಗೊಳಪಟ್ಟ ಮೂರು ಜಿಲ್ಲೆಗಳ ಲಂಬಾಣಿಗರ ಭೂ ಹಿಡುವಳಿಗಳ ವಿವರ

| ಜಿಲ್ಲೆ | ಕುಟುಂಬಗಳು | ಭೂ ಹಿಡುವಳಿ (ಎಕರೆಗಳಲ್ಲಿ) | | | ೨೫ರ ಮೇಲ್ಪಟ್ಟು | ೧೦.೧–೨೫ | ೫.೧–೧೦ | ೨.೫೧–೫ | ೦.೫–೨.೫೦ | ಭೂರಹಿತ |
|---|---|---|---|---|---|---|---|---|---|---|
| | | ಒಣಭೂಮಿ | ನೀರಾವರಿ | ಒಟ್ಟು | ಎ | ಬಿ | ಸಿ | ಡಿ | ಇ | ಎಫ್ |
| ಗುಲಬರ್ಗಾ | ೨೧೫ | ೬೦೨ | ೨೫ | ೬೨೭ | – | ೫ | ೪೨ | ೪೪ | ೪೩ | ೮೧ |
| ಸೋಲಾಪುರ | ೧೮೭ | ೪೬೦ | ೧೦೯ | ೫೬೯ | ೧ | ೫ | ೨೧ | ೬೫ | ೩೨ | ೬೩ |
| ರಂಗಾರೆಡ್ಡಿ | ೨೪೧ | ೪೦೪ | ೧೩೫ | ೫೩೯ | – | ೧ | ೨೦ | ೮೩ | ೩೮ | ೯೯ |
| ಒಟ್ಟು | ೬೪೩ | ೧೪೬೬ | ೨೬೯ | ೧೭೩೫ | ೧ | ೧೧ | ೮೩ | ೧೯೨ | ೧೧೩ | ೨೪೩ |



**ಕೋಷ್ಟಕ ೫.೭.೪. ಮೂರು ಜಿಲ್ಲೆಗಳ ಲಂಬಾಣಿಗರ ಭೂ ಹಿಡುವಳಿಗಳ ವಿವರ**




| | ಗುಲಬರ್ಗಾ | ಸೋಲಾಪುರ | ರಂಗಾರೆಡ್ಡಿ |
|---|---|---|---|
| ೨೫ರ ಮೇಲ್ಪಟ್ಟು ಎ | ೦ | ೧ | ೦ |
| ೧೦.೧–೨೫ ಬಿ | ೫ | ೫ | ೧ |
| ೫.೧–೧೦ ಸಿ | ೪೨ | ೨೧ | ೨೦ |
| ೨.೫೧–೫ ಡಿ | ೪೪ | ೬೫ | ೮೩ |
| ೦.೫–೨.೫೦ ಇ | ೪೩ | ೩೨ | ೩೮ |
| ಭೂರಹಿತ ಎಫ್ | ೮೧ | ೬೩ | ೯೯ |

ಕೋಷ್ಟಕ ೫.೭.೪ರ ಮತ್ತು ಸ್ತಂಭಚಿತ್ರ ೫.೭.೧ರಲ್ಲಿ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳ ಗಾತ್ರವನ್ನು ತೋರ್ಪಡಿಸುತ್ತದೆ. ಗುಲಬರ್ಗಾದ ಲಂಬಾಣಿಗರ ಭೂ ಹಿಡುವಳಿಗಳ ಗಾತ್ರವನ್ನು ನೋಡಿದಾಗ ಇಲ್ಲಿ ಒಟ್ಟು ೬೨೭ ಎಕರೆ ಜಮೀನು ಇದ್ದು, ಇದರಲ್ಲಿ ೬೦೨ ಎಕರೆ ಅಂದರೆ ಶೇ. ೯೬.೦೧ರಷ್ಟು ಒಣ ಭೂಮಿಯಾಗಿದ್ದು, ಕೇವಲ ೨೫ ಎಕರೆ ಅಂದರೆ ಶೇ. ೩.೯೯ರಷ್ಟು ಜಮೀನು ಮಾತ್ರ ನೀರಾವರಿ ಪ್ರದೇಶಕ್ಕೆ ಒಳಪಟ್ಟಿದೆ. ಅದರಂತೆ ಸೋಲಾಪುರದ ಲಂಬಾಣಿಗರು ಒಟ್ಟು ೫೩೯ ಎಕರೆ ಜಮೀನು ಹೊಂದಿದ್ದು, ಇದರಲ್ಲಿ ಶೇ. ೮೦.೮೪ ಎಕರೆ ಜಮೀನು ಒಣ ಭೂಮಿಯಾಗಿದ್ದು, ಶೇ. ೧೯.೧೫ ಎಕರೆ ಭೂಮಿ ನೀರಾವರಿಗೆ ಒಳಪಟ್ಟಿದೆ. ಹಾಗೆಯೇ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಒಟ್ಟು ೫೩೪ ಎಕರೆ ಜಮೀನನ್ನು ಹೊಂದಿದ್ದು, ಇದರಲ್ಲಿ ಶೇ. ೭೪.೯೫ ರಷ್ಟು ಭೂಮಿ ಒಣದಾಗಿದ್ದು, ಶೇ. ೨೫.೦೪ರಷ್ಟು ಭೂಮಿ ನೀರಾವರಿಗೆ ಒಳಪಟ್ಟಿದೆ.

ರೈತರು ಹೊಂದಿರುವ ಭೂ ಹಿಡುವಳಿಗಳ ಆಧಾರದ ಮೇಲೆ ಸಣ್ಣ, ಅತೀ ಸಣ್ಣ, ಮಧ್ಯಮ ಹಾಗೂ ದೊಡ್ಡ ರೈತರು ಮತ್ತು ಭೂ ರಹಿತರು ಎಂದು ವಿಂಗಡಿಸಲಾಗಿದೆ. ಈ ವಿಧಗಳ ಗುಂಪಿಗೆ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಲಂಬಾಣಿಗರನ್ನು ವರ್ಗೀಕರಿಸಿದಾಗ ಗುಲಬರ್ಗಾದ ಲಂಬಾಣಿಗರಲ್ಲಿ ಹೆಚ್ಚಿನ ಕುಟುಂಬಗಳು ಅಂದರೆ ಶೇ. ೩೭.೬೭ರಷ್ಟು ಭೂ ರಹಿತ ಕುಟುಂಬಗಳಾಗಿವೆ. ಅತಿ ಚಿಕ್ಕ

ರೈತರು ಶೇ. ೨೦ರಷ್ಟು, ಚಿಕ್ಕ ರೈತರು ಶೇ. ೨೦.೪೬, ಮಧ್ಯಮ ರೈತರು ಶೇ. ೧೯.೫೩ರಷ್ಟಿದ್ದು, ದೊಡ್ಡ ರೈತರ ಪ್ರಮಾಣ ಶೇ. ೨.೩೩ರಷ್ಟಿದೆ. ಅದೇ ರೀತಿ ಸೋಲಾಪುರ ಜಿಲ್ಲೆಯ ಲಂಬಾಣಿಗರ ಕುಟುಂಬಗಳನ್ನು ಹಿಡುವಳಿಗಳ ಆಧಾರದ ಮೇಲೆ ವರ್ಗೀಕರಿಸಿದಾಗ ಶೇ. ೩೩.೯೮ರಷ್ಟು ಭೂ ರಹಿತರು, ಶೇ. ೧೭.೧೧ರಷ್ಟು ಅತೀ ಸಣ್ಣ ರೈತರು, ಶೇ. ೩೪.೭೫ರಷ್ಟು ಸಣ್ಣ ರೈತರು, ಶೇ. ೧೧.೨೨ ಮಧ್ಯಮ ರೈತರು ಹಾಗೂ ಶೇ. ೨.೬೭ರಷ್ಟು ದೊಡ್ಡ ರೈತರ ಪ್ರಮಾಣವಿದೆ. ಕೇವಲ ೧ ಕುಟುಂಬ ಮಾತ್ರ ಅಂದರೆ ಶೇ. ೦.೫೩ರಷ್ಟು ಅತಿ ದೊಡ್ಡ ರೈತರ ಗುಂಪಿಗೆ ಸೇರಿಕೊಂಡಿದೆ. ಅದರಂತೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಹೊಂದಿರುವ ಜಮೀನನ್ನು ಭೂ ಹಿಡುವಳಿಗಳ ಆಧಾರದ ಮೇಲೆ ವರ್ಗೀಕರಿಸಿದಾಗ ಶೇ. ೪೧.೦೭ ರಷ್ಟು ಭೂ ರಹಿತರು, ಶೇ. ೧೫.೭೬ರಷ್ಟು ಅತಿ ಸಣ್ಣ ರೈತರು, ಶೇ. ೩೪.೪೩ರಷ್ಟು ಸಣ್ಣ ರೈತರು, ಶೇ. ೮.೨೯ರಷ್ಟು ಮಧ್ಯಮ ರೈತರು ಹಾಗೂ ಒಂದು ಕುಟುಂಬ ಮಾತ್ರ ದೊಡ್ಡ ರೈತರ ಗುಂಪಿಗೆ ಸೇರುತ್ತದೆ.

ಮೂರು ಜಿಲ್ಲೆಗಳ ಲಂಬಾಣಿಗರು ಹೊಂದಿರುವ ಒಣ ಹಾಗೂ ನೀರಾವರಿ ಜಮೀನುಗಳನ್ನು ತುಲನೆ ಮಾಡಿದಾಗ ಗುಲಬರ್ಗಾ ಜಿಲ್ಲೆಯು ಒಟ್ಟಾರೆ ಭೂಮಿಯಲ್ಲಿ ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಿಗಿಂತ ಅತಿ ಹೆಚ್ಚಿನ ಒಣ ಕೃಷಿ ಭೂಮಿಯನ್ನು ಹೊಂದಿದ್ದಲ್ಲದೇ ಅತಿ ಕಡಿಮೆ ನೀರಾವರಿ ಭೂಮಿಯನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಏಕೆಂದರೆ ಗುಲಬರ್ಗಾದ ಲಂಬಾಣಿಗರು ಆರ್ಥಿಕವಾಗಿ ದುರ್ಬಲರಾಗಿದ್ದು ಹಾಗೂ ಸರಕಾರಿ ಸೌಲಭ್ಯಗಳನ್ನು ಸದ್ಬಳಕೆ ಮಾಡಿಕೊಳ್ಳದಿರುವುದರಿಂದ ತಮ್ಮ ಹೆಚ್ಚು ಭೂಮಿಯನ್ನು ನೀರಾವರಿಗೆ ಒಳಪಡಿಸಲು ಇವರಿಗೆ ಸಾಧ್ಯವಾಗಿಲ್ಲ. ಹೀಗಾಗಿ ಇವರ ಕೃಷಿ ಉತ್ಪನ್ನ ತುಂಬಾ ಕಡಿಮೆಯಿದ್ದು ಇವರು ಅನುಸರಿಸುವ ಬೇಸಾಯವು ಮಳೆಯೊಂದಿಗೆ ಆಡುವ ಜೂಜಾಟ ಎಂತಲೇ ಹೇಳಬಹುದು. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಉಳಿದೆರಡು ಜಿಲ್ಲೆಗಳಿಗಿಂತ ಹೆಚ್ಚಿನ ನೀರಾವರಿ ಜಮೀನನ್ನು ಹೊಂದಿದ್ದಾರೆ. ಮೂರು ಜಿಲ್ಲೆಗಳಲ್ಲಿನ ಲಂಬಾಣಿಗರು ಹೊಂದಿರುವ ಭೂ ಹಿಡುವಳಿಗಳನ್ನು ತುಲನಾತ್ಮಕವಾಗಿ ನೋಡಲಾಗಿ, ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಉಳಿದೆರಡು ಜಿಲ್ಲೆಯ ಲಂಬಾಣಿಗರಿಗಿಂತ ಹೆಚ್ಚಿನ ಅಂದರೆ ಶೇ. ೪೧.೦೮ರಷ್ಟು ಭೂ ರಹಿತ ಕೃಷಿ ಕಾರ್ಮಿಕರಾಗಿದ್ದಾರೆ. ಅದರಂತೆ ಗುಲಬರ್ಗಾ ಜಿಲ್ಲೆಯು ಉಳಿದೆರಡು ಜಿಲ್ಲೆಗಳ ಲಂಬಾಣಿಗರಿಗಿಂತ ಅತಿ ಚಿಕ್ಕ ಹಿಡುವಳಿದಾರರನ್ನು ಹೊಂದಿದೆ. ಇದರಿಂದ ತಿಳಿದುಬರುವ ಅಂಶವೇನೆಂದರೆ ಲಂಬಾಣಿ ಸಮುದಾಯವು ಹೆಚ್ಚಿನ ಪ್ರಮಾಣದಲ್ಲಿ ಕೃಷಿ ಕಾರ್ಮಿಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಹೆಚ್ಚಾಗಿ ವಲಸೆ ಪ್ರವೃತ್ತಿಯನ್ನು ಹೊಂದಿ ವ್ಯಾಪಾರವನ್ನು ಅವಲಂಬಿಸಿದ್ದರಿಂದ ಕೃಷಿಯನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿರಲಿಲ್ಲ. ಆದ್ದರಿಂದ ತಮ್ಮದೇ ಸ್ವಂತ ಹಿಡುವಳಿಗಳನ್ನು ನಿರ್ಮಿಸಿಕೊಂಡಿರಲಿಲ್ಲ. ಇತ್ತೀಚಿಗೆ ಉತ್ತಮ ಸ್ಥಿತಿಯಲ್ಲಿದ್ದ ಲಂಬಾಣಿಗರು ಭೂಮಿಯನ್ನು ಮಾಡಿಕೊಂಡಿದ್ದರೂ ದೊಡ್ಡ ಹಿಡುವಳಿದಾರರಾಗದೇ ಹೆಚ್ಚಿನ ಪ್ರಮಾಣದಲ್ಲಿ ಸಣ್ಣ ಹಿಡುವಳಿದಾರರೇ ಆಗಿದ್ದಾರೆ. ಇವರು ಹೊಂದಿರುವ ಹೆಚ್ಚಿನ ಭೂಮಿಯೂ ಕೂಡಾ ಒಣ ಭೂಮಿಯಾಗಿದೆ ಎಂಬ ಅಂಶ ಮೇಲಿನ ಅಂಕಿ ಸಂಖ್ಯೆಗಳಿಂದ ಗೊತ್ತಾಗುತ್ತದೆ.

## ೫.೮. ಲಂಬಾಣಿಗರ ಶೈಕ್ಷಣಿಕ ಸ್ಥಿತಿಗತಿ

"ಪ್ರತಿಯೊಬ್ಬ ಮನುಷ್ಯನಿಗೂ ಮೂಲಭೂತ ಸೌಕರ್ಯಗಳ ಅಗತ್ಯವಿದೆ. ಇಂತಹ ಮೂಲಭೂತ ಸೌಕರ್ಯಗಳೆಂದರೆ ಆಹಾರ, ಆರೋಗ್ಯ ಮತ್ತು ಶಿಕ್ಷಣವೆಂದು ಖ್ಯಾತ ಅರ್ಥಶಾಸ್ತ್ರಜ್ಞರಾದ ಅಮರ್ತ್ಯಸೇನ್ ಅವರು ತಿಳಿಸುತ್ತಾರೆ. ಮೇಲ್ನೋಟಕ್ಕೆ ಈ ಮೂರು ಅಂಶಗಳು ಭಿನ್ನವೆನಿಸಿದರೂ ಆಂತರ್ಯದಲ್ಲಿ ಇವುಗಳ ಮಧ್ಯ ಅಂತರ್ ಸಂಬಂಧವಿರುವುದು ಮಾತ್ರ ಸತ್ಯ"(ಮಲ್ಲಿಕಾರ್ಜುನ ಭೀಮರಾಯ: ೨೦೦೯:೨೪೯). ಈ ಸೌಕರ್ಯಗಳಲ್ಲಿ ಒಂದಾದ ಶಿಕ್ಷಣವು ಮಾನವ ಸಂಪತ್ತಿನ ಗುಣಮಟ್ಟವನ್ನು ಹೆಚ್ಚಿಸಲು ಇರುವ ಒಂದು ಸಾಧನವಾಗಿದೆ. 'ಶಿಕ್ಷಣವೇ ಶಕ್ತಿ' ಎಂದು ಹೇಳುವಂತೆ ಶಿಕ್ಷಣ ಮಹತ್ವಪೂರ್ಣ ಸ್ಥಾನ ಪಡೆದಿದೆ. ಶೈಕ್ಷಣಿಕ ಪ್ರಗತಿ ಸಾಧಿಸಿರುವ ಯಾವುದೇ ದೇಶವಾದರೂ ಅತಿ ಸುಲಭವಾಗಿ ಮುಂದುವರಿಯುತ್ತದೆ. ಶಿಕ್ಷಣ ರಕ್ಷಣೆಯಷ್ಟೇ ಮುಖ್ಯ ಎಂದು ಖ್ಯಾತ ಶಿಕ್ಷಣ ತಜ್ಞ ಡಾ. ಎಚ್. ನರಸಿಂಹಯ್ಯ ಹೇಳುತ್ತಾರೆ. "ಶಿಕ್ಷಣ ಮರು ಸಂಘಟನೆಯ ಮತ್ತು ಆರ್ಥಿಕಾಭಿವೃದ್ಧಿಯ ಮೂಲ ಸಾಧನವಿದ್ದಂತೆ" (ಎಚ್ಚಾರ್ಕೆ:೨೦೦೦:೫೦೧). ಹಾಗೆಯೇ ಶಿಕ್ಷಣ ಅಭಿವೃದ್ಧಿಯ ಮೂಲಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲ ಸಾಧನ. ಶಿಕ್ಷಣವನ್ನು ಅಲಕ್ಷಿಸಿ ಯಾವುದೇ ದೇಶ ಮುಂದುವರಿಯಲು ಸಾಧ್ಯವಿಲ್ಲ, ಇವೆಲ್ಲದಕ್ಕಿಂತ ಮುಖ್ಯವಾಗಿ ಸಮುದಾಯವೊಂದು ಮುಖ್ಯವಾಹಿನಿಗೆ ಬರಬೇಕೆಂದರೆ ಶಿಕ್ಷಣ ಅತ್ಯಂತ ಅಗತ್ಯವಾಗಿದೆ. ಆದ್ದರಿಂದ ಈ ಭಾಗದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿರುವ ತಾಂಡಾವಾರು ಲಂಬಾಣಿಗರ ಶೈಕ್ಷಣಿಕ ಮಟ್ಟವನ್ನು ಕುರಿತಾಗಿ ಕೋಷ್ಟಕಗಳಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯಲ್ಲಿ ಆಯ್ಕೆ ಮಾಡಲಾದ ರಿಮೋಟ್, ಗ್ರಾಮ ಹತ್ತಿರದ ಹಾಗೂ ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರು ಹೊಂದಿರುವ ಶೈಕ್ಷಣಿಕ ಹಂತಗಳನ್ನು ನೋಡಬಹುದಾಗಿದೆ.

**ಕೋಷ್ಟಕ ೫.೮.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ**

| ಶೈಕ್ಷಣಿಕ ಹಂತ | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಸಾಕ್ಷರರ್ಹರು | ೨೧೧ | ೨೨೦ | ೪೩೧ | ೨೦೯ | ೧೯೦ | ೩೯೯ | ೧೮೧ | ೧೬೧ | ೩೪೨ |
| ಪ್ರಾಥಮಿಕ | ೩೧ | ೪೦ | ೭೧ | ೧೫ | ೨೯ | ೪೪ | ೧೭ | ೧೬ | ೩೩ |
| ಮಾಧ್ಯಮಿಕ | ೧೭ | ೨೭ | ೪೪ | ೧೧ | ೭ | ೧೮ | ೬ | ೭ | ೧೩ |
| ಪ್ರೌಢ ಶಾಲೆ | ೧೨ | ೯ | ೨೧ | ೨೮ | ೨೫ | ೫೩ | ೧೬ | ೨೮ | ೪೪ |
| ಡಿಪ್ಲೋಮಾ | – | – | – | – | – | – | – | – | – |
| ಪದವಿ ಪೂರ್ವ | ೯ | ೨ | ೧೧ | ೧೬ | ೮ | ೨೪ | ೧೩ | ೪ | ೧೭ |
| ಪದವಿ | ೪ | – | ೪ | ೭ | – | ೭ | ೧೧ | ೨ | ೧೩ |

| | | | | | | | | | |
|---|---|---|---|---|---|---|---|---|---|
| ಸ್ನಾತಕೋತ್ತರ | – | – | – | ೩ | – | ೩ | ೩ | – | ೩ |
| ಇತರೆ | ೧ | – | ೧ | ೬ | ೧ | ೭ | ೫ | ೧ | ೬ |
| **ಒಟ್ಟು** | **೭೪** | **೭೮** | **೧೫೨** | **೮೬** | **೭೦** | **೧೫೬** | **೭೧** | **೫೮** | **೧೨೯** |

ಕೋಷ್ಟಕ ೫.೮.೧. ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ತಾಂಡಾವಾರು ಶೈಕ್ಷಣಿಕ ಹಂತಗಳ ಬಗೆಗೆ ಮಾಹಿತಿ ನೀಡುತ್ತದೆ. ಇಲ್ಲಿರುವ ತಾಂಡಾಗಳ ಸಾಕ್ಷರರ್ಹರ ಸಂಖ್ಯೆ ೧೧೭೨ ಇದ್ದು, ಇದರಲ್ಲಿ ಪುರುಷರ ಸಂಖ್ಯೆ ೬೦೧, ಮಹಿಳೆಯರ ಸಂಖ್ಯೆ ೫೭೧ ಇದೆ. ಈ ಜಿಲ್ಲೆಯ ರಿಮೋಟ್ ತಾಂಡಾವನ್ನು ಅನುಲಕ್ಷಿಸಿದಾಗ ಒಟ್ಟು ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೪೬.೭೧ರಷ್ಟು ಇದೆ. ಇದರಲ್ಲಿ ಪುರುಷರು ಶೇ. ೪೧.೮೯, ಸ್ತ್ರೀಯರು ಶೇ. ೫೧.೨೮ರಷ್ಟು ಕಂಡುಬರುತ್ತಾರೆ. ಮಾಧ್ಯಮಿಕ ಶಿಕ್ಷಣ ಹೊಂದಿದವರ ಒಟ್ಟು ಪ್ರಮಾಣ ಶೇ. ೨೮.೯೪ರಷ್ಟಿದ್ದು, ಇದರಲ್ಲಿ ಶೇ. ೨೨.೯೭ ರಷ್ಟು ಪುರುಷರು, ಶೇ. ೩೪.೬೧ರಷ್ಟು ಮಹಿಳೆಯರ ಶಿಕ್ಷಣದ ಪ್ರಮಾಣವಿದೆ. ಪುರುಷರ ಶಿಕ್ಷಣದ ಮಟ್ಟಕ್ಕಿಂತ ಸ್ತ್ರೀಯರು ಹೆಚ್ಚಾಗಿ ಶಿಕ್ಷಣ ಪಡೆಯುತ್ತಿರುವುದನ್ನು ಪ್ರಾಥಮಿಕ ಹಾಗೂ ಮಾಧ್ಯಮಿಕ ಶೈಕ್ಷಣಿಕ ಹಂತಗಳಲ್ಲಿ ನೋಡುತ್ತೇವೆ. ಹಾಗೆಯೇ ಪ್ರೌಢ ಶಿಕ್ಷಣ ಪಡೆದವರ ಒಟ್ಟು ಪ್ರಮಾಣವು ಶೇ. ೧೩.೮೧ ಇದ್ದು, ಇದರಲ್ಲಿ ಪುರುಷರು ಶೇ. ೧೬.೨೧ ಹಾಗೂ ಮಹಿಳೆಯರ ಶಿಕ್ಷಣದ ಪ್ರಮಾಣವು ಶೇ. ೧೧.೫೩ರಷ್ಟಿದೆ. ಅದೇ ರೀತಿ ಪದವಿ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೭.೨೩ ಇದ್ದು, ಇದರಲ್ಲಿ ಶೇ. ೧೨.೧೬ ಪುರುಷರು, ಶೇ. ೨.೫೬ರಷ್ಟು ಸ್ತ್ರೀಯರು ಕಾಣಬರುತ್ತಾರೆ. ಅದರಂತೆ ಪದವಿ ಶಿಕ್ಷಣ ಪಡೆದವರ ಪ್ರಮಾಣ ತುಂಬಾ ಕಡಿಮೆಯಿದ್ದು, ಪುರುಷ ಸಾಕ್ಷರತಾ ಪ್ರಮಾಣ ಕೇವಲ ಶೇ. ೫.೪೦ ಆಗಿದೆ. ಈ ಶಿಕ್ಷಣದಂತೆ ಇತರ ಶಿಕ್ಷಣದಲ್ಲಿಯೂ ಶೇ. ೧.೩೫ರಷ್ಟು ಪುರುಷರ ಪ್ರಮಾಣ ಬಿಟ್ಟರೆ ಮಹಿಳೆಯರು ಕಂಡುಬರುವುದಿಲ್ಲ. ಸ್ನಾತಕೋತ್ತರ ಹಂತದ ಶಿಕ್ಷಣವನ್ನು ಯಾರೂ ಪಡೆಯದಿರುವುದು ಕಂಡುಬರುತ್ತದೆ.

ಗ್ರಾಮ ಹತ್ತಿರದ ತಾಂಡಾವನ್ನು ಗಮನಿಸಿದಾಗ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೨೮.೨೦ರಷ್ಟಿದ್ದು, ಇದರಲ್ಲಿ ಶೇ. ೧೭.೪೪ ಪುರುಷರು, ಶೇ. ೪೧.೪೨ರಷ್ಟು ಸ್ತ್ರೀಯರು ಇರುವುದನ್ನು ಕಾಣುತ್ತೇವೆ. ಮಾಧ್ಯಮಿಕ ಶಿಕ್ಷಣ ಹೊಂದಿದವರ ಪ್ರಮಾಣ ಶೇ. ೧೧.೫೩ ಇದ್ದು, ಪುರುಷರು ಶೇ. ೧೨.೭೯, ಸ್ತ್ರೀಯರು ಶೇ. ೧೦ರಷ್ಟು ಕಂಡುಬರುತ್ತಾರೆ. ಪ್ರೌಢ ಶಾಲಾ ಶಿಕ್ಷಣ ಪಡೆದವರ ಪ್ರಮಾಣ ಶೇ. ೩೩.೯೭ರಷ್ಟಿದೆ. ಇದರಲ್ಲಿ ಪುರುಷರು ಶೇ. ೩೨.೫೫ ಹಾಗೂ ಶೇ. ೩೫.೭೧ರಷ್ಟು ಸ್ತ್ರೀಯರ ಪ್ರಮಾಣವಿದೆ. ಹಾಗೆಯೇ ಪದವಿ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೧೫.೩೮ರಷ್ಟಿದ್ದು, ಇದರಲ್ಲಿ ಪುರುಷರು ಶೇ. ೧೮.೬೦ ಹಾಗೂ ಸ್ತ್ರೀಯರು ಶಿಕ್ಷಣ ಪ್ರಮಾಣ ಶೇ. ೧೧.೪೨ರಷ್ಟಿದೆ. ಅದರಂತೆ ಪದವಿ ಶಿಕ್ಷಣ ಪಡೆದ ಪುರುಷರ ಪ್ರಮಾಣವು ಶೇ. ೮.೧೪ರಷ್ಟಿದ್ದು ಮಹಿಳೆಯರು ಗೋಚರಿಸುವುದಿಲ್ಲ. ಇತರೆ ಶಿಕ್ಷಣ ಪ್ರಮಾಣವು ಶೇ. ೪.೯೯ರಷ್ಟಿದ್ದು, ಪುರುಷರು ಶೇ. ೬.೯೭, ಮಹಿಳೆಯರ ಪ್ರಮಾಣ ಶೇ. ೧.೪೨ ಆಗಿದೆ. ಸ್ನಾತಕೋತ್ತರ ಶಿಕ್ಷಣ

ಪಡೆದ ಪುರುಷರ ಪ್ರಮಾಣ ಶೇ. ೩.೪೮ರಷ್ಟಿದ್ದು, ಈ ಹಂತದ ಶಿಕ್ಷಣವನ್ನು ಮಹಿಳೆಯರು ಪಡೆದಿರುವುದಿಲ್ಲ.

ರಸ್ತೆ ಹತ್ತಿರದ ತಾಂಡಾಗಳನ್ನು ವೀಕ್ಷಿಸಿದಾಗ ಇಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೨೫.೫೮ ಇದ್ದು, ಇದರಲ್ಲಿ ಶೇ. ೨೩.೯೪ರಷ್ಟು ಪುರುಷರು, ಶೇ. ೨೭.೫೮ರಷ್ಟು ಸ್ತ್ರೀಯರು ಕಂಡುಬರುತ್ತಾರೆ. ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೧೦.೦೭ ಇದ್ದು, ಪುರುಷರ ಪ್ರಮಾಣ ಶೇ. ೮.೪೫, ಮಹಿಳೆಯರು ಶೇ. ೧೨.೦೬ರಷ್ಟಿದ್ದಾರೆ. ಅಂದರೆ ಪುರುಷರಿಗಿಂತ ಮಹಿಳೆಯರೇ ಹೆಚ್ಚಿನ ಶಿಕ್ಷಣ ಪಡೆದವರಾಗಿದ್ದಾರೆ. ಪ್ರೌಢ ಶಾಲಾ ಶಿಕ್ಷಣ ಪಡೆದವರ ಪ್ರಮಾಣ ಶೇ. ೩೪.೧೦ರಷ್ಟಿದ್ದು, ಇದರಲ್ಲಿ ಶೇ. ೨೨.೫೩ರಷ್ಟು ಪುರುಷರು ಹಾಗೂ ಶೇ. ೪೮.೨೭ರಷ್ಟು ಸ್ತ್ರೀಯರು ಕಂಡುಬರುತ್ತಾರೆ. ಇಲ್ಲಿಯೂ ಕೂಡಾ ಮಹಿಳಾ ಶಿಕ್ಷಣವೇ ಆದ್ಯತೆ ಪಡೆದಿದೆ. ಪದವಿ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೧೩.೧೭ ಇದ್ದು, ಇದರಲ್ಲಿ ಪುರುಷರು ಶೇ. ೧೮.೩೦ರಷ್ಟು, ಮಹಿಳೆಯರು ಶೇ. ೬.೯೯ರಷ್ಟಿದ್ದಾರೆ. ಪದವಿ ಶಿಕ್ಷಣ ಪಡೆದವರ ಪ್ರಮಾಣ ಶೇ. ೧೦.೦೭ ಇದ್ದು, ಶೇ. ೧೫.೯೯ರಷ್ಟು ಪುರುಷರು, ಶೇ. ೩.೪೪ರಷ್ಟು ಮಹಿಳೆಯರು ಕಂಡುಬರುತ್ತಾರೆ. ಸ್ನಾತಕೋತ್ತರ ಶಿಕ್ಷಣ ಹೊಂದಿದವರ ಪ್ರಮಾಣ ಶೇ. ೨.೩೨ ಇದ್ದು, ಪುರುಷರ ಶಿಕ್ಷಣ ಪ್ರಮಾಣ ಶೇ. ೪.೨೨ರಷ್ಟಾಗಿದೆ. ಸ್ತ್ರೀಯರು ಈ ಹಂತದ ಶಿಕ್ಷಣ ಪಡೆದುಕೊಂಡಿಲ್ಲ. ಅದರಂತೆ ಇತರೆ ಶಿಕ್ಷಣ ಪಡೆದವರ ಪ್ರಮಾಣ ಶೇ. ೪.೬೫ ಇದ್ದು, ಇದರಲ್ಲಿ ಶೇ. ೭.೦೪ ಪುರುಷರು ಹಾಗೂ ಶೇ. ೧.೭೨ ರಷ್ಟು ಮಹಿಳೆಯರು ಕಂಡುಬರುತ್ತಾರೆ. ಮೂರು ತಾಂಡಾಗಳ ಶೈಕ್ಷಣಿಕ ಸ್ಥಿತಿಗತಿಗಳನ್ನು ಹೋಲಿಕೆ ಮಾಡಿ ನೋಡಿದಾಗ ಮೂರು ತಾಂಡಾಗಳಲ್ಲಿ ಯಾರೊಬ್ಬರು ಡಿಪ್ಲೋಮಾ ಶಿಕ್ಷಣವನ್ನು ಪಡೆದಿಲ್ಲ. ಹಾಗೆಯೇ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಾಲಾ ಹಂತವನ್ನು ಗಮನಿಸಿದಾಗ ಪುರುಷರಿಗಿಂತ ಮಹಿಳೆಯರು ಹೆಚ್ಚಿನ ಶಿಕ್ಷಣ ಹೊಂದಿದವರಾಗಿದ್ದಾರೆ. ಅಂದರೆ ಈ ಸಮುದಾಯದವರು ಪ್ರೌಢ ಶಾಲಾ ಹಂತದವರೆಗೆ ಮಾತ್ರ ಮಹಿಳಾ ಶಿಕ್ಷಣಕ್ಕೆ ಆದ್ಯತೆ ನೀಡುತ್ತಿರುವದು ಕಂಡುಬರುತ್ತದೆ. ಮುಂದೆ ಪದವಿ ಪೂರ್ವ, ಪದವಿ, ಸ್ನಾತಕೋತ್ತರ ಹಾಗೂ ಇತರೆ ಶಿಕ್ಷಣ ಕೊಡಿಸಲು ಈ ಸಮುದಾಯದಲ್ಲಿ ಹಲವಾರು ಸಮಸ್ಯೆಗಳಿರುವದು ಕಂಡುಬಂದಿದೆ. ಅವುಗಳೆಂದರೆ ಬಡತನ, ಹಣಕಾಸಿನ ಕೊರತೆ, ವಿವಾಹ ಇತ್ಯಾದಿ. ಅಷ್ಟೇ ಅಲ್ಲದೇ ಪ್ರೌಢ ಶಾಲಾ ನಂತರ ಇವರು ಕಾಯಕರ್ಹ, ಸಂತಾನರ್ಹ ಗುಂಪುಗಳಿಗೆ ಅರ್ಹರಾಗಿರುವುದರಿಂದ ಮುಂದಿನ ಹಂತಗಳ ಶಿಕ್ಷಣದಲ್ಲಿ ಸ್ತ್ರೀಯರ ಪಾತ್ರ ತುಂಬಾ ಕಡಿಮೆಯಿರುವುದು ಮೇಲಿನ ಅಂಕಿ-ಸಂಖ್ಯೆಗಳಿಂದ ಸ್ಪಷ್ಟವಾಗಿ ಗೋಚರವಾಗುತ್ತದೆ. ಬಡತನದ ನೊಗವನ್ನು ಹೊರುವ ಕಾರಣಕ್ಕಾಗಿ ಕಲಿಯುತ್ತಿರುವ ಮಕ್ಕಳನ್ನು ದುಡಿಯಲು ಹಚ್ಚುತ್ತಿರುವುದು ಈ ಸಮುದಾಯದಲ್ಲಿ ಸರ್ವೆಸಾಮಾನ್ಯವಾಗಿ ಗೋಚರವಾಗುತ್ತದೆ. ಉನ್ನತ ಶಿಕ್ಷಣಕ್ಕೆ ಹೋದಂತೆ ಪುರುಷರ ಶಿಕ್ಷಣ ಪ್ರಮಾಣದಲ್ಲಿ ಇಳಿಮುಖ ಕಾಣುತ್ತಿದ್ದು, ಅದರಲ್ಲೂ ಸ್ತ್ರೀಯರ ಶಿಕ್ಷಣ ಪ್ರಮಾಣ ಉನ್ನತ ಹಂತಕ್ಕೆ ಬಂದಾಗ ಶೂನ್ಯವಾಗಿರುವುದನ್ನು ಕೋಷ್ಟಕದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

**ಕೋಷ್ಟಕ ೫.೮.೨. ಸೋಲಾಪುರ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ**

| ಶೈಕ್ಷಣಿಕ ಹಂತ | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಸಾಕ್ಷರರ್ಹರು | ೨೪೧ | ೨೧೪ | ೪೫೫ | ೧೮೦ | ೧೭೯ | ೩೫೯ | ೧೬೯ | ೧೨೪ | ೨೯೩ |
| ಪ್ರಾಥಮಿಕ | ೨೩ | ೨೩ | ೪೬ | ೨೩ | ೨೬ | ೪೯ | ೨೬ | ೧೬ | ೪೨ |
| ಮಾಧ್ಯಮಿಕ | ೧೧ | ೨೫ | ೩೬ | ೧೦ | ೧೪ | ೨೪ | ೨೧ | ೧೪ | ೩೫ |
| ಪ್ರೌಢ ಶಾಲೆ | ೨೬ | ೨೦ | ೪೬ | ೩೨ | ೨೬ | ೫೮ | ೨೪ | ೧೨ | ೩೬ |
| ಡಿಪ್ಲೋಮಾ | ೩ | – | ೩ | – | – | – | – | – | – |
| ಪದವಿ ಪೂರ್ವ | ೧೭ | ೫ | ೨೨ | ೧೦ | ೭ | ೧೭ | ೧೯ | – | ೧೯ |
| ಪದವಿ | ೬ | ೧ | ೭ | ೧೦ | ೨ | ೧೨ | ೪ | – | ೪ |
| ಸ್ನಾತಕೋತ್ತರ | ೨ | – | ೨ | – | – | – | – | – | – |
| ಇತರೆ | ೬ | – | ೬ | ೯ | – | ೯ | ೨ | – | ೨ |
| **ಒಟ್ಟು** | **೯೪** | **೭೪** | **೧೬೮** | **೯೪** | **೭೫** | **೧೬೯** | **೯೬** | **೪೨** | **೧೩೮** |

ಕೋಷ್ಟಕ ೫.೮.೨ ಸೋಲಾಪುರ ಜಿಲ್ಲೆಯ ಲಂಬಾಣಿಗರ ತಾಂಡಾವಾರು ಶೈಕ್ಷಣಿಕ ಹಂತಗಳ ಬಗೆಗೆ ಮಾಹಿತಿ ನೀಡುತ್ತದೆ. ಈ ಜಿಲ್ಲೆಯ ಸಾಕ್ಷರರ್ಹರ ಸಂಖ್ಯೆ ಒಟ್ಟು ೧೧೦೭ ಇದ್ದು, ಇದರಲ್ಲಿ ಪುರುಷ ಸಾಕ್ಷರರ್ಹರ ಸಂಖ್ಯೆ ೫೯೦, ಮಹಿಳಾ ಸಾಕ್ಷರರ್ಹರ ಸಂಖ್ಯೆ ೫೧೭ರಷ್ಟಿದೆ. ಇಲ್ಲಿರುವ ರಿಮೋಟ್ ತಾಂಡಾಗಳಲ್ಲಿಯ ಶೈಕ್ಷಣಿಕ ಸ್ಥಿತಿಗತಿಗಳನ್ನು ವೀಕ್ಷಿಸಿದಾಗ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೨೭.೩೮ರಷ್ಟಿದ್ದು, ಇದರಲ್ಲಿ ಪುರುಷರು ಶೇ. ೨೪.೪೬, ಮಹಿಳೆಯರು ಶೇ. ೩೧.೦೮ರಷ್ಟಿದ್ದಾರೆ. ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೨೧.೪೨ ಇದ್ದು, ಇದರಲ್ಲಿ ಶೇ. ೧೧.೭೦ರಷ್ಟು ಪುರುಷರು, ಶೇ. ೩೩.೭೮ರಷ್ಟು ಸ್ತ್ರೀಯರು ಅಂದರೆ ಪುರುಷ ಶಿಕ್ಷಣದ ಪ್ರಮಾಣಕ್ಕಿಂತ ಸ್ತ್ರೀಯರ ಶಿಕ್ಷಣದ ಪ್ರಮಾಣ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಅದೇ ರೀತಿ ಪ್ರೌಢ ಶಾಲಾ ಶಿಕ್ಷಣ ಪಡೆದವರ ಪ್ರಮಾಣ ಶೇ. ೨೭.೩೮ರಷ್ಟಿದ್ದು, ಪುರುಷರ ಪ್ರಮಾಣ ಶೇ. ೨೭.೬೫ ಹಾಗೂ ಮಹಿಳೆಯರ ಪ್ರಮಾಣ ಶೇ. ೨೭.೦೨ ಆಗಿದೆ. ಡಿಪ್ಲೋಮಾ ಶಿಕ್ಷಣವನ್ನು ಕೇವಲ ಶೇ. ೩.೧೯ರಷ್ಟು ಜನ ಗಂಡು ಮಕ್ಕಳು ಮಾತ್ರ ಪಡೆದಿರುವುದನ್ನು ಕೋಷ್ಟಕದ ಮೂಲಕ ಕಾಣುತ್ತೇವೆ. ಪದವಿ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ಶೇ. ೧೩.೧೯ ಇದ್ದು, ಇದರಲ್ಲಿ ಶೇ. ೧೮.೦೮ ಪುರುಷರು, ಶೇ. ೬.೭೫ರಷ್ಟು ಮಹಿಳೆಯರು, ಪದವಿ ಶಿಕ್ಷಣ ಹೊಂದಿದವರ ಪ್ರಮಾಣ ಶೇ. ೪.೧೬ ಇದ್ದು, ಪುರುಷರು ಶೇ. ೬.೩೮, ಮಹಿಳೆಯರು ಕೇವಲ ಶೇ. ೧.೩೫ ಇರುವುದನ್ನು

ಕಾಣಬಹುದು. ಸ್ನಾತಕೋತರ ಶಿಕ್ಷಣ ಪಡೆದ ಪರುಷರ ಪ್ರಮಾಣ ಒಟ್ಟು ಶೇ. ೨.೧೨. ಇತರೆ ಶಿಕ್ಷಣ ಪಡೆದ ಪುರುಷರ ಪ್ರಮಾಣ ಶೇ. ೬.೩೮ರಷ್ಟು ಇದೆ. ಈ ಎರಡೂ ಹಂತಗಳಲ್ಲಿ ಮಹಿಳೆಯರು ಶಿಕ್ಷಣದಿಂದ ಅವಕಾಶವಂಚಿತರಾಗಿದ್ದಾರೆ.

ಗ್ರಾಮ ಹತ್ತಿರದ ತಾಂಡಾವನ್ನು ಗಮನಿಸಿದಾಗ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೨೮.೯೯ ಇದ್ದು, ಇದರಲ್ಲಿ ಪುರುಷರು ಶೇ. ೨೪.೪೬, ಸ್ತ್ರೀಯರು ಶೇ. ೩೪.೬೬ರಷ್ಟು ಕಂಡುಬರುತ್ತಾರೆ. ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೧೪.೨೦ ಇದ್ದು, ಇದರಲ್ಲಿ ಶೇ. ೧೦.೬೩ರಷ್ಟು ಪುರುಷರು, ಶೇ. ೧೮.೬೬ರಷ್ಟು ಮಹಿಳೆಯರು. ಪ್ರೌಢ ಶಾಲಾ ಶಿಕ್ಷಣ ಪಡೆದವರ ಪ್ರಮಾಣ ಶೇ. ೩೪.೩೧ರಷ್ಟಿದ್ದು, ಇದರಲ್ಲಿ ಪುರುಷರು ಶೇ. ೩೪.೦೪ರಷ್ಟು, ಸ್ತ್ರೀಯರು ಶೇ. ೩೪.೬೬ರಷ್ಟಿದ್ದಾರೆ. ಪದವಿ ಪೂರ್ವ ಶಿಕ್ಷಣವನ್ನು ಹೊಂದಿದವರ ಪ್ರಮಾಣ ಶೇ. ೧೦.೦೫ ಇದ್ದು, ಇದರಲ್ಲಿ ಪುರುಷರು ಶೇ. ೧೦.೬೩, ಸ್ತ್ರೀಯರು ಶೇ. ೯.೩೩ರಷ್ಟಿದ್ದಾರೆ. ಪದವಿ ಶಿಕ್ಷಣವನ್ನು ಪಡೆದವರ ಪ್ರಮಾಣ ಶೇ. ೭.೧೦ರಷ್ಟಿದ್ದು, ಇದರಲ್ಲಿ ಶೇ. ೧೦.೬೩ರಷ್ಟು ಪುರುಷರು, ಶೇ. ೨.೬೬ ರಷ್ಟು ಮಹಿಳೆಯರು ಇರುತ್ತಾರೆ. ಸ್ನಾತಕೋತ್ತರ ಶಿಕ್ಷಣವನ್ನು ಮಾತ್ರ ಈ ತಾಂಡಾದ ಜನರು ಪಡೆದುಕೊಂಡಿಲ್ಲ. ಇತರೆ ಶಿಕ್ಷಣವನ್ನು ಪಡೆದವರ ಪ್ರಮಾಣದಲ್ಲಿ ಶೇ. ೯.೫೭ರಷ್ಟು ಪುರುಷರಿದ್ದು ಮಹಿಳೆಯರು ಈ ಶಿಕ್ಷಣವನ್ನು ಪಡೆದಿರುವುದಿಲ್ಲ.

ರಸ್ತೆ ಹತ್ತಿರದ ತಾಂಡಾವನ್ನು ಗಮನಿಸಿದಾಗ, ಇಲ್ಲಿ ಪ್ರಾಥಮಿಕ ಶಿಕ್ಷಣವನ್ನು ಹೊಂದಿದವರ ಪ್ರಮಾಣ ಶೇ. ೩೦.೪೩ರಷ್ಟಿದ್ದು, ಇದರಲ್ಲಿ ಶೇ. ೨೭.೦೮ರಷ್ಟು ಸ್ತ್ರೀಯರು ಶೇ. ೩೮.೦೯ರಷ್ಟು ಪುರುಷರು ಕಂಡುಬರುತ್ತಾರೆ. ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೨೫.೩೬ ರಷ್ಟಿದ್ದು, ಇದರಲ್ಲಿ ಪುರುಷರು ಶೇ. ೨೧.೮೭ರಷ್ಟು, ಮಹಿಳೆಯರು ಶೇ. ೩೩.೩೩ ರಷ್ಟಿದ್ದಾರೆ. ಪ್ರೌಢ ಶಿಕ್ಷಣ ಹೊಂದಿದವರ ಪ್ರಮಾಣ ಶೇ. ೨೬.೦೮ ಇದ್ದು, ಇದರಲ್ಲಿ ಪುರುಷರು ಶೇ. ೨೫, ಮಹಿಳೆಯರು ಶೇ. ೨೮.೫೭ರಷ್ಟು ಪ್ರಮಾಣದಲ್ಲಿ ಕಂಡುಬರುತ್ತಾರೆ. ಹಾಗೆಯೇ ಪದವಿ ಪೂರ್ವ ಶಿಕ್ಷಣ ಹೊಂದಿದವರ ಪ್ರಮಾಣ ಶೇ. ೧೩.೭೬ರಷ್ಟಿದ್ದು, ಇದರಲ್ಲಿ ಶೇ. ೧೯.೭೯ರಷ್ಟು ಪುರುಷರು ಮಾತ್ರ ಕಂಡುಬರುತ್ತಾರೆ. ಪದವಿ ಶಿಕ್ಷಣ ಪಡೆದ ಪುರುಷರ ಪ್ರಮಾಣ ಶೇ. ೪.೧೬ ಹಾಗೂ ಇತರೆ ಶಿಕ್ಷಣ ಪಡೆದ ಪುರುಷರ ಪ್ರಮಾಣ ಶೇ. ೨.೦೮ರಷ್ಟು ಇದ್ದು, ಈ ಎರಡೂ ಶೈಕ್ಷಣಿಕ ಹಂತಗಳಲ್ಲಿ ಸ್ತ್ರೀಯರ ಶಿಕ್ಷಣ ಮಟ್ಟ ಶೂನ್ಯ ಹಂತಕ್ಕೆ ತಲುಪಿರುವುದು ಕಂಡುಬರುತ್ತದೆ.

**ಕೋಷ್ಟಕ ೫.೮.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ**

| ಶೈಕ್ಷಣಿಕ ಹಂತ | ರಿಮೋಟ್ ತಾಂಡಾ | | | ಗ್ರಾಮ ಹತ್ತಿರದ ತಾಂಡಾ | | | ರಸ್ತೆ ಹತ್ತಿರದ ತಾಂಡಾ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಸಾಕ್ಷರರ್ಹರು | ೨೪೭ | ೨೨೩ | ೪೭೦ | ೧೯೮ | ೧೬೭ | ೩೬೫ | ೨೯೮ | ೨೩೯ | ೫೩೯ |
| ಪ್ರಾಥಮಿಕ | ೩೪ | ೨೨ | ೫೬ | ೩೩ | ೨೩ | ೫೬ | ೫೫ | ೩೭ | ೯೨ |
| ಮಾಧ್ಯಮಿಕ | ೧೨ | ೯ | ೨೧ | ೧೬ | ೧೭ | ೩೩ | ೧೫ | ೨೧ | ೩೬ |
| ಪ್ರೌಢ ಶಾಲೆ | ೨೦ | – | ೨೦ | ೩೩ | ೧೪ | ೪೭ | ೩೬ | ೨೯ | ೬೫ |
| ಡಿಪ್ಲೋಮಾ | – | – | – | – | – | – | ೧ | – | ೧ |
| ಪದವಿ ಪೂರ್ವ | ೮ | ೨ | ೧೦ | ೧೦ | ೭ | ೧೭ | ೧೪ | ೪ | ೧೮ |
| ಪದವಿ | ೫ | – | ೫ | ೭ | ೧ | ೮ | ೫ | ೧ | ೬ |
| ಸ್ನಾತಕೋತ್ತರ | – | – | – | – | – | – | ೧ | – | ೧ |
| ಇತರೆ | ೧ | – | ೧ | ೫ | – | ೫ | ೪ | – | ೪ |
| **ಒಟ್ಟು** | **೮೦** | **೩೩** | **೧೧೩** | **೧೦೪** | **೬೨** | **೧೬೬** | **೧೩೧** | **೯೨** | **೨೨೩** |

ಕೋಷ್ಟಕ ೫.೮.೩. ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ತಾಂಡಾವಾರು ಶೈಕ್ಷಣಿಕ ಪ್ರಗತಿಯ ಕುರಿತಾಗಿ ವಿವರಣೆ ನೀಡುತ್ತದೆ. ಈ ಜಿಲ್ಲೆಯ ರಿಮೋಟ್ ತಾಂಡಾವನ್ನು ಗಮನಿಸಿದಾಗ ಪ್ರಾಥಮಿಕ ಶಿಕ್ಷಣವನ್ನು ಪಡೆದವರ ಪ್ರಮಾಣ ಒಟ್ಟು ಶೇ. ೪೯.೫೫ರಷ್ಟಿದ್ದು, ಅದರಲ್ಲಿ ಪುರುಷರ ಪ್ರಮಾಣ ಶೇ. ೪೨.೫ ಮತ್ತು ಸ್ತ್ರೀಯರ ಸಾಕ್ಷರತಾ ಪ್ರಮಾಣ ಶೇ. ೬೬.೬೬ರಷ್ಟಾಗಿದೆ. ಮಾಧ್ಯಮಿಕ ಶಿಕ್ಷಣ ಹೊಂದಿದವರ ಪ್ರಮಾಣ ಒಟ್ಟು ಶೇ. ೧೮.೫೮ ಆಗಿದ್ದು, ಇದರಲ್ಲಿ ಶೇ. ೧೫ರಷ್ಟು ಪುರುಷರು, ಶೇ. ೨೭.೨೭ರಷ್ಟು ಮಹಿಳೆಯರಿದ್ದಾರೆ. ಹಾಗೂ ಪ್ರೌಢ ಶಾಲಾ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೧೭.೬೯ ಆಗಿದ್ದು, ಇಲ್ಲಿ ಕೇವಲ ಪುರುಷರು ಮಾತ್ರ ಶೇ. ೨೫ರಷ್ಟು ಶಿಕ್ಷಣವನ್ನು ಪಡೆದಿದ್ದಾರೆ. ಪದವಿ ಪೂರ್ವ ಶಿಕ್ಷಣ ಹೊಂದಿದವರ ಪ್ರಮಾಣ ಶೇ. ೮.೮೪ ರಷ್ಟಿದ್ದು, ಇದರಲ್ಲಿ ಪುರುಷರು ಪ್ರಮಾಣ ಶೇ. ೧೦, ಮಹಿಳೆಯರ ಪ್ರಮಾಣ ಶೇ. ೬.೦೬ರಷ್ಟಾಗಿದೆ. ಅದೇ ರೀತಿ ಪದವಿ ಶಿಕ್ಷಣ ಪಡೆದ ಪುರುಷರ ಪ್ರಮಾಣ ಶೇ. ೬.೨೫ರಷ್ಟು ಹಾಗೂ ಇತರೆ ಶಿಕ್ಷಣ ಪಡೆದ ಪುರುಷರ ಪ್ರಮಾಣ ಶೇ. ೧.೨೫ರಷ್ಟಾಗಿದೆ. ಆದರೆ ಈ ತಾಂಡಾದಲ್ಲಿ ಡಿಪ್ಲೋಮಾ ಮತ್ತು ಸ್ನಾತಕೋತ್ತರ ಶಿಕ್ಷಣ ಪಡೆದವರ ಪ್ರಮಾಣ ಶೂನ್ಯವಾಗಿದ್ದು ಅಲ್ಲದೇ ಉನ್ನತ ಶಿಕ್ಷಣ ಹಂತದಲ್ಲಿ ಸ್ತ್ರೀಯರ ಶಿಕ್ಷಣದ ಪ್ರಮಾಣ ಸಂಪೂರ್ಣವಾಗಿ ಶೂನ್ಯ ಹಂತವನ್ನು ತಲುಪಿದೆ ಎಂಬುದು ಅಂಕಿ ಅಂಶಗಳಿಂದ ಸ್ಪಷ್ಟವಾಗುತ್ತದೆ.

ಗ್ರಾಮ ಹತ್ತಿರದ ತಾಂಡಾವನ್ನು ಅನುಲಕ್ಷಿಸಿದಾಗ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೩೩.೭೩ರಷ್ಟಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೩೧.೭೩ ಹಾಗೂ ಸ್ತ್ರೀಯರ ಪ್ರಮಾಣ ಶೇ. ೩೭.೯ರಷ್ಟಾಗಿದೆ. ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೧೯.೮೩ ರಷ್ಟಿದ್ದು, ಇದರಲ್ಲಿ ಶೇ. ೧೫.೩೮ರಷ್ಟು ಪುರುಷರು, ಶೇ. ೨೭.೪೧ರಷ್ಟು ಮಹಿಳೆಯರಿದ್ದಾರೆ. ಪ್ರೌಢ ಶಾಲಾ ಶಿಕ್ಷಣ ಪಡೆದವರ ಪ್ರಮಾಣ ಶೇ. ೨೮.೩೧ ಆಗಿದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೩೧.೭೩ರಷ್ಟಿದ್ದು, ಮಹಿಳೆಯರ ಪ್ರಮಾಣ ಶೇ. ೨೨.೫೮ರಷ್ಟಿರುವುದು ಕಂಡುಬರುತ್ತದೆ. ಪದವಿ ಪೂರ್ವ ಶಿಕ್ಷಣ ಹೊಂದಿದವರ ಪ್ರಮಾಣ ಒಟ್ಟು ಶೇ. ೧೦.೨೪ ಆಗಿದ್ದು, ಇದರಲ್ಲಿ ಮಹಿಳೆಯರು ಶೇ. ೧೧.೨೯, ಪುರುಷರು ಶೇ. ೯.೬೯. ಹಾಗೂ ಪದವಿ ಶಿಕ್ಷಣ ಪಡೆದವರ ಪ್ರಮಾಣ ಶೇ. ೪.೮೧ ಆಗಿದ್ದು, ಮಹಿಳೆಯರ ಪ್ರಮಾಣ ಶೇ. ೧.೬೧ ಹಾಗೂ ಪುರುಷರ ಪ್ರಮಾಣ ಶೇ. ೬.೭೩ರಷ್ಟಿದೆ. ಅದೇ ರೀತಿಯಾಗಿ ಇತರೆ ಶಿಕ್ಷಣ ಪಡೆದ ಪುರುಷರ ಪ್ರಮಾಣ ಶೇ. ೪.೮೦ರಷ್ಟಾಗಿದೆ. ಈ ಜಿಲ್ಲೆಯ ಗ್ರಾಮ ಹತ್ತಿರದ ತಾಂಡಾಗಳಲ್ಲಿ ಉನ್ನತ ಶಿಕ್ಷಣ ಹಂತದಲ್ಲಿಯೂ ಕೂಡಾ ಮಹಿಳಾ ಶಿಕ್ಷಣಕ್ಕೆ ಆದ್ಯತೆ ನೀಡಿರುವುದನ್ನು ಗಮನಿಸುತ್ತೇವೆ. ಆದರೆ ಡಿಪ್ಲೋಮಾ ಮತ್ತು ಸ್ನಾತಕೋತ್ತರ ಶಿಕ್ಷಣದಲ್ಲಿ ಪುರುಷ ಮತ್ತು ಮಹಿಳೆಯರ ಸಂಖ್ಯೆ ಶೂನ್ಯವಾಗಿರುವುದು ಕಂಡುಬರುತ್ತದೆ.

ರಸ್ತೆ ಹತ್ತಿರದ ತಾಂಡಾವನ್ನು ಗಮನಿಸಿದಾಗ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೪೧.೨೫ರಷ್ಟಾಗಿದ್ದು, ಇದರಲ್ಲಿ ಪುರುಷರು ಶೇ. ೪೧.೯೮, ಮಹಿಳೆಯರು ಶೇ. ೪೦.೨೧ ರಷ್ಟಿದ್ದಾರೆ. ಮಾಧ್ಯಮಿಕ ಶಿಕ್ಷಣ ಹೊಂದಿದವರ ಪ್ರಮಾಣ ಒಟ್ಟು ಶೇ. ೧೬.೧೪ ಆಗಿದ್ದು, ಇದರಲ್ಲಿ ಪುರುಷರು ಶೇ. ೧೧.೪೫, ಮಹಿಳೆಯರು ಶೇ. ೨೨.೮೨ರಷ್ಟಿದ್ದಾರೆ. ಇವೆರಡನ್ನು ಗಮನಿಸಿದಾಗ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಪಡೆದವರಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣವೇ ಅಧಿಕವಾಗಿದೆ. ಪ್ರೌಢ ಶಾಲಾ ಶಿಕ್ಷಣ ಪಡೆದವರ ಪ್ರಮಾಣ ಶೇ. ೨೯.೧೪ ಆಗಿದ್ದು, ಪುರುಷರು ಶೇ. ೨೭.೪೮ರಷ್ಟು, ಮಹಿಳೆಯರು ಶೇ. ೩೧.೫೨ರಷ್ಟಿದ್ದಾರೆ. ಡಿಪ್ಲೋಮಾದಲ್ಲಿ ಕೇವಲ ಶೇ. ೦.೭೬ ರಷ್ಟು ಎಂದರೆ ಒಬ್ಬ ಪುರುಷ ಮಾತ್ರ ಡಿಪ್ಲೋಮಾ ಶಿಕ್ಷಣವನ್ನು ಪಡೆದವರಾಗಿದ್ದಾರೆ. ಅದರಂತೆ ಪದವಿ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ಶೇ. ೮.೦೭ರಷ್ಟಾಗಿದ್ದು, ಪುರುಷರ ಪ್ರಮಾಣ ಶೇ. ೧೦.೬೮, ಮಹಿಳೆಯರು ಶೇ. ೪.೩೪ರಷ್ಟು ಆಗಿದೆ. ಪದವಿ ಹೊಂದಿದವರ ಪ್ರಮಾಣ ಶೇ. ೨.೬೯ ರಷ್ಟಾಗಿದೆ. ಇದರಲ್ಲಿ ಪುರುಷರು ಶೇ. ೩.೮೧, ಮಹಿಳೆಯರು ಶೇ. ೧.೦೮ ಆಗಿದೆ. ಸ್ನಾತಕೋತ್ತರ ಶಿಕ್ಷಣ ಮತ್ತು ಇತರೆ ಶಿಕ್ಷಣ ಪಡೆದ ಪುರುಷರ ಪ್ರಮಾಣ ಕ್ರಮವಾಗಿ ಶೇ. ೦.೭೬ ಮತ್ತು ಶೇ. ೩.೦೫ ಆಗಿದೆ. ಈ ತಾಂಡಾದಲ್ಲಿಯೂ ಕೂಡಾ ಡಿಪ್ಲೊಮಾ, ಸ್ನಾತಕೋತ್ತರ ಮತ್ತು ಇತರೆ ಶಿಕ್ಷಣದ ಹಂತಗಳಲ್ಲಿ ಮಹಿಳೆಯರ ಪ್ರಮಾಣ ಶೂನ್ಯವಾಗಿರುವುದು ಕಂಡುಬರುತ್ತದೆ.

ರಂಗಾರೆಡ್ಡಿ ಜಿಲ್ಲೆಯ ಮೂರು ತಾಂಡಾಗಳನ್ನು ತುಲನೆ ಮಾಡಿದಾಗ ಇಲ್ಲಿ ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢ ಶಾಲಾ ಹಂತದವರೆಗೆ ಮಾತ್ರ ಮಹಿಳಾ ಶಿಕ್ಷಣಕ್ಕೆ ಪ್ರಾತಿನಿಧ್ಯವಿರುವುದನ್ನು

ಗಮನಿಸುತ್ತೇವೆ. ಶಿಕ್ಷಣದ ಉನ್ನತ ಹಂತಕ್ಕೆ ಬಂದಂತೆ ಕಲಿಯುವವರ ಪ್ರಮಾಣ ಕಡಿಮೆಯಾಗುತ್ತಿರುವುದು ಹಾಗೂ ಮಹಿಳಾ ಶಿಕ್ಷಣಕ್ಕೆ ಆದ್ಯತೆ ಕೊಡದಿರುವ ಸಂಗತಿ ಸ್ಪಷ್ಟವಾಗುತ್ತದೆ.

**ಕೋಷ್ಟಕ ೫.೮.೪. ಸಮೀಕ್ಷೆಗೊಳಪಟ್ಟ ಮೂರು ಜಿಲ್ಲೆಗಳ ಲಂಬಾಣಿಗರ ಶೈಕ್ಷಣಿಕ ವಿವರ**

| ಶೈಕ್ಷಣಿಕ ಹಂತ | ಗುಲಬರ್ಗಾ | | | ಸೋಲಾಪುರ | | | ರಂಗಾರೆಡ್ಡಿ | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಪ್ರಾಥಮಿಕ | ೬೩ | ೮೫ | ೧೪೮ | ೭೨ | ೬೫ | ೧೩೭ | ೧೨೨ | ೮೨ | ೨೦೪ |
| ಮಾಧ್ಯಮಿಕ | ೩೪ | ೪೧ | ೭೫ | ೪೨ | ೫೩ | ೮೫ | ೪೩ | ೪೭ | ೯೦ |
| ಪ್ರೌಢ ಶಾಲೆ | ೫೬ | ೬೨ | ೧೧೮ | ೮೨ | ೫೮ | ೧೪೦ | ೮೯ | ೪೩ | ೧೩೨ |
| ಡಿಪ್ಲೋಮಾ | – | – | – | ೩ | – | ೩ | ೧ | – | ೧ |
| ಪದವಿ ಪೂರ್ವ | ೩೮ | ೧೪ | ೫೨ | ೪೬ | ೧೨ | ೫೮ | ೩೨ | ೧೩ | ೪೫ |
| ಪದವಿ | ೨೨ | ೨ | ೨೪ | ೨೦ | ೩ | ೨೩ | ೧೭ | ೨ | ೧೯ |
| ಸ್ನಾತಕೋತ್ತರ | ೬ | – | ೬ | ೨ | – | ೨ | ೧ | – | ೧ |
| ಇತರೆ | ೧೨ | ೨ | ೧೪ | ೧೭ | – | ೧೭ | ೧೦ | – | ೧೦ |
| **ಒಟ್ಟು** | **೨೩೧** | **೨೦೬** | **೪೩೭** | **೨೮೪** | **೧೯೧** | **೪೭೫** | **೩೧೫** | **೧೮೭** | **೫೦೨** |

**ಸ್ತಂಭಚಿತ್ರ ೫.೮.೧. ಸಮೀಕ್ಷೆಗೊಳಪಟ್ಟ ಕರ್ನಾಟಕ ರಾಜ್ಯದ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ**



ಅಧ್ಯಯನಕ್ಕೆ ಆಯ್ಕೆ ಮಾಡಲಾದ ಕರ್ನಾಟಕದ ಗುಲಬರ್ಗಾ ಜಿಲ್ಲೆಯ ಲಂಬಾಣಿಗರನ್ನು ಗಣನೆಗೆ ತೆಗೆದುಕೊಂಡಾಗ ಇಲ್ಲಿ ಒಟ್ಟು ಸಾಕ್ಷರಸ್ಥರು ೪೩೭ ಇದ್ದು, ಇದರಲ್ಲಿ ೨೩೧ ಪುರುಷರು ಹಾಗೂ ೨೦೬ ಸ್ತ್ರೀಯರು ಕಂಡುಬರುತ್ತಾರೆ. ಇದರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರ ಒಟ್ಟು ಪ್ರಮಾಣ ಶೇ. ೩೩.೮೬ರಷ್ಟಿದ್ದು, ಇದರಲ್ಲಿ ಶೇ. ೨೭.೨೬ರಷ್ಟು ಪುರುಷರು, ಶೇ. ೪೧.೨೬ರಷ್ಟು ಸ್ತ್ರೀಯರಿದ್ದಾರೆ. ಅದೇ ರೀತಿ ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೧೭.೧೬ ಇದ್ದು, ಇದರಲ್ಲಿ ಶೇ. ೧೪.೭೧ರಷ್ಟು ಪುರುಷರು ಹಾಗೂ ಶೇ. ೧೯.೯೦ರಷ್ಟು ಸ್ತ್ರೀಯರಿದ್ದಾರೆ. ಪ್ರೌಢ ಶಾಲಾ ಶಿಕ್ಷಣದ ಪ್ರಮಾಣ ಶೇ. ೨೭ರಷ್ಟಿದ್ದು, ಶೇ. ೨೪.೨೪ರಷ್ಟು ಪುರುಷರು, ಶೇ. ೩೦.೧೯ರಷ್ಟು ಸ್ತ್ರೀಯರಿದ್ದಾರೆ. ಪದವಿ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೧೧.೮೯ ಇದ್ದು, ಇದರಲ್ಲಿ ಶೇ. ೧೬.೪೫ರಷ್ಟು ಪರುಷರು, ಶೇ. ೬.೭೯ರಷ್ಟು ಸ್ತ್ರೀಯರು. ಪದವಿ ಶಿಕ್ಷಣ ಪಡೆದವರ ಪ್ರಮಾಣ ಶೇ. ೫.೪೯ರಷ್ಟಿದ್ದು, ಶೇ. ೯.೫೨ರಷ್ಟು ಪುರುಷರು, ಶೇ. ೦.೯೭ರಷ್ಟು ಮಹಿಳೆಯರಿದ್ದಾರೆ. ಆದರೆ ಸ್ನಾತಕೋತ್ತರ ಶಿಕ್ಷಣ ಪಡೆದ ಪುರುಷರ ಪ್ರಮಾಣ ಶೇ. ೨.೫೯ ಇದ್ದು, ಮಹಿಳೆಯರ ಪ್ರಮಾಣ ಶೂನ್ಯವಾಗಿರುವುದು ಕಂಡುಬರುತ್ತದೆ. ಇತರೆ ಶಿಕ್ಷಣ ಪಡೆದವರ ಪ್ರಮಾಣ ಶೇ. ೩.೨ ರಷ್ಟಿದ್ದು. ಸ್ತ್ರೀ ಪುರುಷರ ಪ್ರಮಾಣ ಕ್ರಮವಾಗಿ ಶೇ. ೦.೯೭ ಮತ್ತು ೫.೧೯ರಷ್ಟಿರುವುದು ಕಂಡುಬರುತ್ತದೆ.

**ಸ್ತಂಭಚಿತ್ರ ೫.೮೨. ಸಮೀಕ್ಷೆಗೊಳಪಟ್ಟ ಮಹಾರಾಷ್ಟ್ರ ರಾಜ್ಯದ ಸೋಲಾಪುರ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ**




ಸೋಲಾಪುರ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ಸ್ಥಿತಿಗತಿಗಳನ್ನು ಗಮನಿಸಿದಾಗ, ಪ್ರಾಥಮಿಕ ಶಿಕ್ಷಣದ ಪ್ರಮಾಣ ಒಟ್ಟು ಶೇ. ೨೮.೮೪ರಷ್ಟಿದ್ದು, ಇದರಲ್ಲಿ ಶೇ. ೨೫.೩೫ರಷ್ಟು ಪುರುಷರು, ಶೇ. ೩೪.೦೩ರಷ್ಟು ಸ್ತ್ರೀಯರಿದ್ದಾರೆ. ಮಾಧ್ಯಮಿಕ ಶಿಕ್ಷಣದ ಪ್ರಮಾಣ ಶೇ. ೨೦ರಷ್ಟಿದ್ದು, ಶೇ. ೧೪.೭೮ರಷ್ಟು

ಪುರುಷರು, ಶೇ. ೨೭.೭೪ರಷ್ಟು ಸ್ತ್ರೀಯರಿದ್ದಾರೆ. ಪ್ರೌಢ ಶಾಲಾ ಶಿಕ್ಷಣದ ಪ್ರಮಾಣ ಶೇ. ೨೯.೪೭ ರಷ್ಟಿದ್ದು, ಶೇ. ೨೮.೮೭ರಷ್ಟು ಪುರುಷರು, ಶೇ. ೩೦.೩೬ರಷ್ಟು ಮಹಿಳೆಯರಿದ್ದಾರೆ. ಡಿಪ್ಲೋಮಾದಲ್ಲಿ ಶೇ. ೧.೦೫ ಪುರುಷರು ಮಾತ್ರ ಶಿಕ್ಷಣವನ್ನು ಪಡೆದಿದ್ದಾರೆ. ಪದವಿ ಪೂರ್ವ ಶಿಕ್ಷಣದ ಪ್ರಮಾಣ ಒಟ್ಟು ಶೇ. ೧೨.೨೧ರಷ್ಟಿದ್ದು, ಶೇ. ೧೬.೧೯ರಷ್ಟು ಪುರುಷರು, ಶೇ. ೬.೨೮ರಷ್ಟು ಸ್ತ್ರೀಯರಿದ್ದಾರೆ. ಪದವಿಯಲ್ಲಿ ಶೇ. ೭.೦೪ರಷ್ಟು ಪುರುಷರು, ಶೇ. ೧.೫೭ ಸ್ತ್ರೀಯರು ಅಂದರೆ ಒಟ್ಟು ಶೇ. ೪.೮೪ ರಷ್ಟು ಪದವಿ ಶಿಕ್ಷಣ ಪಡೆದವರಾಗಿದ್ದಾರೆ. ಇಲ್ಲಿ ಕೇವಲ ಶೇ. ೦.೭೦ರಷ್ಟು ಪುರುಷರು ಮಾತ್ರ ಸ್ನಾತಕೋತ್ತರ ಮತ್ತು ಶೇ. ೫.೯೮ರಷ್ಟು ಮಾತ್ರ ಇತರೆ ಶಿಕ್ಷಣ ಪಡೆದಿದ್ದು ಈ ಹಂತದಲ್ಲಿ ಸ್ತ್ರೀಯರ ಶಿಕ್ಷಣದ ಪ್ರಮಾಣ ಕಂಡುಬರುವುದಿಲ್ಲ.

**ಸ್ತಂಭಚಿತ್ರ ೫.೮.೩. ಸಮೀಕ್ಷೆಗೊಳಪಟ್ಟ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಶೈಕ್ಷಣಿಕ ವಿವರ**




ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಯಲ್ಲಿ ಸಮೀಕ್ಷೆಗೊಳಪಟ್ಟ ಲಂಬಾಣಿಗರ ಸಾಕ್ಷರಸ್ಥರ ಸಂಖ್ಯೆ ೫೦೨ ಇದ್ದು, ಇದರಲ್ಲಿ ಪುರುಷರು ೩೧೫, ಸ್ತ್ರೀಯರು ೧೮೭ ಇದ್ದಾರೆ. ಇದರಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೪೦.೬೩ರಷ್ಟಿದ್ದು ಶೇ. ೩೮.೭೩ರಷ್ಟು ಪುರುಷರು, ಶೇ. ೪೩.೮೫ ರಷ್ಟು ಸ್ತ್ರೀಯರಿದ್ದಾರೆ. ಮಾಧ್ಯಮಿಕ ಶಿಕ್ಷಣ ಪಡೆದವರ ಪ್ರಮಾಣ ಶೇ. ೧೭.೯೨ರಷ್ಟಿದ್ದು, ಶೇ. ೧೩.೬೫ರಷ್ಟು ಪುರುಷರು, ಶೇ. ೨೫.೧೩ರಷ್ಟು ಸ್ತ್ರೀಯರಿದ್ದಾರೆ. ಶೇ. ೨೬.೨೯ರಷ್ಟು ಪ್ರೌಢ ಶಿಕ್ಷಣದ ಪ್ರಮಾಣವಿದ್ದು, ಇದರಲ್ಲಿ ಶೇ. ೨೮.೨೫ರಷ್ಟು ಪುರುಷರು, ಶೇ. ೨೨.೯೯ರಷ್ಟು ಸ್ತ್ರೀಯರಿದ್ದಾರೆ. ಕೇವಲ ಶೇ. ೦.೩೧ರಷ್ಟು ಪುರುಷರು ಮಾತ್ರ ಡಿಪ್ಲೋಮಾ ಶಿಕ್ಷಣವನ್ನು ಪಡೆದಿದ್ದಾರೆ. ಪದವಿ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ಒಟ್ಟು ಶೇ. ೮.೯೬ರಷ್ಟಿದ್ದು, ಇದರಲ್ಲಿ ಶೇ. ೧೦.೧೫ರಷ್ಟು ಪುರುಷರು,

ಶೇ. ೬.೯೫ರಷ್ಟು ಸ್ತ್ರೀಯರಿದ್ದಾರೆ. ಪದವಿ, ಸ್ನಾತಕೋತ್ತರ ಹಾಗೂ ಇತರೆ ಶಿಕ್ಷಣವನ್ನು ಪಡೆದವರ ಪ್ರಮಾಣ ತುಂಬಾ ಕಡಿಮೆಯಿದ್ದು ಸ್ನಾತಕೋತ್ತರ ಮತ್ತು ಇತರೆ ಶಿಕ್ಷಣದಲ್ಲಿ ಮಹಿಳೆಯರ ಪ್ರಮಾಣ ಶೂನ್ಯವಾಗಿರುವುದು ಕಂಡುಬರುತ್ತದೆ.

ಮೂರು ಜಿಲ್ಲೆಗಳ ಲಂಬಾಣಿಗರ ಪ್ರಾಥಮಿಕ ಹಂತದ ಶಿಕ್ಷಣವನ್ನು ತುಲನೆ ಮಾಡಿ ನೋಡಿದಾಗ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರಿಗಿಂತ ಹೆಚ್ಚಿನ ಪ್ರಮಾಣದ ಪ್ರಾಥಮಿಕ ಶಿಕ್ಷಣವನ್ನು ಪಡೆದಿರುವುದು ಸ್ಪಷ್ಟವಾಗುತ್ತದೆ. ಮಾಧ್ಯಮಿಕ ಮತ್ತು ಪ್ರೌಢ ಶಿಕ್ಷಣ ಹಂತದ ಪ್ರಮಾಣವನ್ನು ವೀಕ್ಷಿಸಿದಾಗ ಸೋಲಾಪುರ ಜಿಲ್ಲೆಯು ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಿಗಿಂತ ಉನ್ನತ ಮಟ್ಟದಲ್ಲಿರುವುದು ಗೋಚರವಾಗುತ್ತದೆ. ಸೋಲಾಪುರ ಹಾಗೂ ರಂಗಾರೆಡ್ಡಿ ಜಿಲ್ಲೆಗಳಲ್ಲಿ ಕೇವಲ ಒಬ್ಬರಿಬ್ಬರೂ ಲಂಬಾಣಿಗರು ಮಾತ್ರ ಡಿಪ್ಲೋಮಾ ಶಿಕ್ಷಣವನ್ನು ಪಡೆದುಕೊಂಡಿದ್ದು ಕಂಡುಬಂದರೂ, ಗುಲಬರ್ಗಾದಲ್ಲಿ ಡಿಪ್ಲೋಮಾ ಹಂತದಲ್ಲಿ ಈ ಸಮುದಾಯದ ಜನರು ಕಂಡುಬಂದಿಲ್ಲ. ಸೋಲಾಪುರ ಜಿಲ್ಲೆಯ ಲಂಬಾಣಿಗರು ಉಳಿದೆರಡು ಜಿಲ್ಲೆಗಳಿಗಿಂತ ಪದವಿ ಶಿಕ್ಷಣದಲ್ಲಿ ಹೆಚ್ಚಿನ ಪಾಲನ್ನು ಪಡೆದಿದ್ದಾರೆ. ಸ್ನಾತಕೋತ್ತರ ಶಿಕ್ಷಣದಲ್ಲಿ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಭಾಗವಹಿಸುವಿಕೆಯ ಪ್ರಮಾಣ ಉಳಿದೆರಡು ಜಿಲ್ಲೆಗಳಿಗಿಂತ ಹೆಚ್ಚಾಗಿರುವುದು ಕಂಡುಬರುತ್ತದೆ.

ಮೂರು ಜಿಲ್ಲೆಗಳ ಶೈಕ್ಷಣಿಕ ಸ್ಥಿತಿಗತಿಗಳನ್ನು ಗಮನಿಸಿದಾಗ ಪ್ರಾಥಮಿಕದಿಂದ ಪ್ರೌಢ ಹಂತದವರೆಗೆ ಲಂಬಾಣಿ ಸಮುದಾಯವು ತಮ್ಮ ಮಕ್ಕಳಿಗೆ ಹೆಚ್ಚಿನ ಶಿಕ್ಷಣವನ್ನು ಕೊಡಿಸುವುದರಲ್ಲಿ ಆಸಕ್ತಿ ವಹಿಸುತ್ತಿದ್ದು, ಮುಂದಿನ ಹಂತದಲ್ಲಿ ಮಕ್ಕಳಲ್ಲಿ ದುಡಿಯುವ ಶಕ್ತಿ ಬರುವುದರಿಂದ ಮಕ್ಕಳನ್ನು ಶಿಕ್ಷಣದಿಂದ ವಂಚಿತಗೊಳಿಸಿ ತಮ್ಮ ಬಡತನದ ಬೇಗೆಯನ್ನು ನೀಗಿಸಿಕೊಳ್ಳಲು ಕೂಲಿ ಕೆಲಸಗಳಲ್ಲಿ ತೊಡಗಿಸುತ್ತಿರುವುದು ಕಂಡುಬರುತ್ತಿದೆ. ಇದರಿಂದಾಗಿ ಉನ್ನತ ಶಿಕ್ಷಣದ ಹಂತಗಳಲ್ಲಿ ಈ ಸಮುದಾಯದ ಜನರ ಭಾವಹಿಸುವಿಕೆಯ ಪ್ರಮಾಣ ತುಂಬಾ ಕಡಿಮೆಯಿದೆ. ಅದರಲ್ಲೂ ಪ್ರಾಥಮಿಕದಿಂದ ಪ್ರೌಢ ಶಾಲಾ ಹಂತದವರೆಗೂ ಈ ಸಮುದಾಯದವರು ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡುವುದನ್ನು, ನಂತರದ ಹಂತಗಳಲ್ಲಿ ಮಹಿಳಾ ಶಿಕ್ಷಣ ಸಂಪೂರ್ಣವಾಗಿ ಶೂನ್ಯ ಹಂತಕ್ಕೆ ತಲುಪಿರುವುದನ್ನು ಕಾಣುತ್ತೇವೆ. ಏಕೆಂದರೆ ಇವರಲ್ಲಿರುವ ಬಡತನ, ತಪ್ಪು ನಂಬಿಕೆಗಳಿಂದಾಗಿ ಪ್ರೌಢ ಶಾಲಾ ಹಂತದ ನಂತರ ಇವರು ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರಾಶಸ್ತ್ಯ ನೀಡದೆ ವಿವಾಹಕ್ಕೆ ಹೆಚ್ಚಿನ ಮನ್ನಣೆ ಕೊಡುವುದರಿಂದ ಉನ್ನತ ಹಂತಗಳಲ್ಲಿ ಮಹಿಳೆಯರ ಸಂಖ್ಯೆ ಕಡಿಮೆಯಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

**ಕೋಷ್ಟಕ ೫.೮.೫. ಸಮೀಕ್ಷೆಗೊಳಪಟ್ಟ ಗುಲಬರ್ಗಾ ಲಂಬಾಣಿಗರ ಸಾಕ್ಷರತೆಯ ವಿವರ**

| ನೆಲೆಗಳು | ಸಾಕ್ಷರರ್ಹರು | | | ಸಾಕ್ಷರಸ್ಥರು | | | ಅನಕ್ಷರಸ್ಥರು | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ರಿಮೋಟ್ ತಾಂಡಾ | ೨೧೧ | ೨೨೦ | ೪೩೧ | ೭೪ | ೭೮ | ೧೫೨ | ೧೩೭ | ೧೪೨ | ೨೭೯ |
| ಗ್ರಾಮ ಹತ್ತಿರದ ತಾಂಡಾ | ೨೦೯ | ೧೯೦ | ೩೯೯ | ೮೬ | ೭೦ | ೧೫೬ | ೧೨೩ | ೧೨೦ | ೨೪೩ |
| ರಸ್ತೆ ಹತ್ತಿರದ ತಾಂಡಾ | ೧೮೧ | ೧೬೧ | ೩೪೨ | ೭೧ | ೫೮ | ೧೨೯ | ೧೧೦ | ೧೦೩ | ೨೧೩ |
| **ಒಟ್ಟು** | **೬೦೧** | **೫೭೧** | **೧೧೭೨** | **೨೩೧** | **೨೦೬** | **೪೩೭** | **೩೭೦** | **೩೬೫** | **೭೩೫** |

ಕೋಷ್ಟಕ ೫.೮.೫. ಸಮೀಕ್ಷೆಗೊಳಪಟ್ಟ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಸಾಕ್ಷರಸ್ಥರ ಹಾಗೂ ಅನಕ್ಷರಸ್ಥರ ಪ್ರಮಾಣವನ್ನು ಸೂಚಿಸುತ್ತದೆ. ಅಧ್ಯಯನಕ್ಕೆ ಆಯ್ಕೆ ಮಾಡಲಾದ ಮೂರು ತಾಂಡಾಗಳಲ್ಲಿನ ಲಂಬಾಣಿಗರ ಸಾಕ್ಷರರ್ಹರ ಸಂಖ್ಯೆ ಒಟ್ಟು ೧೧೭೨ ಇದ್ದು, ಇದರಲ್ಲಿ ಸಾಕ್ಷರರಾದವರ ಪ್ರಮಾಣ ಶೇ. ೩೭.೨೮ ಹಾಗೂ ಅನಕ್ಷರಸ್ಥರ ಪ್ರಮಾಣ ಶೇ. ೬೨.೭೨ರಷ್ಟಿದೆ. ಈ ಜಿಲ್ಲೆಯ ರಿಮೋಟ್ ತಾಂಡಾಗಳನ್ನು ಅನುಲಕ್ಷಿಸಿದಾಗ ಇಲ್ಲಿ ಸಾಕ್ಷರರ್ಹರ ಸಂಖ್ಯೆ ೪೩೧ ಇದ್ದು, ಸಾಕ್ಷರರಾದವರ ಪ್ರಮಾಣ ಶೇ. ೩೫.೨೬ ಇದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೩೫.೦೭ ಮತ್ತು ಮಹಿಳೆಯರ ಪ್ರಮಾಣ ಶೇ. ೩೫.೪೫ ಇರುವುದು ಕಂಡುಬರುತ್ತದೆ. ಅನಕ್ಷರಸ್ಥರ ಪ್ರಮಾಣವನ್ನು ನೋಡಿದಾಗ ಶೇ. ೬೪.೯೨ ಪುರುಷರು, ಶೇ. ೬೪.೫೫ರಷ್ಟು ಮಹಿಳೆಯರ ಪ್ರಮಾಣವಿದೆ. ಒಟ್ಟು ಅನಕ್ಷರಸ್ಥರ ಪ್ರಮಾಣ ಶೇ. ೬೪.೭೩ರಷ್ಟಿದೆ.

ಗ್ರಾಮ ಹತ್ತಿರದ ತಾಂಡಾಗಳನ್ನು ಗಮನಿಸಿದಾಗ ಇಲ್ಲಿಯ ಸಾಕ್ಷರರ್ಹರ ಸಂಖ್ಯೆ ಒಟ್ಟು ೩೯೯ ಇದ್ದು, ಇದರಲ್ಲಿ ಸಾಕ್ಷರರಾದವರ ಪ್ರಮಾಣ ಶೇ. ೩೯.೦೯ ಇದ್ದು, ಇದರಲ್ಲಿ ಪುರುಷರು ಶೇ. ೪೧.೧೪ ಹಾಗೂ ಮಹಿಳೆಯರ ಪ್ರಮಾಣ ಶೇ. ೩೬.೮೪ರಷ್ಟಿದೆ. ಅನಕ್ಷರಸ್ಥರಾದವರ ಪ್ರಮಾಣ ಶೇ. ೬೦.೯೧ರಷ್ಟಿದ್ದು, ಇದರಲ್ಲಿ ಶೇ. ೫೮.೮೫ ಪುರುಷರು ಹಾಗೂ ಶೇ. ೬೩.೧೫ರಷ್ಟು ಮಹಿಳೆಯರ ಪ್ರಮಾಣವಿದೆ. ಅಂದರೆ ಸಾಕ್ಷರಸ್ಥರ ಸಂಖ್ಯೆಯನ್ನು ಅನಕ್ಷರಸ್ಥರ ಸಂಖ್ಯೆಗೆ ಹೋಲಿಸಿದಾಗ ಸಾಕ್ಷರಸ್ಥರ ಪ್ರಮಾಣ ತುಂಬಾ ಕಡಿಮೆ ಇರುವುದಲ್ಲದೆ, ಮಹಿಳಾ ಸಾಕ್ಷರತೆಯು ಕೂಡಾ ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತಲೂ ಕಡಿಮೆಯಿದೆ ಎಂಬುದು ಗ್ರಾಮ ಹತ್ತಿರದ ತಾಂಡಾದ ಅಂಕಿ-ಸಂಖ್ಯೆಗಳಿಂದ ಸ್ಪಷ್ಟವಾಗುತ್ತದೆ.

ರಸ್ತೆ ಹತ್ತಿರದ ತಾಂಡಾಗಳನ್ನು ಗಣನೆಗೆ ತೆಗೆದುಕೊಂಡಾಗ ಒಟ್ಟು ಸಾಕ್ಷರರ್ಹರ ಸಂಖ್ಯೆ ೩೪೨ ಇದ್ದು, ಸಾಕ್ಷರರಾದವರ ಪ್ರಮಾಣ ಒಟ್ಟು ಶೇ. ೩೭.೭೨ ಇದ್ದು, ಇದರಲ್ಲಿ ಪುರುಷರು ಶೇ. ೩೯.೨೨, ಸ್ತ್ರೀಯರು ಶೇ. ೩೬.೦೨ರಷ್ಟು ಪ್ರಮಾಣದಲ್ಲಿದ್ದಾರೆ. ಹಾಗೂ ಅನಕ್ಷರಸ್ಥರ ಪ್ರಮಾಣ ಒಟ್ಟು ಶೇ. ೬೨.೨೮ರಷ್ಟಿದ್ದು, ಶೇ. ೬೦.೭೭ರಷ್ಟು ಪುರುಷರು, ಶೇ. ೬೩.೯೭ರಷ್ಟು ಮಹಿಳೆಯರ ಪ್ರಮಾಣವಿದೆ.

ಇಲ್ಲಿಯೂ ಕೂಡಾ ಗ್ರಾಮ ಹತ್ತಿರದ ತಾಂಡಾದಲ್ಲಿರುವಂತೆ, ಸಾಕ್ಷರಸ್ಥರ ಸಂಖ್ಯೆಗಿಂತ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿದೆ.

ಮೂರು ತಾಂಡಾಗಳ ಸಾಕ್ಷರಸ್ಥರ ಹಾಗೂ ಅನಕ್ಷರಸ್ಥರ ಪ್ರಮಾಣವನ್ನು ತುಲನೆ ಮಾಡಿ ನೋಡಿದಾಗ ಮೂರು ತಾಂಡಾಗಳಲ್ಲಿಯೂ ಅನಕ್ಷರಸ್ಥರ ಪ್ರಮಾಣ ಹೆಚ್ಚಾಗಿದ್ದು, ಸಾಕ್ಷರರ ಪ್ರಮಾಣ ಕಡಿಮೆಯಿರುವುದನ್ನು ನೋಡುತ್ತೇವೆ. ರಿಮೋಟ್, ಗ್ರಾಮ ಹತ್ತಿರ ಮತ್ತು ರಸ್ತೆ ಹತ್ತಿರದ ತಾಂಡಾಗಳಲ್ಲಿ ಪುರುಷ ಸಾಕ್ಷರತೆಗಿಂತ ಮಹಿಳಾ ಸಾಕ್ಷರತೆಯು ಕಡಿಮೆ ಪ್ರಮಾಣದಲ್ಲಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

**ಕೋಷ್ಟಕ ೫.೮.೬. ಸಮೀಕ್ಷೆಗೊಳಪಟ್ಟ ಸೋಲಾಪುರ ಲಂಬಾಣಿಗರ ಸಾಕ್ಷರತೆಯ ವಿವರ**

| ನೆಲೆಗಳು | ಸಾಕ್ಷರರ್ಹರು | | | ಸಾಕ್ಷರಸ್ಥರು | | | ಅನಕ್ಷರಸ್ಥರು | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ರಿಮೋಟ್ ತಾಂಡಾ | ೨೪೧ | ೨೧೪ | ೪೫೫ | ೯೪ | ೭೪ | ೧೬೮ | ೧೪೭ | ೧೪೦ | ೨೮೭ |
| ಗ್ರಾಮ ಹತ್ತಿರದ ತಾಂಡಾ | ೧೮೦ | ೧೭೯ | ೩೫೯ | ೯೪ | ೭೫ | ೧೬೯ | ೮೬ | ೧೦೪ | ೧೯೦ |
| ರಸ್ತೆ ಹತ್ತಿರದ ತಾಂಡಾ | ೧೬೯ | ೧೨೪ | ೨೯೩ | ೯೬ | ೪೨ | ೧೩೮ | ೭೩ | ೮೨ | ೧೫೫ |
| **ಒಟ್ಟು** | **೫೯೦** | **೫೧೭** | **೧೧೦೭** | **೨೮೪** | **೧೯೧** | **೪೭೫** | **೩೦೬** | **೩೨೬** | **೬೩೨** |

ಕೋಷ್ಟಕ ೫.೮.೬ ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಲಾದ ರಿಮೋಟ್, ಗ್ರಾಮ ಹತ್ತಿರ ಮತ್ತು ರಸ್ತೆ ಹತ್ತಿರದ ತಾಂಡಾಗಳ ಶೈಕ್ಷಣಿಕ ಮಟ್ಟ ಅಂದರೆ ಸಾಕ್ಷರಸ್ಥರು ಮತ್ತು ಅನಕ್ಷರಸ್ಥರ ಸಂಖ್ಯೆಯ ಕುರಿತಾದ ಮಾಹಿತಿ ನೀಡುತ್ತದೆ. ಈ ಜಿಲ್ಲೆಯ ಮೂರು ತಾಂಡಾಗಳಲ್ಲಿನ ಸಾಕ್ಷರರ್ಹರ ಸಂಖ್ಯೆ ಒಟ್ಟು ೧೧೦೭ ಇದ್ದು, ಅದರಲ್ಲಿ ಸಾಕ್ಷರರಾದವರ ಒಟ್ಟು ಪ್ರಮಾಣ ಶೇ. ೪೨.೯೦ ರಷ್ಟಿದ್ದು, ಇದರಲ್ಲಿ ಶೇ. ೪೮.೧೩ ಪುರುಷರು ಶೇ. ೩೬.೯೪ರಷ್ಟು ಮಹಿಳೆಯರ ಪ್ರಮಾಣವಿದೆ. ಹಾಗೂ ಅನಕ್ಷರಸ್ಥರ ಪ್ರಮಾಣ ಒಟ್ಟು ಶೇ. ೫೭.೦೯ ಇದ್ದು, ಇದರಲ್ಲಿ ಶೇ. ೫೧.೮೬ ಪುರುಷರು, ಶೇ. ೬೩.೦೫ರಷ್ಟು ಸ್ತ್ರೀಯರು ಅನಕ್ಷರಸ್ಥರಿದ್ದಾರೆ. ಮೊದಲನೆಯದಾಗಿ ರಿಮೋಟ್ ತಾಂಡಾಗಳನ್ನು ವೀಕ್ಷಿಸಿದಾಗ, ಇಲ್ಲಿ ಸಾಕ್ಷರತೆಗೆ ಅರ್ಹರಾದವರ ಸಂಖ್ಯೆ ೪೫೫ ಇದ್ದು, ಸಾಕ್ಷರರಾದವರ ಪ್ರಮಾಣ ಶೇ. ೩೬.೯೨ರಷ್ಟಿದೆ. ಇದರಲ್ಲಿ ಶೇ. ೩೯ ಪುರುಷರು, ಶೇ. ೩೪.೫೭ ರಷ್ಟು ಮಹಿಳೆಯರ ಪ್ರಮಾಣವಿದೆ. ಹಾಗೂ ಅನಕ್ಷರಸ್ಥರ ಪ್ರಮಾಣ ಶೇ. ೬೩.೦೭ರಷ್ಟಿದ್ದು, ಪುರುಷ ಅನಕ್ಷರಸ್ಥರ ಪ್ರಮಾಣ ಶೇ. ೬೦.೯೯ ಹಾಗೂ ಅನಕ್ಷರಸ್ಥ ಸ್ತ್ರೀಯರ ಪ್ರಮಾಣ ಶೇ. ೬೫.೪೨ರಷ್ಟಿದೆ.

ಗ್ರಾಮ ಹತ್ತಿರದ ತಾಂಡಾಗಳನ್ನು ಗಮನಿಸಿದಾಗ ಇಲ್ಲಿಯ ಸಾಕ್ಷರರ್ಹರ ಸಂಖ್ಯೆ ಒಟ್ಟು ೩೫೯ ರಷ್ಟಿದ್ದು, ಇದರಲ್ಲಿ ಸಾಕ್ಷರತೆಗೆ ಒಳಗಾದವರ ಪ್ರಮಾಣ ಶೇ. ೪೭.೦೭, ಈ ಸಾಕ್ಷರರಲ್ಲಿ ಶೇ.

೫೨.೨೨ರಷ್ಟು ಪುರುಷರು, ಶೇ. ೪೧.೮೯ರಷ್ಟು ಮಹಿಳೆಯರ ಪ್ರಮಾಣವಿದೆ. ಹಾಗೂ ಅನಕ್ಷರಸ್ಥರ ಪ್ರಮಾಣ ಒಟ್ಟು ಶೇ. ೫೨.೯೨ ಇದ್ದು, ಇದರಲ್ಲಿ ಶೇ. ೪೭.೭೭ ಪುರುಷರು, ಶೇ. ೫೮.೧೦ ರಷ್ಟು ಮಹಿಳಾ ಅನಕ್ಷರಸ್ಥರ ಪ್ರಮಾಣವಿರುವುದು ಕಂಡುಬರುತ್ತದೆ.

ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರ ಶೈಕ್ಷಣಿಕ ಸ್ಥಿತಿಗತಿಗಳ ಪ್ರಮಾಣವನ್ನು ನೋಡಿದಾಗ, ಸಾಕ್ಷರರ್ಹರ ಒಟ್ಟು ಸಂಖ್ಯೆ ೨೯೩ ಇದ್ದು, ಸಾಕ್ಷರರಾದವರ ಪ್ರಮಾಣ ಶೇ. ೪೭.೦೯ ಆಗಿದೆ. ಇದರಲ್ಲಿ ಶೇ. ೫೬.೮೦ ಪುರುಷರು, ಶೇ. ೩೩.೮೭ರಷ್ಟು ಮಹಿಳೆಯರು ಮತ್ತು ಅನಕ್ಷರಸ್ಥರ ಪ್ರಮಾಣ ಶೇ. ೫೨.೯೦ರಷ್ಟಿದ್ದು, ಇದರಲ್ಲಿ ಶೇ. ೪೩.೧೯ ಪುರುಷರು ಮತ್ತು ಶೇ. ೬೬.೧೨ರಷ್ಟು ಮಹಿಳೆಯರ ಪ್ರಮಾಣವಿದೆ.

ಮೂರು ತಾಂಡಾಗಳ ಶೈಕ್ಷಣಿಕ ಸ್ಥಿತಿಗಳನ್ನು ಹೋಲಿಕೆ ಮಾಡಿದಾಗ ಮೂರು ತಾಂಡಾಗಳಲ್ಲಿ ಸಾಕ್ಷರಸ್ಥರ ಸಂಖ್ಯೆಗಿಂತ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿರುವುದನ್ನು ನೋಡುತ್ತೇವೆ. ಅದರಲ್ಲಿಯೂ ಮಹಿಳಾ ಸಾಕ್ಷರತೆಯ ಪ್ರಮಾಣ ಪುರುಷ ಸಾಕ್ಷರತೆಗಿಂತ ತುಂಬಾ ಕಡಿಮೆಯಿದೆ. ಅನಕ್ಷರಸ್ಥರ ಪ್ರಮಾಣ ಹೆಚ್ಚಾಗಿರಲು ಕಂಡುಬಂದ ಮುಖ್ಯ ಅಂಶವೆಂದರೆ ಈ ಜಿಲ್ಲೆಯಲ್ಲಿ ದುಡಿಯುವ ಲಂಬಾಣಿಗರ ಸಂಖ್ಯೆ ಹೆಚ್ಚಿರುವುದರಿಂದಾಗಿ ಬಡತನದಿಂದಾಗಿ ತಮ್ಮ ಮಕ್ಕಳನ್ನು ಶಿಕ್ಷಣದಿಂದ ವಂಚಿತಗೊಳಿಸಿ ದುಡಿಯಲು ಕಳುಹಿಸುತ್ತಾರೆ. ಅಲ್ಲದೇ ಇಲ್ಲಿ ಸರಕಾರಿ ಶಾಲೆಗಳಿಗಿಂತ ಖಾಸಗಿ ಶಾಲೆಗಳು ಹೆಚ್ಚು ಜನಪ್ರಿಯವಾಗಿವೆ. ಮೊದಲೇ ಇವರಿಗೆ ಬರುವ ಆದಾಯ ಕಡಿಮೆ ಇರುವುದರಿಂದ, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವ ಪ್ರವೃತ್ತಿಯನ್ನು ಹೊಂದಿರುವುದರಿಂದ, ತಮ್ಮ ಮಕ್ಕಳಿಗೆ ಇಂತಹ ಖಾಸಗಿ ಶಾಲೆಗಳಿಗೆ ಸೇರಿಸಿ ಶಿಕ್ಷಣವನ್ನು ಕೊಡಿಸುತ್ತಿಲ್ಲ. ಇದರಿಂದಾಗಿ ಸಾಮಾನ್ಯವಾಗಿ ಈ ಜಿಲ್ಲೆಯಲ್ಲಿ ಲಂಬಾಣಿಗರ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿರುವುದನ್ನು ಮೇಲಿನ ಅಂಕಿ-ಸಂಖ್ಯೆಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ.

**ಕೋಷ್ಟಕ ೫.೮.೭ ಸಮೀಕ್ಷೆಗೊಳಪಟ್ಟ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರ ಸಾಕ್ಷರತೆಯ ವಿವರ**

| ನೆಲೆಗಳು | ಸಾಕ್ಷರರರ್ಹರು | | | ಸಾಕ್ಷರಸ್ಥರು | | | ಅನಕ್ಷರಸ್ಥರು | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ರಿಮೋಟ್ ತಾಂಡಾ | ೨೪೭ | ೨೨೩ | ೪೭೦ | ೮೦ | ೩೩ | ೧೧೩ | ೧೬೭ | ೧೯೦ | ೩೫೭ |
| ಗ್ರಾಮ ಹತ್ತಿರದ ತಾಂಡಾ | ೧೯೮ | ೧೬೭ | ೩೬೫ | ೧೦೪ | ೬೨ | ೧೬೬ | ೯೪ | ೧೦೫ | ೧೯೯ |
| ರಸ್ತೆ ಹತ್ತಿರದ ತಾಂಡಾ | ೨೯೮ | ೨೩೯ | ೫೩೭ | ೧೩೧ | ೯೨ | ೨೨೩ | ೧೬೭ | ೧೪೭ | ೩೧೪ |
| **ಒಟ್ಟು** | ೭೪೩ | ೬೨೯ | ೧೩೭೨ | ೩೧೫ | ೧೮೭ | ೫೦೨ | ೪೨೮ | ೪೪೨ | ೮೭೦ |

ಕೋಷ್ಟಕ ೫.೮.೭. ಸಮೀಕ್ಷೆಗೊಳಪಟ್ಟ ರಂಗಾರೆಡ್ಡಿ ಜಿಲ್ಲೆಯಲ್ಲಿನ ಲಂಬಾಣಿಗರ ಸಾಕ್ಷರಸ್ಥರ ಮತ್ತು ಅನಕ್ಷರಸ್ಥರ ಪ್ರಮಾಣವನ್ನು ಕುರಿತು ವಿವರಿಸುತ್ತದೆ. ಈ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ

ಮಾಡಲಾದ ಮೂರು ತಾಂಡಾಗಳಲ್ಲಿನ ಒಟ್ಟು ಸಾಕ್ಷರರ್ಹರ ಸಂಖ್ಯೆ ೧೩೭೨ ಇದ್ದು, ಇಲ್ಲಿ ಸಾಕ್ಷರರಾದವರ ಪ್ರಮಾಣ ಶೇ. ೩೬.೫೮ರಷ್ಟಿದ್ದು, ಇದರಲ್ಲಿ ಶೇ. ೪೨.೩೯ ಪುರುಷ ಸಾಕ್ಷರರ ಪ್ರಮಾಣವಾದರೆ, ಶೇ. ೨೯.೭೨ರಷ್ಟು ಮಹಿಳಾ ಸಾಕ್ಷರರ ಪ್ರಮಾಣವಿದೆ. ಅದರಂತೆ ಅನಕ್ಷರಸ್ಥರ ಪ್ರಮಾಣ ಶೇ. ೬೩.೪೧ ಆಗಿದ್ದು, ಇದರಲ್ಲಿ ಶೇ. ೫೭.೬೦ ಪುರುಷರು, ಶೇ. ೭೦.೨೭ರಷ್ಟು ಮಹಿಳಾ ಅನಕ್ಷರಸ್ಥರ ಪ್ರಮಾಣವಿದೆ.

ರಿಮೋಟ್ ತಾಂಡಾಗಳನ್ನು ಗಮನಿಸಿದಾಗ ಒಟ್ಟು ಸಾಕ್ಷರರ್ಹರ ಸಂಖ್ಯೆ ೪೭೦ ಇದ್ದು, ಇದರಲ್ಲಿ ಸಾಕ್ಷರತೆಗೆ ಒಳಪಟ್ಟವರ ಪ್ರಮಾಣ ಶೇ. ೨೪.೦೪ರಷ್ಟಿದ್ದು, ಶೇ. ೩೨.೩೮ರಷ್ಟು ಪುರುಷರು, ಶೇ. ೧೪.೭೯ ಮಹಿಳಾ ಸಾಕ್ಷರರ ಪ್ರಮಾಣವಾಗಿದೆ. ಹಾಗೂ ಅನಕ್ಷರಸ್ಥರ ಪ್ರಮಾಣ ಶೇ. ೭೫.೯೫ ಆಗಿದ್ದು, ಇದರಲ್ಲಿ ಶೇ. ೬೭.೬೧ ಪುರುಷರು ಹಾಗೂ ಸ್ತ್ರೀಯರ ಪ್ರಮಾಣ ಶೇ. ೮೫.೨೦ರಷ್ಟಿದೆ. ಗ್ರಾಮ ಹತ್ತಿರದ ತಾಂಡಾಗಳನ್ನು ವೀಕ್ಷಿಸಿದಾಗ ಈ ತಾಂಡಾದಲ್ಲಿನ ಸಾಕ್ಷರರ್ಹರ ಸಂಖ್ಯೆ ೩೬೫ ಇದ್ದು, ಸಾಕ್ಷರಸ್ಥರ ಪ್ರಮಾಣ ಶೇ. ೪೫.೪೭ ಆಗಿದ್ದು, ಇದರಲ್ಲಿ ಶೇ. ೫೨.೫೨ರಷ್ಟು ಪುರುಷರು, ಶೇ. ೩೭.೧೨ ಮಹಿಳೆಯರ ಪ್ರಮಾಣವಿದೆ. ಇಲ್ಲಿಯ ಅನಕ್ಷರಸ್ಥರ ಪ್ರಮಾಣ ಶೇ. ೫೪.೫೨ರಷ್ಟಿದ್ದು, ಇದರಲ್ಲಿ ಶೇ. ೪೭.೪೭ ಪುರುಷರು, ಶೇ. ೬೨.೮೭ ಮಹಿಳಾ ಅನಕ್ಷರಸ್ಥರ ಪ್ರಮಾಣವಿರುವುದು ಗೋಚರವಾಗುತ್ತದೆ.

ರಸ್ತೆ ಹತ್ತಿರದ ತಾಂಡಾಗಳ ಲಂಬಾಣಿಗರ ಶೈಕ್ಷಣಿಕ ಸ್ಥಿತಿಗತಿಗಳನ್ನು ನೋಡಿದಾಗ, ಇಲ್ಲಿಯ ಸಾಕ್ಷರರ್ಹರ ಸಂಖ್ಯೆ ೫೩೭ರಷ್ಟಿದೆ. ಇದರಲ್ಲಿ ಸಾಕ್ಷರಸ್ಥರ ಪ್ರಮಾಣ ಶೇ. ೪೧.೫೨ರಷ್ಟಿದ್ದು, ಶೇ. ೪೩.೯೫ರಷ್ಟು ಪುರುಷರು, ಶೇ. ೩೮.೪೯ರಷ್ಟು ಮಹಿಳಾ ಸಾಕ್ಷರತೆಯ ಪ್ರಮಾಣವಿದೆ. ಅನಕ್ಷರಸ್ಥರ ಒಟ್ಟು ಪ್ರಮಾಣ ಶೇ. ೫೮.೪೭ ಇದ್ದು, ಇದರಲ್ಲಿ ಶೇ. ೫೬.೦೪ ಪುರುಷರು, ಶೇ. ೬೧.೫೦ರಷ್ಟು ಮಹಿಳೆಯರ ಪ್ರಮಾಣವಿದೆ.

ಮೂರು ತಾಂಡಾಗಳ ಸಾಕ್ಷರಸ್ಥರ ಹಾಗೂ ಅನಕ್ಷರಸ್ಥರ ಅಂಕಿ ಸಂಖ್ಯೆಗಳನ್ನು ವೀಕ್ಷಿಸಿದಾಗ ಗುಲಬರ್ಗಾ ಹಾಗೂ ಸೋಲಾಪುರ ಲಂಬಾಣಿಗರ ಶೈಕ್ಷಣಿಕ ಸ್ಥಿತಿಗತಿಗಳಂತೆ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಲ್ಲಿಯೂ ಸಾಕ್ಷರಸ್ಥರಿಗಿಂತ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿರುವುದನ್ನು ಗಮನಿಸುತ್ತೇವೆ. ಪುರುಷ ಸಾಕ್ಷರತೆಗೆ ಹೋಲಿಸಿದಾಗ ಮಹಿಳಾ ಸಾಕ್ಷರತೆಯ ಪ್ರಮಾಣ ಕಡಿಮೆಯಿದ್ದರೂ ಕೂಡಾ ಶೂನ್ಯ ಹಂತಕ್ಕೆ ತಲುಪಿಲ್ಲ ಎಂದು ಹೇಳಬಹುದು. ಹೇಗೆಂದರೆ ರಿಮೋಟ್ ತಾಂಡಾಕ್ಕಿಂತ ಗ್ರಾಮ ಮತ್ತು ರಸ್ತೆ ಹತ್ತಿರ ತಾಂಡಾಗಳಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿರುವುದನ್ನು ನೋಡುತ್ತೇವೆ.

**ಕೋಷ್ಟಕ ೫.೮.೮. ಸಮೀಕ್ಷೆಗೊಳಪಟ್ಟ ಮೂರು ಜಿಲ್ಲೆಗಳ ಲಂಬಾಣಿಗರ ಸಾಕ್ಷರತೆಯ ವಿವರ**

| ಜಿಲ್ಲೆಗಳು | ಸಾಕ್ಷರರ್ಹರು | | | ಸಾಕ್ಷರಸ್ಥರು | | | ಅನಕ್ಷರಸ್ಥರು | | |
|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಗುಲಬರ್ಗಾ | ೬೦೧ | ೫೭೧ | ೧೧೭೨ | ೨೩೧ | ೨೦೬ | ೪೩೭ | ೩೭೦ | ೩೬೫ | ೭೩೫ |
| ಸೋಲಾಪುರ | ೫೯೦ | ೫೧೭ | ೧೧೦೭ | ೨೮೪ | ೧೯೧ | ೪೭೫ | ೩೦೬ | ೩೨೬ | ೬೩೨ |
| ರಂಗಾರೆಡ್ಡಿ | ೭೪೩ | ೬೨೯ | ೧೩೭೨ | ೩೧೫ | ೧೮೭ | ೫೦೨ | ೪೨೮ | ೪೪೨ | ೮೭೦ |
| **ಒಟ್ಟು** | **೧೯೩೪** | **೧೭೧೭** | **೩೬೫೧** | **೮೩೦** | **೫೮೪** | **೧೪೧೪** | **೧೧೦೪** | **೧೧೩೩** | **೨೨೩೭** |

ಕೋಷ್ಟಕ ೫.೮.೮. ಸಮೀಕ್ಷೆಗೊಳಪಟ್ಟ ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಲ್ಲಿನ ಲಂಬಾಣಿಗರ ಸಾಕ್ಷರಸ್ಥರ ಹಾಗೂ ಅನಕ್ಷರಸ್ಥರ ಪ್ರಮಾಣವನ್ನು ಸೂಚಿಸುತ್ತದೆ. ಮೊದಲನೆಯದಾಗಿ ಕರ್ನಾಟಕದ ಗುಲಬರ್ಗಾ ಜಿಲ್ಲೆಯನ್ನು ಗಮನಿಸಿದಾಗ ಒಟ್ಟು ಜನಸಂಖ್ಯೆ ೧೩೩೪. ಇದರಲ್ಲಿ ೬೮೦ ಪುರುಷರು ಮತ್ತು ೬೫೪ ಮಹಿಳೆಯರಿದ್ದಾರೆ. ಸಾಕ್ಷರರ್ಹರ ಒಟ್ಟು ಸಂಖ್ಯೆ ೧೧೭೨ ಇದ್ದು, ಇದರಲ್ಲಿ ಶೇ. ೮೮.೩೮ ಪುರುಷರು, ಶೇ. ೮೭.೩೦ ಮಹಿಳಾ ಸಾಕ್ಷರರ್ಹರು ಇದ್ದಾರೆ. ಈ ಸಾಕ್ಷರರ್ಹರ ಸಂಖ್ಯೆಯಲ್ಲಿ ಸಾಕ್ಷರಸ್ಥರಾದವರ ಸಂಖ್ಯೆ ೪೩೭ ಇದ್ದು, ಶೇ. ೩೮.೪೩ ಪುರುಷರು, ಶೇ. ೩೬.೦೭ರಷ್ಟು ಮಹಿಳೆಯರ ಪ್ರಮಾಣವಿದೆ. ಅನಕ್ಷರಸ್ಥರ ಪ್ರಮಾಣವನ್ನು ವೀಕ್ಷಿಸಿದಾಗ

**ಸ್ತಂಭಚಿತ್ರ ೫.೮.೪. ಸಮೀಕ್ಷೆಗೊಳಪಟ್ಟ ಮೂರು ರಾಜ್ಯಗಳ ಜಿಲ್ಲಾವಾರು ತಾಂಡಾಗಳ ಲಂಬಾಣಿಗರ ಸಾಕ್ಷರತೆಯ ವಿವರ**



ಒಟ್ಟು ಶೇ. ೬೨.೭೧ ರಷ್ಟಿದ್ದು, ಇದರಲ್ಲಿ ಶೇ. ೬೧.೫೬ ಪುರುಷರು, ಶೇ. ೬೩.೯೨ ಮಹಿಳೆಯರಿರುವುದು ಗೋಚರಿಸುತ್ತದೆ.

ಸೋಲಾಪುರ ಜಿಲ್ಲೆಯ ಲಂಬಾಣಿಗರ ಒಟ್ಟು ಜನಸಂಖ್ಯೆ ೧೨೧೯ ಇದ್ದು ಇದರಲ್ಲಿ ೬೫೨ ಪುರುಷರು ೫೬೭ ಮಹಿಳೆಯರಿದ್ದಾರೆ. ಇಲ್ಲಿಯ ಸಾಕ್ಷರರ್ಹರ ಸಂಖ್ಯೆ ೧೧೦೭ ಇದ್ದು, ಶೇ. ೯೦.೪೯ ಪುರುಷರು, ಶೇ. ೯೧.೧೮ ಮಹಿಳೆಯರಿದ್ದಾರೆ. ಈ ಸಾಕ್ಷರರ್ಹರರಲ್ಲಿ ಸಾಕ್ಷರರಾದವರ ಸಂಖ್ಯೆ ೪೭೫ ಇದ್ದು, ಶೇ. ೪೮.೧೩ ಪುರುಷರು, ಶೇ. ೩೬.೯೪ ಮಹಿಳೆಯರು ಹಾಗೂ ಅನಕ್ಷರಸ್ಥರ ಸಂಖ್ಯೆ ೬೩೨ ಇದ್ದು, ಇದರಲ್ಲಿ ಶೇ. ೫೧.೮೬ ಪುರುಷರು, ಶೇ. ೬೩.೦೫ ಮಹಿಳೆಯರ ಪ್ರಮಾಣವಿದೆ.

ರಂಗಾರೆಡ್ಡಿ ಜಿಲ್ಲೆಯಲ್ಲಿನ ಲಂಬಾಣಿಗರ ಒಟ್ಟು ಜನಸಂಖ್ಯೆ ೧೫೪೭. ಇದರಲ್ಲಿ ೮೪೦ ಪುರುಷರು ೭೦೭ ಮಹಿಳೆಯರಿದ್ದಾರೆ. ಇದರಲ್ಲಿ ಸಾಕ್ಷರರ್ಹರ ಒಟ್ಟು ಸಂಖ್ಯೆ ೧೩೭೨ ಇದ್ದು, ಶೇ. ೮೮.೪೫ ಪುರುಷರು, ಶೇ. ೮೮.೯೬ ಮಹಿಳೆಯರಿದ್ದಾರೆ, ಈ ಸಾಕ್ಷರರ್ಹರರಲ್ಲಿ ಸಾಕ್ಷರರಾದವರ ಸಂಖ್ಯೆ ೫೦೨ ಇದ್ದು, ಇದರಲ್ಲಿ ಪುರುಷರ ಪ್ರಮಾಣ ಶೇ. ೪೨.೩೯, ಸ್ತ್ರೀಯರ ಪ್ರಮಾಣ ಶೇ. ೨೯.೭೨ರಷ್ಟಿದೆ. ಹಾಗೂ ಅನಕ್ಷರಸ್ಥರಾದವರ ಸಂಖ್ಯೆ ೮೭೦ ಇದ್ದು, ಶೇ. ೫೭.೬೦ ಪುರುಷರು, ಶೇ. ೭೦.೨೭ ರಷ್ಟು ಮಹಿಳೆಯರಿದ್ದಾರೆ.

ಮೂರು ರಾಜ್ಯಗಳ ಮೂರು ಜಿಲ್ಲೆಗಳಲ್ಲಿ ಸಮೀಕ್ಷೆಗೊಳಪಟ್ಟ ಲಂಬಾಣಿಗರ ಸಾಕ್ಷರಸ್ಥರ ಮತ್ತು ಅನಕ್ಷರಸ್ಥರ ಪ್ರಮಾಣವನ್ನು ತುಲನೆ ಮಾಡಿ ನೋಡಿದಾಗ ಅತಿ ಹೆಚ್ಚು ಸಾಕ್ಷರರ್ಹರ ಸಂಖ್ಯೆ ಸೋಲಾಪುರ ಜಿಲ್ಲೆಯಲ್ಲಿ ಗೋಚರವಾಗುತ್ತಿದ್ದು, ಕಡಿಮೆ ಸಾಕ್ಷರರ್ಹರನ್ನು ಗುಲಬರ್ಗಾ ಜಿಲ್ಲೆ ಹೊಂದಿದೆ. ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗೆ ಹೋಲಿಸಿದರೆ ಸೋಲಾಪುರ ಜಿಲ್ಲೆಯು ಅತಿ ಹೆಚ್ಚಿನ ಸಾಕ್ಷರಸ್ಥರನ್ನು ಹೊಂದಿದೆ. ಅನಕ್ಷರಸ್ಥರ ಪ್ರಮಾಣವನ್ನು ನೋಡಿದಾಗ ಗುಲಬರ್ಗಾ ಮತ್ತು ಸೋಲಾಪುರಗಳಿಗಿಂತ ರಂಗಾರೆಡ್ಡಿ ಜಿಲ್ಲೆಯು ಹೆಚ್ಚಿನ ಅನಕ್ಷರಸ್ಥರನ್ನು ಹೊಂದಿರುವುದು ಕಂಡುಬರುತ್ತದೆ. ಅಲ್ಲದೇ ರಂಗಾರೆಡ್ಡಿ ಜಿಲ್ಲೆಯ ಮಹಿಳೆಯರು ಗುಲಬರ್ಗಾ ಮತ್ತು ಸೋಲಾಪುರ ಜಿಲ್ಲೆಗಳಿಗಿಂತ ಅತೀ ಕಡಿಮೆ ಪ್ರಮಾಣದ ಸಾಕ್ಷರತೆ ಹೊಂದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

## ಆಧಾರ ಗ್ರಂಥಗಳು

ಪ್ರಭಾಕರ ಶಶಿಲ, ಅಭಿವೃದ್ಧಿ ಅರ್ಥಶಾಸ್ತ್ರ, ಎಸ್ ಎಸ್ ಭಾವಿಕಟ್ಟಿ ಪ್ರಕಾಶನ, ಗುಲಬರ್ಗಾ, ೨೦೦೯.

ಗುಲಬರ್ಗಾ ಜಿಲ್ಲೆ ಮಾನವ ಅಭಿವೃದ್ಧಿ ವರದಿ ೨೦೦೮, ಯೋಜನೆ, ಕಾರ್ಯಕ್ರಮ ಉಸ್ತುವಾರಿ ಮತ್ತು ಸಾಂಖ್ಯಿಕ ಇಲಾಖೆ ಕರ್ನಾಟಕ ಸರ್ಕಾರ, ೨೦೦೮.

ಹಕಾರಿ ದೇವೇಂದ್ರಕುಮಾರ, ಸಂಧ್ಯಾ ರೆಡ್ಡಿ ಕೆ ಎಸ್., ಗ್ರಾಮೀಣ ಪಶುಸಾಕಣೆ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೩.

ಎಚ್ಚಾರ್ಕೆ. ಅಭಿವೃದ್ಧಿ ಅರ್ಥಶಾಸ್ತ್ರ, ಸಪ್ನಾ ಬುಕ್ ಹೌಸ್, ಬೆಂಗಳೂರು, ೨೦೦೦.

ಕೃಷ್ಣಪ್ಪ ಬಿ., ಗ್ರಾಮೀಣ ಅಭಿವೃದ್ಧಿ ಮತ್ತು ಅನಭಿವೃದ್ಧಿ ಆರ್ಥಿಕತೆ, ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೭.

ಕೃಷ್ಣಯ್ಯಗೌಡ ಎಚ್ ಆರ್., ಭಾರತೀಯ ಅರ್ಥಶಾಸ್ತ್ರ(ಆರ್ಥಿಕತೆ ಮತ್ತು ಆರ್ಥಿಕ ನೀತಿ), ಸ್ಪಂದನ ಪ್ರಕಾಶನ, ಬೆಂಗಳೂರು, ೨೦೧೨.

ಮಲ್ಲಿಕಾರ್ಜುನ ಭೀಮರಾಯ, ಕರ್ನಾಟಕ ವಿಮುಕ್ತ ಬುಡಕಟ್ಟುಗಳ ಸಾಮಾಜಿಕ ಅಧ್ಯಯನ, (ಪಿಹೆಚ್ ಡಿ ಸಂಶೋಧನಾ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೯.

ನಾಯಕ ಡಿ ಬಿ., ಲಂಬಾಣಿ ಜನಪದ ಸಾಹಿತ್ಯ, ಬಂಜಾರಾ ಪ್ರಕಾಶನ, ಗುಲಬರ್ಗಾ, ೨೦೦೦.

ಪಾಟೀಲ ಎಮ್ ಬಿ., ಕರ್ನಾಟಕ ರಾಜ್ಯ ಗೆಜೆಟಿಯರ ಗುಲ್ಬರ್ಗಾ ಜಿಲ್ಲೆ, ಮೆ॥ ಗೀತಾಂಜಲಿ ಪ್ರಿಂಟರ್ಸ ಬೆಂಗಳೂರು, ೧೯೯೭.

ರಾಜಶೇಖರ್ ಎಸ್, ರಾಜೇಶ ಆರ್., ಜನಸಂಖ್ಯಾಶಾಸ್ತ್ರ, ಭ್ರಮರ ಪ್ರಕಾಶನ, ಶಿವಮೊಗ್ಗ, ೨೦೦೯.

ರೀನಾ ಸೊನೊವಾಲ ಕೌಲಿ, ಯೋಜನಾ ಅಭಿವೃದ್ಧಿ ಮಾಸ ಪತ್ರಿಕೆ, ಸಮಾಚಾರ ಮತ್ತು ಪ್ರಸಾರ ಸಚಿವಾಲಯ ಭಾರತ ಸರ್ಕಾರ, ಕೊರಮಂಗಲ, ಬೆಂಗಳೂರು, ಜನೆವರಿ ೨೦೧೨.

ವಿಜಯಲಕ್ಷ್ಮೀ ಆರ್., ಲಂಬಾಣಿಗರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ, (ಎಂ.ಫಿಲ್ ಸಂಶೋಧನಾ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಸೋಮಶೇಖರ ನೇ ತಿ., ಭಾರತದ ಆರ್ಥಿಕ ಅಭಿವೃದ್ಧಿ, ಸ್ಪಂದನ ಪ್ರಕಾಶನ, ಬೆಂಗಳೂರು, ೨೦೧೧.

ಅಧ್ಯಾಯ ಆರು

# ಸಮಾರೋಪ

೬.೧ ಅಧ್ಯಯನದ ಫಲಿತಗಳು

೬.೨ ಅಧ್ಯಯನದ ಸಮಸ್ಯೆಗಳು

೬.೩ ಪರಿಹಾರೋಪಾಯಗಳು

೬.೩ ಅಧ್ಯಯನದ ಮುಂದಿನ ಸಾಧ್ಯತೆಗಳು

## ಅಧ್ಯಾಯ - ೬

# ಸಮಾರೋಪ

**ಭಾ**ರತದಲ್ಲಿ ಇಂದಿಗೂ ಗ್ರಾಮ ನಗರಗಳಿಂದ ಅನತಿ ದೂರದಲ್ಲಿ ಅನೇಕ ಬುಡಕಟ್ಟು ಸಮುದಾಯಗಳು ಅಸ್ತಿತ್ವದಲ್ಲಿವೆ. ಇವುಗಳಲ್ಲಿ ವಿಶಿಷ್ಟ ಸಂಪ್ರದಾಯ ಆಚರಣೆಗಳೊಂದಿಗೆ, ರಂಗುರಂಗಿನ ವೇಷಭೂಷಣಗಳೊಂದಿಗೆ ಗುರುತಿಸಲ್ಪಡುವವರೇ ಲಂಬಾಣಿಗರು. ಭೌಗೋಳಿಕವಾಗಿ ಕೆಲವು ಬುಡಕಟ್ಟುಗಳು ಕೆಲವು ಪ್ರದೇಶಗಳಿಗೆ ಸೀಮಿತವಾಗಿದ್ದರೆ, ಲಂಬಾಣಿಗರು ದೇಶಾದ್ಯಂತ ಹರಡಿಕೊಂಡಿರುವುದು ಕಂಡುಬರುತ್ತದೆ. ಭಾರತದ ಪ್ರತಿಯೊಂದು ಬುಡಕಟ್ಟು ಸಮುದಾಯಗಳ ಅವರದೇ ಆದ ಐತಿಹಾಸಿಕ ಪರಂಪರೆಯನ್ನು ಗಮನಿಸಿದಾಗ ಲಂಬಾಣಿಗರು ಮೂಲತಃ ಅಲೆಮಾರಿ ವ್ಯಾಪಾರಿ ಸಮುದಾಯವೆಂಬುದು ತಿಳಿದುಬರುತ್ತದೆ. ಇವರುಗಳು ತಮ್ಮ ಅಸಂಖ್ಯಾತ ದನಕರುಗಳ ಮೇಲೆ ಖಾದ್ಯ ಪದಾರ್ಥಗಳನ್ನು ಹೇರಿಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವ್ಯಾಪಾರಕ್ಕಾಗಿ ಅಲೆಮಾರಿಗಳಾಗಿ ಸಂಚರಿಸುತ್ತಿದ್ದರು. ಸಂಚಾರಿ ವ್ಯಾಪಾರಿಗಳಾದ ಇವರ ಜೀವನ ಕಷ್ಟಕರವಾಗಿದ್ದರೂ, ಧೈರ್ಯಶಾಲಿಗಳಾದ ಲಂಬಾಣಿ ಸಮುದಾಯದವರು ಆತಂಕಗಳನ್ನು ಎದುರಿಸುತ್ತಾ, ತಮ್ಮ ಧರ್ಮ, ಸಂಸ್ಕೃತಿಯನ್ನು ಪಾಲಿಸುತ್ತಾ ಪ್ರಾಮಾಣಿಕ ಜೀವನ ಸಾಗಿಸುತ್ತಿದ್ದರು. ಬ್ರಿಟಿಷರ ಆಗಮನದ ನಂತರ ರೈಲು ಮತ್ತು ರಸ್ತೆ ಸಾರಿಗೆ ಪ್ರಾರಂಭವಾಗಿ ಇವರ ಸಂಚಾರಿ ವ್ಯಾಪಾರಕ್ಕೆ ಬಹುದೊಡ್ಡ ಪೆಟ್ಟು ಬಿದ್ದು, ಆರ್ಥಿಕ ಮುಗ್ಗಟ್ಟು ಮತ್ತು ಕಡುಬಡತನಗಳುಂಟಾಗಿ ಬದುಕು ದುಸ್ತರವಾಯಿತು. ವ್ಯಾಪಾರಕ್ಕೆಂದು ಬಂದ ಬ್ರಿಟಿಷರು ಭಾರತದ ವ್ಯಾಪಾರ ವಹಿವಾಟನ್ನು ಸಂಪೂರ್ಣವಾಗಿ ತಮ್ಮ ಕಪಿಮುಷ್ಠಿಯಲ್ಲಿರಿಸಿಕೊಂಡರು. ಇದರಿಂದ ಕಂಗೆಟ್ಟ ಲಂಬಾಣಿಗರು ನಾಡಿನಿಂದ ಕಾಡು ಸೇರಲು ಪ್ರಾರಂಭಿಸಿ, ಕಾಡಿನ ಉತ್ಪನ್ನಗಳ ಮಾರಾಟ ಮಾಡಿ ಜೀವನ ಸಾಗಿಸತೊಡಗಿದರು.

ಕಷ್ಟಕರವಾದ ಜೀವನ, ಬಡತನ, ಹೊರಗಿನವರ ದಬ್ಬಾಳಿಕೆ ಮುಂತಾದ ಕಾರಣಗಳಿಂದ ಕೆಲವು ಲಂಬಾಣಿಗರು ಸಣ್ಣ ಪುಟ್ಟ ಅಪರಾಧ ಮಾಡಿದ ಕಾರಣ ಬ್ರಿಟಿಷ್ ಸರ್ಕಾರವು ಇವರನ್ನು ೧೮೭೧ರ ಅಪರಾಧಿ ಬುಡಕಟ್ಟು ಅಧಿನಿಯಮದಡಿಯಲ್ಲಿ 'ಅಪರಾಧಿ ಪಂಗಡ'ವೆಂದು ಪರಿಗಣಿಸಿ ಇವರ ಚಲನವಲನಗಳನ್ನು ನಿಯಂತ್ರಿಸಿತು. ಸ್ಥಳೀಯವಾಗಿ 'ಶಾಂತಿಪ್ರಿಯ ಸಮುದಾಯ'ವೆಂದು ಗುರುತಿಸಲ್ಪಟ್ಟ ಇವರು ಕೆಲವೇ ಕೆಲವರು ಮಾಡಿದ ಅಪರಾಧಗಳ ಪರಿಣಾಮವಾಗಿ ಇಡೀ ಪಂಗಡವನ್ನು 'ಅಪರಾಧಿ ಪಂಗಡ' ಸೂಚಿಯಲ್ಲಿ ತಂದರು. ಈ ಸಂದರ್ಭದಲ್ಲಿ ಬೇಸತ್ತು ನಾಡನ್ನು ತೊರೆದು ಕಾಡನ್ನು ಸೇರಿದ ಇವರು ತಾಂಡಾಗಳನ್ನು ನಿರ್ಮಿಸಿಕೊಂಡು ಸಾಮುದಾಯಿಕ ಜೀವನ ಪ್ರಾರಂಭಿಸಿದರು. ತಾಂಡಾಗಳು ನಿರ್ಮಾಣಗೊಂಡು ಶತಮಾನಗಳೇ ಉರುಳಿದರೂ ಈ ತಾಂಡಾಗಳಿಗೆ ಅಂಟಿರುವ ಬಡತನ, ಆರ್ಥಿಕ ಮುಗ್ಗಟ್ಟುಗಳು ಸಂಪೂರ್ಣವಾಗಿ ಅಳಿಯದೇ ಉಳಿದಿರುವುದಕ್ಕೆ ಈ ಅಧ್ಯಯನವೇ ಸಾಕ್ಷಿಯಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಸಂವಿಧಾನಾತ್ಮಕವಾಗಿ ಬೇರೆ-ಬೇರೆ ಪಟ್ಟಿಗಳಲ್ಲಿ ವಿಂಗಡಿಸಲ್ಪಟ್ಟಿರುವ ಕರ್ನಾಟಕ ರಾಜ್ಯದ ಗುಲಬರ್ಗಾ, ಮಹಾರಾಷ್ಟ್ರ ರಾಜ್ಯದ ಸೋಲಾಪುರ ಹಾಗೂ ಆಂಧ್ರ ಪ್ರದೇಶ ರಾಜ್ಯದ ರಂಗಾರೆಡ್ಡಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರ ಸಾಮಾಜಿಕ, ಆರ್ಥಿಕ ಸ್ಥಿತಿ-ಗತಿಗಳನ್ನು ನಿಖರವಾಗಿ ತಿಳಿಯಲು ಪ್ರಯತ್ನಿಸಲಾಗಿದೆ. ಈ ಅಧ್ಯಯನದ ಫಲಿತಗಳಿಂದ ದೇಶದ ಬೇರೆ-ಬೇರೆ ರಾಜ್ಯಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರಿಗೆ ಸಂವಿಧಾನಾತ್ಮಕವಾಗಿ ಒಂದೇ ಪಟ್ಟಿಯ ಅಡಿಯಲ್ಲಿ ಸೇರ್ಪಡೆ ಮಾಡಿದಾಗ ಸಮಾನ ರೀತಿಯ ಸರ್ಕಾರಿ ಸವಲತ್ತುಗಳು ಲಭಿಸಿ, ಅವರ ಆರ್ಥಿಕ, ಸಾಮಾಜಿಕ ಸ್ಥಿತಿ-ಗತಿಗಳು ಸ್ವಲ್ಪಮಟ್ಟಿಗಾದರೂ ಸುಧಾರಿಸುವುದೆಂಬುದು ಅಧ್ಯಯನದ ಆಶಯವಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಮೂರು ರಾಜ್ಯಗಳ, ಮೂರು ಜಿಲ್ಲೆಗಳ ಲಂಬಾಣಿಗರು ಕೇವಲ ಪ್ರಾಥಮಿಕ, ಮಾಧ್ಯಮಿಕ ಹಂತದವರೆಗೆ ಮಾತ್ರ ಶಿಕ್ಷಣ ಪಡೆಯುತ್ತಿದ್ದು, ಉನ್ನತ ಶಿಕ್ಷಣ ಹಂತ ತಲುಪದೇ ಇರುವುದು ಚಿಂತನೀಯ.

ಮೂರು ಜಿಲ್ಲೆಗಳ ಲಂಬಾಣಿಗರು ಅನುಭವಿಸುತ್ತಿರುವ ಮೂಲಭೂತ ಸಮಸ್ಯೆಗಳಲ್ಲಿ ಅಷ್ಟೇನು ವ್ಯತ್ಯಾಸವಿಲ್ಲವಾದರೂ ರಿಮೋಟ್ ತಾಂಡಾದವರ ಸಮಸ್ಯೆಗಳು ಉಳಿದ ತಾಂಡಾದವರಿಗಿಂತ ಅಧಿಕವಾಗಿರುವುದಕ್ಕೆ ಅಸಮರ್ಪಕ ಸಾರಿಗೆ ಸಂಪರ್ಕ ವ್ಯವಸ್ಥೆಯೇ ಕಾರಣವಾಗಿದೆ.

ಮೂರು ಜಿಲ್ಲೆಗಳಲ್ಲಿ ಮಿಶ್ರಬೇಸಾಯ ಪದ್ಧತಿಯ ಅಳವಡಿಕೆಯಿದ್ದರೂ, ಸೂಕ್ತ ನಿರ್ವಹಣಾ ಜ್ಞಾನದ ಕೊರತೆಯಿಂದ ನಿರೀಕ್ಷಿತ ಮಟ್ಟದ ಆರ್ಥಿಕ ಲಾಭ ಪಡೆಯುವಲ್ಲಿ ವಿಫಲರಾಗುತ್ತಿದ್ದಾರೆ. ಬಾಹ್ಯ ಜನರ ಪ್ರಭಾವದಿಂದಾಗಿ ಲಂಬಾಣಿಗರು ವಾಸಿಸುತ್ತಿರುವ ಪರಿಸರ ಕುಲಷಿತಗೊಳ್ಳುತ್ತಿದ್ದು ಪರಿಸರದಲ್ಲಿ ನೈರ್ಮಲ್ಯವಿಲ್ಲದೇ ಹಲವಾರು ಆರೋಗ್ಯ ಸಂಬಂಧಿ ತೊಂದರೆಗಳುಂಟಾಗುತ್ತಿವೆ. ಲಂಬಾಣಿಗರು ರಾಷ್ಟ್ರದ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಸಂವಿಧಾನಾತ್ಮಕ ಪಟ್ಟಿಯಲ್ಲಿರುವುದರಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರುವ ರಾಜ್ಯಗಳಲ್ಲಿ ಮಾತ್ರ ಜಾತಿವಾರು

ಜನಗಣತಿಯಾಗುತ್ತಿದ್ದು, ಲಂಬಾಣಿಗರ ಜನಸಂಖ್ಯಾ ಮಾಹಿತಿ ಲಭಿಸುತ್ತಿದೆ. ಇತರೆ ಹಿಂದುಳಿದ ವರ್ಗಗಳಲ್ಲಿ ಬರುವ ರಾಜ್ಯಗಳಲ್ಲಿ ಇತರೆ ಹಿಂದುಳಿದ ಜಾತಿಗಳ ಜಾತಿವಾರು ಜನಗಣತಿ ಆಗದೇ ಇರುವುದರಿಂದ ಲಂಬಾಣಿಗರ ಜನಸಂಖ್ಯೆಯ ಮಾಹಿತಿ ಸಿಗುವುದಿಲ್ಲ. ಅಲ್ಲದೆ ವಲಸೆ ಸಮಸ್ಯೆಯೂ ಕೂಡ ನಿಖರವಾದ ಜನಗಣತಿಗೆ ತೊಂದರೆದಾಯಕ ಅಂಶವಾಗಿದೆ.

ಸಾಮಾಜಿಕ, ಸಾಂಸ್ಕೃತಿಕ ವೈಶಿಷ್ಟ್ಯತೆಗಳು, ಆರ್ಥಿಕ, ಶೈಕ್ಷಣಿಕ ಸಮಸ್ಯೆಗಳು, ಕಡಿಮೆ ರಾಜಕೀಯ ಪ್ರಾತಿನಿಧ್ಯತೆಯ ಕಾರಣಗಳಾವುವು? ಎಂಬುದನ್ನು ತೌಲನಿಕವಾಗಿ ವಿಶ್ಲೇಷಿಸುವುದರೊಂದಿಗೆ, ವ್ಯತಿರಿಕ್ತ ಮೀಸಲಾತಿ ಪ್ರಮಾಣಗಳಿಂದ ಉಂಟಾಗುವ ಪರಿಣಾಮವನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಒಟ್ಟಾರೆಯಾಗಿ ಈ ಅಧ್ಯಯನದಿಂದ ಲಂಬಾಣಿಗರ ಸಮಾಜೋ, ಆರ್ಥಿಕ ಸ್ಥಿತಿ–ಗತಿಗಳನ್ನು ಅರಿಯುವುದರೊಂದಿಗೆ ಅವುಗಳ ಸುಧಾರಣಾ ಕ್ರಮಗಳಾವವು? ಎಂಬುದನ್ನು ತಿಳಿಯಲು ಸಾಧ್ಯವಾಗಿದೆ. ಈ ಅಧ್ಯಯನಕ್ಕೆ ಪೂರಕವಾಗಿ ಸಂಖ್ಯಾಶಾಸ್ತ್ರೀಯ ಸಾಧನಗಳಾದ ಕೋಷ್ಟಕಗಳು, ಆಲೇಖಗಳು, ಪೈ–ಡೈಗ್ರಾಮ, ಗಣಿತದ ಸರಾಸರಿ, ಹೀಗೆ ಮುಂತಾದವುಗಳನ್ನು ಅಳವಡಿಸಿಕೊಳ್ಳಲಾಗಿದೆ.

**೬.೧. ಅಧ್ಯಯನದ ಫಲಿತಗಳು**

ಅಧ್ಯಯನದ ಫಲಿತಗಳು ಕ್ಷೇತ್ರಕಾರ್ಯವನ್ನು ಆಧರಿಸಿದ್ದು, ಕ್ಷೇತ್ರಕಾರ್ಯದ ದತ್ತಾಂಶಗಳ ಆಧಾರದ ಮೇಲೆ ವಿವರಿಸಲಾಗಿದೆ.

ಲಂಬಾಣಿಗರಲ್ಲಿ ಪ್ರಮುಖವಾಗಿ ಐದು ಪಾಡಾ(ಬೆಡಗು)ಗಳಿದ್ದು, ಭಿನ್ನ ಪಾಡಾಗಳ ಮಧ್ಯೆ ವಿವಾಹಗಳು ಏರ್ಪಡುತ್ತಿವೆ. ಇಂದಿನ ಯುವ ಪೀಳಿಗೆಗೆ ಒಳಪಾಡಾಗಳ ಕುರಿತಾದ ಪರಿಕಲ್ಪನೆಗಳಿಲ್ಲ.

ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರು ಆಚರಿಸುವ ಸಂಸ್ಕಾರಗಳಲ್ಲಿ ಅಷ್ಟೊಂದು ಭಿನ್ನತೆಯಿಲ್ಲ.

ಮೂರೂ ಜಿಲ್ಲೆಗಳ ಲಂಬಾಣಿಗರಲ್ಲಿ ವಿವಾಹ ಸಂಬಂಧಗಳು ಪಾಡಾಗಳನ್ನಾಧರಿಸಿಯೇ ಏರ್ಪಡುತ್ತಿವೆ. ಈ ವಿಚಾರವಾಗಿ ಇವರು ಒಳಪಾಡಾಗಳಿಗೆ ಪ್ರಾಮುಖ್ಯತೆ ನೀಡುತ್ತಿಲ್ಲ.

ಮೂರೂ ಜಿಲ್ಲೆಯ ಲಂಬಾಣಿಗರು ಆಚರಿಸುವ ಹಬ್ಬಗಳಲ್ಲಿ ಅಂತಹ ವ್ಯತ್ಯಾಸವೇನು ಇರುವುದಿಲ್ಲ.

ಪ್ರಕೃತಿ ತಾಣಗಳಾದ ತಾಂಡಾಗಳಲ್ಲಿ ವಾಸಿಸುವ ಇವರಲ್ಲಿ ಬೇಟೆಗಾರಿಕೆ ಇವರ ಜೀವನದ ಅವಿಭಾಜ್ಯ ಅಂಗವಾಗಿತ್ತು, ಆದರೆ ಪ್ರಸ್ತುತ ದಿನಗಳಲ್ಲಿ ಇದು ಅಳಿವಿನ ಅಂಚಿನಲ್ಲಿದೆ.

ಮೂರು ಜಿಲ್ಲೆಗಳಿಗೆ ಭೌಗೋಳಿಕ ಗಡಿಬಿದೆಯೇ ಹೊರತು ಸಾಂಸ್ಕೃತಿಕ ಗಡಿ ಎಂಬುದಿಲ್ಲ.

ಜಿಲ್ಲೆ ಜಿಲ್ಲೆಗಳ ಲಂಬಾಣಿಗರ ಮಧ್ಯೆ ವಿವಾಹ ಸಂಬಂಧಗಳು ಅನಕ್ಷರಸ್ಥರ ಮಧ್ಯೆ ನಿರಾತಂಕವಾಗಿ ಸಾಗುತ್ತಿದ್ದು, ಅಕ್ಷರಸ್ಥರ ಮಧ್ಯೆ ವಿರಳವಾಗಿ ಏರ್ಪಡುತ್ತಿವೆ. ಏಕೆಂದರೆ ಇವರು ಸಂವಿಧಾನಾತ್ಮಕವಾಗಿ

ಬೇರೆ-ಬೇರೆ ಪಟ್ಟಿಗಳಲ್ಲಿರುವುದರಿಂದ ಸರಕಾರಿ ನೌಕರಿಗಳಿಗೆ ತಾಂತ್ರಿಕ ರೀತಿಯ ತೊಂದರೆಗಳು ಉಂಟಾಗುತ್ತಿವೆ ಎನ್ನುವ ಮನೋಭಾವನೆಯಿದೆ.

ಲಂಬಾಣಿಗರಲ್ಲಿ ಪುರುಷ ಪ್ರಧಾನ ಕುಟುಂಬ ಪದ್ಧತಿಯಿದೆ.

ಲಂಬಾಣಿ ಮಹಿಳೆಯರಲ್ಲಿ ಹಚ್ಚೆ ಹಾಕಿಸಿಕೊಳ್ಳುವಿಕೆ ಇಂದು ಅಳಿವಿನ ಅಂಚಿನಲ್ಲಿದೆ.

ಸ್ತ್ರೀ-ಪುರುಷರ ಕೂಲಿದರಗಳಲ್ಲಿ ತಾರತಮ್ಯವಿದೆ.

ಮೂರೂ ಜಿಲ್ಲೆಗಳಲ್ಲಿ ಲಂಬಾಣಿಗರು ಗೋರಬೋಲಿ ಭಾಷೆಯನ್ನು ಮಾತನಾಡುತ್ತಾರೆ.

ಮೂರೂ ಜಿಲ್ಲೆಗಳ ಲಂಬಾಣಿಗರ ಶೈಕ್ಷಣಿಕ ಪ್ರಮಾಣವನ್ನು ತುಲನೆ ಮಾಡಿದಾಗ, ಕೇವಲ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತಗಳಲ್ಲಿ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದು, ಉನ್ನತ ಶಿಕ್ಷಣ ಹಂತದಲ್ಲಿ ಅನಾಸಕ್ತಿ ತೋರುತ್ತಿದ್ದಾರೆ.

ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳ ಲಂಬಾಣಿಗರ ಮೂಲ ಪಾಡಾಗಳಲ್ಲಿ ವ್ಯತ್ಯಾಸವಿರುವುದಿಲ್ಲ. ಆದರೆ ಒಳಪಾಡಾಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿವೆ.

ಸೋಲಾಪುರ ಜಿಲ್ಲೆಯ ಲಂಬಾಣಿಗರು ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರಿಗಿಂತ ಕಡಿಮೆ ಪ್ರಮಾಣದ ರಾಜಕೀಯ ಪ್ರಾತಿನಿಧ್ಯತೆ ಪಡೆದಿದ್ದಾರೆ.

ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಗುಲಬರ್ಗಾ ಜಿಲ್ಲೆಯ ಲಂಬಾಣಿಗರ ಲಿಂಗಾನುಪಾತ ಪ್ರಮಾಣ ಉತ್ತಮವಾಗಿದೆ.

ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಗುಲಬರ್ಗಾ ಜಿಲ್ಲೆಯ ಲಂಬಾಣಿಗರಲ್ಲಿ ಕೃಷಿ ಮತ್ತು ಕೃಷಿಕೂಲಿ ಮಾಡುವವರ ಸಂಖ್ಯೆ ಹೆಚ್ಚಾಗಿದೆ.

ಗುಲಬರ್ಗಾ ಮತ್ತು ರಂಗಾರೆಡ್ಡಿ ಜಿಲ್ಲೆಗಳಿಗಿಂತ ಕೈಗಾರಿಕಾ ಪ್ರದೇಶವಾದ ಸೋಲಾಪುರದಲ್ಲಿ ಕೂಲಿದರ ಹೆಚ್ಚಿನ ಪ್ರಮಾಣದಲ್ಲಿದೆ.

ಸರಕಾರಿ ನೌಕರರ ಪ್ರಮಾಣದಲ್ಲಿ ಗುಲಬರ್ಗಾ ಜಿಲ್ಲೆಯ ಲಂಬಾಣಿಗರು ಮೊದಲ ಸ್ಥಾನದಲ್ಲಿದ್ದು, ರಂಗಾರೆಡ್ಡಿ ಮತ್ತು ಸೋಲಾಪುರ ಜಿಲ್ಲೆಯ ಲಂಬಾಣಿಗರು ಕ್ರಮವಾಗಿ ನಂತರದ ಸ್ಥಾನಗಳನ್ನು ಪ್ರತಿನಿಧಿಸುತ್ತಾರೆ.

ಸೋಲಾಪುರ ಜಿಲ್ಲೆಯಲ್ಲಿ ಹೆಚ್ಚಿನ ಕೈಗಾರಿಕೆಗಳಿರುವುದರಿಂದ ಈ ಜಿಲ್ಲೆಯ ಲಂಬಾಣಿಗರು ಉಳಿದೆರಡು ಜಿಲ್ಲೆಗಳಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಖಾಸಗಿ ಉದ್ಯೋಗಗಳಲ್ಲಿ ನಿರತರಾಗಿದ್ದಾರೆ.

ಮೂರು ಜಿಲ್ಲೆಗಳನ್ನು ತುಲನೆ ಮಾಡಿದಾಗ ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಪಶು ಸಂಗೋಪನೆಗೆ ಹೆಚ್ಚಿನ ಆದ್ಯತೆ ನೀಡಿದ್ದಾರೆ.

ಗುಲಬರ್ಗಾ, ಸೋಲಾಪುರ ಮತ್ತು ರಂಗಾರೆಡ್ಡಿ ಜಿಲ್ಲೆಯ ಲಂಬಾಣಿಗರು ಹೆಚ್ಚಿನ ಪ್ರಮಾಣದ ಒಣಕೃಷಿ ಭೂಮಿಯನ್ನು ಹೊಂದಿದ್ದಾರೆ.

ಮೂರು ಜಿಲ್ಲೆಗಳಲ್ಲಿ ಸೋಲಾಪುರ ಜಿಲ್ಲೆಯು ಹೆಚ್ಚಿನ ಸಾಕ್ಷರಸ್ಥರನ್ನು, ರಂಗಾರೆಡ್ಡಿ ಜಿಲ್ಲೆಯು ಹೆಚ್ಚಿನ ಅನಕ್ಷರಸ್ಥರನ್ನು ಹೊಂದಿದೆ. ಹಾಗೂ ಸೋಲಾಪುರ ಜಿಲ್ಲೆಯು ಹೆಚ್ಚಿನ ಮಹಿಳಾ ಸಾಕ್ಷರರನ್ನು, ರಂಗಾರೆಡ್ಡಿ ಜಿಲ್ಲೆಯು ಕಡಿಮೆ ಮಹಿಳಾ ಸಾಕ್ಷರರನ್ನು ಹೊಂದಿದೆ.

ಗುಲಬರ್ಗಾ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ಕನ್ನಡ ಭಾಷೆಯ ಪ್ರಭಾವ, ಸೋಲಾಪುರ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ಮರಾಠಿ ಭಾಷೆಯ ಪ್ರಭಾವ, ಮತ್ತು ರಂಗಾರೆಡ್ಡಿ ಜಿಲ್ಲೆಯ ಗೋರಬೋಲಿ ಭಾಷೆಯ ಮೇಲೆ ಮರಾಠಿ ಭಾಷೆಯ ಪ್ರಭಾವವಿದೆ.

**೬.೨. ಸಮಸ್ಯೆಗಳು**

ಲಂಬಾಣಿ ಮಕ್ಕಳು ಪ್ರಾಥಮಿಕ ಶಾಲೆಗೆ ಪ್ರವೇಶ ಪಡೆದಾಗ ಮಗುವಿನ ಮಾತೃಭಾಷೆಯಾದ ಗೋರಬೋಲಿ ಮತ್ತು ಪಠ್ಯಭಾಷೆಯ ಭಿನ್ನತೆಗಳಿಂದ ಶಿಕ್ಷಕ ವಿದ್ಯಾರ್ಥಿಗಳ ಮಧ್ಯೆ ಸೂಕ್ತ ಕಲಿಕಾ ಸಂವಹನ ಏರ್ಪಡುತ್ತಿಲ್ಲ.

ತಾಂಡಾ ಶಾಲೆಗಳಲ್ಲಿ ಕೆಲವು ಮೂಲಭೂತ ಸೌಕರ್ಯಗಳ ಅನುಷ್ಠಾನದ ಕೊರತೆಯಿಂದ ಗುಣಮಟ್ಟದ ಶಿಕ್ಷಣ ನೀಡಲಾಗುತ್ತಿಲ್ಲ. ಅಲ್ಲದೇ ಶಿಕ್ಷಣದ ಕುರಿತು ಪೋಷಕರ ಅನಾಸಕ್ತಿಯಿಂದ ಮಧ್ಯದಲ್ಲಿಯೇ ಶಾಲೆ ಬಿಡುವ ಮಕ್ಕಳ ಸಂಖ್ಯೆ ಹೆಚ್ಚುತ್ತಿದೆ.

ಪ್ರೌಢಶಾಲಾ ಹಂತದಲ್ಲಿಯೇ ಮಕ್ಕಳ ದೈಹಿಕಬಲ ನೆಚ್ಚಿಕೊಂಡ ತಾಂಡಾವಾಸಿಗಳು ತಮ್ಮ ಬಡತನದ ಬೇಗೆ ತೀರಿಸಿಕೊಳ್ಳಲು ಶಾಲೆಯನ್ನು ಬಿಡಿಸುತ್ತಿರುವುದರಿಂದ ಇವರು ಉನ್ನತ ಶಿಕ್ಷಣದ ಹಂತ ತಲುಪುತ್ತಿಲ್ಲ.

ಹಳೆಯ ಮಾದರಿಯ ಬೇಸಾಯವನ್ನು ಅಳವಡಿಸಿಕೊಂಡಿರುವುದರಿಂದ ಇಳುವರಿಯ ಪ್ರಮಾಣ ಕಡಿಮೆಯಿದೆ.

ಪೂರ್ಣಕಾಲಿಕ ಉದ್ಯೋಗದ ಸಮಸ್ಯೆಯಿದ್ದು, ಇವರು ಅರೆಕಾಲಿಕ ಉದ್ಯೋಗವನ್ನವಲಂಬಿಸಿದ್ದಾರೆ. ಹೀಗಾಗಿ ಇವರಲ್ಲಿ ಕಾಲಿಕ ವಲಸೆ ಕಂಡುಬರುತ್ತಿದೆ.

ತಾಂಡಾಗಳಲ್ಲಿ ಸಾರ್ವಜನಿಕ ಶೌಚಾಲಯಗಳು ನಿರ್ಮಾಣಗೊಂಡರೂ, ಅವುಗಳ ಸೂಕ್ತ ನಿರ್ವಹಣೆ ಇಲ್ಲ. ವೈಯಕ್ತಿಕ ಶೌಚಾಲಯಗಳ ನಿರ್ಮಾಣಕ್ಕೆ ಸರಕಾರ ನೀಡಿರುವ ಹಣದ ನೆರವಿನಿಂದ ಕೆಲವರು ಶೌಚಾಲಯಗಳನ್ನು ನಿರ್ಮಿಸಿಕೊಂಡರೂ ಅವುಗಳನ್ನು ಶೌಚಾಲಯ ಗಳನ್ನಾಗಿ ಬಳಸಿಕೊಳ್ಳದೇ ಕುಳ್ಳು, ಕಟ್ಟಿಗೆಗಳನ್ನು ಹಾಕಿಕೊಳ್ಳಲು ಬಳಸುತ್ತಿದ್ದಾರೆ.

ಕೆಲಸದ ಸಮಯ ಒಂದೇಯಾಗಿದ್ದರೂ ಸ್ತ್ರೀ-ಪುರುಷರ ಕೂಲಿ ದರದಲ್ಲಿ ತಾರತಮ್ಯವಿದೆ.

ತಾಂಡಾಗಳಲ್ಲಿ ಸರ್ಕಾರಿ ಸೌಲಭ್ಯಗಳ ಕುರಿತಾದ ಮಾಹಿತಿಯ ಕೊರತೆ ಇದೆ.

ದೇಶದ ಬೇರೆ-ಬೇರೆ ರಾಜ್ಯಗಳಲ್ಲಿ ಸಂವಿಧಾನಿಕವಾಗಿ ಬೇರೆ-ಬೇರೆ ಪಟ್ಟಿಗಳಲ್ಲಿರುವುದರಿಂದ ಇವರ ಜನಸಂಖ್ಯಾ ಮಾಹಿತಿ ಸರಿಯಾಗಿ ಲಭ್ಯವಾಗುತ್ತಿಲ್ಲ.

ದೇಶದ ಬೇರೆ-ಬೇರೆ ಪ್ರಾಂತ್ಯಗಳಲ್ಲಿ ಬೇರೆ-ಬೇರೆ ಹೆಸರುಗಳಿಂದ ಕರೆಯಲ್ಪಡುವುದರಿಂದ ಈ ಸಮುದಾಯದಲ್ಲಿ ಐಕ್ಯತೆಯ ಸಮಸ್ಯೆಯಿದೆ.

ಭೂ-ರಹಿತ ಕೃಷಿ ಕಾರ್ಮಿಕರ ಕುಟುಂಬಗಳ ಸಂಖ್ಯೆ ಹೆಚ್ಚಾಗಿದ್ದು, ಬಡತನದ ಸಮಸ್ಯೆ ಇದೆ.

ಮೂರು ಜಿಲ್ಲೆಯ ಲಂಬಾಣಿಗರ ಸಂಸ್ಕೃತಿ ಒಂದೇಯಾಗಿದ್ದು, ಅನಕ್ಷರಸ್ಥರಲ್ಲಿ ವೈವಾಹಿಕ ಸಂಬಂಧಗಳು ನಿರಾತಂಕವಾಗಿ ಏರ್ಪಡುತ್ತಿವೆ. ಆದರೆ ಸಂವಿಧಾನಾತ್ಮಕವಾಗಿ ಬೇರೆ-ಬೇರೆ ಪಟ್ಟಿಯಲ್ಲಿರುವುದರಿಂದ ಸರ್ಕಾರಿ ಕೆಲಸಗಳನ್ನು ಪಡೆಯಲು ತಾಂತ್ರಿಕ ತೊಂದರೆಗಳು ಇರುವುದರಿಂದ ಅಕ್ಷರಸ್ಥರ ಮಧ್ಯದ ವೈವಾಹಿಕ ಸಂಬಂಧಗಳಿಗೆ ಸಮಸ್ಯೆ ಉಂಟಾಗುತ್ತಿದೆ.

**೬.೩. ಪರಿಹಾರೋಪಾಯಗಳು**

ವಿಶೇಷ ಶೈಕ್ಷಣಿಕ ಕಾರ್ಯಕ್ರಮಗಳ ನೀತಿ ರೂಪಣೆಯ ಅಗತ್ಯವಿದೆ.

ಹಣದ ಸಹಾಯ ನೀಡುವುದರ ಮೂಲಕ ಉನ್ನತ ಶಿಕ್ಷಣವನ್ನು ಪ್ರೋತ್ಸಾಹಿಸುವುದು.

ಪ್ರಾಥಮಿಕ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವುದು ಮತ್ತು ಮಕ್ಕಳು ಶಾಲೆಯಲ್ಲಿ ಮುಂದುವರಿಯುವಂತೆ ನಾವಿನ್ಯ ಯೋಜನೆಗಳನ್ನು ಹಾಕಿಕೊಳ್ಳುವುದು.

ಕೃಷಿಯಲ್ಲಿ ಉತ್ಪಾದಕತೆಯನ್ನು ಅಧಿಕಗೊಳಿಸಲು ತಾಂಡಾ ರೈತರಿಗೆ ಕ್ಯಾಂಪ್‌ಗಳನ್ನೇರ್ಪಡಿಸಿ ಕೃಷಿತಜ್ಞರಿಂದ ತರಬೇತಿ ನೀಡುವುದು.

ಜನರಿಗೆ ಸಾಕಷ್ಟು ಉದ್ಯೋಗ, ವರಮಾನ ದೊರೆಯುವಂತೆ ಮಾಡಲು ಕೋಳಿ ಸಾಕಾಣಿಕೆ, ರೇಷ್ಮೆ, ಹೈನುಗಾರಿಕೆ, ಮುಂತಾದವುಗಳ ಕುರಿತು ವೈಜ್ಞಾನಿಕ ಪದ್ಧತಿಯ ತರಬೇತಿಯನ್ನು ನೀಡುವುದು.

ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕ್‌ಗಳಿಂದ ಬಡ್ಡಿ ರಹಿತ ಸಾಲ ಸೌಲಭ್ಯ ಒದಗಿಸುವುದು.

ಖಾಸಗಿ ಮತ್ತು ಸಾರ್ವಜನಿಕ ಶೌಚಾಲಯಗಳ ನಿರ್ಮಾಣ ಮಾಡಲು ಹಣಕಾಸಿನ ನೆರವು ನೀಡುವುದರ ಜೊತೆಗೆ ಸೂಕ್ತ ಅನುಷ್ಠಾನ ಮತ್ತು ನಿರ್ವಹಣೆಗೆ ಕ್ರಮಕೈಗೊಳ್ಳಬೇಕು.

ಲಿಂಗಾಧಾರಿತ ಶ್ರಮವಿಭಜನೆಯಿಂದ ಅಸ್ತಿತ್ವದಲ್ಲಿರುವ ವೇತನ ತಾರತಮ್ಯ ಹೋಗಲಾಡಿಸಿ ಸಮಾನ ಕೆಲಸಕ್ಕೆ ಸಮಾನ ವೇತನವೆಂಬ ನೀತಿಯನ್ನು ಫಲಪ್ರದವಾಗಿ ಅನುಷ್ಠಾನಗೊಳಿಸಬೇಕು.

ಕಾಲಿಕ ವಲಸೆಯನ್ನು ತಡೆಗಟ್ಟಲು ತಾಂಡಾವಾಸಿಗಳಿಗೆ ಪೂರಕ ಉದ್ಯೋಗಗಳು ದೊರಕುವಂತಹ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸುವುದು.

ತಾಂಡಾಗಳಲ್ಲಿ 'ಜಾಗೃತಿ ಸಮಿತಿ'ಗಳನ್ನು ರಚಿಸಿ, ಬೀದಿ ನಾಟಕ, ಜಾಥಾ ಮತ್ತು ಶಿಬಿರಗಳಂತಹ ಜಾಗೃತಿ ಕಾರ್ಯಕ್ರಮಗಳ ಆ ಮೂಲಕ ತಾಂಡಾದ ಜನರಿಗೆ ಸರ್ಕಾರಿ ಸೌಲಭ್ಯಗಳ ಕುರಿತು ಅರಿವು ಮೂಡಿಸುವುದು.

ಸ್ಥಳೀಯ ಸಂಪನ್ಮೂಲಗಳ ಸೂಕ್ತ ನಿರ್ವಹಣೆಗೆ ತರಬೇತಿ ನೀಡುವುದು.

ಲಂಬಾಣಿ ಮಕ್ಕಳು ಪ್ರಾಥಮಿಕ ಶಾಲೆಗೆ ಸೇರಿದಾಗ ಮಾತೃಭಾಷೆ ಮತ್ತು ಕಲಿಕಾ ಭಾಷೆ ಮಧ್ಯೆ ಉಂಟಾಗುವ ತೊಂದರೆ ನಿವಾರಿಸಲು, ತಾಂಡಾ ಶಾಲೆಗಳಲ್ಲಿ ಸೇವೆಸಲ್ಲಿಸುತ್ತಿರುವ ಶಿಕ್ಷಕರಿಗೆ ಗೋರಬೋಲಿ ಭಾಷೆಯ ಕುರಿತು ಅಲ್ಪಾವಧಿ ತರಬೇತಿಯನ್ನು ನೀಡುವುದು.

ದೇಶದಾದ್ಯಂತ ವಾಸಿಸುತ್ತಿರುವ ಲಂಬಾಣಿ ಸಮುದಾಯವನ್ನು ಎಲ್ಲಾ ರಾಜ್ಯಗಳಲ್ಲಿ 'ಬಂಜಾರಾ' ಅಥವಾ 'ಗೋರ ಬಂಜಾರಾ'ವೆಂಬ ಏಕನಾಮಧ್ಯೇಯದಡಿಯಲ್ಲಿ ಗುರುತಿಸಿ ಸಂವಿಧಾನಾತ್ಮಕವಾಗಿ ಯಾವುದಾದರೂ ಒಂದು ಪರಿಶಿಷ್ಟರ ಪಟ್ಟಿಗೆ ಸೇರಿಸಬೇಕು.

ಅಳಿವಿನಂಚಿನಲ್ಲಿರುವ ಲಂಬಾಣಿಗರ ಪಾರಂಪರಿಕ ಉಡುಗೆ-ತೊಡುಗೆಗಳನ್ನು ಸಂರಕ್ಷಿಸಲು ವಿಶೇಷ ವಸ್ತುಸಂಗ್ರಹಾಲಯಗಳನ್ನು ಸ್ಥಾಪಿಸಬೇಕು.

ಭೂ-ರಹಿತ ಕೃಷಿ ಕಾರ್ಮಿಕರಿಗೆ ಸರ್ಕಾರದಿಂದ ಕೃಷಿ ಭೂಮಿ ದೊರಕುವಂತಾಗಬೇಕು.

ಲಂಬಾಣಿಗರು ಪಶುಸಂಗೋಪನೆಗೆ ಹೆಚ್ಚಿನ ಆದ್ಯತೆ ನೀಡುತ್ತಿದ್ದು, ಅವುಗಳ ಸೂಕ್ತ ನಿರ್ವಹಣೆಗೆ ಬೇಕಾದ ವೈಜ್ಞಾನಿಕ ತರಬೇತಿಯನ್ನು ನೀಡಬೇಕು. ಅಲ್ಲದೆ ತಾಂಡಾಗಳಲ್ಲಿ ಹಾಲಿನ ಡೈರಿಗಳನ್ನು ಸ್ಥಾಪಿಸಬೇಕು.

ಶಿಕ್ಷಣ ಕುರಿತು ಪೋಷಕರೊಂದಿಗೆ ಸಮಾಲೋಚನೆ ನಡೆಸಿ ಅವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಸೂಕ್ತ ಪ್ರೋತ್ಸಾಹ ಮತ್ತು ಉತ್ತೇಜನ ನೀಡಬೇಕು.

**೬.೪. ಅಧ್ಯಯನದ ಸಾಧ್ಯತೆಗಳು**

ಕಾಲಾವಧಿಯ ಮಿತಿಯಿಂದ ಲಂಬಾಣಿಗರ ಸಮಾಜೋ, ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ ವನ್ನು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ರಾಜ್ಯಗಳ ಒಂದೊಂದು ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಈ ಅಧ್ಯಯನದ ವ್ಯಾಪ್ತಿಯನ್ನು ವಿಭಾಗಮಟ್ಟಕ್ಕೆ ವಿಸ್ತರಿಸಬಹುದಾಗಿದೆ.

ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನದಂತೆ ಶೈಕ್ಷಣಿಕ, ಸಾಂಸ್ಕೃತಿಕ, ರಾಜಕೀಯ ಸ್ಥಿತಿಗತಿಗಳ ತೌಲನಿಕ ಅಧ್ಯಯನ ಕೈಗೊಳ್ಳಬಹುದಾಗಿದೆ.

ಪ್ರತ್ಯೇಕ ರಾಜ್ಯಗಳ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಸ್ಥಿತಿಗತಿಗಳ ಕುರಿತು ಅಮೂಲಾಗ್ರವಾಗಿ ಅಧ್ಯಯನ ಮಾಡಬಹುದಾಗಿದೆ.

ಲಂಬಾಣಿ ಬುಡಕಟ್ಟಿನೊಂದಿಗೆ ಇತರ ಬುಡಕಟ್ಟುಗಳ ತೌಲನಿಕ ಅಧ್ಯಯನ ಕೈಗೊಳ್ಳುವ ಸಾಧ್ಯತೆ ಗಳಿವೆ.

ಭಾರತದಾದ್ಯಂತ ವಾಸಿಸಿರುವ ಲಂಬಾಣಿ ಸಮುದಾಯವನ್ನು ಕುರಿತು ಅಧ್ಯಯನ ಮಾಡುವವರಿಗೆ ಪ್ರಸ್ತುತ ಮಹಾಪ್ರಬಂಧ ಮಾರ್ಗಸೂಚಿಯಾಗಬಹುದಾಗಿದೆ. ಒಟ್ಟಿನಲ್ಲಿ ಮೂರು ರಾಜ್ಯದ ಮೂರು ಜಿಲ್ಲೆಗಳ 'ಲಂಬಾಣಿಗರ ಸಮಾಜೋ-ಆರ್ಥಿಕ ಸ್ಥಿತಿಗತಿಗಳ ತೌಲನಿಕ ಅಧ್ಯಯನ' ಎಂಬ ವಿಷಯದ ಕುರಿತು ಮಾಹಿತಿ ದೊರಕಿಸಿಕೊಡಬಲ್ಲ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ. ಆದಾಗ್ಯೂ ನನ್ನ ಗಮನಕ್ಕೆ ಬರದೇ ಇರುವ ಸಂಶೋಧನಾಂಶಗಳು ಉಳಿದಿರುವ ಸಾಧ್ಯತೆಗಳಿವೆ. ಆಸಕ್ತ ಸಂಶೋಧಕರು ಹಾಗೂ ಅಧ್ಯಯನಕಾರರು ಈ ಬಗೆಗೆ ಹೆಚ್ಚಿನ ಅಧ್ಯಯನ ಕೈಗೊಳ್ಳಲು ವಿಪುಲವಾದ ಅವಕಾಶಗಳಿವೆ.

## ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ಪ್ರಮುಖ ಮಾಹಿತಿದಾರರು

೩. ಕರ್ನಾಟಕದ ಪರಿಶಿಷ್ಟ ಜಾತಿ ಕಲ್ಯಾಣ ಕಾರ್ಯಕ್ರಮಗಳು

೪. ಆಂಧ್ರ ಪ್ರದೇಶ ಪರಿಶಿಷ್ಟ ಪಂಗಡದ ಕಲ್ಯಾಣ ಯೋಜನೆಗಳು

೫. ಮಹಾರಾಷ್ಟ್ರದ ವಿಮುಕ್ತ ಬುಡಕಟ್ಟು ಪಟ್ಟಿಯ ಕಲ್ಯಾಣ ಯೋಜನೆಗಳು

೬. ಅಧ್ಯಯನಕ್ಕೆ ಆಯ್ಕೆ ಮಾಡಲಾದ ಸೋಲಾಪುರ, ಗುಲಬರ್ಗಾ ಹಾಗೂ ರಂಗಾರೆಡ್ಡಿ ಜಿಲ್ಲೆಗಳ ನಕಾಶೆ

೭. ಪ್ರಶ್ನಾವಳಿ ಮಾದರಿ

೮. ಕ್ಷೇತ್ರಕಾರ್ಯ ಕೈಗೊಂಡ ಅಂಕಿಅಂಶಗಳ ಪಟ್ಟಿ

೯. ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು

ಅಖಿಲ ಕರ್ನಾಟಕ ಬಂಜಾರ ವಿದ್ಯಾರ್ಥಿ ವೇದಿಕೆ, ಕರ್ನಾಟಕ ಬಂಜಾರ ಕೈಪಿಡಿ, ಬೆಂಗಳೂರು, ೧೯೯೭.

ಅನೀಸ್ ಸಿರಾಜ್ ಎಸ್., ಕರ್ನಾಟಕ ಕೈಪಿಡಿ ೨೦೧೧, ಕರ್ನಾಟಕದ ಮುಖ್ಯ ಸಂಪಾದಕರ ಕಾರ್ಯಲಯ ಕರ್ನಾಟಕ ಗೆಜೆಟಿಯರ್, ಬೆಂಗಳೂರು, ೨೦೧೧.

ಆರ್ವೀಯಸ್ ಸುಂದರಂ, ಆಂಧ್ರ ಪ್ರದೇಶದ ಜಾನಪದ (ಅನು), ನ್ಯಾಶನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ ಹೊಸದೆಹಲಿ, ೧೯೭೮.

ಬೆಂಕ್ಯಾನಾಯ್ಕ ಎಸ್., ಲಂಬಾಣಿ ಸಮುದಾಯದ ಥಾಲ್ಯಾ ಪಂಗಡದ ಅಧ್ಯಯನ (ಎಂ.ಫಿಲ್ ಪ್ರಬಂಧ), ಬುಡಕಟ್ಟು ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಬೇಟಗೇರಿ ಪ್ರಹ್ಲಾದ, ಅಡವಿ ಚೆಂಚರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

ಭಾರತಿ ಬಿ ಎಮ್., ಸಮಾಜಶಾಸ್ತ್ರ ಮತ್ತು ಭಾರತದ ಸಮಾಜ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೧೦.

ಭಾಸ್ಕರ ಟಿ ಎಂ., ಸುಡುಗಾಡು ಸಿದ್ಧರು : ಒಂದು ಅಧ್ಯಯನ, ಮುರುಗ ಪ್ರಕಾಶನ, ಗುಲ್ಬರ್ಗಾ, ೨೦೦೦.

ಬೋರಲಿಂಗಯ್ಯ ಹಿ ಚಿ., ಕುಣಬಿಯರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಬೋರಲಿಂಗಯ್ಯ ಹಿ ಚಿ ಹಾಗೂ ಪ್ರಭಾಕರ ಎ ಎಸ್., ಬುಡಕಟ್ಟು ಅಧ್ಯಯನ–೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

——, ಬುಡಕಟ್ಟು ಅಧ್ಯಯನ–೨, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

ಚಿದಾನಂದಮೂರ್ತಿ ಎಮ್., ಭಾಷಾ ವಿಜ್ಞಾನದ ಮೂಲ ತತ್ವಗಳು, ಡಿ ವಿ ಕೆ ಮೂರ್ತಿ ಪ್ರಕಾಶಕರು, ಮೈಸೂರು, ೨೦೦೮.

ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಮತ್ತು ಸಾವಿನ ನಡುವೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ಗಂಗಾಧರ ದೈವಜ್ಞ, ಗೊಂದಲಿಗರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಗಂಗಾನಾಯಕ ಕೆ ಎಸ್., ಲಂಬಾಣಿ ಇತಿಹಾಸ ಮತ್ತು ಸಂಸ್ಕೃತಿ, ಪ್ರಸಾರಾಂಗ ಮಾನಸ ಗಂಗೋತ್ರಿ, ಮೈಸೂರು, ೨೦೦೭.

ಗವರ್ನಮೆಂಟ ಆಫ್ ಕರ್ನಾಟಕ ಷೆಡ್ಯೂಲ್ಡ ಕ್ಯಾಸ್ಟ ಆ್ಯಂಡ್ ಶೆಡ್ಯೂಲ್ಡ ಟ್ರೈಬ್ಸ್ ಆರ್ಡರ್ಸ (ಅಂಡರ ಸೆಕರೆಟರಿ: ಕೆ ಕೇಶವರಾವ್), ಬೆಂಗಳೂರು. ಸೊಷಿಯಲ್ ವೆಲ್‌ಫೇರ್ ಆ್ಯಂಡ ಲೇಬರ ಡಿಪಾರ್ಟಮೆಂಟ, ೧೯೭೭.

ಹಕಾರಿ ದೇವೇಂದ್ರಕುಮಾರ ಸಿ., ಡೊಂಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

ಹಕಾರಿ ದೇವೇಂದ್ರಕುಮಾರ ಸಿ ಹಾಗೂ ಸಂಧ್ಯಾರೆಡ್ಡಿ, ಗ್ರಾಮೀಣ ಉಡುಗೆ ತೊಡುಗೆಗಳು (ಗ್ರಾಮೀಣ ಸಂಸ್ಕೃತಿ ಮಾಲೆ-೨), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.

——, ಗ್ರಾಮೀಣ ವೃತ್ತಿಗಳು (ಗ್ರಾಮೀಣ ಸಂಸ್ಕೃತಿ ಮಾಲೆ-೧), ಕನ್ನಡ ಪುಸ್ತಕ ಪ್ರಾಧಿಕಾರ ಪಂಪ ಮಹಾಕವಿ ರಸ್ತೆ ಚಾಮರಾಜ ಪೇಟೆ, ಬೆಂಗಳೂರು, ೨೦೦೦.

ಹಾಲಪ್ಪ ಎನ್., ಭಾರತೀಯ ಆಡಳಿತ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೭.

ಹಾವನೂರು ಎಲ್ ಜಿ., ಕರ್ನಾಟಕ ಬ್ಯಾಕವರ್ಡ ಕ್ಲಾಸ ಕಮಿಷನ ರಿಪೋರ್ಟ, ವ್ಯಾಲ್ಯೂಂ ೨, ೧೯೭೫.

ಹಿಂಗಮಿರೆ ಬುದ್ದಣ್ಣ, ಜಿಪ್ಸಿಗಳು, ಯುಗಧ್ವನಿ ಪ್ರಕಾಶನ, ಧಾರವಾಡ, ೧೯೮೩.

ಹಿರೇಮಠ ಎಸ್ ಜಿ., ಭಾರತೀಯ ಸಮಾಜದ ಅಧ್ಯಯನ, ಪ್ರದೀಪ ಪ್ರಕಾಶನ, ಸಿಂದಗಿ, ೨೦೦೭.

ಎಚ್ಚಾರ್ಕೆ, ಅಭಿವೃದ್ಧಿ ಅರ್ಥಶಾಸ್ತ್ರ, ಸಪ್ನಾ ಬುಕ್ ಹೌಸ್, ಬೆಂಗಳೂರು, ೨೦೦೦.

——, ಭಾರತದ ಆರ್ಥಿಕ ವ್ಯವಸ್ಥೆ, ಸಪ್ನಾ ಬುಕ್ ಹೌಸ್, ಬೆಂಗಳೂರು, ೨೦೦೦.

——, ಕರ್ನಾಟಕ ಆರ್ಥಿಕತೆ, ಸಪ್ನಾ ಬುಕ್ ಹೌಸ್, ಬೆಂಗಳೂರು, ೨೦೦೦.

ಜಯಶ್ರೀ, ಲಿಂಗ ವ್ಯವಸ್ಥೆ ಮತ್ತು ಸಮಾಜ, ದೂರಶಿಕ್ಷಣ ಕೇಂದ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಜೋಶಿ ಗುರುನಾಥ ಹಾಗೂ ಅಶ್ವಥನಾರಾಯಣರಾವ್ ಬಿ., ಕನ್ನಡ-ಕನ್ನಡ ಹಿಂದಿ ಶಬ್ದಕೋಶ, ಬಸವೇಶ್ವರ ಪುಸ್ತಕ ಭಂಡಾರ, ಹುಬ್ಬಳ್ಳಿ, ೧೯೫೭

ಕಡೆತೋಟದ, ಎನ್ ಆರ್., ಧರ್ಮ-ಸಂಸ್ಕೃತಿ-ಸಮಾಜ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೧.

ಕಾಳೇಗೌಡ ನಾಗವಾರ ಮತ್ತು ಹುಚ್ಚಪ್ಪ ಮಾಸ್ತರ ಎಸ್., ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦.

ಕರ್ನಾಟಕ ಅಂಕಿ ಅಂಶಗಳ ನೋಟ-೨೦೦೯-೧೦, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ೨೦೧೧.

ಕರ್ನಾಟಕ ರಾಜ್ಯಪತ್ರ ಜನೇವರಿ, ೦೪, ೨೦೦೬

ಕರ್ನಾಟಕ ರಾಜ್ಯಪತ್ರ ಜನೇವರಿ, ೧೭, ೨೦೧೧

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಜಾತಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಕುರಿತು ಹೊರಡಿಸಿದ ಪ್ರಮುಖ ಆದೇಶಗಳ ಸಂಗ್ರಹ (೧೯೫೦ ರಿಂದ ಫೆಬ್ರುವರಿ ೨೦೦೯) ಸಮಾಜ ಕಲ್ಯಾಣ ಇಲಾಖೆ ಆಯುಕ್ತರವರ ಕಛೇರಿ ೫ ನೇ ಮಹಡಿ ಬಹುಮಹಡಿಗಳ ಕಟ್ಟಡ, ಬೆಂಗಳೂರು, ೨೦೦೯.

ಖಂಡೋಬಾ ಪಿ ಕೆ., ಲಂಬಾಣಿ ಸಂಸ್ಕೃತಿ, ದಿ. ತೇಜಸಿಂಗ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗಾ, ೧೯೮೮.

——, ತಾಂಡಾ ಸಂಸ್ಕೃತಿ, ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೧೯೯೦.

——, ಕರ್ನಾಟಕ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ, ದಿ ತೇಜಸಿಂಗ ರಾಠೋಡ ಮೆಮೋರಿಯಲ್ ಟ್ರಸ್ಟ್ ಗುಲ್ಬರ್ಗಾ, ೧೯೯೧.

——, ಸುಡುಗಾಡು ಸಿದ್ಧರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

——, ಕರ್ನಾಟಕದ ಬುಡಕಟ್ಟಿನ ಲಂಬಾಣಿಗಳು, ಶ್ರೀ ಸಿದ್ದಲಿಂಗೇಶ್ವರ ಬುಕ್ ಡೀಪೋ ಮೇನ ರೋಡ, ಗುಲ್ಬರ್ಗಾ, ೨೦೦೦.

——, ಸಂಸ್ಕೃತಿ ಶೋಧ, ಸಂಗೀತ ಪಬ್ಲಿಕೇಷನ್ ಡಾ. ಪಿ.ಕೆ. ಖಂಡೋಬಾ, ಸ್ಟಾಪ್ ಕ್ವಾಟರ್ಸ್ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫.

——, ಲಂಬಾಣಿ ಬುಡಕಟ್ಟಿನ ದೃಶ್ಯ ಮತ್ತು ಪ್ರದರ್ಶನ ಕಲೆಗಳು, ವಿ ಎನ್ ಮಲ್ಲಿಕಾರ್ಜುನ ಸ್ವಾಮಿ ಆಡಳಿತಾಧಿಕಾರಿ ಕನ್ನಡ ಪುಸ್ತಕ ಪ್ರಾಧಿಕಾರ ಜೆ ಸಿ ರಸ್ತೆ, ಬೆಂಗಳೂರು, ೨೦೦೬.

ಕೋರನ ಸರಸ್ವತಿ ಪ್ರಕಾಶ, ಕೊಡಗು ಗೌಡ ಸಮುದಾಯ, ಕೆ ಎಸ್ ಮುದ್ದಪ್ಪ ಸ್ಮಾರಕ ಟ್ರಸ್ಟ್ ಕೃಷ್ಣಾಪುರದೊಡ್ಡಿ, ಬೆಂಗಳೂರು, ೨೦೧೦.

ಕೃಷ್ಣ ಬಿ ಆರ್., ಮೂಲಭೂತ ಸಮಾಜಶಾಸ್ತ್ರ, ವಿದ್ಯಾನಿಧಿ ಪ್ರಕಾಶನ, ಧಾರವಾಡ, ೨೦೧೨.

ಕೃಷ್ಣಯ್ಯಗೌಡ ಎಚ್ ಆರ್., ಕೃಷಿ ಅರ್ಥಶಾಸ್ತ್ರ, ವಿಧ್ಯಾನಿಧಿ ಪ್ರಕಾಶನ, ಗದಗ, ೨೦೦೪.

——, ಭಾರತೀಯ ಅರ್ಥಶಾಸ್ತ್ರ(ಆರ್ಥಿಕತೆ ಮತ್ತು ಆರ್ಥಿಕ ನೀತಿ), ಸ್ಪಂದನ ಪ್ರಕಾಶನ, ಬೆಂಗಳೂರು, ೨೦೧೨.

ಕುಮಾರ ವೆಂಕಣ್ಣ, ಭಾರತದ ಜನಪದ ನೃತ್ಯಗಳು, ಅರುಣೋದಯ ಲೈಬ್ರರಿ, ಬೆಂಗಳೂರು, ೧೯೫೩.

ಲಕ್ಷ್ಮಿಪತಿ ಸಿ ಜೆ., ಆರಂಭಿಕ ಸಮಾಜಶಾಸ್ತ್ರದ ಚಿಂತನೆಗಳ, ದೂರಶಿಕ್ಷಣ ಕೇಂದ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಲಮಾಣಿ ಗಣಪತಿ ಕೆ., ಲಂಬಾಣಿಗರ ಗೋವಾ ವಲಸೆ (ಪಿಹೆಚ್‌ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

ಮಹಾದೇವಿಬಾಯಿ, ಚಾಮರಾಜನಗರ ಸುತ್ತಿನ ಲಂಬಾಣಿ ಸಂಸ್ಕೃತಿ, ಕೀರ್ತಿ ಪ್ರಕಾಶನ, ಚಾಮರಾಜ ನಗರ, ೨೦೦೭.

ಮಹಮ್ಮದ ಪೀರ್., ಸಮಾಜಶಾಸ್ತ್ರೀಯ ಸಿದ್ಧಾಂತಗಳು, ಸಂಚಲನ ಪ್ರಕಾಶನ, ದಕ್ಷಿಣ ಕನ್ನಡ, ೨೦೦೪.

ಮಹೇಶ್ವರಯ್ಯ ಎಚ್ ಎಂ., ಮಹಾರಾಷ್ಟ್ರ ಜಾನಪದ (ಬುಡಕಟ್ಟು ಅಧ್ಯಯನ), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭.

ಮಲ್ಲಪ್ಪ ಪಿ., ಕರ್ನಾಟಕದ ಭೂಗೋಳಶಾಸ್ತ್ರ, ಚೇತನ ಬುಕ್ ಹೌಸ್, ಮೈಸೂರು, ೨೦೦೯.

ಮಲ್ಲಿಕಾರ್ಜುನ ಭೀಮರಾಯ, ಕರ್ನಾಟಕ ವಿಮುಕ್ತ ಬುಡಕಟ್ಟುಗಳ ಸಾಮಾಜಿಕ ಅಧ್ಯಯನ (ಪಿ ಎಚ್ ಡಿ ಸಂಶೋಧನಾ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

ಮೇತ್ರಿ ಕೆ ಎಂ., ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ಮೇತ್ರಿ ಕೆ ಎಂ, ಗುರುಲಿಂಗಯ್ಯ ಎಂ., ಅಲಕ್ಷಿತರ ಸಮಾಜಶಾಸ್ತ್ರ, ದೂರಶಿಕ್ಷಣ ಕೇಂದ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ನಾಯಕ ಬಾಲಾ ಕೆ., ಬಂಜಾರಾ ಧರ್ಮದ ಸಾಮಾನ್ಯ ಜ್ಞಾನ, ಶ್ಯಾಮಲಾ ಪ್ರಕಾಶನ, ಬೆಂಗಳೂರು, ೧೯೯೬.

ನಾಯಕ ಬೆನಕನಹಳ್ಳಿ ಜಿ., ಲಂಬಾಣಿಗರ ಜನಪದ ಗೀತೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧.

ನಾಯಕ ಡಿ ಬಿ., ಲಂಬಾಣಿ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

_____, ಲಂಬಾಣಿ ಜನಪದ ಸಾಹಿತ್ಯ, ಮೋಹನ ನಾಯಕ ಬಂಜಾರ ಪ್ರಕಾಶನ ಹೌಸ್ ನಂ. ೪೪ ಶಂಕರ ಕೃಪಾ ಸದಾಶಿವನಗರ, ಗುಲ್ಬರ್ಗಾ, ೨೦೦೦.

_____, ಗಿರಿಜನ ಸಿರಿ, ಡಾ ಪಿ ಕೆ ಖಂಡೋಬಾ ಅಭಿನಂದನಾ ಸಮಿತಿ, ಕನ್ನಡ ಅಧ್ಯಯನ ಸಂಸ್ಥೆ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೩.

ನಾಯಕ ಹಾ ಮಾ., ಕನ್ನಡ ರತ್ನಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭.

ನಾಯಕ ಲಲಿತಾ ಬಿ ಟಿ., ಬಂಜಾರಾ ಹೆಜ್ಜೆ ಗುರುತುಗಳು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೯.

ನಾಯಕ ಮಲ್ಲಿಕಾರ್ಜುನ ಬಿ ಹೆಚ್., ಶ್ರೀ ಸೇವಾಲಾಲ ಚರಿತ್ರೆ, ಯುಗೇಶ್ವರಿ ಪ್ರಕಾಶನ ಕೋಮಾರನಹಳ್ಳಿ ತಾಂಡಾ ಹಡಗಲಿ ತಾಲೂಕು ಬಳ್ಳಾರಿ ಜಿಲ್ಲೆ, ೨೦೦೨.

ನಾಯಕ ರೂಪ್ಲಾ ವೈ., ರಂಗುರಂಗಿನ ಬಂಜಾರ(ಲಂಬಾಣಿ) ಜನಾಂಗ, ಎಸ್‌ಬಿಸಿ ಲಾ ಪಬ್ಲಿಕೇಶನ್ಸ್, ಬೆಂಗಳೂರು, ೨೦೦೧.

ನಾಯಿಕ ಶಿವಾನಂದ (ಅನು), ಗೋರಾಭಾಯೀರ ೯೦೦ ವರ್ಷೆರ ಪರಲ ಇತಿಹಾಸ, ಬಸವನ ಬಾಗೇವಾಡಿ ವಿಜಾಪೂರ ಜಿಲ್ಲೆ, ೧೯೭೧.

ನಾಯಿಕ ಬೆನಕನಹಳ್ಳಿ ಜಿ., ಲಂಬಾಣಿಗರ ಜನಪದ ಗೀತೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧.

ನಾಯ್ಕ ರಾಜು ಎಸ್., ಲಂಬಾಣಿಗರಲ್ಲಿ ರಾಜಕೀಯ ಅರಿವು, ಆತ್ಮಜ್ಯೋತಿ ಪ್ರಕಾಶನ ಜ್ಞಾನ ಜ್ಯೋತಿ ನಗರ, ಬೆಂಗಳೂರು, ೨೦೦೬

ನಾಯ್ಕ ಶೇಖರ, ಕರ್ನಾಟಕದ ಲಂಬಾಣಿಗಳ ಇತಿಹಾಸ ಮತ್ತು ಸಂಸ್ಕೃತಿ, ದಿನಕರ ಪ್ರಕಾಶನ ನಾಗರಭಾವಿ, ಬೆಂಗಳೂರು, ೨೦೦೨.

ನೆಲ್ಲಿಸರ ಬಸವರಾಜ, ಲಂಬಾಣಿಗರು ಹಾಗೂ ಬಗ್ಗರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.

———, ಲಂಬಾಣಿ, ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು, ೧೯೮೦.

ನುಗಡೋಣಿ ಅಮರೇಶ, ಕನ್ನಡ ಸಂಶೋಧನೆಯ ವೈಧಾನಿಕತೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

ಪಾಟೀಲ ಎಮ್ ಬಿ., ಕರ್ನಾಟಕ ರಾಜ್ಯ ಗೆಜೆಟಿಯರ ಗುಲ್ಬರ್ಗಾ ಜಿಲ್ಲೆ, ಮೆ॥ ಗೀತಾಂಜಲಿ ಪ್ರಿಂಟರ್ಸ್, ಬೆಂಗಳೂರು, ೧೯೯೭.

ಪವಾರ ಜಗನ್ನಾಥ ಲಕ್ಷ್ಮಣ, ಗೋರೂರೋ ಗೀದ, ವೀರಭದ್ರೇಶ್ವರ ಭಜನಾ ಮಂಡಳಿ ರಾಜನಾಳ ತಾಂಡಾ, ಜಿಲ್ಲೆ ಬಿಜಾಪೂರ, ೧೯೬೯.

ಪವಾರ ಹರಿಲಾಲ, ಲಂಬಾಣಿಗರಲ್ಲಿ ಮದುವೆ ಸಂಪ್ರದಾಯಗಳು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

——, ಬೆಂಕಿಯಲ್ಲಿ ಕಮರಿದ ಹೂವು, ಪ್ರೀತಮ್ ಪ್ರಕಾಶನ, ಡಾ ಹರಿಲಾಲ ಪವಾರ ಬಿ., ೬ ಕ್ವಾಟರ್ಸ್ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩.

——, ಬದುಕೊಂದು ಚಿತ್ತಾರ ಲಂಬಾಣಿ ಬುಡಕಟ್ಟು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೭.

ಪ್ರಭಾಕರ ಎ ಎಸ್., ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಡಾ ಎಚ್ ಸಿ ಹಿರೇಮಠ, ನಿರ್ದೇಶಕರು ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೪.

——, ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬.

ಪ್ರಸಾದ್ ಕೇಶವನ್ ಕೆ., ಬುಂಡೆಬೆಸ್ತರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಪ್ರಶಾಂತ ಹೆಚ್ ಡಿ., ಲಂಬಾಣಿಗಳಲ್ಲಿ ಸಾಮಾಜಿಕ ಬದಲಾವಣೆ: ಒಂದು ಸಮಾಜಶಾಸ್ತ್ರೀಯ ಅಧ್ಯಯನ (ಪಿಹೆಚ್‌ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ,

ಪುರೋಹಿತ ಮಂದಾಕಿನಿ, ಗ್ರಾಮೀಣ ಉಡುಗೆ ತೊಡುಗೆಗಳು, ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.

ರಾಜಶೇಖರಪ್ಪ ಎಮ್., ಚಿತ್ರದುರ್ಗ ಜಿಲ್ಲೆಯ ಗಾಣಿಗ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ (ಪಿ ಹೆಚ್ ಡಿ ಸಂಶೋಧನಾ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

ರಾಮೇಗೌಡ ಎ., ಸಾಮಾಜಿಕ ಸಂಶೋಧನಾ ವಿಧಾನ, ದೂರಶಿಕ್ಷಣ ಕೇಂದ್ರ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ರಮೇಶ ಸ ಚಿ., ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

ರಾಠೋಡ ಶಂಕರ, ಆವೋರೆ ಗೀತಗಾಮಾ, ಸಾಹಿತ್ಯ ಪ್ರಕಾಶನ ಪಾಶ್ವಪೂರ ಹುಕ್ಕೇರಿ, ಬೆಳಗಾಂ ಜಿಲ್ಲೆ, ೧೯೮೧.

ಸಣ್ಣರಾಮ, ಲಂಬಾಣಿ ಗಾದೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨.

——, ಲಂಬಾಣಿ ಸಂಸ್ಕೃತಿ, ಡಾ ಸಣ್ಣರಾಮ, ರೀಡರ್, ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ೧೯೯೯.

ಶಂಕರನಾರಾಯಣ ತೀ ನಂ., ಕಾಡುಗೊಲ್ಲರ ಸಂಪ್ರದಾಯಗಳು ಹಾಗೂ ನಂಬಿಕೆಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೨.

ಶೇಷಗಿರಿರಾವ್ ಎಲ್ ಎಸ್., ಚೆನ್ನಬಸಪ್ಪ ಗೊ ರು., ಚಂದರಶೇಖರ ರಾ ನಂ., ಕನ್ನಡ–ಕನ್ನಡಿಗ– ಕರ್ನಾಟಕ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೬.

ಶ್ರೀನಿವಾಸ ಎಲ್., ಪರಿವರ್ತನೆಯ ಹಾದಿಯಲ್ಲಿ ಬುಡಕಟ್ಟು ಸಮಾಜಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಸುಬ್ರಮಣ್ಯ ಜಿ., ಕೈಗಾರಿಕಾ ಸಮಾಜಶಾಸ್ತ್ರ, ಸಪ್ನಾ ಬುಕ್‌ಹೌಸ, ಬೆಂಗಳೂರು, ೨೦೦೬.

ಸುಂಕಾಪುರ ಎಮ್ ಎಸ್., (ಸಾ) ಜೀವನ ಜೋಕಾಲಿ ಹೋಳಿ ಹಾಡುಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪.

ಸುರೇಶ ಕೆ ಎಮ್., ಭಾರತದ ಸಂವಿಧಾನ, ಸ್ಪರ್ಧಾ ವಿಜೇತ, ಬೆಂಗಳೂರು, ೨೦೧೦.

ಉಮೇಶ ಕೆ., ಕರ್ನಾಟಕ ಮೇದ ಬುಡಕಟ್ಟಿನ ಸಮಾಜಶಾಸ್ತ್ರೀಯ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ವಿಲಿಯಂ ಎಫ್ ಆಗ್ಬರ್ನ್, ಮೆಯರ್ ಎಫ್ ನಿಮ್ಕಾಫ್ (ಅನುವಾದ ಮಲ್ಲಿನಾಥಯ್ಯ ಡಿ ಹೆಚ್), ಸಮಾಜಶಾಸ್ತ್ರ ಕೈಪಿಡಿ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ೧೯೮೫

**ಮರಾಠಿ ಮತ್ತು ಹಿಂದಿ ಭಾಷೆಯ**

ಬಾಬರ ಸರೋಜಿನಿ (ಅನು), ಮಹಾರಾಷ್ಟ್ರದ ಜನಪದ ಸಾಹಿತ್ಯ, ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ, ೧೯೮೦.

ಬ್ಯಾತನಾಳ ಎಸ್ ಎಸ್., ಮರಾಠಿ ಲೋಕ ಸಾಹಿತ್ಯ, ಕನ್ನಡ ಪರಿಷತ್ತು ಬೆಂಗಳೂರು, ೧೯೮೧.

ಭಾಗವತ ದುರ್ಗಾ, ಲೋಕ ಸಾಹಿತ್ಯ, ಮಕರಂದ ಸಾಹಿತ್ಯ ಪ್ರಕಾಶನ, ಮುಂಬೈ, ೧೯೬೭.

ಜಾಧವ ಭಾಯಿ ಪ್ರೇಮಸಿಂಹ, ಬಂಜಾರ ಜಾಗೃತಿ ಕಿ ರೇಖಾಯೇ, ಭಾರತೀಯ ಬಂಜಾರಾ ಸಾಂಸ್ಕೃತಿಕ ಸಾಹಿತ್ಯ ಪರಿಷದ್, ಔರಂಗಾಬಾದ್, ೧೯೯೦.

ಚಮನಲಾಲ್ (ಅನುವಾದಕ. ಸತ್ಯಪಾಲ ರೂಹೇಲಾ), ಜಿಪ್ಸಿ ಭಾರತ ಕೀ ವಿಸ್ಮೃತ ಸಂತತಿ ಪ್ರಕಾಶನ್ ವಿಭಾಗ ಸುಚನಾ ಔರ್ ಪ್ರಸಾರಣಾ ಮಂತ್ರಾಲಯ ಭಾರತ ಸರಕಾರ, ನಯಿ ದಿಲ್ಲಿ, ೧೯೮೪.

ಲಾಲ ಕೆ ಎಸ್., ಹಿಂದೂಸ್ಥಾನ ಕೆ ನಿವಾಸಿಯೊ ಕಾ ಜೀವನ ಔರ್ ಪರಿಸ್ಥಿತಿಯಾ, ಭಾರತ ಸರಕಾರ ಸುಚನಾ ತಥಾ ಪ್ರಸಾರಣಾ ವಿಭಾಗ, ೧೯೯೬.

ಲೋಹಿಯಾ ಬಜರಂಗ ಲಾಲ್, ರಾಜಸ್ಥಾನ ಕಿ ಜಾತಿಯಾ, ಬಜರಂಗ ಲಾಲ್ ಲೋಹಿಯಾ, ಕಲಕತ್ತಾ, ೧೯೫೪.

ಲಮಾಣಿ ಹೆಚ್ ಡಿ., ಕರ್ನಾಟಕ ಕೆ ಲಮಾಣಿ ಜಾನಪದ ಗೀತೋಂಕಾ ಸಾಹಿತ್ಯಿಕ ಅಧ್ಯಯನ (ಪಿಹೆಚ್‌ಡಿ ಮಹಾಪ್ರಬಂಧ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

ಮಾಂಡೆ ಪ್ರಭಾಕರ, ಲೋಕ ಸಾಹಿತ್ಯಚೆ ಅತ ಪ್ರವಾಹ, ಕಾಂಟಿನೆಂಟಲ ಪ್ರಕಾಶನ, ಪುಣೆ, ೧೯೭೫.

ಪಟೇಲ ಬಳಿರಾಮ್, ಗೋರ ಬಂಜಾರೆ ಲೋಕಾಚಾ ಇತಿಹಾಸ, ದೇಶಮುಖ ಅಂಡ್ ಕಂಪನಿ, ಅಮರಾವತಿ, ೧೯೩೬.

ಪಾಟೀಲ ವಿ ಎಸ್., ಅಪಲಾ ಸೋಲಾಪುರ ಜಿಲ್ಲಾ, ವಿದ್ಯಾ ಪಬ್ಲಿಕೇಶನ್, ಲಾತೂರ, ೨೦೧೧.

ಪಟೇಲ ಬಳಿರಾಮ್, ಗೋರ ಬಂಜಾರೆ ಲೋಕಾಚಾ ಇತಿಹಾಸ, ದೇಶಮುಖ ಅಂಡ್ ಕಂಪನಿ, ಅಮರಾವತಿ, ೧೯೩೬.

ಪವಾರ ರಾಮಕೋಟಿ ವಿ., ಬಂಜಾರ ಸಮಾಜ ಐತಿಹಾಸಿಕ ಪರಿಪ್ರೇಕ್ಷ, ಜವಾಹರ ಪುಸ್ತಕಾಲಯ ಹಿಂದಿ ಪುಸ್ತಕ ಪ್ರಕಾಶನ ಏವ್ ವಿತರಕ, ಮಯೂರಾ (ಉ.ಪ್ರ), ೨೦೧೨.

ಪವಾರ ರುಕ್ಮಿಣಿ, ಬಂಜಾರಾ ಲೋಕ ಜೀವನ ಪದ್ಧತಿ, ಕೆ ಎಸ್ ಅಟ್ಕರೆ, ಕೈಲಾಸ ಪಬ್ಲಿಕೇಶನ್, ಔರಂಗಾಬಾದ, ೨೦೦೬.

ರಾಠೋಡ ಆತ್ಮರಾಮ್, ಶ್ರೀ ಸಂತ ಸೇವಾದಾಸ ಲೀಲಾ ಚರಿತ, ಅರವಿಂದ ಪ್ರಕಾಶನ, ಪುಸದ, ೧೯೭೩.

ರಾಠೋಡ ಆತ್ಮರಾಮ್ ಕನಿರಾಮ, ತಾಂಡಾ, ರಾಜದೂತ ಪ್ರಕಾಶನ, ಯವತಮಾಳ, ೨೦೦೨.

ರಾಠೋಡ ಮೋತಿರಾಜ, ಬಂಜಾರ ಸಂಸ್ಕೃತಿ, ಮೋತಿರಾಜ ರಾಠೋಡ ನಾಯಕ ನಗರ ಔರಂಗಾಬಾದ, ೧೯೭೬

——, ಗೋರಮಾಟಿ, ಬಂಜಾರ ಸಾಂಸ್ಕೃತಿಕ ಸಾಹಿತ್ಯ ಪರಿಷದ್ ಪ್ರೇ. ಭಾಯಿ ಪ್ರೇಮಸಿಂಗ್ ಜಾಧವ, ಛೋಟಾ ಮಾರುತಿ ಮಂದಿರ ಸಮೋರ, ಗ.ನ. ೬ ಸಂಜಯ ನಗರ, ಔರಂಗಬಾದ್, ೧೯೯೮.

——, ಗೋರ್ ಬಂಜಾರ ವಂಶಾಚ ಇತಿಹಾಸ್, ಸಾ. ಲತಾದೇವಿ, ಭೀಮಸೇನ ನಾಯಿಕ್ ಮುಖ್ಯ, ಪದ್ಮಶ್ರೀ ರಾಮಸಿಂಗ ಭಾನಾವತಿ ಮೆಮೋರಿಯಲ್ ಟ್ರಸ್ಟ್ ೩೦೩ ಗಜರಾಜ ಹಾ ಸೋಸಾ, ಕೋಪರಿ ಠಾಣೆ ಪೂರ್ವ, ೨೦೦೧.

ರಾಠೋಡ ರಮೇಶ, ಬಂಜಾರ ಲೋಕಗೀತ, ರವೀಶ ಪ್ರಕಾಶನ ೨೦ ವಿಜ್ಞಾನ ನಗರ ಮಾನೆವಾಡಾ, ನಾಗಪುರ, ೨೦೦೨.

ರಾಠೋಡ ಸುಭಾಷ ವಿ., ಗೋರ ಬಂಜಾರ ಕೇಣಾವಟ, ಬಂಜಾರ ಸಂಪರ್ಕ ಕಾರ್ಯಾಲಯ, ಠಾಣೆ, ೨೦೧೧.

ಠಾಕೂರ ಕೇಶವಕುಮಾರ, ಟಾಂಡಾ ಲಿಖಿತ ರಾಜಸ್ಥಾನ ಕಾ ಇತಿಹಾಸ, ಆದರ್ಶ ಹಿಂದಿ ಪುಸ್ತಕಾಲಯ, ಇಲಹಾಬಾದ, ೧೯೬೫.

ತಿವಾರಿ ಭೋಲೆನಾಥ, ಭಾಷಾ ವಿಜ್ಞಾನ ಶಬ್ಧಕೋಶ, ಜ್ಞಾನಮಂಡಲ, ವಾರಣಾಸಿ, ೧೯೬೪.

ಸರದಾರ ಗಂ ವಾ., ಮಹಾರಾಷ್ಟ್ರ ಜೀವನ ಖಂಡ ಭಾಗ ಪ್ರಥಮ, ಜೋಶಿ ಲೋಖಂಡೆ ಪ್ರಕಾಶಕ, ಪುಣೆ, ೧೯೬೦.

ವಾಮನ ವಿಧ್ಯಾಧರ, ಮಿಡೆ ಮರಾಠಿ ಭಾಷೋಂಚಾ ಸರಸ್ವತಿ ಶಬ್ದಕೋಶ, ಚಿತ್ರಶಾಲಾ ಪ್ರೆಸ್, ಪುಣೆ, ೧೯೩೦.

ವಾಟಚಾಲ, ಸಾಮಾಜಿಕ ನ್ಯಾಯಾಚ್ಯಾ ದಿಶೇನೆ, ಸಾಮಾಜಿಕ ನ್ಯಾಯ ವ ವಿಶೇಷ ಸಹಾಯ ವಿಭಾಗ, ಮಹಾರಾಷ್ಟ್ರ ಶಾಸನ, ೨೦೧೨.

**ತೆಲುಗು ಭಾಷೆಯ**

ಭೂಕ್ಯ ತಿರುಪತಿ, ಲಂಬಾಡಿ ಭಾಷಾ ಸಾಹಿತ್ಯಾಲಪೈ ತೆಲುಗು ಭಾಷಾ ಪ್ರಭಾವಂ, (ಎಂ ಫಿಲ್ ಸಂಶೋಧನಾ ಪ್ರಬಂಧ) ಹೈದ್ರಾಬಾದ್ ವಿಶ್ವವಿದ್ಯಾಲಯ, ಹೈದ್ರಾಬಾದ್, ೨೦೦೫.

ಜನವಾಲ ಶಂಕರಯ್ಯ, ತೆಲುಗು ಲಂಬಾಡಿಲ ಗೇಯ ಸಾಹಿತ್ಯಂ, ನವೋದಯ ಬುಕ್ ಹೌಸ್, ಹೈದ್ರಾಬಾದ್, ೨೦೦೧.

ಜೀವಲಾನಾಯಕ ನೂನವತ್, ಬಂಜಾರಾ(ಲಂಬಾಡಿ) ವಂಶಾವಳಿ, ಗಾಂಧೀಜಿ ಸುಗಾಲಿ ಸೇವಕ ಪಬ್ಲಿಕೇಷನ್ಸ್, ಪಿಡುಗುರಾಳ್ಳ, ೧೯೯೦.

ಗೋನಾನಾಯಕ ಎಮ್., ಸುಗಾಲಿ ಸಂಸ್ಕೃತಿ ಭಾಷಾ ಸಾಹಿತ್ಯಲು, ಲಕ್ಷ್ಮೀ ಪಬ್ಲಿಕೇಷನ್ಸ್, ಹೈದ್ರಾಬಾದ್, ೨೦೦೨.

_____, ಭಾರತ ದೇಶಯೋ ಬಂಜಾರಾಲು, ತೆಲುಗು ಅಕಾಡೆಮಿ, ಹೈದ್ರಾಬಾದ್, ೨೦೦೫.

ನಾಯಕ ಚೀನಿಯಾ ಬಿ., ಬಂಜಾರ ಚರಿತ್ರ(ಸಂಸ್ಕೃತಿ ಪ್ರಗತಿ), ಶ್ರೀಮತಿ ಬಿ ಲಕ್ಷ್ಮೀಬಾಯಿ ಶ್ರೀ ಹಾಥಿರಾಂ ಬಾವಾಜೀ ಪಬ್ಲಿಕೇಶನ್ಸ್, ಅನಂತಪುರಂ, ೧೯೯೦.

_____, ಬಂಜಾರಾ, ಡೀಮ್ ಸ್ಟೇಟ್ ಸೇವಾಗಡ್ ಹಾಥಿರಾಂ ಬಾವಾಜಿ ಪಬ್ಲಿಕೇಷನ್ಸ್, ಅನಂತಪುರಂ, ೨೦೦೩.

ನುಣಾವತ್ ರಾಮಬಾಬು, ಲಂಬಾಡಿ ತೆಲುಗು ಜಾತಿಯಾಲಾ ತುಲನಾತ್ಮಕ ಪರಿಶೀಲನ, (ಎಂ.ಫಿಲ್ ಸಂಶೋಧನಾ ಪ್ರಬಂಧ) ಹೈದ್ರಾಬಾದ್ ವಿಶ್ವವಿದ್ಯಾಲಯ ಹೈದ್ರಾಬಾದ್, ೨೦೦೮.

ಪದ್ಮಾವತಿ ಬಾಯಿ, ಕುರ್ರ ತೆಲುಗು ಕುರ್ರ ತೆಲುಗು ಸಾಮತಲು-ಬಂಜಾರ ಸಾಮೆತಲು ತುಲನಾತ್ಮಕ

ಪರಿಶೀಲನ, ಪಿ.ಎಚ್.ಡಿ ಸಿದ್ಧಾಂತಗ್ರಂಥ ಹೈದ್ರಾಬಾದ್ ವಿಶ್ವವಿದ್ಯಾಲಯ, ಹೈದ್ರಾಬಾದ್, ೨೦೦೫.

ಪ್ರಸಾದರಾವು ಪಿ ವಿ ಕೆ., ಆಂಧ್ರ ಪ್ರದೇಶ ಸಮಗ್ರ ಚರಿತ್ರ, ಎಮೆಸ್ಕೊ ಬುಕ್ಸ್, ವಿಜಯವಾಡ, ೨೦೧೧.

ರಾಮಾವತ ಕುಸುಮ ಕುಮಾರಿ, ಬಂಜಾರಲ ಚರಿತ ಆಂಧ್ರಾಲೋ ವಿಕಾಸ ಪ್ರಸ್ಥಾನಂ, ಪಮಾರ ಪಬ್ಲಿಕೇಷನ್ಸ್, ವಿಶಾಖಪಟ್ನಂ, ೨೦೦೬.

ರಾಠೋಡ್ ಬಾಲಾಜಿದಾಸಾ, ಬಂಜಾರ ವಂಶಾವಳಿ ಚರಿತ್ರ, ಪದ್ಮಾಪವಾರ ಪ್ರೆಸ್, ಹೈದ್ರಾಬಾದ್, ೧೯೯೨.

ರವಿ ವಿ., ಗಿರಿಜನುಲ ಜೀವಿತರೇಖಾ ಚಿತ್ರಾಲು ಅನುಭವ ಗಾಥಾಲು, (ಎಂ.ಫಿಲ್ ಸಂಶೋಧನಾ ಪ್ರಬಂಧ) ಕೇಂದ್ರೀಯ ವಿಶ್ವವಿದ್ಯಾಲಯ, ಹೈದ್ರಾಬಾದ್, ೨೦೦೨.

ರಾವು ಗಂಗಾಧರ, ಕೂರ್ರವಾಟಿ ಲಂಬಾಡೋಳ್ಳರಾಂದಾಸು, ಛಾಯಾ ಪಬ್ಲಿಕೇಷನ್ಸ್, ವಿಜಯವಾಡ, ೧೯೭೬.

ಸುರೇಶ ಎಸ್ ವಿ., ಎ ಪಿ ಜಿ ಕೆ ೨೦೧೩, ನ್ಯೂನಿಜನ್ ಪಬ್ಲಿಕೇಷನ್ಸ್, ಹೈದ್ರಾಬಾದ್, ೨೦೧೩.

### ಇಂಗ್ಲೀಷ್

Barikeri V H. A Descriptive Analysis of Lambani Language Spoken in Bijapur District. Unpublished Thesis Karnataka University, Dharwad, 1982.

Base Nirmalkumar. Cultural Anthropology. Asia Publishing House, New Delhi, 1961.

Basic statistics on scheduled Tribes of Andhra Pradesh. Tribal cultural Research Training Institute, Tribal Welfare Department Government, of Andhra Pradesh, Hyderabad, 2008.

Bhanawatji Ramsing. All India Study Team report, new Delhi, 1968.

Chamanlal. GIPSIES Forgotten Children of India. Govt of India, 1968.

Crooke. The Tribes and Castes of the North-Western India. Asia publishing house, New Delhi, 1940.

Das Samrendra Kumar. Encyclopedia dictionary of social science (Volume -2&3). sarup and sons, New Delhi, 1996.

David L Sills. International Encyclopedia of the social sciences (vol-1). The Macmillan company and the free press, 1968.

Deopujari U P. Maharastra caste scrutiny manual. Nagpur Law House, Nagpur, 2012.

Devendra Thakur. Tribal life in India. Deep and Deep Publications, New Delhi, 1994.

Edgar F, Borgatta, Rhonda T V, Montgomery. Encyclopedia of Sociology (Second Edition). Macmillan Reference USA, Newyork, 2000.

Edgar Thurston. Caste and Tribe of southern India, vol-4. Cosmo publication, Delhi, 1909.

Fourth standard text book shivachatrapati (History and civics), Maharashtra state bureau of text book production and curriculum research, Pune, 2009.

Gupta O P, Mittal P K, Gupta M P. Encyclopaedie dictionary of statistics. Anmol Publications, New Delhi, 1989.

Hand book of statistics Rangareddy District 2010. Compiled by Chief planning officer Rangareddy district, 2010.

Halabar B G. Social Aspect of Economics change Among the Lambani's of North Karnataka. Karnataka University, Dharwad, 1975.

Hutton J H. Caste in India. Oxford University press, Bombay, 1946.

Iyer L K A. The Mysore Tribes and Castes vol-2, Mysore University press, 1935.

Kamala Manohar rao P. The Mythological origin and clan system of the Banjaras of Hyderabad. January - March, 1950.

Lawrence D'souza S J. Lambanies. Unesco Literacy Resource centre, Bangalore, 1992.

Naganuri P G. Social Institution, Social Groups and Change. Nagarjun Enter prises, Davanagere, 2006.

Naganuri P G. Principles of Sociology. Lakshmi printing and publishing House, Mysore, 2012.

Naik Ranjit. Report of all India Banjara Stuiy team. A B B S S Kurla, Bombay, 1968.

Nanjundayya H V and Ananthakrishna Iyyar. The Mysore Tribes and Castes, Mysore Govt Press, 1928.

Nayyar Shamisi. Encyclopedia of Social development and social stratifications. Anmol publications Pvt.Ltd, New Delhi, 2006.

Prasad O S V D. Girijan samskriti. A special Issue on scheduled Tribe community certificates, Tribal cultural Research and training institute, Tribal welfare Department, Government of Andhra Pradesh, Hyderabad, 2009.

Pratap D R. The Banjara of Bapunagar A Settlement in the Urban environs of Hyderabad. TCR ad TI, Tribal welfare Department Andhra Pradesh, Hyderabad, 1968.

Pratap D R. The Festivals of Banjaras of Andhra Pradesh. Tribal cultural Research and Training institute, Tribal welfare Department Andhra Pradesh, Hyderabad, 1970.

Reddy Maheswar B. Andhra Pradesh Geography. sri padmavti publication ramakote, Hyderabad, 2010.

Sher singh sher. The Sikaligars of Punjab. Sterling Publication, Delhi, 1966.

Sing K S. People of India: Andhra Pradesh. Anthropological survey of India affiliated East west press Pvt. Ltd, New Delhi, 2003.

Sing K S. People of India: Karnataka. Anthropological survey of India affiliated East west press Pvt. Ltd, New Delhi, 2003.

Sinha B L. Encyclopaedie of Statistics, Psychology and Education. Anmol publications Pvt. Ltd, New Delhi, 2000.

Sovenier,. National Banjara Professors conference on 14 and 15 July, 2012.

Syed siraj ul Hassan. Castes and Tribes of the Nizams Dominations vol 1. vipin jain for vintage books, Gurgaon (Hariyana), 1920.

Tidake A S and Pawar A S. Population Estimation of Banjara and Vanjari. Southern Economist, December 01, 2011.

Thurston E and Rangachari K. Caste and Tribe of Southern India. Vol-4 Asian Educational Services New Delhi, Madras, 1909.

Viranna G. Tribal Political Leadership: A Study of Lambada Tribes in Worangal District in Andhra Pradesh. (M.phil) Hyderabad University, 1992.

# ಪ್ರಮುಖ ಮಾಹಿತಿದಾರರು

| ಹೆಸರು | ವಯಸ್ಸು | ಶಿಕ್ಷಣ | ಕಸುಬು | ವಿಳಾಸ |
|---|---|---|---|---|
| ಖೀರು ರಾಠೋಡ | ೭೫ | ಪ್ರಾಥಮಿಕ | ಕೃಷಿ | ಯಡ್ರಾಮಿ ತಾಂಡಾ, ಯಡ್ರಾಮಿ, ತಾ. ಜೇವರಗಿ, ಜಿಲ್ಲೆ. ಗುಲಬರ್ಗಾ. |
| ಲಕ್ಷ್ಮಣ ರಾಠೋಡ | ೬೫ | ಟಿ.ಸಿ.ಹೆಚ್ | ನಿವೃತ್ತ ಶಿಕ್ಷಕ | — " — |
| ಗೋವಿಂದ ಪವಾರ | ೭೦ | ಪಿ.ಯು.ಸಿ | ನಿವೃತ್ತ ಪೋಲಿಸ್ | — " — |
| ರವಿ ಜಾಧವ | ೩೫ | ಬಿ.ಎ. | ಶಿಕ್ಷಕ | ಜೇವರಗಿ, ತಾ. ಜೇವರಗಿ, ಜಿಲ್ಲೆ. ಗುಲಬರ್ಗಾ. |
| ತುಕಾರಾಮ ಚವ್ಹಾಣ | ೬೫ | — | ಕೃಷಿ | ಗೂಡುರ ತಾಂಡಾ, ತಾ. ಜೇವರಗಿ, ಜಿ. ಗುಲಬರ್ಗಾ. |
| ಲಕ್ಷ್ಮಣ ರಾಠೋಡ | ೬೫ | — | ಕೂಲಿ | ತೆಂಗಳಿ ತಾಂಡಾ, ತೆಂಗಳಿ, ತಾ. ಚಿತ್ತಾಪುರ, ಜಿಲ್ಲೆ ಗುಲಬರ್ಗಾ. |
| ರಾಮು ರಾಠೋಡ | ೭೫ | — | ಕೃಷಿ | — " — |
| ರುಕ್ಮೀಣಿಬಾಯಿ ಚವ್ಹಾಣ | ೬೮ | — | ಕೃಷಿ | — " — |
| ಗೇಮು ಪವಾರ | ೯೦ | — | ಕೂಲಿ | ಹಾಗರಗಾ ತಾಂಡಾ, ಹಾಗರಗಾ, ತಾ.ಜಿ. ಗುಲಬರ್ಗಾ. |
| ವಿಜಯಕುಮಾರ ಪವಾರ | ೩೦ | ಪಿ.ಯು.ಸಿ | ಕೂಲಿ | — " — |
| ಚೋಕ್ಲು ರಾಠೋಡ | ೭೦ | — | ಕೃಷಿ | ಹೀರುನಾಯಕ ತಾಂಡಾ, ಬಳ್ಳೂರ್ಗಿ, ತಾ.ಅಫಲಜಪೂರ, ಜಿ. ಗುಲಬರ್ಗಾ. |
| ಸೋನಾಬಾಯಿ ರಾಠೋಡ | ೪೫ | — | ಕೂಲಿ | — " — |
| ಆಕಾಶ ಚಿನ್ನಾ ರಾಠೋಡ | ೪೨ | ಪಿ.ಯು.ಸಿ | ಕಂಡಕ್ಟರ | — " — |
| ಜಯರಾಮ ಚವ್ಹಾಣ | ೪೬ | — | ಕೂಲಿ | ಮಳಖೇಡ ತಾಂಡಾ, ಮಳಖೇಡ, ತಾ. ಸೇಡಮ್, ಜಿ. ಗುಲಬರ್ಗಾ. |

| ಹೆಸರು | ವಯಸ್ಸು | ಶಿಕ್ಷಣ | ಕಸುಬು | ವಿಳಾಸ |
|---|---|---|---|---|
| ಗೋಮ್ಲಿಬಾಯಿ ರಾಠೋಡ | ೭೦ | — | ಕೃಷಿ | — " — |
| ರಾಜು ಪವಾರ | | ಬಿ ಎ | ಕಿರಾಣಿ ಅಂಗಡಿ | — " — |
| ರುಪಲು ರಾಠೋಡ | ೭೦ | — | ಕೂಲಿ | ಜೈನಾಪುರ ತಾಂಡಾ, ಜೈನಾಪುರ, ತಾ. ಜೇವರಗಿ, ಜಿ. ಗುಲಬರ್ಗಾ. |
| ಗಂಗಾಬಾಯಿ ರಾಠೋಡ | ೪೫ | — | ಕೃಷಿ | — " — |
| ಬಾಸು ಜಾಧವ | ៩೦ | — | ಕೃಷಿ | ಸಿಟಿ ಫಾರ್ಮ ತಾಂಡಾ, ಕೊರಳ್ಳಿ, ತಾ. ಆಳಂದ, ಜಿ. ಗುಲಬರ್ಗಾ. |
| ತಿಪ್ಪು ರಾಠೋಡ | ៩೦ | — | ಕೃಷಿ | ಮೇತ್ರಿ ತಾಂಡಾ, ಸಿನ್ನೂರ, ತಾ. ಅಕ್ಕಲಕೋಟ, ಜಿಲ್ಲೆ. ಸೋಲಾಪುರ. |
| ಧಾನಿಬಾಯಿ ಚವ್ಹಾಣ | ೪೫ | — | ಕೂಲಿ | — " — |
| ಭೀಮರಾವ ರಾಠೋಡ | ೨೩ | ಬಿ.ಈಡಿ | ವಿದ್ಯಾರ್ಥಿ | — " — |
| ಲಾಲು ಜಾಧವ | ៩೫ | — | ಕೃಷಿ | — " — |
| ಲಾಲು ರಾಠೋಡ | ೪೦ | — | ಕೂಲಿ | ಸಾವತಖೇಡ ತಾಂಡಾ, ಸಾವತಖೇಡ ತಾ. ದಕ್ಷಿಣ ಸೋಲಾಪುರ, ಜಿಲ್ಲೆ. ಸೋಲಾಪುರ. |
| ರತನ ರಾಠೋಡ | ៩೪ | — | ಕೂಲಿ | — " — |
| ಮಾನಸಿಂಗ ಚವ್ಹಾಣ | ೪೦ | — | ಕೂಲಿ | — " — |
| ರಾಜು ಚವ್ಹಾಣ | ೩೦ | ೧೦ನೇ | ಡ್ರೈವರ | — " — |
| ರಾಮು ರಾಠೋಡ | ೪೦ | — | ಕೃಷಿ | ಕುಮಟಾ ತಾಂಡಾ, ಕುಮಟಾ, ತಾ. ಉತ್ತರ ಸೋಲಾಪುರ, ಜಿಲ್ಲೆ. ಸೋಲಾಪುರ. |
| ರತನ ರಾಠೋಡ | ៩೨ | ೧೦ನೇ | ನಿವೃತ ತಲಾಟಿ | — " — |

| ಹೆಸರು | ವಯಸ್ಸು | ಶಿಕ್ಷಣ | ಕಸುಬು | ವಿಳಾಸ |
|---|---|---|---|---|
| ಸೋನಾಬಾಯಿ ಜಾಧವ | ೭೦ | — | — | — " — |
| ಶಾಂತಾಬಾಯಿ ಚವ್ಹಾಣ | ೬೫ | — | ಕೂಲಿ | — " — |
| ಲಾಲು ರಾಠೋಡ | ೮೫ | — | — | ಕಾಮತಿ ತಾಂಡಾ, ಕಾಮತಿ, ತಾ. ಮೋಳ, ಜಿ. ಸೋಲಾಪುರ. |
| ಜಮಣಾಬಾಯಿ ರಾಠೋಡ | ೬೦ | — | ಕೂಲಿ | — " — |
| ಮಿಟ್ಟು ಪವಾರ | ೩೫ | ೧೦ನೇ | ಕೂಲಿ | — " — |
| ಸುಶಿಲಾಬಾಯಿ ಪವಾರ | ४५ | — | ಕೂಲಿ | — " — |
| ಶ್ರೀಕಾಂತ ರಾಠೋಡ | ४೦ | ಡಿ.ಈಡಿ | ಶಿಕ್ಷಕ | ದಾದಪುರ ತಾಂಡಾ, ದಾದಪುರ, ತಾ. ಮೋಳ, ಜಿಲ್ಲೆ. ಸೋಲಾಪುರ. |
| ಆರ್ ಡಿ ಚವ್ಹಾಣ | ४೦ | ಬಿ.ಎ | ಮ್ಯಾನೇಜರ್ | ಸೋಲಾಪುರ ನಗರ, ಜಿಲ್ಲೆ. ಸೋಲಾಪುರ. |
| ಖೇಮು ಭೂಕ್ಯಾ | ೬೬ | — | ಕೃಷಿ | ತೆಕುಲಾಬಾದ ತಾಂಡಾ, ತೆಕುಲಾಬಾದಮ, ವಿಕಾರಾಬಾದ, ಜಿಲ್ಲೆ. ರಂಗಾರೆಡ್ಡಿ. |
| ರುಕ್ಮಾಬಾಯಿ ವಿಸ್ಲಾವತ | ೬೦ | — | ಕೂಲಿ | — " — |
| ಅರ್ಜುನ ಬಾಣ್ಣೋತ | ೫೦ | — | ಕೂಲಿ | ಪೊಚಮ್ಮ ತಾಂಡಾ, ಪೊಚಮ್ಮ, ಮ. ಕಂದಕೂರ, ಜಿಲ್ಲೆ. ರಂಗಾರೆಡ್ಡಿ. |
| ಭೀಮಾ ಭೂಕ್ಯಾ | ೩೦ | — | ಶಿಕ್ಷಕ | — " — |
| ಕಿಶನ ಚವ್ಹಾಣ | ೩೮ | — | ಕೃಷಿ | ರಾಂಪುರ ತಾಂಡಾ, ರಾಂಪುರ, ಮ, ತಾಂಡೂರ, ಜಿಲ್ಲೆ. ರಂಗಾರೆಡ್ಡಿ. |
| ವಾಸು ಪವಾರ | ४೫ | ಬಿ.ಎ | ಗುತ್ತಿಗೆದಾರ | — " — |
| ಚಾಂದಿಬಾಯಿ ರಾಠೋಡ | ೨೨ | ಪ್ರಾಥಮಿಕ | ಕೂಲಿ | — " — |

| ಹೆಸರು | ವಯಸ್ಸು | ಶಿಕ್ಷಣ | ಕಸುಬು | ವಿಳಾಸ |
|---|---|---|---|---|
| ಢಾಕು ಭೂಕ್ಯಾ | ೪೦ | — | ಕೂಲಿ | ರಾಕೋಂಡಾ ತಾಂಡಾ, ರಾಕೋಂಡಾ, ಮ.ಡೋಮಾ ಜಿಲ್ಲೆ. ರಂಗಾರೆಡ್ಡಿ. |
| ಮಂಗಲು ನೇಣಾವತ | ೩೦ | — | ಕೂಲಿ | — " — |
| ಗೋಪಿ ಭೂಕ್ಯಾ | ೩೫ | — | ಕೂಲಿ | ಕೊರಮ ತಾಂಡಾ, ಕೊರಮ, ಮ. ಮಂಚಾಲಮ್, ಜಿಲ್ಲೆ. ರಂಗಾರೆಡ್ಡಿ. |
| ಮೋತಿಬಾಯಿ ವಡತ್ಯಾ | ೫೦ | — | ಕೂಲಿ | — " — |
| ವಾಚು ಲಾವಡ್ಯಾ | ೭೦ | — | ಕೃಷಿ | ಸೂಕ್ರಾನಾಯಕ ತಾಂಡಾ, ಮ. ಕುಚೇರ್ಲಾ, ಜಿಲ್ಲೆ. ರಂಗಾರೆಡ್ಡಿ. |
| ಸುರ್‍ಯಾ ನಾಯಕ | ೭೫ | — | ಕೃಷಿ | ಕಂದನಳ್ಳಿ ತಾಂಡಾ, ಕಂದನಳ್ಳಿ, ಮ.ಪೆದ್ದಮೂಲ ಜಿಲ್ಲೆ. ರಂಗಾರೆಡ್ಡಿ. |
| ತುಳಚಿಬಾಯಿ | ೬೫ | — | ಕೃಷಿ | — " — |
| ಜೈಸಿಂಗ ಪವಾರ | ೪೫ | — | ಕೂಲಿ | — " — |
| ಹೀರಾಸಿಂಗ ನಾಯ್ಕ | ೪೦ | ೧೦ನೇ | ವ್ಯಾಪಾರ | ಬಸಿರಮಿಯಾ ತಾಂಡಾ, ಬಸಿರಮಿಯಾ, ಮ. ಯಾಲಾಲ ಜಿಲ್ಲೆ. ರಂಗಾರೆಡ್ಡಿ. |
| ಭಾಮಲಾ ನಾಯ್ಕ | ೬೦ | — | ಟೇಲರ್ | — " — |

## ಅನುಬಂಧ: ೩

# ಕರ್ನಾಟಕದ ಪರಿಶಿಷ್ಟ ಜಾತಿ ಕಲ್ಯಾಣ ಕಾರ್ಯಕ್ರಮಗಳು

"ಪರಿಶಿಷ್ಟ ಜಾತಿಯ ಜನರ ಪ್ರಗತಿಗಾಗಿ ಕೈಗೊಳ್ಳಲಾಗುತ್ತಿರುವ ಅನೇಕ ಯೋಜನೆ ಹಾಗೂ ಕಾರ್ಯಕ್ರಮಗಳಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನುದಾನ ಒದಗಿಸುತ್ತವೆ. ವಿಶೇಷ ಘಟಕ ಯೋಜನೆಯನ್ನು ಹಲವು ಅಭಿವೃದ್ಧಿ ಇಲಾಖೆಗಳು ಅನುಷ್ಠಾನಿಸುತ್ತವೆ. ಕೇಂದ್ರ ಸರ್ಕಾರದ ಕೆಲವು ಪ್ರತ್ಯೇಕ ಯೋಜನೆಗಳು ಜಾರಿಯಲ್ಲಿವೆ. ಹಲವು ಕೇಂದ್ರಿಯ ಪುರಸ್ಕೃತ ಯೋಜನೆಗಳಿಗೆ ರಾಜ್ಯ ಸರ್ಕಾರ ಶೇಕಡಾ ೫೦ರ ಅನುದಾನ ನೀಡಿ ಅನುಷ್ಠಾನಗೊಳಿಸುತ್ತಿದೆ.

ಈ ಎಲ್ಲಾ ಯೋಜನೆಗಳು ರಾಜ್ಯಮಟ್ಟ, ಜಿಲ್ಲಾಮಟ್ಟ ಹಾಗೂ ತಾಲೂಕು ಮಟ್ಟಗಳಲ್ಲಿ ಅನುಷ್ಠಾನಗೊಳ್ಳುತ್ತಿವೆ. ಕೆಲವು ಯೋಜನೆಗಳು ಜಿಲ್ಲಾ ಪಂಚಾಯತಿ, ತಾಲೂಕಾ ಮಟ್ಟದಲ್ಲಿ ತಾಲ್ಲೂಕು ಪಂಚಾಯತಿಗಳ ಮೂಲಕ ಕಾರ್ಯಗತಗೊಳ್ಳುತ್ತಿವೆ.

ಈ ಯೋಜನೆಗಳನ್ನು ನಾವು ಶೈಕ್ಷಣಿಕ ನೆರವಿನ ಯೋಜನೆಗಳು, ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು ಮತ್ತು ಸಾಮಾಜಿಕ, ಆರ್ಥಿಕ ನೆರವಿನ ಯೋಜನೆಗಳು ಎಂದು ವಿಂಗಡಿಸಿ ವಿವರಿಸಬಹುದು. ಇದಲ್ಲದೇ ವಿಶೇಷ ಘಟಕ ಯೋಜನೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗದ ಅಭಿವೃದ್ಧಿ ನಿಗಮಗಳಡಿ ಜಾರಿಗೊಳ್ಳುತ್ತಿರುವ ಯೋಜನೆಗಳನ್ನು ಪ್ರತ್ಯೇಕವಾಗಿ ನೋಡಬಹುದು" (ದಾರಿ ದೀಪ: ಸಮಾಜ ಕಲ್ಯಾಣ ಇಲಾಖೆ: ೨೦೦೩–೨)

**ಅ) ಶೈಕ್ಷಣಿಕ ನೆರವಿನ ಯೋಜನೆಗಳು**

೧) **ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು:** ೩ ರಿಂದ ೫ ವರ್ಷ ವಯಸ್ಸಿನ ಬಾಲಕ ಬಾಲಕಿಯರು ಪ್ರವೇಶ ಪಡೆಯಲು ಅರ್ಹರಿರುತ್ತಾರೆ. ಪೂರ್ವ ಪ್ರಾಥಮಿಕ ಶಿಕ್ಷಣದ ಜೊತೆಗೆ ಮಧ್ಯಾಹ್ನದ ಉಪಹಾರ, ಸಮವಸ್ತ್ರ, ಆಟಗಳು, ಕಲಿಕಾ ಸಲಕರಣೆಗಳನ್ನು ಒದಗಿಸಲಾಗುತ್ತದೆ.

೨) **ವಸತಿ ಶಾಲೆಗಳು:** ಗ್ರಾಮಾಂತರ ಪ್ರದೇಶದ ಸುತ್ತಲಿನ ಪರಿಶಿಷ್ಟ ಜಾತಿಯ ೫ ರಿಂದ ೧೦ ವರ್ಷ ವಯೋಮಿತಿಯ ಮಕ್ಕಳು ಈ ಶಾಲೆಗೆ ಅರ್ಹರಿರುತ್ತಾರೆ. ಇಲ್ಲಿ ೧ ರಿಂದ ೪ನೇ ತರಗತಿಯವರೆಗೆ ಅಭ್ಯಾಸ ಮಾಡಲು ಅವಕಾಶವಿದೆ.

೩) **ನವೋದಯ ಶಾಲೆ:** ಪ್ರತಿ ವರ್ಷ ಏಪ್ರೀಲ್ ತಿಂಗಳಲ್ಲಿ ಜರುಗುವ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು. ೬ನೇ ತರಗತಿಯಿಂದ ೧೦ನೇ ತರತಿಯವರೆಗೆ ವಿದ್ಯಾಭ್ಯಾಸ ಮಾಡಲು ಅವಕಾಶವಿದೆ. ಊಟ, ವಸತಿಯ ಜೊತೆಗೆ ಇತರೆ ಸೌಲಭ್ಯಗಳು ದೊರೆಯುತ್ತವೆ.

೪) **ರಾಮಕೃಷ್ಣ ಆಶ್ರಮದಂತಹ ಗೌರವಾನ್ವಿತ ವಿದ್ಯಾ ಸಂಸ್ಥೆಗಳಲ್ಲಿ ಪ್ರವೇಶಾವಕಾಶ:** ಪ್ರತಿ ವರ್ಷ ಏಪ್ರೀಲ್ ತಿಂಗಳಿನಲ್ಲಿ ನಡೆಯುವ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಎಲ್ಲಾ ಖರ್ಚನ್ನು ಸಮಾಜಕಲ್ಯಾಣ ಇಲಾಖೆ ಭರಿಸುತ್ತದೆ.

೫) **ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ:** ೫ ರಿಂದ ೧೦ನೇ ತರಗತಿಯಲ್ಲಿ ಓದುತ್ತಿರುವ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ವಸತಿ ಮತ್ತು ಊಟದ ಸೌಕರ್ಯ ಒದಗಿಸಲು ಸರ್ಕಾರಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲಾಗಿದೆ.

೬) **ಅನುದಾನಿತ ವಿದ್ಯಾರ್ಥಿ ನಿಲಯಗಳಿಗೆ ಧನ ಸಹಾಯ:** ವಿದ್ಯಾರ್ಥಿ ನಿಲಯಗಳನ್ನು ನಡೆಸುವ ಸ್ವಯಂ ಸೇವಾ ಸಂಸ್ಥೆಗಳಿಗೆ ಉತ್ತೇಜನ ನೀಡುವ ಉದ್ದೇಶದಿಂದ ಧನಸಹಾಯ ನೀಡುತ್ತಿದೆ.

೭) **ಕಾಲೇಜು ವಿದ್ಯಾರ್ಥಿ ನಿಲಯಗಳು:** ೧೦ನೇ ತರಗತಿ ಮುಗಿಸಿ ಕಾಲೇಜು ಮೆಟ್ಟಿಲೇರುವ ವಿದ್ಯಾರ್ಥಿಗಳಿಗೆ ಉಚಿತ ಊಟ ವಸತಿ ಮತ್ತು ಇನ್ನಿತರ ಸೌಲಭ್ಯ ನೀಡಲು ಸರ್ಕಾರಿ ಕಾಲೇಜು ವಿದ್ಯಾರ್ಥಿ ನಿಲಯ ಸ್ಥಾಪಿಸಲಾಗಿದೆ.

೮) **ಮುರಾರ್ಜಿ ದೇಸಾಯಿ ವಸತಿ ಶಾಲೆಗಳು:** ೫ನೇ ತರಗತಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ಪ್ರವೇಶ ಪರೀಕ್ಷೆಯಲ್ಲಿ ಅರ್ಹತೆ ಪಡೆದು ೬ನೇ ತರಗತಿಯಿಂದ ೧೦ನೇ ತರಗತಿಯವರೆಗೆ ಉಚಿತ ವಿದ್ಯಾಭ್ಯಾಸ, ಊಟ, ವಸತಿ, ಮತ್ತು ಇನ್ನಿತರ ಸೌಲಭ್ಯಗಳನ್ನು ಪಡೆದುಕೊಳ್ಳಬಹುದಾಗಿದೆ.

೯) **ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ:** ಸರ್ಕಾರಿ ಮತ್ತು ಅನುದಾನಿತ ವಿದ್ಯಾರ್ಥಿ ನಿಲಯಗಳಲ್ಲಿ ಪ್ರವೇಶ ಪಡೆಯದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ೧ ರಿಂದ ೭ನೇ ತರಗತಿವರೆಗೆ ವಾರ್ಷಿಕ ೭೫.೦೦ ರೂಪಾಯಿಗಳು ಹಾಗೂ ೮ ರಿಂದ ೧೦ನೇ ತರಗತಿವರೆಗೆ ೧೦೦.೦೦ ರೂ.ಗಳು ವಿದ್ಯಾರ್ಥಿ ವೇತನ ನೀಡಲಾಗುತ್ತದೆ.

೧೦) **ಪ್ರತಿಭಾ ವಿದ್ಯಾರ್ಥಿ ವೇತನ:** ವಾರ್ಷಿಕ ಪರೀಕ್ಷೆಗಳಲ್ಲಿ ೬೦ಕ್ಕಿಂತ ಹೆಚ್ಚು ಅಂಕಗಳನ್ನು ಪಡೆಯುವ ವಿದ್ಯಾರ್ಥಿಗಳಿಗೆ ಪ್ರತಿಭಾ ವಿದ್ಯಾರ್ಥಿ ವೇತನ ನೀಡಲಾಗುತ್ತದೆ.

೧೧) **ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವವರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ:** ಚರ್ಮ ಹದ ಮಾಡುವುದು, ಚರ್ಮ ಸುಲಿಯುವುದು ಹಾಗೂ ಇತರ ಅನೈರ್ಮಲ್ಯ ಕೆಲಸ ಮಾಡುತ್ತಿರುವವರ ಮಕ್ಕಳಿಗೆ ವಿದ್ಯಾರ್ಥಿ ನಿಲಯಕ್ಕೆ ಪ್ರವೇಶ ಕೊಟ್ಟು ವಿದ್ಯಾರ್ಥಿ ವೇತನ ಮಂಜೂರು ಮಾಡಲಾಗುತ್ತದೆ.

೧೨) **ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ:** ಕುಟುಂಬದ ವಾರ್ಷಿಕ ಆದಾಯ ೬೫,೨೯೦ ಮೀರದ ಎಲ್ಲಾ ಪರಿಶಿಷ್ಟ ಜಾತಿಯ ಕಾಲೇಜು ಕಲಿಯುತ್ತಿರುವ ವಿದ್ಯಾರ್ಥಿಗಳಿಗೆ ಈ ಶಿಷ್ಯ ವೇತನ ನೀಡಲಾಗುತ್ತದೆ.

೧೩) **ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ:** ಭಾರತ ಸರ್ಕಾರದ ವಿದ್ಯಾರ್ಥಿ ವೇತನಕ್ಕೆ ಅನರ್ಹರಾದ ಪರಿಶಿಷ್ಟ ಜಾತಿ ಮೆಟ್ರಿಕ್ ನಂತರದ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮುಂದುವರಿಸಲು ಅನುಕೂಲವಾಗುವ ದೃಷ್ಟಿಯಿಂದ ಈ ಶಿಷ್ಯ ವೇತನ ಮಂಜೂರು ಮಾಡಲಾಗುತ್ತದೆ.

೧೪) **ಪುರಸ್ಕಾರ ಬಹುಮಾನ:** ಪಬ್ಲಿಕ್ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮ ಯತ್ನದಲ್ಲಿ ಉತ್ತೀರ್ಣರಾದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ನಗದು ಬಹುಮಾನ ನೀಡಲಾಗುತ್ತದೆ.

೧೫) **ಎಂ.ಫಿಲ್, ಪಿಹೆಚ್.ಡಿ ವಿದ್ಯಾರ್ಥಿಗಳಿಗೆ ಧನ ಸಹಾಯ:** ಸಂಶೋಧನಾ ವಿದ್ಯಾರ್ಥಿಗಳಿಗೂ ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ಪಡೆಯುವ ಅವಕಾಶವಿದೆ. ಆದರೆ ಇವರು ಸಂಶೋಧನಾ ಚಟುವಟಿಕೆ ಮಾಡಬೇಕಾಗಿರುವುದರಿಂದ ಇವರಿಗ ಹೆಚ್ಚಿನ ನಿರ್ವಹಣಾ ವೆಚ್ಚದ ಅಗತ್ಯವಿದೆ. ಆದ್ದರಿಂದ ಆರ್ಥಿಕವಾಗಿ ದುರ್ಬಲರಾಗಿರುವ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಧನಸಹಾಯ ನೀಡುವ ಸಲುವಾಗಿ ಈ ಯೋಜನೆಯನ್ನು ರೂಪಿಸಲಾಗಿದೆ.

೧೬) **ರ್‍ಯಾಂಕ ವಿದ್ಯಾರ್ಥಿಗಳಿಗೆ ನಗದು ಬಹುಮಾನ:** ಸ್ನಾತಕೋತ್ತರ ಪದವಿಗಳ ವಿವಿಧ ಕೋರ್ಸ್‌ಗಳಲ್ಲಿ ಮೊದಲ ಮೂರು ರ್‍ಯಾಂಕ ಗಳಿಸಿದ ಹಾಗೂ ಪದವಿಯ ವಿವಿಧ ಕೋರ್ಸಗಳಲ್ಲಿ ಮೊದಲ ೧೦ ರ್‍ಯಾಂಕ ಗಳಿಸಿದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಕೊಡಲಾಗುತ್ತದೆ.

೧೭) **ಪ್ರತಿಷ್ಠಿತ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ:** ಪ್ರತಿಷ್ಠಿತ ಸಂಸ್ಥೆಗಳಾದ ಐ.ಐ.ಟಿ/ಐ.ಐ.ಎಮ್, ಐ.ಐ.ಎಸ್.ಸಿ ಯಲ್ಲಿ ಪ್ರವೇಶ ಪಡೆದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮಂಜೂರು ಮಾಡಲಾಗುತ್ತದೆ.

೧೮) **ವಿದೇಶಿ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಧನ ಸಹಾಯ:** ೨೦೦೧-೦೨ನೇ ಸಾಲಿನಿಂದ ವಿದೇಶಿ ವಿಶ್ವವಿದ್ಯಾಲಗಳಲ್ಲಿ ಅಧ್ಯಯನ ಮಾಡುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಧನಸಹಾಯ ಮಂಜೂರು ಮಾಡಲಾಗುತ್ತದೆ.

೧೯) **ಪುಸ್ತಕ ಭಂಡಾರ:** ವೈದ್ಯಕೀಯ, ತಾಂತ್ರಿಕ ಮತ್ತು ವೃತ್ತಿಪರ ವಿಷಯಗಳು, ಕೃಷಿ ವಿಜ್ಞಾನ, ಪಶುವಿಜ್ಞಾನ ಕಾಲೇಜುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗಾಗಿ ಪುಸ್ತಕಗಳನ್ನು ಖರೀದಿಸಿ ಬುಕ್ ಬ್ಯಾಂಕ ಅಥವಾ ಪುಸ್ತಕ ಭಂಡಾರವನ್ನು ತೆರೆಯಲಾಗುತ್ತದೆ.

೨೦) **ಅಧ್ಯಯನದ ಪ್ರವಾಸಕ್ಕೆ ನೆರವು:** ತಾಂತ್ರಿಕ ಮತ್ತು ವೃತ್ತಿಪರ ವಿಷಯಗಳಲ್ಲಿ ಅಧ್ಯಯನ ಮಾಡುತಿದ್ದು ಶೈಕ್ಷಣಿಕ ಪ್ರವಾಸ ಕಡ್ಡಾಯವಾಗಿದ್ದರೆ ಪ್ರವಾಸಕ್ಕೆ ಹೋಗಲು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಸಹಾಯ ಧನ ನೀಡಲಾಗುತ್ತದೆ.

೨೧) **ಪರೀಕ್ಷಾ ಪೂರ್ವ ತರಬೇತಿ ಕೇಂದ್ರ:** ರಾಜ್ಯ ಹಾಗೂ ಕೇಂದ್ರ ಲೋಕಸೇವಾ ಆಯೋಗ ಹಾಗೂ ಇತರೆ ನೇಮಕಾತಿ ಆಯೋಗಗಳು ನಡೆಸುವ ಪರೀಕ್ಷಾ ಪೂರ್ವ ಕೇಂದ್ರಗಳಲ್ಲಿ ತರಬೇತಿ ನೀಡಲಾಗುತ್ತದೆ.

೨೨) **ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಯರಿಗೆ ಪ್ರೋತ್ಸಾಹದಾಯಕ ವಿದ್ಯಾರ್ಥಿ ವೇತನ:** ೬ ಮತ್ತು ೭ನೇ ತರಗತಿಯಲ್ಲಿ ಕಲಿಯುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಿಗೆ ವಾರ್ಷಿಕ ೨೫೦.೦೦ ರೂ.ಗಳು ಹಾಗೂ ಪ್ರೌಢ ಶಾಲೆಯಲ್ಲಿ ಕಲಿಯುತ್ತಿರುವ ವಿದ್ಯಾರ್ಥಿನಿಯರಿಗೆ ವಾರ್ಷಿಕ ೫೦೦.೦೦ ರೂ.ಗಳ ಶಿಷ್ಯ ವೇತನ ನೀಡಲಾಗುತ್ತದೆ.

೨೩) **ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಲ್ಲಿರುವ ವಿದ್ಯಾರ್ಥಿಗಳಿಗೆ ವಿಶೇಷ ಬೋಧನೆ:** ಪ್ರೌಢ ಶಾಲೆಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ವಿಜ್ಞಾನ, ಗಣಿತ, ಮತ್ತು ಇಂಗ್ಲೀಷ ವಿಷಯಗಳಲ್ಲಿ ನುರಿತ ಶಿಕ್ಷಕರ ಮೂಲಕ ವಿಶೇಷ ಭೋದನೆ ನೀಡಲಾಗುತ್ತದೆ.

೨೪) **ಇಂಜಿನಿಯರಿಂಗ್ ವಿದ್ಯಾರ್ಥಿಗಳಿಗೆ ಸಾಧನ ಸಲಕರಣೆಯನ್ನು ಪೂರೈಸುವದು:** ಇಂಜನಿಯರಿಂಗ್ ಮತ್ತು ಡಿಪ್ಲೋಮಾ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಅಧ್ಯಯನಕ್ಕೆ ಪೂರಕ ಸಾಮಾಗ್ರಿಗಳನ್ನು ಒದಗಿಸಲಾಗುತ್ತದೆ.

**ಆ) ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು:**

ಶಿಕ್ಷಣವೇ ಶಕ್ತಿ ಎನ್ನುವಂತೆ ಶಿಕ್ಷಣವು ಮಾನವನ ಪ್ರಾಥಮಿಕ ಅವಶ್ಯಕತೆಯಾಗಿದೆ. ಜನರನ್ನು ಸಶಕ್ತರನ್ನಾಗಿಸುವಲ್ಲಿ ಶಿಕ್ಷಣವು ತುಂಬಾ ನಿರ್ಣಾಯಕ ಪಾತ್ರವಹಿಸುತ್ತದೆ. ಹೀಗಾಗಿ ಪರಿಶಿಷ್ಟ ಜಾತಿಯ ಜನರಿಗೆ ಸಮಾಜ ಕಲ್ಯಾಣ ಇಲಾಖೆಯು ಹಲವಾರು ಯೋಜನೆಗಳ ಮೂಲಕ ವಿದ್ಯಾಭ್ಯಾಸಕ್ಕೆ ನೆರವು ನೀಡಿದಂತೆ ಈ ಜನರ ನಿರುದ್ಯೋಗ ನಿವಾರಣೆಗಾಗಿಯೂ ಹಲವಾರು ಯೋಜನೆಗಳ ಮೂಲಕ ಕಾರ್ಯತತ್ಪರವಾಗಿರುವದು ಸ್ಪಷ್ಟವಾಗಿ ಕಂಡುಬರುತ್ತದೆ.

೧) **ನವಚೇತನ:** ಪರಿಶಿಷ್ಟ ಜಾತಿಯ ವಿದ್ಯಾವಂತ ನಿರುದ್ಯೋಗಿ ಯುವಕರಿಗೆ ಮಾಹಿತಿ ತಂತ್ರಜ್ಞಾನ, ವೃತ್ತಿಪರ ಕೌಶಲ್ಯಗಳನ್ನು ಹೆಚ್ಚಿಸುವ ವಿವಿಧ ಕ್ಷೇತ್ರ/ವಿಭಾಗಗಳಲ್ಲಿ ತರಬೇತಿ ನೀಡಲಾಗುತ್ತಿದೆ. ಇದರಿಂದ ಅವರಿಗೆ ಸೂಕ್ತ ಉದ್ಯೋಗ ಪಡೆಯುವಲ್ಲಿ ಹಾಗೂ ಸ್ವಯಂ ಉದ್ಯೋಗದಲ್ಲಿ ತೊಡಗಿಕೊಳ್ಳಲು ಸಹಾಯಕವಾಗುವದು.

೨) **ಬೆರಳಚ್ಚು ಮತ್ತು ಶೀಘ್ರಲಿಪಿ ತರಬೇತಿ:** ೧೮ ರಿಂದ ೩೦ ವರ್ಷದ ಒಳಗಿನ ವಿದ್ಯಾವಂತರಿಗೆ ಬೆರಳಚ್ಚು ಮತ್ತು ಶೀಘ್ರಲಿಪಿ ತರಬೇತಿ ಪಡೆಯಲು ಸಮಾಜ ಕಲ್ಯಾಣ ಇಲಾಖೆಯು ಆರ್ಥಿಕ ನೆರವು ನೀಡುತ್ತದೆ.

೩) **ಮಹಿಳೆಯರಿಗೆ ವೃತ್ತಿ ಶಿಕ್ಷಣ ತರಬೇತಿ:** ಪರಿಶಿಷ್ಟ ಜಾತಿಯ ಮಹಿಳೆಯರು ಸ್ವಯಂ ಉದ್ಯೋಗಗಳಲ್ಲಿ ತೊಡಗಿಕೊಳ್ಳಲಿ ಎಂಬ ಆಶಯದಿಂದ ಹೊಲಿಗೆ ತರಬೇತಿಯೊಂದಿಗೆ ಶಿಷ್ಯವೇತನವನ್ನು ನೀಡಲಾಗುತ್ತಿದೆ.

೪) **ಹೊಲಿಗೆ ಯಂತ್ರ ಸರಬರಾಜು:** ಹೊಲಿಗೆ ತರಬೇತಿ ಪೂರ್ಣಗೊಂಡ ನಂತರ ತಾಂತ್ರಿಕ

ಶಿಕ್ಷಣ ಇಲಾಖೆಯ ಬೋಧಕ ವರ್ಗದವರ ಸಹಾಯದಿಂದ ಇಲಾಖಾ ವತಿಯಿಂದ ಪರೀಕ್ಷೆ ನಡೆಸಿ ಪರೀಕ್ಷೆಗಳಲ್ಲಿ ಉತ್ತೀರ್ಣಗೊಂಡ ಮಹಿಳೆಯರಿಗೆ ಪ್ರಮಾಣ ಪತ್ರ ಹಾಗೂ ಒಂದು ಹೊಲಿಗೆ ಯಂತ್ರ ಉಚಿತವಾಗಿ ನೀಡಲಾಗುತ್ತಿದೆ.

೫) **ಕಾನೂನು ಪದವೀಧರರಿಗೆ ಶಿಷ್ಯವೇತನ:** ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ಹೆಚ್ಚು ಜ್ಞಾನಗಳಿಸಿಕೊಳ್ಳಲು ನಾಲ್ಕು ವರ್ಷ ತರಬೇತಿ ನೀಡಲಾಗುತ್ತದೆ. ಈ ಅವಧಿಯಲ್ಲಿ ಶಿಷ್ಯವೇತನ ನೀಡಲಾಗುತ್ತದೆ.

೬) **ಕಾನೂನು ಪದವೀಧರರಿಗೆ ಧನ ಸಹಾಯ:** ಕಾನೂನು ಪದವೀಧರರು ಸ್ವತಂತ್ರವಾಗಿ ವಕೀಲಿ ವೃತ್ತಿ ಕೈಗೊಳ್ಳಲು ವಕೀಲರ ಸಂಘದಲ್ಲಿ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಲು, ಕಾನೂನು ಗ್ರಂಥಗಳು ಹಾಗೂ ಪೀಠೋಪಕರಣಗಳನ್ನು ಕೊಂಡುಕೊಳ್ಳಲು ಸಹಾಯ ಧನವನ್ನು ನೀಡಲಾಗುತ್ತದೆ.

೭) **ಸ್ವಯಂ ಉದ್ಯೋಗ ತರಬೇತಿ ಕಾರ್ಯಕ್ರಮ:** (ಮೋಟಾರು ವಾಹನ ಚಾಲನೆ ತರಬೇತಿ): ಈ ಜನರು ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲವಾಗುವಂತೆ ಜಿಲ್ಲಾ ವಲಯಗಳ ಯೋಜನೆಯಡಿಯಲ್ಲಿ ಲಘು ವಾಹನ ಚಾಲನೆ ಮತ್ತು ಅಟೋರಿಕ್ಷಾ ಚಾಲನೆಯಲ್ಲಿ ೩ ತಿಂಗಳ ತರಬೇತಿಯನ್ನು ನೀಡಿ ವಾಹನ ಚಾಲನೆ ಪರವಾನಗಿ ಸಹ ಒದಗಿಸಲಾಗುತ್ತಿದೆ. ಇದರೊಂದಿಗೆ ಶಿಷ್ಯವೇತನವನ್ನು ನೀಡಲಾಗುತ್ತಿದೆ.

೮) **ಸೈನಿಕ ಶಾಲೆಯ ಪ್ರವೇಶಕ್ಕೆ ವಿಶೇಷ ತರಬೇತಿ:** ಬಿಜಾಪೂರ ಮತ್ತು ಕೊಡಗುದಲ್ಲಿರುವ ಸೈನಿಕ ಶಾಲೆ ಹಾಗೂ ಜವಾಹರ ನವೋದಯ ವಸತಿ ಶಾಲೆಗಳಲ್ಲಿ ಪರಿಶಿಷ್ಟ ಜಾತಿಯವರಿಗೆ ಕಾಯ್ದಿರಿಸಿದ ಸ್ಥಾನಗಳನ್ನು ಪಡೆಯಲು ಅರ್ಹತೆ ಹೊಂದುವ ಉದ್ದೇಶದಿಂದ ಒಂದು ವರ್ಷದ ಪೂರ್ವಭಾವಿ ತರಬೇತಿಯನ್ನು ನೀಡಲಾಗುತ್ತದೆ. ಅಲ್ಲದೇ ತರಬೇತಿ ಸಮಯದಲ್ಲಿ ಉಚಿತ ಊಟ, ವಸತಿ ಹಾಗೂ ಇನ್ನಿತರ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

**ಇ) ಸಾಮಾಜಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳು:**

೧) **ಡಾ. ಬಿ. ಆರ್. ಅಂಬೇಡ್ಕರ ಸಂಶೋಧನಾ ಸಂಸ್ಥೆ:** ಪರಿಶಿಷ್ಟ ಜಾತಿ ಜನರ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳ ಕಾರ್ಯ ಚಟುವಟಿಕೆಗಳ ಬಗ್ಗೆ ಸಮೀಕ್ಷೆ ನಡೆಸಿ ಎಷ್ಟು ಕುಟುಂಬಗಳು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿವೆ ಹಾಗೂ ಅವುಗಳ ಸಾಮಾಜಿಕ ಸ್ಥಾನಮಾನ ಹೇಗಿದೆ? ಎಂಬುದನ್ನು ಅಭ್ಯಾಸಿಸುವದು ಮತ್ತು ಅನುಪಯುಕ್ತ ಯೋಜನೆಗಳನ್ನು ಮಾರ್ಪಡಿಸಿ ಉಪಯುಕ್ತ ಯೋಜನೆ ರೂಪಿಸುವುದು. ಹೀಗೆ ಮುಂತಾದ ಚಟುವಟಿಕೆಗಳನ್ನು ನಡೆಸುತ್ತದೆ.

೨) **ಅಸ್ಪೃಶ್ಯತೆ ನಿವಾರಣೆ:** ಅಂತರ್ ಜಾತಿಯ ವಿವಾಹವಾದ ದಂಪತಿಗಳಲ್ಲಿ ಒಬ್ಬರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದರೆ ಅವರ ಸಾಮಾಜಿಕ ಭದ್ರತೆಯ ಉದ್ದೇಶದಿಂದ ಪ್ರೋತ್ಸಾಹ ಧನ ನೀಡಲಾಗುತ್ತದೆ.

೩) **ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿಯವರಿಗೆ ಪರಿಹಾರ:** ದೌರ್ಜನ್ಯ ಪ್ರಕರಣಗಳಿಗೆ ಪರಿಹಾರ, ಪುನರ್ವಸತಿ ಕಲ್ಪಿಸುವ ಉದ್ದೇಶದಿಂದ ಈ ಯೋಜನೆಯನ್ನು ರೂಪಿಸಲಾಗಿದೆ. ವಿವಿಧ ರೀತಿಯ ದೌರ್ಜನ್ಯಗಳಿಗೆ ಬೇರೆ ಬೇರೆ ರೀತಿಯ ಪರಿಹಾರ ಮಂಜೂರು ಮಾಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಲಾಗಿದೆ.

೪) **ವಿಶೇಷ ಘಟಕ ಯೋಜನೆ ಕಾರ್ಯಕ್ರಮಗಳು:** ಪರಿಶಿಷ್ಟ ಜಾತಿಯವರ ಸರ್ವಾಂಗೀಣ ಅಭಿವೃದ್ಧಿಗಾಗಿ, ಕೃಷಿ ಇಲಾಖೆ, ತೋಟಗಾರಿಕೆ, ಜಲಸಂಪನ್ಮೂಲ, ಪಶುಸಂಗೋಪನೆ, ಮೀನುಗಾರಿಕೆ, ಅರಣ್ಯ, ರೇಷ್ಮೆ, ಗ್ರಾಮೀಣ ಮತ್ತು ಸಣ್ಣ ಉದ್ಯಮಗಳು, ರಸ್ತೆ ಮತ್ತು ಸಂಪರ್ಕ, ಶಿಕ್ಷಣ, ಕಾಲೇಜು ಶಿಕ್ಷಣ, ತಾಂತ್ರಿಕ ಶಿಕ್ಷಣ, ಕರ್ನಾಟಕ ನಗರ ಸರಬರಾಜು ಮಂಡಳಿ, ವಸತಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಉದ್ಯೋಗ ಮತ್ತು ತರಬೇತಿ, ಗ್ರಾಮಿಣ ಅಭಿವೃದ್ಧಿ ಮತ್ತು ಪಂಚಾಯತರಾಜ್ ಇಲಾಖೆ, ಕೊಳಚೆ ನಿರ್ಮೂಲನಾ ಮಂಡಳಿ, ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮ, ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ಸಹಕಾರ, ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ ಮುಂತಾದ ಇಲಾಖೆ ಹಾಗೂ ಮಂಡಳಿಗಳು ವಿಶೇಷ ಘಟಕ ಯೋಜನೆಯಡಿ ಹಲವಾರು ಕಾರ್ಯಕ್ರಮಗಳನ್ನು ಕಾರ್ಯ ಗತಗೊಳಿಸುತ್ತಿವೆ.

೫) **ವಿಶೇಷ ಘಟಕ ಯೋಜನೆ ಅಡಿಯಲ್ಲಿ ವಿಶೇಷ ಕೇಂದ್ರೀಯ ನೆರವು:** ವಿಶೇಷ ಘಟಕ ಯೋಜನೆಯಡಿಯಲ್ಲಿ ಹಲವಾರು ಇಲಾಖೆ ಹಾಗೂ ಮಂಡಳಿಗಳು ಕಾರ್ಯಗತಗೊಳಿಸುತ್ತಿರುವ ಯೋಜನೆಗಳಿಗೆ ಪೂರಕವಾಗಿ ಭಾರತ ಸರ್ಕಾರದಿಂದ ವಿಶೇಷ ಕೇಂದ್ರೀಯ ನೆರವನ್ನು ನೀಡಲಾಗುತ್ತಿದೆ.

೬) **ಅಂಬೇಡ್ಕರ ವಸತಿ ಯೋಜನೆ ಹಾಗೂ ಆಶ್ರಯ ವಸತಿ ಯೋಜನೆ:** ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುತ್ತಿರುವ ಹಾಗೂ ಬಡತನ ರೇಖೆಯ ಕೆಳಗಿರುವ ಪರಿಶಿಷ್ಟ ಜಾತಿಯ ಜನರಿಗೆ ಈ ಯೋಜನೆಗಳಡಿಯಲ್ಲಿ ಸೂರನ್ನು ಕಟ್ಟಿಕೊಳ್ಳಲು ಸಹಾಯ ಧನ ನೀಡಲಾಗುತ್ತಿದೆ.

**ಈ) ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತದಿಂದ ಜಾರಿಯಾಗುತ್ತಿರುವ ಕಾರ್ಯಕ್ರಮಗಳು:**

೧) **ಉದ್ಯಮಶೀಲತಾ ಅಭಿವೃದ್ಧಿ(ಐ.ಎಸ್.ಬಿ) ಯೋಜನೆ:** ೧೮ರಿಂದ ೬೦ ವರ್ಷ ವಯೋಮಾನದವರು ಯಾವುದೇ ಸಣ್ಣ ಕೈಗಾರಿಕೆ, ಸಾಗಾಣಿಕೆ, ಪ್ರಯಾಣಿಕರ ವಾಹನ, ಟ್ರಾಕ್ಟರ್ ಇತ್ಯಾದಿ ಖರೀದಿಸಲು ಸಾಲ ಸೌಲಭ್ಯ ಪಡೆಯಬಹುದಾಗಿದೆ.

೨) **ಮೈಕ್ರೋ ಕ್ರೆಡಿಟ್ ಯೋಜನೆ:** ೧೮ ರಿಂದ ೬೦ವಯೋಮಾನದವರು ಸ್ವ ಸಹಾಯ ಸಂಘಗಳ ಸದಸ್ಯರಾಗಿದ್ದು, ಬಡತನ ರೇಖೆಯ ಕೆಳಗಿರುವ ಪರಿಶಿಷ್ಟ ಜಾತಿಯವರು ಈ ಯೋಜನೆಯಡಿ ಸಾಲ ಪಡೆಯಲು ಅರ್ಹರಿರುತ್ತಾರೆ.

೩) **ನೇರ ಸಾಲ ಯೋಜನೆ:** ಪರಿಶಿಷ್ಟ ಜಾತಿಯ ಫಲಾನುಭವಿಗಳು ಕರ್ನಾಟಕದಲ್ಲಿ ೧೫ ವರ್ಷಗಳಿಂದ ವಾಸಿಸುತಿದ್ದು, ಸಾಲ ಬಳಸಿಕೊಳ್ಳುವ ಯೋಜನಾ ವರದಿ, ವಾಹನವಾಗಿದ್ದಲ್ಲಿ, ಸಂಬಂಧಪಟ್ಟ ವಾಹನ ಚಾಲನಾ ಪರವಾನಗಿ ಇತ್ಯಾದಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಬೇಕು. ಈ ಸಾಲವನ್ನು ರಾಷ್ಟ್ರೀಯ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದಿಂದ ಪಡೆದು ಸೌಲಭ್ಯ ಕಲ್ಪಿಸಲಾಗುವುದು.

೪) **ಭೂ ಒಡೆತನ ಯೋಜನೆ:** ಪರಿಶಿಷ್ಟ ಜಾತಿಯ ಭೂರಹಿತ ಕೃಷಿ ಕಾರ್ಮಿಕರಿಗೆ ಎರಡು ಎಕರೆ ಖುಷ್ಕಿ ಅಥವಾ ಒಂದು ಎಕರೆ ಸರಿ ಜಮಿನು ಖರಿದಿಸಲು ಸಹಾಯಧನ ಹಾಗೂ ಸಾಲ ಸೌಲಭ್ಯವನ್ನು ನೀಡಲಾಗುವುದು.

೫) **ಗಂಗಾ ಕಲ್ಯಾಣ ಯೋಜನೆ:** ಪರಿಶಿಷ್ಟ ಜಾತಿಯವರ ಜಮೀನಿನಲ್ಲಿ ನೀರಾವರಿ ಸೌಲಭ್ಯವನ್ನು ಕಲ್ಪಿಸುವ ದೃಷ್ಠಿಯಿಂದ ಅವರ ಜಮೀನಿನಲ್ಲಿ ಕೊಳವೆ ಬಾವಿಗಳನ್ನು ಕೊರಿಯಿಸಿ ಆರ್ಥಿಕವಾಗಿ ಸದೃಡರನ್ನಾಗಿಸುವುದು ಈ ಯೋಜನೆಯ ಉದ್ದೇಶ. ಈ ಯೋಜನೆಯಲ್ಲಿ ವೈಯಕ್ತಿಕ ನೀರಾವರಿ ಕೊಳವೆ ಬಾವಿ ಯೋಜನೆ ಹಾಗೂ ಸಾಮಾಜಿಕ ನೀರಾವರಿ ಕೊಳವೆ ಬಾವಿ ಯೋಜನೆಗಳೆಂಬ ಎರಡು ಪ್ರಕಾರದ ಯೋಜನೆಗಳಿವೆ.

೬) **ದೇವದಾಸಿ ಪುನರ್ವಸತಿ ಯೋಜನೆ:** ಸರ್ಕಾರವು ರಾಜ್ಯದ ಎಂಟು ಜಿಲ್ಲೆಗಳಾದ ಧಾರವಾಡ, ಹಾವೇರಿ, ಗದಗ, ಬಳ್ಳಾರಿ, ದಾವಣಗೆರೆ, ರಾಯಚೂರು, ಕೊಪ್ಪಳ ಹಾಗೂ ಗುಲ್ಬರ್ಗಾ ಜಿಲ್ಲೆಗಳಲ್ಲಿನ ದೇವದಾಸಿಯರಿಗೆ ಸ್ವಯಂ ಉದ್ಯೋಗ, ಭೂ ಒಡೆತನ, ಮನೆ ಮತ್ತು ಕೊಟ್ಟಿಗೆ ನಿರ್ಮಾಣ ಯೋಜನೆಗಳಡಿಯಲ್ಲಿ ಪುನರ್ವಸತಿ ಸೌಲಭ್ಯವನ್ನು ಒದಗಿಸಿದೆ. ಬೆಳಗಾವಿ, ವಿಜಾಪುರ, ಬಾಗಲಕೋಟ ಜಿಲ್ಲೆಗಳಲ್ಲಿ ಮನೆ ಮತ್ತು ಕೊಟ್ಟಿಗೆ ನಿರ್ಮಾಣದ ಯೋಜನೆಗಳನ್ನು ಅನ್ವಯಿಸಲಾಗಿದೆ.

೭) **ಸಫಾಯಿ ಕಮಾಚಾರಿ ಪುನರ್ವಸತಿ ಯೋಜನೆ:** ಅಮಾನುಷ ಪದ್ದತಿಯಾದ ತಲೆಯ ಮೇಲೆ ಮಲ ಹೊರುವ ಕಾರ್ಯವನ್ನು ಮಾಡುತ್ತಿರುವ ಸಫಾಯಿ ಕರ್ಮಚಾರಿ ಹಾಗೂ ಅವರ ಅವಲಂಬಿತರಿಗೆ ಪುನರ್ವಸತಿ ಕಲ್ಪಿಸಿ ಬೇರೊಂದು ಉದ್ಯೋಗ ಕೈಗೊಳ್ಳಲು ಧನಸಹಾಯ ನೀಡುವ ಈ ಯೋಜನೆಯು ರಾಷ್ಟ್ರೀಯ ಯೋಜನೆಯಾಗಿದೆ.

ಪರಿಶಿಷ್ಟ ಜಾತಿಯವರ ಸರ್ವಾಂಗೀಣ ಅಭಿವೃದ್ಧಿಗಾಗಿ ಸರ್ಕಾರವು ಹಲವಾರು ಯೋಜನೆಗಳನ್ನು ಕೈಗೆತ್ತಿಕೊಂಡಿರುವುದು ಸ್ವಾಗತಾರ್ಹ ಸಂಗತಿಯಾಗಿದೆ. ಆದರೆ ಕರ್ನಾಟಕದ ಲಂಬಾಣಿಗರು ಅನಕ್ಷರಸ್ಥರಾಗಿದ್ದು, ಗ್ರಾಮಗಳಿಂದ ದೂರದಲ್ಲಿರುವ ತಾಂಡಾಗಳಲ್ಲಿ ವಾಸಿಸುತ್ತಿದ್ದಾರೆ. ಹಾಗೂ ಬಡತನವು ಅವರನ್ನು ಕಾಲು ಬೇಡಿಯಾಗಿ ಭಾಧಿಸುತ್ತಿರುವದರಿಂದ ಸರ್ಕಾರದ ಯೋಜನೆಗಳ ಪರಿವೇ ಇಲ್ಲದೇ ಬದುಕುತಿದ್ದಾರೆ. ಲಂಬಾಣಿಗರಲ್ಲಿ ಕೆಲವೇ ಕೆಲವು ಜನರು ಮಾತ್ರ

ಸರ್ಕಾರದ ಯೋಜನೆಗಳನ್ನು ಬಳಸಿಕೊಂಡಿರುವದು ಅಲ್ಲಲ್ಲಿ ಗೋಚರವಾಗುತ್ತದೆ. ಹೀಗಾಗಿ ಇಂದಿಗೂ ಲಂಬಾಣಿಗರು ರಟ್ಟೆಯ ಬಲವನ್ನು ನಂಬಿಕೊಂಡು ಬದುಕುತ್ತಿದ್ದು, ಕೆಲಸವಿಲ್ಲದ ಸಂದರ್ಭಗಳಲ್ಲಿ ಜೀವನೋಪಾಯಕ್ಕಾಗಿ ದೂರದ ನಗರಗಳಿಗೆ ವಲಸೆ ಹೋಗುವದು ಸಾಮಾನ್ಯವಾಗಿ ಕಂಡುಬರುತ್ತದೆ.

**ಅನುಬಂಧ: ೪**

# ಆಂಧ್ರ ಪ್ರದೇಶ ಪರಿಶಿಷ್ಟ ಪಂಗಡದ ಕಲ್ಯಾಣ ಕಾರ್ಯಕ್ರಮಗಳು

೧) **ವಿದ್ಯಾರ್ಥಿ ನಿಲಯಗಳು:** ಆಂಧ್ರ ಪ್ರದೇಶ ರಾಜ್ಯದಾದ್ಯಂತ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಅನುಕೂಲಕ್ಕಾಗಿ ಪರಿಶಿಷ್ಟ ಪಂಗಡ ಕಲ್ಯಾಣ ಇಲಾಖೆಯು ಒಟ್ಟು ೪೪೨ ವಸತಿ ನಿಲಯಗಳು ಅದರಲ್ಲಿ ೩೩೧ ಬಾಲಕರ ಹಾಗೂ ೧೧೧ ಬಾಲಕಿಯರ ವಸತಿ ನಿಲಯ ಸ್ಥಾಪಿಸಿದೆ. ಈ ವಸತಿ ನಿಲಯಗಳಲ್ಲಿ ಉಚಿತ ಊಟ, ವಸತಿ ಮತ್ತು ಇನ್ನಿತರ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

೨) **ಸಮಗ್ರ ವಿದ್ಯಾರ್ಥಿ ನಿಲಯಗಳು:** ೨೦೦೬-೦೭ನೇ ಸಾಲಿನಿಂದ ಈ ಸಮಗ್ರ ವಸತಿ ನಿಯಗಳನ್ನು ಪ್ರಾರಂಭಿಸಲಾಗಿದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಸತಿ, ಊಟ ಹಾಗೂ ಶೈಕ್ಷಣಿಕ ಪರಿಕರಗಳನ್ನು ಒದಗಿಸಿ ಗ್ರಾಮಾಂತರ ಪ್ರದೇಶದ ಬಡ ಕುಟುಂಬದ ವಿದ್ಯಾರ್ಥಿಗಳ ವಿದ್ಯಾಬ್ಯಾಸಕ್ಕೆ ಅನುಕೂಲ ಕಲ್ಪಿಸಲಾಗಿದೆ.

೩) **ಆಶ್ರಮ ಪ್ರಾಥಮಿಕ ಶಾಲೆ:** ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಪ್ರಾರಂಭದಿಂದಲೇ ಗುಣ ಮಟ್ಟದ ಶಿಕ್ಷಣವನ್ನು ಕೊಡುವ ಉದ್ದೇಶದಿಂದ ಪ್ರಾಥಮಿಕ ಆಶ್ರಮ ಶಾಲೆಯನ್ನು ಪ್ರಾರಂಭಿಸಲಾಗಿದೆ. ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿರುವ ಪ್ರದೇಶಗಳಲ್ಲಿ ೫೮ ಪ್ರಾಥಮಿಕ ಆಶ್ರಮ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ. ಈ ಶಾಲೆಗಳಲ್ಲಿ ಉಚಿತ ಶಿಕ್ಷಣ ಊಟ, ವಸತಿ, ಹಾಗೂ ಇನ್ನಿತರ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

೪) **ಆಶ್ರಮ ಹಿರಿಯ ಪ್ರಾಥಮಿಕ ಶಾಲೆ:** ಐದರಿಂದ ಏಳನೇಯ ತರಗತಿಯವರೆಗೆ ಓದುತ್ತಿರುವ ಪರಿಶಿಷ್ಟ ಪಂಗಡದ ಗ್ರಾಮೀಣ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸುವ ದೃಷ್ಟಿಯಿಂದ ರಾಜ್ಯಾದ್ಯಂತ ಇಂತಹ ೨೨೬ ಶಾಲೆಗಳನ್ನು ಪ್ರಾರಂಭಿಸಲಾಗಿದೆ. ಶಿಕ್ಷಣದ ಜೊತೆಗೆ ಉಚಿತ ಊಟ ಹಾಗೂ ವಸತಿಯ ಸೌಲಭ್ಯವನ್ನು ಕಲ್ಪಿಸಲಾಗಿದೆ.

೫) **ಆಶ್ರಮ ಪ್ರೌಡ ಶಾಲೆ:** ಎಂಟನೇಯ ತರಗತಿಯಿಂದ ಹತ್ತನೆಯ ತರಗತಿಯವರೆಗೆ ಓದುತ್ತಿರುವ ವಿದ್ಯಾರ್ಥಿಗಳು ಈ ಶಾಲೆಯಲ್ಲಿ ಪ್ರವೇಶ ಪಡೆಯಬಹುದಾಗಿದೆ. ವಿದ್ಯಾಭ್ಯಾಸದ ಜೊತೆಗೆ ಉಚಿತ ಊಟ ಹಾಗೂ ವಸತಿಯೊಂದಿಗೆ ರಾಜ್ಯದಾದ್ಯಂತ ೩೧೫ ಶಾಲೆಗಳು ಕಾರ್ಯ ನಿರ್ವಹಿಸುತ್ತಿವೆ.

೬) **ಮೆಟ್ರಿಕ್ ನಂತರದ ವಸತಿ ನಿಲಯಗಳು:** ಮೆಟ್ರಿಕ್ ಮುಗಿಸಿದ ನಂತರ ಉನ್ನತ ಶಿಕ್ಷಣಕ್ಕಾಗಿ ಕಾಲೇಜು ಸೇರಲು ಇಚ್ಛಿಸಿದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಸೌಲಭ್ಯಕ್ಕಾಗಿ ಸರ್ಕಾರಿ

ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗನ್ನು ನಿರ್ವಹಿಸಲಾಗುತ್ತಿದೆ. ಮಕ್ಕಳಿಗೆ ಹೆಚ್ಚಿನ ಶಿಕ್ಷಣ ನೀಡಲು ಬಡತನದ ಅಡ್ಡಿಯಾಗದಂತೆ ಬರದಂತೆ ಮಾಡುವ ಸಲುವಾಗಿ ಈ ಸೌಲಭ್ಯ ನೀಡಲಾಗುತ್ತದೆ.

೭) **ಪರಿಶಿಷ್ಟ ಪಂಗಡದ ಕಲ್ಯಾಣಕ್ಕಾಗಿ ಪ್ರಾಥಮಿಕ ಶಾಲೆ** (ಟಿ. ಡಬ್ಲೂ ಪ್ರಾಮರಿ ಸ್ಕೂಲ): ಪರಿಶಿಷ್ಟ ಪಂಗಡದ ಜನರು ವಾಸಿಸುವ ಪ್ರದೇಶಗಳಲ್ಲಿ ಇಂತಹ ಶಾಲೆಗಳನ್ನು ತೆರೆಯಲಾಗಿದೆ.

೮) **ಶಿಕ್ಷಣ ಮಹಾವಿದ್ಯಾಲಯ:** ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಬಿ. ಈಡಿ ತರಬೇತಿಯನ್ನು ನೀಡಲು ಭದ್ರಾಚಲಂದಲ್ಲಿ ಈ ಮಹಾವಿದ್ಯಾಲಯನ್ನು ಪ್ರಾರಂಭಿಸಲಾಗಿದೆ. ಪ್ರತಿವರ್ಷ ೨೦೦ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಇದ್ದು ಎನ್. ಸಿ. ಟಿ. ಇ. ನಿಯಮಾವಳಿಗಳಂತೆ ತರಬೇತಿ ನೀಡಲಾಗುತ್ತಿದೆ. ಅಲ್ಲದೇ ಈಗಾಗಲೇ ಸೇವೆಯಲ್ಲಿರುವ ಶಿಕ್ಷಕರಿಗೆ ಮುಂಬಡ್ತಿಯ ಉದ್ದೇಶದಿಂದ ದೂರ ಶಿಕ್ಷಣದ ಮುಖೇನ ಬಿ. ಈಡಿ ಪದವಿಯನ್ನು ನೀಡಲಾಗುತ್ತಿದೆ.

೯) **ಪರೀಕ್ಷಾ ಪೂರ್ವ ತರಬೇತಿ ಕೇಂದ್ರ:** ರಾಜ್ಯ ಹಾಗೂ ಕೇಂದ್ರ ಸರ್ಕಾರದ ಲೋಕಸೇವಾ ಆಯೋಗಗಳು ಹಾಗೂ ಇತರೆ ನೇಮಕಾತಿ ಆಯೋಗಗಳು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪೂರ್ವ ಭಾವಿಯಾಗಿ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಲು ರಾಜ್ಯದಾದ್ಯಂತ ೫ ಪೂರ್ವ ಭಾವಿ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ. ತರಬೇತಿಯ ವೆಚ್ಚವನ್ನು " ಕೋಚಿಂಗ್ ಅಲೈಡ್ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು ಭರಿಸುತ್ತದೆ. ಸರ್ಕಾರವು ಜಿ. ಓ. ಎಮ್. ಎಸ್. ೯೦ ಸೋಶಿಯಲ್ ವೆಲ್ಫರ್ (ಟಿ.ಡಬ್ಲೂ ಈಡಿಎನ್.೧) ಡಿಪಾರ್ಟಮೆಂಟ ದಿನಾಂಕ ೦೧-೦೯-೨೦೦೯ ಈ ಆದೇಶದಂತೆ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಪರೀಕ್ಷಾ ಪೂರ್ವ ತರಬೇತಿಯನ್ನು ನೀಡಲು ಡಾ. ವೈ. ಎಸ್. ಆರ್ ಅಧ್ಯಯನ ಕೇಂದ್ರವನ್ನು ಪ್ರಾರಂಭಿಸಿದೆ"(out come Budget:2013-14:9)

೧೦) **ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ:** ಪ್ರೌಢ ಶಿಕ್ಷಣ ಹಂತದ ನಂತರ ಕಾಲೇಜು ಮೆಟ್ಟಿಲೇರುವ ವಿದ್ಯಾರ್ಥಿಗಳ ವಿದ್ಯಾಭ್ಯಾಸವನ್ನು ಉತ್ತೇಜಿಸುವ ಉದ್ದೇಶದಿಂದ ಪರಿಶಿಷ್ಟ ಪಂಗಡದ ಕಾಲೇಜು ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ನೀಡಲಾಗುತ್ತದೆ. ಅಲ್ಲದೇ ವೃತ್ತಿಪರ ಕೋರ್ಸಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಬುಕ್ ಬ್ಯಾಂಕ ಯೋಜನೆಯಡಿಯಲ್ಲಿ ಪುಸ್ತಕ ಖರೀದಿಸಲು ಸಹಾಯ ಧನ ನೀಡಲಾಗತ್ತಿದೆ.

೧೧) **ಗೌರವಾನ್ವಿತ ವಿದ್ಯಾ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ:** ಪರಿಶಿಷ್ಟ ಪಂಗಡದ ಪ್ರತಿಭಾನ್ವಿತ ವಿದ್ಯಾರ್ಥಿಗಳನ್ನು ಆಯ್ಕೆ ಮಂಡಳಿಯ ಮೂಲಕ ಆಯ್ಕೆ ಮಾಡಿ ಅವರನ್ನು ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸಕ್ಕೆ ಪ್ರವೇಶಾವಕಾಶ ಕಲ್ಪಿಸಲಾಗುತ್ತದೆ. ವಿದ್ಯಾರ್ಥಿಯ ಶಿಕ್ಷಣದ ಖರ್ಚು ವೆಚ್ಚವನ್ನೆಲ್ಲ ಸರ್ಕಾರವೇ ಮೆಟ್ರಿಕ್ ಪೂರ್ವ ಶಿಷ್ಯವೇತನ ಯೋಜನೆಯಡಿಯಲ್ಲಿ ಭರಿಸುತ್ತದೆ.

೧೨) **ಪರಿಶಿಷ್ಟ ಪಂಗಡದವರ ವಸತಿ ಶಾಲೆಗಳು:** ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣವನ್ನು ಕೊಡುವ ಉದ್ದೇಶದಿಂದ ೧೯೯೮ರಲ್ಲಿ ಆಂಧ್ರ ಪ್ರದೇಶ ರಾಜ್ಯದ ಪರಿಶಿಷ್ಟ ಪಂಗಡದ ಕಲ್ಯಾಣ(ಎ.ಪಿ.ಟಿ.ಡಬ್ಲ್ಯೂ)ಕ್ಕಾಗಿ ವಸತಿ, ಶೈಕ್ಷಣಿಕ ಸಂಸ್ಥೆಗಳ ಸಮೂಹ ಎಂಬ ಸಂಸ್ಥೆಯನ್ನು ಪ್ರಾರಂಭಿಸಲಾಗಿದೆ. ಇದರಡಿಯಲ್ಲಿ ವಸತಿ ಶಾಲೆಗಳು, ಕಿರಿಯ ವಸತಿ ಕಾಲೇಜುಗಳು, ಮಿನಿ ಗುರುಕುಲಗಳು, ಕಸ್ತೂರಿಬಾ ಗಾಂಧಿ ಬಾಲಕಿಯರ ವಿದ್ಯಾಲಯ ಮತ್ತು ಏಕಲವ್ಯ ಮಾದರಿ ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತವೆ.

೧೩) **ವಸತಿ ಸಹಿತ ಬಾಲಕಿಯರ ಕಿರಿಯ ಕಾಲೇಜುಗಳು:** ಪರಿಶಿಷ್ಟ ಪಂಗಡದ ಬಾಲಕಿಯರು ಪ್ರೌಢ ಶಿಕ್ಷಣದ ನಂತರದ ವಿದ್ಯಾಭ್ಯಾಸವನ್ನು ಮಧ್ಯದಲ್ಲಿಯೇ ನಿಲ್ಲಿಸಬಾರದು ಎಂಬ ಸದುದ್ದೇಶದಿಂದ ಸರ್ಕಾರವು ಈ ವಸತಿ ಸಹಿತ ಕಿರಿಯ ಕಾಲೇಜುಗಳನ್ನು ನಡೆಸುತ್ತಿದೆ.

೧೪) **ಸಂಶೋಧನಾ ವಿದ್ಯಾರ್ಥಿಗಳಿಗೆ ಸಹಾಯಧನ:** ಸಂಶೋಧನೆ ಮಾಡುತ್ತಿರುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಆರ್ಥಿಕವಾಗಿ ದುರ್ಬಲರಾಗಿರುವದರಿಂದ ಸರ್ಕಾರವು ಇಂತಹ ವಿದ್ಯಾರ್ಥಿಗಳಿಗೆ ಧನ ಸಹಾಯವನ್ನು ನೀಡುತ್ತದೆ.

೧೫) **ಆರ್ಥಿಕ ಉತ್ತೇಜನ ಯೋಜನೆ:** ಈ ಯೋಜನೆಯಡಿಯಲ್ಲಿ ಬಡತನ ರೇಖೆಯ ಕೆಳಗಡೆ ಇರುವ ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಆರ್ಥಿಕ ಉತ್ತೇಜನದ ಚಟುವಟಿಕೆಗಳನ್ನು ನಡೆಸಲು ಧನ ಸಹಾಯವನ್ನು ಮಾಡಲಾಗುತ್ತದೆ. ಈ ಯೋಜನೆಯಡಿ ಯಾವುದೆ ಸಣ್ಣ ಕೈಗಾರಿಕೆ, ದಿನಸಿ ಅಂಗಡಿ, ಸರಕು ಸಾಗಾಣಿಕೆ, ಪ್ರಯಾಣಿಕರ ವಾಹನ, ಟ್ರಾಕ್ಟರ ಇತ್ಯಾದಿ ಖರಿದಿಸಲು ಅಥವಾ ಪ್ರಾರಂಭಿಸಲು ಧನ ಸಹಾಯ ನೀಡಲಾಗುತ್ತದೆ.

೧೬) **ಉಳಿತಾಯ ಮತ್ತು ಅಭಿವೃದ್ಧಿ ಯೋಜನೆ:** ಈ ಯೋಜನೆಯಡಿಯಲ್ಲಿ ಸರ್ಕಾರವು ಪರಿಶಿಷ್ಟ ಪಂಗಡದ ಬಡತನ ರೇಖೆಯ ಕೆಳಗಿರುವ ಜನರಿಗೆ ಕೃಷಿ ಭೂಮಿಯನ್ನು ಕೊಂಡುಕೊಳ್ಳಲು, ಇಂದಿರಮ್ಮಾ ವಸತಿ ಯೋಜನೆಯಡಿ ಸೂರು ನಿರ್ಮಿಸಿಕೊಳ್ಳಲು ಧನ ಸಹಾಯವನ್ನು ಮಾಡಲಾಗುತ್ತದೆ. ಅಲ್ಲದೇ ಈ ಯೋಜನೆಯಡಿ ಭಾರತೀಯ ಜೀವ ವಿಮಾ ನಿಗಮದ ವತಿಯಿಂದ ಜನಶ್ರೀ ಭೀಮಾ ಯೋಜನೆ ಜೀವ ವಿಮೆಯ ರಕ್ಷಣೆಯು ಸಿಗುತ್ತದೆ.

ಎ) **ವಿದ್ಯುದ್ದೀಕರಣ:** ಈ ಯೋಜನೆಯಡಿಯಲ್ಲಿ ಪರಿಶಿಷ್ಟ ಪಂಗಡದವರು ವಾಸಿಸುತ್ತಿರುವ ಹಾಡಿಗಳಲ್ಲಿ ವಿದ್ಯುಚ್ಛಕ್ತಿ ಸೌಕರ್ಯ ಒದಗಿಸುವುದು ಹಾಗೂ ಅವರ ಮನೆಗಳಿಗೆ ವಿದ್ಯುಚ್ಛಕ್ತಿ ಸೌಕರ್ಯ ಒದಗಿಸಲಾಗುತ್ತದೆ.

ಬಿ) **ಕೃಷಿ ಮತ್ತು ತೋಟಗಾರಿಕೆ:** ಪರಿಶಿಷ್ಟ ಪಂಗಡದ ರೈತರಿಗೆ ಸಹಾಯಕವಾಗುವಂತೆ ಕೃಷಿ ಉಪಕರಣಗಳನ್ನು ಒದಗಿಸುವದು ಕೃಷಿ ಜಮೀನಿನಲ್ಲಿ ನೀರಾವರಿ ವ್ಯವಸ್ಥೆ ಮಾಡಿಕೊಳ್ಳಲು ಹಾಗೂ ಹಣ್ಣು, ಹೂಗಳು ಮತ್ತು ತರಕಾರಿಯನ್ನು ಬೆಳೆಯಲು ಸಹಾಯ ಧನದ ಸೌಕರ್ಯ ಒದಗಿಸುವದು.

ಸಿ) **ಹಾಡಿಗಳ ಅಭಿವೃದ್ಧಿ :** ಪರಿಶಿಷ್ಟ ಪಂಗಡದವರು ವಾಸಿಸುತ್ತಿರುವ ಹಾಡಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವದು ಹಾಗೂ ಅವರ ಸಂಸ್ಕೃತಿ ಹಾಗೂ ಸಂಪ್ರದಾಯಗಳನ್ನು ರಕ್ಷಿಸಲು ಅವಶ್ಯವಿರುವ ಪೂರಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುವದು.

ಡಿ) **ಮೇಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಸಹಾಯಧನ:** ಮೇಟ್ರಿಕ ನಂತರದ ವಿದ್ಯಾರ್ಥಿ ಮುಂದಿನ ವಿದ್ಯಾಭ್ಯಾಸಕ್ಕಾಗಿ ಅಥವಾ ಸ್ವಯಂ ಉದ್ಯೋಗ ಕೈಗೊಳ್ಳಲು ಈ ಯೋಜನೆಯಡಿ ಸಹಾಯ ಧನವನ್ನು ನೀಡಲಾಗುತ್ತದೆ.

೧೭) **ಗಿರಿಜನ ಸಹಕಾರಿ ಸಂಘ:** ಪರಿಶಿಷ್ಟ ಪಂಗಡದವರ ಆರ್ಥಿಕ ಅಭಿವೃದ್ಧಿಗಾಗಿ ಸರ್ಕಾರವು ೧೯೫೬ರಲ್ಲಿ ಈ ಸಂಸ್ಥೆಯನ್ನು ಪ್ರಾರಂಭಿಸಿತು. ಈ ಜನರು ಸಂಗ್ರಹಿಸಿದ ಅರಣ್ಯ ಉತ್ಪನ್ನ ವಸ್ತುಗಳನ್ನು, ಕೃಷಿ ಉತ್ಪನ್ನ ವಸ್ತುಗಳನ್ನು ಸರಿಯಾದ ಬೆಲೆಯಲ್ಲಿ ಗಿರಿಜನ ಸಹಕಾರಿ ಸಂಘವು ನೇರವಾಗಿ ಕೊಂಡುಕೊಳ್ಳುತ್ತದೆ. (Note on trial welfare activity 2013: 19-20) ಮಧ್ಯವರ್ತಿಗಳಿಂದಾಗುವ ಶೋಷಣೆಯನ್ನು ತಪ್ಪಿಸಲು ಸರ್ಕಾರವು ಈ ಸಂಸ್ಥೆಯ ಮೂಲಕ ಪ್ರಯತ್ನಿಸುತ್ತದೆ. ಈ ಸಂಸ್ಥೆಯಡಿಯಲ್ಲಿ ೧೧೭೨ ಖಾಯಂ ನೌಕರರು ೫೪೨ ಗುತ್ತಿಗೆ ಆಧಾರದ ನೌಕರರು ಕಾರ್ಯ ನಿರ್ವಹಿಸುತ್ತಿದ್ದಾರೆ. ಗಿರಿಜನರಿಂದ ಸಂಗ್ರಹಿಸಿದ ಉತ್ಪನಗಳನ್ನು ಸಂಗ್ರಹಿಸಲು ರಾಜ್ಯದಾದ್ಯಂತ ೮೫೯ ಉಗ್ರಾಣಗಳಿದ್ದು ಸರ್ಕಾರ ಇತ್ತೀಚಿಗೆ ೨೦೦ ಹೊಸ ಉಗ್ರಾಣಗಳನ್ನು ಮಂಜೂರು ಮಾಡಿದೆ, ಹಾಗೂ ೧೦೦ ಸಂಗ್ರಹಣಾ ಕೇಂದ್ರಗಳು ಕಾರ್ಯನಿರ್ವಹಿಸತ್ತಿವೆ.(Outcome budget 2013-14:12)

೧೮) **ಪರಿಶಿಷ್ಟ ಪಂಗಡಗಳ ಸಹಕಾರಿ:** ಹಣಕಾಸು ಸಂಸ್ಥೆ ನಿಯಮಿತ (TRICOR) ಸಂಸ್ಥೆಯು ೧೯೭೬ರಲ್ಲಿ ಹೈದರಾಬಾದ್ ನಗರದಲ್ಲಿ ಸ್ಥಾಪನೆಯಾಗಿದೆ. ಇಡೀ ರಾಜ್ಯ ಇದರ ಕಾರ್ಯವ್ಯಾಪ್ತಿಗೆ ಬರುತ್ತದೆ. ಸರ್ಕಾರದ ಆರ್ಥಿಕ ಉತ್ತೇಜಕ ಯೋಜನೆಯನ್ನು ಯಶಸ್ವಿಗೊಳಿಸುವದಕ್ಕಾಗಿ ಈ ಟ್ರೈಕೋರ ಸಂಸ್ಥೆಯು ಬಡತನ ರೇಖೆಯ ಕೆಳಗಿರುವ ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ, ಕೃಷಿ, ತೋಟಗಾರಿಗೆ, ಕಿರು ನೀರಾವರಿ, ಮೀನುಗಾರಿಕೆ, ಪ್ರಾಣಿ ಸಾಕಾಣಿಕೆ ಹೀಗೆ ಮುಂತಾದ ಚಟುವಟಿಕೆಗಳಿಗೆ ಹಣವನ್ನು ಬಿಡುಗಡೆ ಮಾಡುತ್ತದೆ. ಅಲ್ಲದೆ ಹೀಗೆ ಬಿಡುಗಡೆ ಮಾಡಿದ ಹಣದಲ್ಲಿ ೫೦% ಹಣ ವಿನಾಯ್ತಿಯಾಗುತ್ತದೆ. ಇನ್ನುಳಿದ ೫೦% ಹಣವನ್ನು ಬಡ್ಡಿಯೊಂದಿಗೆ ಮರುಭರಣ ಮಾಡಬೇಕಾಗುತ್ತದೆ. ಈ ರೀತಿಯಾಗಿ ಪರಿಶಿಷ್ಟ ಪಂಗಡದವರ ಆರ್ಥಿಕ ಅಭಿವೃದ್ಧಿಗೆ ಟ್ರೈಕೋರ ಸಂಸ್ಥೆಯು ಸದಾ ಶ್ರಮಿಸುತ್ತಿದೆ.

೧೯) **ಟ್ರಿಪ್ಕೊ (TRIPCO) :** ಆಂಧ್ರ ಪ್ರದೇಶ ಪರಿಶಿಷ್ಟ ಪಂಗಡಗಳ ವಿದ್ಯುತ್ ಕಂಪನಿಯು ೨೦೦೨ರಲ್ಲಿ ಪ್ರಾರಂಭವಾಯಿತು. ಪರಿಶಿಷ್ಟ ಪಂಗಡದವರು ವಾಸಿಸುವ ಪ್ರದೇಶಗಳಲ್ಲಿ ಹರಿಯುವ ನದಿ, ಕೊಳ್ಳ ಹಾಗೂ ಜಲಪಾತವನ್ನು ಬಳಸಿಕೊಂಡು ಮಿನಿ ಹೈಡ್ರೊ ಪವರ ಯೋಜನೆಯಡಿ

ಯಲ್ಲಿ ವಿದ್ಯುತ್ತನ್ನು ಉತ್ಪಾದಿಸಲಾಗುತ್ತದೆ. ಹೀಗೆ ಉತ್ಪಾದಿತ ವಿದ್ಯುತ್ತನ್ನು ಮಾರಿ, ಬರುವ ಲಾಭವನ್ನು ಗಿರಿಜನ ಹಾಡಿಗಳ ಅಭಿವೃದ್ಧಿಗಾಗಿ ಬಳಸಿಕೊಳ್ಳಲಾಗುತ್ತದೆ.

೨೦) **ರಾಜೀವ ಯುವ ಕಿರಣಲು:** ಪರಿಶಿಷ್ಟ ಪಂಗಡದ ಯುವಕರಿಗೆ ಸ್ವಯಂ ಉದ್ಯೋಗ ಕಲ್ಪಿಸುವದು. ಕೌಶಲ್ಯ ಸುಧಾರಣಾ ತರಬೇತಿ ನೀಡುವುದು. ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಸ್ವಯಂ ಉದ್ಯೋಗದಲ್ಲಿ ತೊಡಗಿಕೊಳ್ಳಲು ತರಬೇತಿ ಹಾಗೂ ಧನ ಸಹಾಯವನ್ನು ಈ ಯೋಜನೆಯಡಿ ಕಲ್ಪಿಸಲಾಗುತ್ತದೆ.

೨೧) **ಪರಿಶಿಷ್ಟ ಪಂಗಡಗಳ ಹಾಗೂ ಇತರೆ ಅರಣ್ಯವಾಸಿಗಳ ಕಾಯ್ದೆ ೨೦೦೬:** ಭಾರತ ಸರ್ಕಾರದ ಈ ಕಾಯ್ದೆಯ ನಿಯಮಾವಳಿಗಳು ೧-೧-೨೦೦೮ ರಿಂದ ಜಾರಿಗೆ ಬಂದವು. ಈ ಕಾಯ್ದೆಯಂತೆ ಪರಿಶಿಷ್ಟ ಪಂಗಡ ಹಾಗೂ ಇತರೆ ಅರಣ್ಯವಾಸಿಗಳು ೧೦ ಎಕರೆಯವರೆಗೆ ಭೂಮಿಯನ್ನು ಸ್ವಾಧಿನಪಡಿಸಿಕೊಳ್ಳಬಹುದು. ಅಲ್ಲದೇ ಅರಣ್ಯ ಉತ್ಪಾದನಾ ವಸ್ತುಗಳನ್ನು ಸಂಗ್ರಹಿಸಲು, ಪಶುಪಾಲನೆ ಮಾಡಲು, ಹಾಗೂ ಅರಣ್ಯದಲ್ಲಿ ತಮ್ಮ ಹಾಡಿಗಳಲ್ಲಿ ಮನೆ , ಗುಡಿಸಲುಗಳನ್ನು ಕಟ್ಟಿಕೊಳ್ಳುವ ಹಕ್ಕನ್ನು ನೀಡಲಾಗಿದೆ. (Out come Budget:2013-14:16)

೨೨) **ದಿಶಾ ಯೋಜನೆ:** ಹತ್ತನೇ ತರಗತಿಯಲ್ಲಿ ಅನುತ್ತೀರ್ಣರಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಹತ್ತನೇ ತರಗತಿಯಲ್ಲಿ ಉತ್ತೀರ್ಣರಾಗಲು ಹಾಗೂ ಉದ್ಯೋಗ ಪಡೆದುಕೊಳ್ಳಲು ತರಬೇತಿಯನ್ನು ನೀಡುವದು ಈ ಯೋಜನೆಯ ಆಶಯವಾಗಿದೆ.

೨೩) **ಭವಿತಾ ಯೋಜನೆ:** ಈ ಯೋಜನೆಯಡಿಯಲ್ಲಿ ಪರಿಶಿಷ್ಟ ಪಂಗಡದ ಯುವಕರಿಗೆ ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳು ಹಾಗೂ ಉದ್ಯೋಗ ಅವಕಾಶಗಳ ಬಗ್ಗೆ ಅರಿವು ಮೂಡಿಸಲು ಮಂಡಲ ಮಟ್ಟದಲ್ಲಿ ತರಬೇತಿಯನ್ನು ನೀಡಲಾಗುತ್ತದೆ.

೨೪) **ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಪಂಗಡದವರಿಗೆ ಪರಿಹಾರ:** ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಪಂಗಡದ ಜನರಿಗೆ ಪರಿಹಾರ ಮತ್ತು ಪುನರ್ವಸತಿ ಕಲ್ಪಿಸುವ ಉದ್ದೇಶದಿಂದ ಈ ಯೋಜನೆಯನ್ನು ಜಾರಿಗೊಳಿಸಿದೆ. ಪರಿಹಾರ ಮಂಜೂರು ಮಾಡುವಾಗ ಜೀವ ಆಸ್ತಿಗಳ ನಷ್ಟವನ್ನು ಅನುಲಕ್ಷಿಸಿ ವಿವಿಧ ಬಗೆಯ ದೌರ್ಜನ್ಯಗಳಿಗೆ ಬೇರೆ ಬೇರೆ ಮೌಲ್ಯದ ಪರಿಹಾರವನ್ನು ನೀಡಲಾಗುತ್ತದೆ.

೨೫) **ಅಂತರ್ ಜಾತಿ ವಿವಾಹವಾದ ದಂಪತಿಗಳಿಗೆ ಧನ ಸಹಾಯ:** ಅಂತರ್ ಜಾತಿಯ ವಿವಾಹವನ್ನು ಉತ್ತೇಜಿಸುವ ಸಲುವಾಗಿ ಸರ್ಕಾರವು ಅಂತರ್‌ಜಾತಿ ವಿವಾಹವಾದ ದಂಪತಿಗಳಲ್ಲೊಬ್ಬರು ಪರಿಶಿಷ್ಟ ಪಂಗಡದವರಾಗಿದ್ದರೆ, ಆ ದಂಪತಿಗಳ ಸಾಮಾಜಿಕ ಭದ್ರತೆಗಾಗಿ ಪ್ರೋತ್ಸಾಹ ಧನವನ್ನು ನೀಡುತ್ತದೆ. ಅಸ್ಪೃಶ್ಯತೆ ನಿವಾರಣೆಯ ನಿಟ್ಟಿನಲ್ಲಿ ಅಂತರ್‌ಜಾತಿ ವಿವಾಹವು ಪ್ರಮುಖ ಪಾತ್ರ ವಹಿಸುತ್ತಿದ್ದು, ಇದನ್ನು ಪ್ರೋತ್ಸಾಹಿಸಲು ಸರ್ಕಾರವು ಈ ಮೇಲಿನ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

